177 1343 1307 Rare

ಶ್ರೀ ವೀರಶೈವ ಸಿದ್ಧಾಂತ ಸುಧಾಕರ



ಲೇ: ಶಂಕರ ಶಾಸ್ತ್ರಿ

ಪರಾಮರ್ಶನ ಗ್ರಂಥ
Acc. No: 109012
ಅಕ್ಷರ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

1924

ಧರ್ಮರತ್ನ, ಪಂ॥ ಶಂಕರಶಾಸ್ತ್ರಿಗಳಿಂದ

ವಿರಚಿತವಾದುದು

ಪ್ರಥಮಮುದ್ರಣ ೧,೦೦೦ ಪ್ರತಿಗಳು

ಮೈಸೂರು ಶ್ರೀಮತ್ಕನ್ಯಕಾಪರಮೇಶ್ವರೀ ಮುದ್ರಣಾಲಯದಲ್ಲಿ

ಮುದ್ರಿಸಲ್ಪಟ್ಟಿತು

924

294.5513
SHA

ಕಾಪೀರೈಟ್

೨—೦—೦ [2—0—0

ಶ್ರೀಮತ್ಪಂಚಾಚಾರ್ಯೇಭ್ಯೋನಮಃ.

ಅಕ್ಷರ ಗ್ರಂಥಾಲಯ
ಕನ್ನಡ ವಿ.ವಿ., ಹಂಪಿ

# ವೀರಶೈವ ಸಿದ್ಧಾಂತ ಸುಧಾಕರವು.



ಉಪಚಿಗಿ ಮಳೆಮಠದ

ಧರ್ಮರತ್ನ, ಶಂಕರಶಾಸ್ತ್ರಿಗಳಿಂದ

ವಿರಚಿತವಾದುದು.

ಪ್ರಥಮಮುದ್ರಣ ೧೦೦೦ ಪ್ರತಿಗಳು.

ಮೈಸೂರು ಶ್ರೀಮತ್ಕನ್ಯಕಾಪರಮೇಶ್ವರೀ ಮುದ್ರಣಾಲಯದಲ್ಲಿ
ಮುದ್ರಿಸಲ್ಪಟ್ಟಿತು.

1924.

ರಿಜಿಸ್ಟರ್ ಕಾಪೀರೈಟ್.

೨-೦-೦]　　[2-0-0

109012

## ವಿಶೇಷ ಸೂಚನೆಯು.

ವೀರಶೈವ ಬಾಂಧವರೇ ! ಈ ಗ್ರಂಥವನ್ನು ನೀವು ಓದುವಾಗ ಬ್ರಹ್ಮಾದ್ವೈತಿಯ ಪ್ರಶ್ನವಾವುದು ? ಆ ಪ್ರಶ್ನಕ್ಕೆ ಶಿವಾದ್ವೈತಿಯ (ವೀರಶೈವನ) ಉತ್ತರವಾವುದೆಂಬುವದನ್ನು ಅವಶ್ಯವಾಗಿ ಮನಸ್ಸಿನಲ್ಲಿ ತಂದುಕೊಳ್ಳಿರಿ. ಅಂದರೆ ಈ ಗ್ರಂಥದ ಸ್ವಾರಸ್ಯವು ನಿಮ್ಮ ಅನುಭವಕ್ಕೆ ಬಂದು ನಿಮಗೆ ಪರಮಾನಂದವಾಗುವದು. ಇದಲ್ಲದೆ ಈ ಗ್ರಂಥದಲ್ಲಿ ಯಾವುದಾದರೊಂದು ಶಾಸ್ತ್ರೀಯವಿಷಯವು ನಿಮಗೆ ತಿಳಿಯದಿದ್ದರೆ ಪರಮತದ ವಿಚಾರಸಾಗರ ವೃತ್ತಿಪ್ರಭಾಕರ ಗ್ರಂಥಗಳನ್ನು ಬಲ್ಲವರನ್ನು ಕೇಳಿ ತಿಳಿದುಕೊಳ್ಳುವಂತೆ ವೀರಶೈವ ಸಿದ್ಧಾಂತವನ್ನು ಬಲ್ಲವರಿಂದ ತಿಳಿದುಕೊಳ್ಳುವದು ವೀರಶೈವರಾದ ನಿಮ್ಮ ಕರ್ತವ್ಯವಾಗಿರುವದೆಂಬುವುದೇ ನನ್ನ ವಿಶೇಷ ಸೂಚನೆಯು.

ಇದಲ್ಲದೆ ಮೈಸೂರು ಆಸ್ಥಾನ ವಿದ್ವಾನ್ ಶಿರಸಿ ಗುರುಶಾಂತಶಾಸ್ತ್ರಿಗಳವರು ಈ ಗ್ರಂಥ ಮುದ್ರಣ ಸಮಯದಲ್ಲಿ ಪ್ರೂಪ್ ಕರೆಕ್ಸನ್ ವಗೈರೆ ಕಾರ್ಯವನ್ನು ಅತಿಶ್ರಮ ವಹಿಸಿ ಮಾಡಿ ಕೊಟ್ಟದ್ದರಿಂದ ಇವರ ಉಪಕಾರವನ್ನು ನಾನು ಸ್ಮರಿಸುವದಲ್ಲದೆ ಇವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಗ್ರಂಥಕಾರಃ.

294.5513
SHA

ಶ್ರೀ ೧೦೮ ಜಗದ್ಗುರು ರಂಭಾಪುರೀ ಪೀಠಾಧಿಪತಿಗಳು.



ವೀರಶೈವಮತಾಚಾರ್ಯೋ ವೀರಸಿಂಹಾಸನಾಧಿಪಃ |
ಪಂಚಾಕ್ಷರಮಂತ್ರನಿಷ್ಠೋ ಪಂಚಾಕ್ಷರಜಗದ್ಗುರುಃ ||

# ಉಪೋದ್ಘಾತ.



ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನು ಆರೋಗ್ಯವನ್ನೂ, ಸಂತೋಷವನ್ನೂ, ಜ್ಞಾನವನ್ನೂ ಸಂಪಾದಿಸಬೇಕೆಂದು ಇಚ್ಛಿಸುವನು. ಇವುಗಳಿಗೆ ವಿರುದ್ಧಗಳಾದ ಅನಾರೋಗ್ಯವನ್ನೂ, ದುಃಖವನ್ನೂ, ಅಜ್ಞಾನವನ್ನೂ ಯಾವಾಗಲೂ ಇಚ್ಛಿಸುವುದಿಲ್ಲ. ಔಷಧಾದಿಗಳ ಉಪಾಯಗಳಿಂದ ಸ್ವಲ್ಪ ಆರೋಗ್ಯ, ಸ್ವಲ್ಪ ಸಂತೋಷ, ಸ್ವಲ್ಪ ಸ್ವಲ್ಪ ಜ್ಞಾನವು ಉಂಟಾಗುತ್ತಿದ್ದರೂ ನಿತ್ಯವಾದ ಆರೋಗ್ಯ ನಿತ್ಯವಾದ ಸಂತೋಷ ನಿತ್ಯವಾದ ಜ್ಞಾನವು ಹುಟ್ಟದೆ ಮೊದಲಿನಂತೆ ರೋಗ, ದುಃಖ, ಅಜ್ಞಾನಗಳುಂಟಾಗುವವು. ಹಾಗಾದರೆ ಈ ಸ್ಥೂಲಶರೀರದಲ್ಲಿ ವಾತ, ಪಿತ್ಥ, ಶ್ಲೇಷ್ಮಗಳ ವೈಷಮ್ಯದಿಂದುಂಟಾದ ಅಸಂಖ್ಯಗಳಾದ ರೋಗಗಳನ್ನು ಕಳೆದುಕೊಳ್ಳುವ ಬಗೆ ಹೇಗೆ. ಈ ಸ್ಥೂಲ ಶರೀರಕ್ಕೆ ಒಂದೊಂದು ಕಾಲದಲ್ಲಿ ಸಂಭವಿಸುವ ಅಗ್ನಿ ಖಡ್ಗಾದಿಗಳ ಭಯವನ್ನು ತಪ್ಪಿಸಿಕೊಳ್ಳುವುದು ಹೇಗೆ? ಮತ್ತು ಸೂಕ್ಷ್ಮ ಶರೀರವನ್ನು ಆಶ್ರಯಿಸಿರುವ ಕಾಮಕ್ರೋಧಾದಿಗಳಿಂದುಂಟಾಗುವ ಭಯವನ್ನು ತಪ್ಪಿಸಿಕೊಳ್ಳುವುದು ಹೇಗೆ? ಕಾರಣ ಶರೀರವನ್ನಾಶ್ರಯಿಸಿರುವ ದುಃಖಕ್ಕೆ ಬೀಜರೂಪಗಳಾದ ಸಂಸ್ಕಾರಗಳು ಮುಂದೆ ತನಗೆ ದುಃಖವನ್ನುಂಟುಮಾಡುವದರಿಂದ ಆ ದುಃಖದ ಬೀಜವನ್ನು ಹ್ಯಾಗೆ ನಾಶಪಡಿಸಬೇಕು? ಇವೇ ಮೊದಲಾದ ವಿಚಾರಗಳನ್ನು ಮಾಡಿದ್ದಾದರೆ ಈ ಪರಿಯಾಗಿ ಹಿಂಸೆಯನ್ನುಂಟುಮಾಡುತ್ತಿರುವ ಈ ರೋಗಾದಿಗಳನ್ನು ದೂರಮಾಡುತ್ತಿರುವ ಯಾವಾಗಲೂ ಸುಖದಿಂದಿರುವುದಕ್ಕೆ ಸಾಧನವಾದ ಒಂದೇ ಒಂದು ಶಿವಯೋಗವೆಂಬ ಉಪಾಯವು ಇರುವುದು ಎಂದು ತಿಳಿಯುವದು. ಈ ಶಿವಯೋಗವನ್ನು ಸಾಧಿಸಿದ ಯೋಗಿಗಳು ಮೂರು ಶರೀರಗಳನ್ನು ಆ ಶರೀರಗಳಲ್ಲಿರುವ ರೋಗಾಧಿ ದುಷ್ಟ ಧರ್ಮಗಳನ್ನೂ, ದಾಂಟಿ ಯಾವಾಗಲೂ ನಿತ್ಯಾನಂದ ಸಮುದ್ರದಲ್ಲಿ ಮುಳುಗಿರುತ್ತಾರೆ. ಆ ಯೋಗಿಗಳು ತಮ್ಮ ಶರೀರಗಳನ್ನೂ, ಶರೀರದ ಧರ್ಮಗಳನ್ನೂ, ಬಿಟ್ಟಿದ್ದರೂ ಧನಿಕನು ತನಗೆ ದಾರಿದ್ರ್ಯ ಇಲ್ಲದಿದ್ದರೂ ಕಳ್ಳಕಾಕರ ಭೀತಿಯಿಂದ ದರಿದ್ರನಂತೆ ನಟಿಸುವ ಹಾಗೆ ನಮ್ಮ ಕಣ್ಣಿಗೆ ಮಾತ್ರ ಶರೀರವುಳ್ಳವರಂತೆ ಕಾಣಿಸುಕೊಳ್ಳುವರು. ವಸ್ತುತಃ ವಾಯುವು ಎಲ್ಲಾ ಕಡೆಯಲ್ಲಿಯೂ ಸಂಚರಿಸುವಂತೆ ಈ ಶಿವಯೋಗಿಗಳ ವ್ಯಾ

ಷ್ಟಿಯು ಎಲ್ಲೆಲ್ಲಿಯೂ ಇರುವದು. ಇವರು ಆಕಾಶದಲ್ಲಿಯೂ, ನೀರಿನಲ್ಲಿಯೂ, ಸಮಸ್ತ ಪ್ರಾಣಿಗಳಲ್ಲಿಯೂ ಸಂಚರಿಸ ಬಲ್ಲರು. ಈ ವಿಷಯದಲ್ಲಿ ಲಂಕಾಪಟ್ಟಣದಲ್ಲಿರುವ ವಿಭೀಷಣನ ಪ್ರಾರ್ಥನಾನುಸಾರವಾಗಿ ಆಕಾಶಮಾರ್ಗದಿಂದ ಪ್ರಯಾಣಮಾಡಿ ಬಂದೇ ಮುಹೂರ್ತದಲ್ಲಿ ಆ ವಿಭೀಷಣನ ಇಷ್ಟಾರ್ಥವನ್ನು ನೆರವೇರಿಸಿ ಕೊಟ್ಟ ಶ್ರೀಮದ್ಭಗವತ್ಪಾದ ಜಗದ್ಗುರು ರೇಣುಕಾಚಾರ್ಯರು ಉದಾಹರಣೆಯಾಗಿರುವುದಲ್ಲದೆ ಇನ್ನೂ ಅನೇಕ ಶಿವಾಚಾರ್ಯರು ದೃಷ್ಟಾಂತಭೂತರಾಗಿರುವರು. ತಮ್ಮ ಮನಸ್ಸಿಗೆ ಬೇಡವಾದರೆ ಇವೆಲ್ಲಾ ಸಿದ್ಧಿಗಳು ಭೋಗಕ್ಕೆ ಸಾಧನಗಳಾಗುವವು. ಭೋಗತೀರಿದ ಮೇಲೆ ತಿರುಗಿ ಮೊದಲಿನ ಸ್ಥಿತಿಯನ್ನೇ ಹೊಂದಬೇಕಾಗುವುದು ಎಂದು ಯೋಚಿಸಿ ಸಿದ್ಧಿಗಳಲ್ಲಿ ಉಪೇಕ್ಷೆಯಂ ಮಾಡಿ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹ ಎಂಬ ಐದು ಕಾರ್ಯಗಳಂ ಮಾಡುವುದರಲ್ಲಿ ಸಮರ್ಥನಾದ ಪರಶಿವ ಮಹಾಲಿಂಗದಲ್ಲಿ ಸಮರಸವನ್ನು ಹೊಂದಿ ಪರಶಿವಸ್ವರೂಪವೇ ಆಗುವರು. ಇದರಿಂದ ಶಿವಯೋಗವು ಭೋಗ ಮೋಕ್ಷಗಳೆರಡನ್ನೂ ಕೊಡುವ ಸಾಮರ್ಥ್ಯವುಳ್ಳದೆಂದು ವ್ಯಕ್ತವಾಗುವುದು. ಇಂಥ ಶಿವಯೋಗವು ನಮ್ಮ ಭಾರತ ಭೂಮಿಯಲ್ಲಿ ಮೊದಲು ವಿಶೇಷವಾಗಿತ್ತೆಂದು ಪ್ರಾಚೀನ ಗ್ರಂಥಗಳಿಂದ ತಿಳಿದುಬರುತ್ತದೆ. ಬರುಬರುತ್ತಾ ಇದು ಹ್ರಾಸವಾಗಿ ಇತ್ತೀಚೆಗೆ ನಾಮಾವಶೇಷವಾಗಿರುವುದು. ಎಲೈ ವೀರಶೈವಬಂಧುಗಳೇ ಇದಕ್ಕಾಗಿ ನಮ್ಮ ಜಗದ್ಗುರು ಪಂಚಾಚಾರ್ಯರೂ ಅವರ ಶಿಷ್ಯರಾದ ನೀವುಗಳೂ ಗುರುವರ್ಗದ ಸಾಂಪ್ರದಾಯಸ್ಥರಾದ ವಟುಗಳನ್ನೇ ಆರಿಸಿ ಅವರಿಗೆ ಶಿವಯೋಗ ಪ್ರತಿಪಾದಕವಾದ ಶಿವಾಗಮಗಳನ್ನೂ ಶಿವಾಚಾರ್ಯರಿಂದ ರಚಿತಗಳಾದ ಆಗಮಗಳ ಸಾರವನ್ನು ಬೋಧಿಸುವ ಗ್ರಂಥಗಳನ್ನು, ತತ್ಸಾಧಕವಾದ ಸಂಸ್ಕೃತವನ್ನೂ ಕಲಿಸುವುದಕ್ಕಾಗಿ ಒಂದು ಗುರುಕುಲವನ್ನಾದರೂ ಏರ್ಪಡಿಸಿದರೆ ನಮ್ಮ ಮತಕ್ಕೆ ಮಹತ್ಪ್ರಯೋಜನವಾಗಬಹುದು. ಆ ಗುರುಕುಲ ವಾಸದಲ್ಲಿ ಗುರುವರ್ಗದ ಬಾಲಕರು ಸಂಸ್ಕೃತವನ್ನು ಚನ್ನಾಗಿ ಅಭ್ಯಾಸಮಾಡಿ ವೀರಶೈವ ಸಿದ್ಧಾಂತ ಶಾಸ್ತ್ರವನ್ನು ಕಲಿತು ಅವುಗಳ ರಹಸ್ಯವನ್ನೆಲ್ಲಾ ತಿಳಿದು ಅದರಂತೆ ಆಚರಿಸಿ ಸಚ್ಛಿಷ್ಯರಲ್ಲಿ ಹರಡುತ್ತ ಬಂದರೆ ಶಿಷ್ಯರೂ ಕೂಡ ಭೋಗ ಮೋಕ್ಷವನ್ನು ಪಡೆಯುವರು. ನಮ್ಮಲ್ಲಿ ಎಲ್ಲಿಯವರೆಗೆ ಗುರುವರ್ಗದ ವಟುಗಳು ಶಿವಯೋಗ ಶಾಸ್ತ್ರದಲ್ಲಿ ನಿಷ್ಣಾತರಾಗುವುದಿಲ್ಲವೊ ಅಲ್ಲಿಯವರಿವಿಗೂ ನಮ್ಮ ವೀರಶೈವಮತಕ್ಕೆ ಹೀನಾವಸ್ಥೆಯು ತಪ್ಪುವುದಿಲ್ಲವೆಂದು ಘಂಟಾಘೋಷವಾಗಿ ಹೇಳಬಹುದು. ಶಿವಯೋಗವನ್ನು ಹೇಳುವ ಶಿವಾಗಮ

ಮೊದಲಾದ ಗ್ರಂಥಗಳು ನಮ್ಮಲ್ಲಿ ಅಜ್ಞಾನಿಗಳ ಪ್ರಾಬಲ್ಯದಿಂದ ಮಣ್ಣುಪಾಲಾಗಿ ಹೋಗಿ ಸ್ವಲ್ಪ ಸ್ವಲ್ಪ ಭಾಗಗಳು ಮಾತ್ರ ಉಳಿದುಕೊಂಡಿವೆ. ಸಂಪೂರ್ಣ ಗ್ರಂಥಗಳಾದರೂ ಎಲ್ಲಿಯಾದರೊಂದು ಕಡೆಯಲ್ಲಿರಬಹುದು.

ಜ್ಞಾನಿಗಳು ಜ್ಞಾನಭಂಡಾರವನ್ನು ಏಕೆ ಕಳೆದುಕೊಳ್ಳುವರು? ಇತ್ತೀಚೆಗೆ ಶಿವಯೋಗಶಾಸ್ತ್ರ ಸಾಂಪ್ರದಾಯವು ಕಡಿಮೆಯಾಗುತ್ತ ನಡೆದಕಾಲದಲ್ಲಿ ತಪಸ್ವಿಯಾದ ವಸಗುಪ್ತನೆಂಬ ಮಹಾ ಮಾಹೇಶ್ವರನಿಗೆ ಶಿವನು ಸ್ವಪ್ನದಲ್ಲಿ ಈ ಮಹಾದೇವಗಿರಿಯ ದೊಡ್ಡ ಶಿಲಾತಲದಲ್ಲಿ ಶಿವಯೋಗಶಾಸ್ತ್ರದ ರಹಸ್ಯವಿದೆ ಎಂದು ಹೇಳಿ ಶಿವಸೂತ್ರಗಳನ್ನು ಅನುಗ್ರಹಿಸಿದನು. ಆ ದೊಡ್ಡ ಕಲ್ಲಿಗೆ ಈಗ್ಯೂ ಶಂಕರಪಲ್ಲ ಎಂದು ಕಾಶ್ಮೀರದಲ್ಲಿ ಹೇಳುವ ಸಾಂಪ್ರದಾಯವಿರುವುದು. ಈ ಇತಿಹಾಸವು ಈಗ ನಿರ್ಣಯಸಾಗರದಲ್ಲಿ ಅಚ್ಚಾಗಿರುವ ಶಿವಸೂತ್ರ ವಿಮರ್ಶನೀ ಎಂಬ ಗ್ರಂಥವನ್ನು ನೋಡಿದವರಿಗೆ ಗೊತ್ತಾಗುತ್ತದೆ. ಈ ಸೂತ್ರಗಳು ಪ್ರಾಯಃ ಶಿವಾಗಮದ ಸಾರವನ್ನೇ ಬೋಧಿಸುತ್ತವೆ. "ಚೈತನ್ಯಮಾತ್ಮಾ", "ಜ್ಞಾನಂಬಂಧಃ" ಎಂಬೆರಡು ಮೊದಲಿನ ಸೂತ್ರಗಳನ್ನು ಶ್ರೀವ್ಯಾಸಮಹರ್ಷಿಗಳು ತಮ್ಮ ಶಿವಪುರಾಣದಲ್ಲಿ ಉದಾಹರಿಸಿರುವ ಕಾರಣ ಈ ಶಿವಸೂತ್ರಗಳ ಆವಿರ್ಭಾವಕಾಲವು ವ್ಯಾಸಮಹರ್ಷಿಗಳಿಂದ ರಚಿತಗಳಾದ ಬ್ರಹ್ಮಸೂತ್ರಗಳಿಗಿಂತ ಮೊದಲನೆಯದೆಂದು ಹೇಳುವಲ್ಲಿ ಯಾವಸಂಶಯವೂ ಇಲ್ಲ. ಸಿದ್ಧಾಂತಶಿಖಾಮಣಿ ಮೊದಲಾದ ಅನೇಕ ಗ್ರಂಥಗಳು ಶಿವಯೋಗವನ್ನೇ ಹೇಳುವವು. ಆದ್ದರಿಂದಲೇ ಈಗಲೂ ಶಿವಯೋಗಿಗಳ ಮತವು ಅಲ್ಪಸ್ವಲ್ಪ ಉಳಿದಿರುವದು. ನಮ್ಮಲ್ಲಿ ಅನೇಕರು ಪೂರ್ವಕಾಲದಲ್ಲಿ ಶಿವಯೋಗ ರಹಸ್ಯವನ್ನು ತಿಳಿದಿದ್ದರೂ ಲೋಭದಿಂದ ಅನ್ಯರಿಗೆ ಹೇಳದೆ ಅತಿರಹಸ್ಯವಾಗಿಟ್ಟುಕೊಳ್ಳುತ್ತ ಬಂದುದರಿಂದಲೇ ಈ ಶಿವಯೋಗವು ಲೋಪಾವಸ್ಥೆಯನ್ನು ಹೊಂದಿತೆಂದು ಹೇಳಲಿಕ್ಕೆ ಸಂಶಯವೇ ಇಲ್ಲ. ಆದ್ದರಿಂದ ಮೊದಲು ಹೇಳಿದ ಪ್ರಕಾರ ಒಂದು ಗುರುಕುಲವಾಸವನ್ನು ಏರ್ಪಡಿಸಿ ಅಲ್ಲಿ ಗುರವರ್ಗದ ವಿದ್ಯಾರ್ಥಿಗಳನ್ನು ಭಾಷಾಪರಿಚಯ ಮಾಡಿಸಿ ಯೋಗಶಾಸ್ತ್ರಸಂಪನ್ನರನ್ನಾಗಿ ಮಾಡುತ್ತ ಬಂದರೆ ನಮ್ಮ ವೀರಶೈವ ಮತವು ಉಚ್ಚಶಿಖರವನ್ನು ಏರಬಹುದು. ಪರಂಪರೆಯಾಗಿ ದೀಕ್ಷೆ ವಿವಾಹಾದಿ ಕಾರ್ಯಗಳಲ್ಲಿ ಪೌರೋಹಿತ್ಯವನ್ನು ನಡಿಸಿಕೊಂಡುಬಂದ ಮಠಸ್ಥಲೋತ್ಪನ್ನರಾದ ವೀರಮಾಹೇಶ್ವರರಾದ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಗೋತ್ರೋದ್ಭವರಾದ ಗುರುಕುಲದವರು ಆ ಗುರುಕುಲವಾಸದಲ್ಲಿದ್ದು ಮೊದಲು ಶಿವಯೋಗಸಂಪನ್ನರಾದರೆ ಇವರುಗಳ ಮೂಲಕ ಶಿಷ್ಯಕು

ಲವೂ ಕೂಡ ಉದ್ಧಾರವಾಗುವುದು. ಆದ್ದರಿಂದ ಗುರುಕುಲಾಭಿವೃದ್ಧಿಗೋಸ್ಕ
ರವಾಗಿ ಒಂದು ಶಿವಯೋಗ ವಿದ್ಯಾನಿಲಯವು ಅಂದರೆ ಗುರುಕುಲನಿವಾಸವು
ಏರ್ಪಡಿಸಲ್ಪಟ್ಟರೇ ಗುರುಕುಲವು ಸುಧಾರಿಸಲ್ಪಡುವುದು. ತನ್ಮೂಲಕ ಶಿಷ್ಯಕುಲ
ವೂಕೂಡ ಉದ್ಧರಿಸಲ್ಪಡುವುದು. ಗುರುವರ್ಗದವರು ಶಿವಯೋಗಸಾಧನ, ಶಿಷ್ಯ
ಸಂರಕ್ಷಣ ಮೊದಲಾದ ಸ್ವಕರ್ತವ್ಯಕರ್ಮಗಳಲ್ಲಿ ಪರಾಙ್ಮುಖರಾದುದರಿಂದಲೇ
ಈಗಣ ಕೆಲವು ಡಾಂಭಿಕರು ಕುಲವೆಲ್ಲಿಯದು, ಛಲವೆಲ್ಲಿಯದು, ಲಿಂಗಧಾರಿಗಳಿಗೆ
ಲ್ಲರಿಗೂ ಒಂದೇ ಕುಲವಲ್ಲವೆ? ಇದರಲ್ಲಿ ಗುರುಕುಲವೆಂದೂ, ಶಿಷ್ಯಕುಲವೆಂದೂ,
ಪ್ರಭೇಧವು ಎಲ್ಲಿಂದ ಬಂದಿತೆಂದು ತಮ್ಮ ಮನಸ್ಸಿಗೆ ಬಂದಂತೆ ತಮ್ಮ ಸ್ವಭಾವಕ್ಕೆ
ಯೋಗ್ಯಗಳಾದ ನಿಂದೋಕ್ತಿಗಳನ್ನು ಉಚ್ಚರಿಸುವುದನ್ನೂ ಪುಸ್ತಕದಲ್ಲಿ ಬರೆಯು
ವುದನ್ನು ಮಾಡುತ್ತಾರೆ. ನಾವುಗಳು ಈ ಪ್ರಲಾಪವನ್ನೇ ನಂಬಬೇಕೊ, ಪ್ರಾ
ಚೀನಾರ್ಯರ ಮಾತನ್ನು ನಂಬಬೇಕೊ, ಯೋಗಭ್ರಷ್ಟನಾದವನು, ಯೋಗಿಗಳ
ಕುಲದಲ್ಲಿ ಹುಟ್ಟುತ್ತಾನೆಂದು ಭಗವದ್ಗೀತಾದಿ ಗ್ರಂಥಗಳಿಂದಲೂ, ತನ್ನ ಜಾತಿಯ
ವರಲ್ಲಿಯೇ ಕನ್ಯಾ ಕೊಡುವುದನ್ನೂ ತರುವುದನ್ನೂ ಮಾಡಬೇಕೆಂದು ಸಿದ್ಧಾಂತ
ಶಿಖಾಮಣಿಯಲ್ಲಿ ಹೇಳಿರುವುದರಿಂದಲೂ „ಜಾತ್ಯಂತರ ಪರಿಣಾಮಃ ಪ್ರಕೃತ್ಯಾ
ಪೂರಾತ್" ಎಂದು ಯೋಗದರ್ಶನದಲ್ಲಿ ಹೇಳಿರುವುದರಿಂದಲೂ ಜಾತಿಭೇದಗಳುಂ
ಟೆಂದು ಸಿದ್ಧವಾಗುವುದಲ್ಲದೆ ; ಇನ್ನೂ ಅನೇಕ ಗ್ರಂಥಗಳಲ್ಲಿ ಜಾತಿ ಭೇದಗಳು
ಉಕ್ತಗಳಾಗಿದ್ದರೂ ಇವುಗಳಿಗೆಲ್ಲಾ ತಿಲಾಂಜಲಿಯನ್ನು ಕೊಟ್ಟು ಲಿಂಗಧಾರಿಗ
ಳಲ್ಲಿ ಕುಲವಿಲ್ಲೆಂದು ಹೇಳಲಿಕ್ಕಾದೀತೆ? ಎಲ್ಲರಿಗೂ ಒಂದೇಕುಲವನ್ನು ಹೇಳಬ
ಹುದೇ? ಈ ಸಂದರ್ಭದಲ್ಲಿ ಜಾತಿ ಭೇದಗಳು ಇರುವುವೋ ಇಲ್ಲವೋ ಎಂಬ
ವಿಚಾರವನ್ನು ಹೇಳಲಿಕ್ಕೆ ನಾನು ಹೊರಟಿಲ್ಲವು. ಮುಖ್ಯವಾಗಿ ವೃದ್ಧಪಾರಂಪ
ರ್ಯದಿಂದ ಗುರುಕುಲವೆಂದೂ ಭಕ್ತಕುಲವೆಂದೂ ಎರಡು ಭೇದಗಳು ಪ್ರಸಿದ್ಧ
ವಾಗಿರುವುದನ್ನು ನಾವು ಒಪ್ಪಿಕೊಂಡೇ ತೀರಬೇಕಾಗುತ್ತದೆ ಅಲ್ಲವೆ? ಅವುಗಳಲ್ಲಿ
ಗುರುಕುಲದ ಸುಧಾರಣೆಯನ್ನು ಮಾಡುವದು ಆವಶ್ಯಕವಾಗಿರುವುದು. ಗುರುಕು
ಲದವರು ಶಿವಯೋಗಸಂಪತ್ತುಳ್ಳವರಾದರೆ ಅವರ ಶಿಷ್ಯಕುಲವು ಕೂಡ ಶಿವಯೋ
ಗವನ್ನು ಪಡೆಯುವುದರಲ್ಲಿ ಅಭ್ಯಂತರವಿಲ್ಲವು. ಇದರಿಂದ ಶಿವಯೋಗವೆಂಬ ರತ್ನದ
ದ್ವೀಪವನ್ನು ಗುರುಕುಲದವರೇ ತಮ್ಮಲ್ಲಿಯೇ ಇಟ್ಟುಕೊಂಡು ತಮ್ಮನ್ನು ಮಾತ್ರ
ಆವರಿಸಿರುವ ಕತ್ತಲೆಯನ್ನೆಲ್ಲಾ ಕಳದುಕೊಂಡು ತಾವಬ್ಬರೇ ಪ್ರಕಾಶದಲ್ಲಿ ಕುಳಿತು
ಶಿಷ್ಯವರ್ಗವನ್ನು ಕತ್ತಲೆಯಲ್ಲಿಯೇ ಕುಳ್ಳಿರಿಸಿ ಬಿಡಬೇಕೆಂದು ನಮ್ಮಗಳ ಅಭಿ

ಪ್ರಾಯುವಲ್ಲವು. ಯಾಕಂದರೆ ಪ್ರಕಾಶವನ್ನು ತಡೆದು ಒಂದೇಕಡೆಯಲ್ಲಿ ಇರಿಸಲು ಯಾರಿಂದಲೂ ಆಗುವುದಿಲ್ಲವು. ಆ ಪ್ರಕಾಶದ ಸ್ವಭಾವವು ವ್ಯಾಪಕವು. ಅದು ಸ್ವಲ್ಪ ಸ್ವಲ್ಪ ಕಾಣಿಸಿಕೊಳ್ಳುತ್ತಿರುವಾಗಲೇ ಜಗತ್ತನ್ನು ವ್ಯಾಪಿಸಿ ಸಕಲ ಜೀವರ ಅಂಧಕಾರವನ್ನೆಲ್ಲಾ ಕಳೆಯುವದನ್ನುವಾಗ ತನಗೆ ಅತಿ ಸಮೀಪದಲ್ಲಿದ್ದ ಅಂಧಕಾರವನ್ನು ಮೊದಲೇ ಕಳೆಯುವದೆಂದು ಸ್ಪಷ್ಟವಾಗುವದಿಲ್ಲವೆ ?

ಶಿವಯೋಗವೆಂದರೆ ತನ್ನ ಹೀನಸ್ಥಿತಿಯನ್ನು ಹೋಗಲಾಡಿಸಿ ಉತ್ತಮ ಸ್ಥಿತಿಗೆ ಒಯ್ಯುವ ಒಂದು ಉಪಾಯವೆಂದರ್ಥವು. ತಾನು ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, (ಅಂದರೆ ನಿಯಮನ) ಮೋಕ್ಷಗಳೆಂಬ ಐದು ಕಾರ್ಯಗಳನ್ನು ಮಾಡುವುದರಲ್ಲಿ ಸಮರ್ಥನಾಗಿದ್ದರೂ, ತಾನು ಸರ್ವಜ್ಞನಾಗಿದ್ದರೂ ಸೃಷ್ಟ್ಯಾದಿ ಈ ಪಂಚಕೃತ್ಯಗಳನ್ನು ಪೂರ್ವದಂತೆ ಮಾಡದಿರುವುದೂ ತಾನು ಕಿಂಚಜ್ಞನ ನಾಗಿರುವುದು ತನಗೆ ಹೀನಸ್ಥಿತಿಯಲ್ಲವೆ? ತಾನು ಸರ್ವದಾ ದುಃಖವಿಲ್ಲದವನಾಗಿದ್ದರೂ ದುಃಖವುಳ್ಳವನಾಗಿರುವುದನ್ನೂ, ಸಂಸಾರಿಯಲ್ಲದವನಾದರೂ, ಸಂಸಾರಿಯಾಗಿರುವುದನ್ನೂ, ಜನನಮರಣಗಳಿಲ್ಲದಿದ್ದರೂ ಅವುಗಳುಳ್ಳವನಾಗಿರುವುದನ್ನೂ, ಎಲ್ಲವೂ ತನ್ನಧೀನದಲ್ಲಿರಲು ಇಲ್ಲವೆಂದು ಅವುಗಳಿಂದ ವ್ಯಸನ ಪಡುವುದು ಇವುಗಳೆಲ್ಲವನ್ನೂ ಹೀನಸ್ಥಿತಿಯನ್ನಾಗಿ ಹೇಳಬೇಕಲ್ಲವೆ? ವಿಷಯ ವಾಸನೆಯು ತನ್ನನ್ನು ಅಗ್ನಿಯಂತೆ ಸುಡುವದು. ಸರ್ಪದಂತೆ ಕಚ್ಚುವದು. ಮುಳ್ಳಿನಂತೆ ಚುಚ್ಚುವದು. ಕಗ್ಗತ್ತಲೆಯಂತೆ ತನ್ನನ್ನು ಅಂಧನನ್ನಾಗಿ ಮಾಡುವದು. ಬಲೆಯಂತೆ ತನ್ನನ್ನು ಸುತ್ತಿಬಿಡುವದು. ಗರಗಸದಂತೆ ಕೊರೆಯುವದು. ತಾನು ಯಾವುದರಿಂದಲೂ ಯಾವವಿಧವಾದ ಬಾಧೆಯನ್ನು ಹೊಂದದವನಾಗಿದ್ದರೂ ಅವುಗಳಿಗೆ ಆಧೀನನಾಗಿ, ಅವುಗಳಿಂದ ಹಿಂಸೆ ಪಡುವ ದೆಸೆಗಿಂತಲೂ ಬೇರೆ ಒಂದು ಹೀನಸ್ಥಿತಿಯುಂಟೆ? ಅನೇಕ ಉಪದ್ರವಗಳಿಂದ ಕೂಡಿದ ಯಾವಾಗಲೂ ಸಂಸಾರವೆಂಬ ಘೋರಾರಣ್ಯದಲ್ಲಿ ಸಂಚರಿಸುವದು ಕುಶಲಪುರುಷನ ಕರ್ತವ್ಯವೇ? ಆ ಕಾನನವನ್ನು ಪ್ರವೇಶಮಾಡಿದರೆ ಅವಿವೇಕಿಗಳೆಂಬ ದೊಡ್ಡ ದೊಡ್ಡ ಮುಳ್ಳುಗಳು ಹಜ್ಜೆಹಜ್ಜೆಗೆ ಉಪದ್ರವನ್ನು ಕೊಡುವುದಿಲ್ಲವೆ? ಅಲ್ಲಿರುವ ದುಷ್ಟರಾದ ಇಂದ್ರಿಯಗಳೆಂಬ ಶತ್ರುಗಳು ತಾಪತ್ರಯವೆಂಬ ಹಳ್ಳದಲ್ಲಿ ಹಾಕುವವು. ಅಲ್ಲಿ ಮೋಹಪಿಶಾಚಿಯು ಅಂಟಿಕೊಂಡು ತನ್ನನ್ನು ಮರೆಸಿ ತನ್ನ ಸ್ಥಿತಿಯನ್ನೇ ದೂರಮಾಡುವದು. ಅಹಂಕಾರವೆಂಬ ವಿಷಗಿಡವೂ, ಅಸೂಯಾವೆಂಬ ವಿಷದ ಬಳ್ಳಿಯೂ ಕಾಲಿಗೆ ತಗುಲಿ ತನ್ನನ್ನು ನಾಶಮಾಡುವವು. ಅಂಥಹ

ಅನೇಕ ಹಿಂಸೆಯನ್ನು ಹೀನಸ್ಥಿತಿಯನ್ನಾಗಿ ಹೇಳಬೇಕಲ್ಲದೆ ಇನ್ನೇನು ಹೇಳಬೇಕು. ಲೋಕದಲ್ಲಿ ಧನಧಾನ್ಯಾದಿ ಸಮೃದ್ಧಿ ಇಲ್ಲದೆ ಹೀನದೆಸೆಗೆ ಬಂದವನಿಗೆ ಎಷ್ಟೋ ಉಪದ್ರವಗಳು ಕಂಡುಬರುತ್ತವೆ. ರಾಜನು ತಾನು ಚತುರಂಗಬಲಸಹಿತನಾಗಿದ್ದರೂ ಪರ ಶತ್ರು ಬಂದ ಕಾಲಕ್ಕೆ ತನ್ನ ಸೈನ್ಯವನ್ನೆಲ್ಲಾ ಮರೆತು ಸಂಕಟದಲ್ಲಿ ಬೀಳುವಂತೆ, ತಾನು ಸರ್ವಸಮರ್ಥನಾಗಿದ್ದರೂ ತನ್ನ ಸಾಮರ್ಥ್ಯವನ್ನು ತಿಳಿಯದೆ ಅನೇಕ ಉಪದ್ರವಗಳಿಂದ ಕೂಡಿದ ಸಂಸಾರವೆಂಬ ಹೀನಸ್ಥಿತಿಯನ್ನು ನೋಡಿ ಅದನ್ನು ಯಾವನು ಉತ್ತಮ ಸ್ಥಿತಿಯೆಂದು ಹೇಳುವನು. ತನ್ನ ಸರ್ವಸ್ವವನ್ನೆಲ್ಲಾ ಸೆಳೆದು ಆಳವಾದ ತಾಪತ್ರಯದ ತಗ್ಗಿನಲ್ಲಿ ಕೆಡವಿದ ದುರವಸ್ಥೆಯನ್ನು ಯಾವನು ದೂರೀಕರಿಸದೆ ಇರುವನು ? ಈ ಕೆಟ್ಟ ಸ್ಥಿತಿಯನ್ನು ಹೇಗೆ ಕಳೆದುಕೊಳ್ಳಬೇಕೆಂದು ಯಾವನು ವ್ಯಸನಪಡದೆ ಇರುವನು? ಈ ಕೆಟ್ಟ ಸ್ಥಿತಿಯನ್ನು ಇಟ್ಟುಕೊಂಡು ಸುಮ್ಮನೆ ಇರುವವನನ್ನು ಏನೆಂದು ಕರೆಯಬೇಕು ? ಮೃತಪ್ರಾಯನೆಂದು ಹೇಳಿದರೂ ಹೇಳಬಹುದು. ಪ್ರತಿಯೊಬ್ಬ ಮನುಷ್ಯನು ತಾನು ಶ್ರೇಷ್ಠನೆನಿಸಬೇಕೆಂದು ಪ್ರಯತ್ನಪಡುವನಲ್ಲವೆ? ತನ್ನ ಕೀಳಸ್ಥಿತಿಯನ್ನು ಕಳೆದು ತನಗೆ ಶ್ರೇಷ್ಠದಶೆಯನ್ನು ಹೊಂದಿಸುವ ಉಪಾಯವನ್ನು ತಿಳಿಸುವ ಗುರುವಿನಲ್ಲಿ ವಿಶ್ವಾಸಪೂರ್ವಕ ಉಪಾಯವನ್ನು ತಿಳಿದುಕೊಳ್ಳುವುದು ಯಾರಿಗೆ ಯೋಗ್ಯವಲ್ಲಾ? ಶರೀರ ಶಕ್ತಿಯಲ್ಲಿ ಸಾಧಾರಣ ಎಲ್ಲರನ್ನೂ ಮೀರಿದ ಜಟ್ಟಿನೊಬ್ಬ ವಿವೇಕಿಯು ತಾನು ಸ್ವೇಚ್ಛೆಯಿಂದ ಶಕ್ತಿಹೀನನಾದರೆ ಮೊದಲಿನ ತನ್ನ ಶಕ್ತಿಯನ್ನು ಬಯಸದೆ ಸುಮ್ಮನೆ ಕುಳಿತುಕೊಳ್ಳುವುದಕ್ಕೆ ಆದೀತೆ? ಎಂದಿಗೂ ಕುಳಿತುಕೊಳ್ಳಲಾರನು. ಅವನು ವಿಶ್ವಪ್ರಯತ್ನವಾದಿ ಮಧ್ಯದಲ್ಲಿ ಒದಗಿದ ಹೀನದಸೆಯನ್ನು ಕಳೆದುಕೊಳ್ಳದೇ ಬಿಡುವುದಿಲ್ಲವು. ಮನುಷ್ಯನಾದರೂ ತಾನು ಮೊದಲು ಸರ್ವಜ್ಞನೂ ಸರ್ವಶಕ್ತಿಯುಳ್ಳವನೂ ಆಗಿ ಮಧ್ಯದಲ್ಲಿ ಮಾತ್ರ ಒದಗಿದ ಹೀನದಸೆಯನ್ನು ಕಳೆದುಕೊಳ್ಳಬೇಕಾಗಿದೆ. ಜೇಡರ ಹುಳವೆಂಬ ಕೀಟವೂ ಕೂಡ ಸ್ವೇಚ್ಛೆಯಿಂದ ತನ್ನಲ್ಲಿದ್ದ ಸಂಕುಚಿತಗಳಾದ ತಂತುಗಳನ್ನೇ ಬಾಹ್ಯದಲ್ಲಿ ಜಾಲಾಕಾರವಾಗಿ ರಚಿಸಿ ಆ ಜಾಲವನ್ನೇ ಪ್ರವೇಶಿಸಿ, ಅಲ್ಲಿಯೇ ವಾಸಮಾಡಿ, ತಾನು ಸಂಚರಿಸುವ ಕ್ರಮದಲ್ಲಿ ಸ್ವಲ್ಪ ತಪ್ಪಿದರೂ ತಾನು ಆ ಜಾಲಾಧೀನವಾಗಿ ಚಟಪಟಿಸಿ ಸಂಕಟಪಡುವದು ತಾನು ಸಂಸಾರಜಾಲದಲ್ಲಿದ್ದರೂ ಅದನ್ನು ಹಚ್ಚಿಕೊಳ್ಳದೆ ದೂರವಾಗಿಟ್ಟುಕೊಂಡು ಸಂಚರಿಸದೇ ಇದ್ದರೆ ಸಂಸಾರಜಾಲದಲ್ಲಿ ಬಿದ್ದು ಬೆಂಡಾಗಿ ಚಟಪಡಿಸಿ ಗಾಬರಿಯಾಗಿ ಸಂಕಟದಲ್ಲಿ ಬೀಳಬೇಕಾಗುವದು. ಆ ಕೀಟವು ಮತ್ತೊಂದರ

ಸಹಾಯದಿಂದ ಮೇಲಕ್ಕೆದ್ದು ಮೆಲ್ಲಮೆಲ್ಲನೆ ಆ ಜಾಲವನ್ನೇ ನುಂಗಿ ಅದನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವದು. ಅದರಂತೆ ಉಪಾಯವನ್ನು ಬಲ್ಲ ಶಿವಯೋಗಿ ಶಿವಾಚಾರ್ಯನ ಸಹಾಯದಿಂದ ಈ ಪ್ರಪಂಚವನ್ನೇ ನುಂಗಿ ತನ್ನ ಅಧೀನದಲ್ಲಿಟ್ಟುಕೊಳ್ಳಬಹುದು. ಆಗ ಇವನ ಹೀನದೆಶೆಯು ಹುಟ್ಟೇ ನಾಶವಾಗುವುದು. ವಸ್ತುತಃ ಈ ಸ್ಥೂಲ ಶರೀರವೆಂಬುವುದೇ ಆ ಕೀಟದ ಜಾಲದಂತಿದೆ. ಆ ಕೀಟದ ಜಾಲದೊಳಗಾದರೋ ಒಂದಕ್ಕಿಂತ ಒಂದು ಸಣ್ಣ ಸಣ್ಣ ಚಕ್ರಗಳಿರುವಂತೆ ಈ ಶರೀರದಲ್ಲಿಯೂ ಒಂದಕ್ಕಿಂತ ಒಂದು ಸೂಕ್ಷ್ಮ ಚಕ್ರಗಳಿರುವವು. ಆ ಕೀಟವು ಎಲ್ಲಕ್ಕೂ ಸೂಕ್ಷ್ಮ ಚಕ್ರದಲ್ಲಿ ತನ್ನ ನಿಯತ ವಸತಿಯನ್ನು ಮಾಡಿಕೊಂಡಂತೆ ಈ ಅಣುರೂಪನಾದ ಜೀವಾತ್ಮನು ಎಲ್ಲಕ್ಕೂ ಸೂಕ್ಷ್ಮವಾದ ಹೃದಯ ಚಕ್ರದಲ್ಲಿ ತನ್ನ ಮುಖ್ಯ ವಾಸವನ್ನು ಮಾಡಿಕೊಂಡಿರುವನು. ಈ ಚಕ್ರಕ್ಕೆ ಶಿವಯೋಗಿಗಳು ಕಮಲವೆಂದು ಹೇಳುವರು. ಆ ಜಾಲದಲ್ಲಿ ಉದ್ದವಾಗಿಯೂ ಅಡ್ಡವಾಗಿಯೂ ಇರುವ ತಂತುಗಳಿರುವಂತೆ ಈ ದೇಹಜಾಲದಲ್ಲಿ ನಾಡಿಗಳೆಂಬ ದೀರ್ಘಾಕಾರವಾದ ವಕ್ರಾಕಾರಗಳಾದ ತಂತುಗಳಿರುವವು. ಆ ಕೀಟವು ತನ್ನ ತಂತುವಿಗೆ ಹತ್ತಿದ ಇತರ ಪದಾರ್ಥಗಳನ್ನು ಗ್ರಹಿಸಿ ತಿನ್ನುವಂತೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ ಜ್ಞಾನತಂತುಗಳಿಗೆ ಹತ್ತಿದ ಪದಾರ್ಥಗಳನ್ನು ಗ್ರಹಿಸಿ ನುಂಗಿ ತನ್ನಲ್ಲಿಟ್ಟುಕೊಳ್ಳುವನು. ಇಲ್ಲದಿದ್ದರೆ ಮುಂದೆ ಚಿತ್ತದಲ್ಲಿ ಆಯಾಯ ಪದಾರ್ಥಗಳ ಅಭಿವ್ಯಕ್ತಿಯಾಗುವುದೇ ಇಲ್ಲವಾದೀತು. ಆದ್ದರಿಂದ ಬಾಹ್ಯದಲ್ಲಿ ತೋರುವ ಸಮಸ್ತ ವಿಷಯಗಳು ತನ್ನಲ್ಲಿ ಸೂಕ್ಷ್ಮರೂಪವಾಗಿ ಇರುತ್ತವೆಂದು ಒಪ್ಪಿಕೊಳ್ಳಲೇಬೇಕು.

ಅಣುವಾದ ಜೀವನು ಪರತಂತ್ರನಾದ್ದರಿಂದ ಇವನ ಪೂರ್ವದ ಸ್ಥಿತಿಯು ಸ್ವತಂತ್ರವಾದುದೆ ಆಗಿರಬೇಕು. ಆ ಕೀಟವು ತಾನು ಒಂದು ಪದಾರ್ಥವನ್ನು ಗ್ರಹಿಸಲಿಕ್ಕೆ ಹೋಗಬೇಕಾದರೆ ತನಗೆ ಪ್ರೇರಕನಾದ ಒಂದು ವಸ್ತುವಿನ ಪ್ರೇರಣೆಯಿಂದಲೇ ಹೋಗುವದು. ಜೀವನು ಶರೀರದಲ್ಲಿ ಆಯಾಯ ಸ್ಥಾನಕ್ಕೆ ಚಿತ್ತದೊಡನೆ ಹೋಗಿ ಪದಾರ್ಥಗಳನ್ನು ಗ್ರಹಿಸಬೇಕಾದರೆ ಇವನಿಗೆ ಪ್ರೇರಕವಾದ ಮತ್ತೊಂದು ಸರ್ವಾಂತರ್ಯಾಮಿಯಾದ ವಸ್ತುವನ್ನು ಒಪ್ಪಲೇ ಬೇಕು. ಇದಕ್ಕೇನೆ ಶಿವಯೋಗಿಗಳು ಶಿವನೆಂದು ಹೇಳುವರು ಜೀವನಾದರೂ ಬೇರೆಯಲ್ಲ. ಶಿವನ ಅಂಶವೇ ಆಗಿರುವನು. ಎರಡು ದೊಡ್ಡ ದೊಡ್ಡ ಬೆಂಕಿಯ ಕೆಂಡಗಳನ್ನು ಒಂದಕ್ಕೊಂದು ಘರ್ಷಿಸಿದರೆ ಅಗ್ನಿಯ ಕಣಗಳು ಅನಂತವಾಗಿ ಕಾಣುವಂತೆ

ಶಿವನೇ ತನ್ನ ಶಕ್ತಿಯ ಚಲನೆಯಿಂದ ಅನೇಕ ರೂಪನಾಗಿ ಕಾಣುವನು. ಶಿವನ ಲ್ಲಿರುವ ವ್ಯಾಪಕವಾದ ಜಗತ್ತನ್ನೇ ತನ್ನಲ್ಲಿರಿಸಿಕೊಂಡ ಇಚ್ಛಾಶಕ್ತಿಯೇ ಆಣವ ಮಲವಾಗಲು ಅದನ್ನು ಹೊಂದಿದ ಚೈತನ್ಯವು ಅಣುರೂಪವಾಯಿತು. ಅದರಿಂದಲೇ ನಾನು ಪೂರ್ಣನಲ್ಲನೆಂದು ಹೇಳಿಕೊಳ್ಳುವನು. ಶಿವನ ಜ್ಞಾನಶಕ್ತಿಯೇ ಪರಿಣಾಮವನ್ನು ಹೊಂದುತ್ತ ಮಾಯೀಯ ಮಲವಾಗಲು ಅದರಿಂದಾವರಿಸಲ್ಪಟ್ಟ ಸಚ್ಚಿದಾನಂದ ರೂಪ ಪರಶಿವನು ಅಜ್ಞನು ಅಂದರೆ ಕಿಂಚಿಜ್ಞನಾದನು. ಸರ್ವಕರ್ತೃತ್ವರೂಪವಾದ ಕ್ರಿಯಾಶಕ್ತಿಯೇ ಕ್ರಮದಿಂದ ಸಂಕೋಚವನ್ನು ಹೊಂದುತ್ತ ಕಿಂಚಿತ್ ಕರ್ತೃತ್ವರೂಪ ವಾದ ಕಾರ್ಮಿಕಮಲ ಸ್ವರೂಪವಾಯಿತು. ಇದರಿಂದಾವರಿಸಲ್ಪಟ್ಟ ಚೈತನ್ಯವು ಪುಣ್ಯಪಾಪಗಳಿಂದ ಸುಖದುಃಖಗಳುಳ್ಳದಾಯಿತು. ಹೀಗೆ ಶಿವಚೈತನ್ಯವು ಅಣುರೂಪವಾಗಿದ್ದರೂ ತನ್ನಲ್ಲಿ ಸಮಸ್ತಜಗತ್ತನ್ನು ಸೂಕ್ಷ್ಮರೂಪವಾಗಿಟ್ಟುಕೊಂಡಿರುವುದು ಸೂಕ್ಷ್ಮವಾದ ಆಲದ ಬೀಜವು ವಿಶಾಲವಾದ ಆಲದಗಿಡವನ್ನೇ ತನ್ನಲ್ಲಿರಿಸಿಕೊಂಡಿರುವುದಿಲ್ಲವೆ ? ಜೀವನಲ್ಲಿ ಎಲ್ಲಾ ಶಕ್ತಿಗಳೂ ಆ ಶಕ್ತಿಗಳಿಂದಾದ ಜಗತ್ತೂ ಸೂಕ್ಷ್ಮರೂಪದಿಂದಿರಲಿಕ್ಕೆ ಅಡ್ಡಿಯೇನು ? ಪರಶಿವನೇ ಜೀವನಾಗಿರುವನೆಂದ ಮೇಲೆ ಆ ಶಿವನ ಗುರುತುಗಳೂ ಜೀವನಲ್ಲಿರಬೇಕಲ್ಲವೇ ಅಂದರೆ ಸೃಷ್ಟ್ಯಾದಿ ಐದು ಕಾರ್ಯಗಳನ್ನೂ ಮಾಡುವವನೇ ಪರಶಿವನೆಂದು ಹೇಳಿರುವೆವು ಅಷ್ಟೆ? ಪರಶಿವನು ವಿಶ್ವಸಾಮಾನ್ಯವನ್ನು ಹುಟ್ಟಿಸುತ್ತಿದ್ದರೆ ಈ ಜೀವರು ಅಂಶಮಾತ್ರದಿಂದಲಾದರೂ ಹುಟ್ಟಿಸುವರು. ಇದರಿಂದ ಜೀವರಲ್ಲಿ ಚತುರ್ಮುಖಬ್ರಹ್ಮನ ಶಕ್ತಿಯು ಸಂಕೋಚಸ್ಥಿತಿಯಲ್ಲಿರುವುದೆಂದು ಕಂಡುಬರುವುದು. ಇದರಂತೆ ವಿಷ್ಣು, ರುದ್ರ, ಈಶ್ವರ, ಸದಾಶಿವರುಗಳ ಪಾಲನ, ಸಂಹಾರ, ನಿಯಮನ, ಅನುಗ್ರಹ, ಶಕ್ತಿಗಳೂ ಕೂಡ ಅಂಶಮಾತ್ರದಿಂದ ಜೀವರಲ್ಲಿ ಕಂಡೇಕಾಣುವವು ಜೀವನನ್ನು ಶಿವನನ್ನಾಗಿ ಹೇಳುವುದಕ್ಕೆ ಇವುಗಳೇ ಗುರುತುಗಳು. ಈ ತನ್ನ ನಿಜವಾದ ಹುಟ್ಟಿಸುವ, ಪಾಲಿಸುವ, ಕೊಲ್ಲುವ, ನಿಯಮನ ಮಾಡುವ, ಅನುಗ್ರಹಿಸುವ ಶಕ್ತಿಗಳನ್ನು ಪಡೆದುಕೊಳ್ಳುವುದೇ ಮುಕ್ತಿಯು ಇವುಗಳೆಲ್ಲವೂ ಪೂರ್ವದಲ್ಲಿ ತನ್ನಲ್ಲಿ ಇರಲಿಲ್ಲವೆಂದು ಹೇಳಲಾಗುವುದಿಲ್ಲವು. ಮೊದಲಿದ್ದವುಗಳೇ ಇದ್ದರೂ ಕ್ಷೀಣದೆಸೆಯಲ್ಲಿರುವವು. ಇವುಗಳನ್ನು ವಿಕಾಸಗೊಳಿಸಿದರೆ ಪುರುಷಕರ್ತವ್ಯವು ತೀರಿದಂತಾಯಿತು. ಇಂತಹ ಮುಕ್ತಿಯನ್ನು ಪಡೆಯಲಿಕ್ಕೆ ಏನು ಮಾಡಬೇಕು. ? ಅದರ ಉಪಾಯವನ್ನು ಹುಡುಕವದು ಹೇಗೆ ಹುಡುಕುತ್ತ ಹೋದರೆ ತನ್ನ ಆಯುಷ್ಯವು ಸಾಲದು. ತನ್ನ

ಅನುಭವಕ್ಕೂ, ತನ್ನ ಪ್ರಾಚೀನಾಚಾರ್ಯರಿಂದ ಅನುಭವ ಪೂರ್ವಕವಾಗಿ ಬರೆಯಲ್ಪಟ್ಟ ಗ್ರಂಥಗಳ ತಾತ್ಪರ್ಯಕ್ಕೂ ಸರಿಬಿದ್ದಮೇಲೆ ಯಾವ ಉಪಾಯದಿಂದ ಮುಕ್ತಿಯಾದೀತೆಂಬುವದು ಗೊತ್ತಾಗುವುದು. ಆಮೇಲೆ ಆ ಉಪಾಯದ ಆಚರಣೆಯನ್ನು ಕೈಗೊಂಡು ಪ್ರಯತ್ನಪಡುತ್ತ ಹೋದರೆ ಕೆಲವು ಸಂಗತಿಗಳಾದರೂ ಶಾಸ್ತ್ರದಲ್ಲಿ ಹೇಳಿದಂತೆ ಕಂಡುಬರುವವು. ಅನಂತರ ವಿಶೇಷ ಪ್ರಯತ್ನ ಮಾಡುವುದರಲ್ಲಿ ಉತ್ಸಾಹ ಬರುತ್ತದೆ.

ಮುಕ್ತಿಯೆಂಬ ಸದಾಶಿವನ ಕೃತ್ಯವು ತನಗೆ ಪ್ರಾಪ್ತವಾದರೆ ಹಿಂದಣ ಸೃಷ್ಟ್ಯಾದಿ ಕೃತ್ಯಗಳು ಬಾರದೇ ಬರುವವು. ಆದರೆ ಆ ಸದಾಶಿವಾವಸ್ಥೆಯಲ್ಲಿ ವ್ಯಕ್ತಗಳಾಗಿರುವುದಿಲ್ಲ. ಆದರೂ ಪ್ರಸಂಗಬಂದರೆ ಮಾಡಲು ಸಮರ್ಥನಾಗುವನು. ಈ ಐದುಕೃತ್ಯಗಳನ್ನು ಮಾಡಿ ತೋರಿಸಿ ಕಳಿಸಿದಂಥಾದ್ದೊಂದು ವಸ್ತುವು ಬೇರೆಯೇ ಇರುವುದು. ಇದಕ್ಕೆ ಶಿವಯೋಗಿಗಳು ಪರಶಿವನೆಂದೂ ಮಹಾಲಿಂಗವೆಂದೂ ಹೇಳುವರು. ಈ ಮಹಾಲಿಂಗದಲ್ಲಿ ಸಮರಸವಾಗುವುದೇ ಪರಮುಕ್ತಿಯು. ಇದನ್ನು ಹೊಂದಿದಮೇಲೆ ಇವನಿಗೆ ಯಾವುದರ ಭಯವೂ ಇಲ್ಲ. ಭಯವೆಂಬುವುದು ತಾನು ಬೇರೆಯಾಗಿದ್ದರಲ್ಲವೆ? ಸೈಂಧವವು (ಉಪ್ಪು) ಸಿಂಧುವನ್ನು ಬಿಟ್ಟು ಬೇರೆಯಿದ್ದರೆ ಅದನ್ನು ತುಳಿದಾಡಿ ಕೆಡಿಸಬಹುದು. ಸಿಂಧುವಿನಲ್ಲಿ ಅಡಕವಾಗಿ ಸಮರಸವಾಗಿದ್ದರೆ ಅದನ್ನು ಕೆಡಿಸುವ ಬಗೆ ಹೇಗೆ? ನೀರು ಗಟ್ಟಿಯಾಗಿ ಆಲಿಕಲ್ಲಾಗಿದ್ದರೆ ಅದನ್ನು ಚನ್ನಾಗಿ ಬಂಧಿಸಬಹುದು. ಅದು ಪುನಃ ನೀರೇಆಗಿ ಸಮುದ್ರಕ್ಕೆ ಕೂಡಿದರೆ ಅದಕ್ಕೆ ಬಂಧವೆಲ್ಲಿ? ಘಟವು ಹೊರಗಿದ್ದಾಗ ಅದನ್ನು ಬಂಧಿಸಬಹುದು. ಅದೇ ಘಟವು ಸೂಕ್ಷ್ಮರೂಪದಿಂದ ಇಚ್ಛಾಜ್ಞಾನಗಳಲ್ಲಿ ಸೇರಿದರೆ ಅದನ್ನು ಯಾವನು ಬಂಧಿಸುವನು? ಜೀವನು ಕ್ರಮದಿಂದ ಪರಶಿವನ ಇಚ್ಛಾಜ್ಞಾನಾದಿ ಶಕ್ತಿಗಳಲ್ಲಿ ಶೇರಿ ಪರಶಿವಲಿಂಗದಲ್ಲಿ ಬೆರತು ಹೋದ ಮೇಲೆ ಅವನಿಗೆ ಯಾವುದರಿಂದ ಭಯವುಂಟು? ಯಾವುದರಿಂದಲೂ ಭಯವಿಲ್ಲವು. ಹೀಗೆ ಪರಶಿವರೂಪ ಮಹಾಲಿಂಗದಲ್ಲಿ ಸಮರಸವಾಗುವುದೇ ಉತ್ತಮಸ್ಥಿತಿಯು. ಇದನ್ನು ಒದಗಿಸಿಕೊಡುವುದೇ ಶಿವಯೋಗವೆಂಬ ಉಪಾಯವು, ಅದೇಕೆ. ಜ್ಞಾನಾದಿ ಉಪಾಯಗಳಿಂದ ಉತ್ತಮಸ್ಥಿತಿಗೆ ಬರುವುದಿಲ್ಲವೇನು? ಕೆಲವರು ಜ್ಞಾನವೊಂದರಿಂದಲೆ ಉತ್ತಮಸ್ಥಿತಿಯು (ಅಂದರೆ ಮೋಕ್ಷವು) ಕೆಲವರು ಕರ್ಮವೊಂದರಿಂದಲೇ ಉತ್ತಮ ಸ್ಥಿತಿಯು ಎಂದು ಹೇಳುತ್ತಾರೆ. ನೀವು ಮಾತ್ರ ಶಿವಯೋಗದಿಂದ ಉತ್ತಮಸ್ಥಿತಿಯನ್ನು ಹೇಳುವಿರಿ. ಇದು ಹೇಗೆ? ಅಂದರೆ ಈ ಪ್ರಶ್ನೆಗೆ ಸಮಾಧಾನ ಹೇಳುವುದಕ್ಕಾಗಿ

ಮೊದಲು ಸಮಿಾಕ್ಷಾ ಪ್ರಕರಣವನ್ನೇ (ವಾದಕಾಂಡವನ್ನು) ಬರೆಯುತ್ತೇವೆ. ಆ ಮೇಲೆ ನಮ್ಮ ಅನುಭವಕ್ಕೆ ಬಂದ ಪ್ರಕಾರ ಗ್ರಂಥಗಳ ದೃಷ್ಟಿಯಿಂದ ಶಿವಯೋಗ ಸ್ವರೂಪ, ನಿರೂಪಣ ಪ್ರಕರಣ ಅಥವಾ ಮೋಕ್ಷಕಾಂಡವೆಂಬ ಹೆಸರಿನಿಂದ ಕೇವಲ ಮುಮುಕ್ಷುಗಳ ಸಲುವಾಗಿ ಮೋಕ್ಷಕ್ಕೆ ಉಪಯುಕ್ತಗಳಾದ ಸಂಗತಿಗಳನ್ನು ಬರೆದು ಪ್ರಕಟಿಸುವೆವು. ಶಿವಯೋಗಶಾಸ್ತ್ರ ರತ್ನಾಕರದಲ್ಲಿ ರತ್ನಗಳ ಆಶೆಯಿಂದ ಬಹು ದಿವಸ ಶ್ರಮಪಟ್ಟು ಕೆಲವು ರತ್ನಗಳನ್ನಾದರೂ ಆರಿಸಿಕೊಂಡಿರುವೆನೆಂದು ನಾನು ತಿಳಿದುಕೊಂಡಿರುವೆನು. ರತ್ನಪರೀಕ್ಷಕರೆದುರಿಗಿಟ್ಟರೆ ನಾನು ಆರಿಸಿಕೊಂಡಿರುವವು. ರತ್ನಗಳೋ ಅಥವಾ ಗಾಜುಗಳೋ ಎಂಬುದು ಗೊತ್ತಾಗಬಹುದಲ್ಲವೆ? ನಾನೇನೋ ರತ್ನಗಳೆಂದೇ ಗ್ರಹಿಸಿರುವೆನು. ಯಾವನು, ತಾನು ತಿಳಿದುಕೊಂಡದ್ದಕ್ಕೆ ಉತ್ತಮವೆಂದನ್ನುವುದಿಲ್ಲ! ಎಲ್ಲರ ಸ್ವಭಾವವೆಂಬ ಪ್ರವಾಹದ ಝುರಿಯೇ ಹೀಗಿರುವುದು. ಕೆಲವರು ತಮಗೆ ತಿಳಿದದ್ದು ತಮಗೆ ತಪ್ಪೆಂದು ಕಂಡುಬಂದರೂ ಅಭಿಮಾನದಿಂದ ತಪ್ಪಿಗೊಪ್ಪಿಕೊಳ್ಳುವುದೇ ಇಲ್ಲವು. ಇದು ದೊಡ್ಡ ಹಾನಿಗೆ ಕಾರಣವಾಗುವುದು.

ಏನೇಆಗಲಿ ನಾವು ಸಂಗ್ರಹಿಸಿರುವ ಸಿದ್ಧಾಂತ ರತ್ನಗಳನ್ನು ಚಿತ್ತವೆಂಬ ಸರಕಿನ ಕೋಣೆಯಿಂದ ಒಂದೊಂದನ್ನೇ ಹೊರಕ್ಕೆ ತಂದು ಪ್ರದರ್ಶನಕ್ಕಿಟ್ಟರೆ ಅನೇಕ ರತ್ನ ಪರೀಕ್ಷಕರು ತಮ್ಮ ಕೈಯ್ಯಲ್ಲಿ ತೆಗೆದುಕೊಂಡು ಏನನ್ನುತ್ತಾರೋ ನೋಡೋಣ! ಪಂಡಿತರು ಸಂತುಷ್ಟರಾಗುವವರೆಗೂ ನಾನಾದರೂ ನಮ್ಮ ಪರಿಶ್ರಮವು ಸಾರ್ಥಕವಾದುದೆಂದು ಹೇಗೆ ತಿಳಿಯಬೇಕು? ನಮ್ಮ ಪಕ್ಷಕ್ಕೆ ನಾವೇ ಉತ್ತಮವೆಂದಂದರೆ ಆಗುವದೇನು? ಹೀಗೆ ಯಾರೂ ಅನ್ನಬಾರದು. ಅದು ನೀತಿಯಲ್ಲ. ಈ ನೀತಿಯನ್ನು ಬೋಧಿಸುವುದಕ್ಕಾಗಿಯೇ ಶ್ರೀ ಕಾಳಿದಾಸನು ಭಗವತೀ ಕಾಳೀದೇವಿಯಿಂದ ಅನುಗ್ರಹಿಸಲ್ಪಟ್ಟವನಾದಾಗ್ಯೂ ಆ ದೇವಿಯ ಅನುಗ್ರಹ ಬಲದಿಂದಲೇ ಕಾವ್ಯ ನಾಟಕಾದಿ ಗ್ರಂಥಗಳನ್ನು ಬರೆದಿದ್ದರೂ "ಆಪರಿತೋಷಾದ್ವಿದುಷಾಂ ನ ಸಾಧುಮನ್ಯೇ" ಎಂದು ತಾನು ಮಾಡಿದ ನಾಟಕ ಗ್ರಂಥದಿಂದ ಪಂಡಿತರು ಸಂತೋಷವಾಗುವವರೆಗೂ ಈ ನಾಟಕ ಪ್ರಯೋಗವು ಉತ್ತಮವೆಂದು ನಾನು ತಿಳಿಯುವುದಿಲ್ಲ ಎಂದು ಹೇಳಿರುವನು. ಆದಕಾರಣ ಸಿದ್ಧಾಂತ ರತ್ನಗಳ ಪರೀಕ್ಷೆಯಲ್ಲಿ ವಿಚಕ್ಷಣರಾದ ಪಂಡಿತರು ನಾವು ಹೊರಗೆ ಡಹುವ ರತ್ನಗಳನ್ನು ಆದರಪೂರ್ವಕವಾಗಿ ತಮ್ಮ ಕೈಯ್ಯಲ್ಲಿ ತೆಗೆದುಕೊಂಡು ಚನ್ನಾಗಿ ವಿಟ್ಟಿಸಿ ನೋಡಿ ಇವು ಉತ್ತಮರತ್ನಗಳೆಂದೊಪ್ಪಿಕೊಂಡು ಅವನ್ನಂ

ಗೀಕರಿಸಿ ಅಲಂಕಾರಕಕ್ಕಾಗಿ ಶಿರಸಾವಹಿಸಿದರೆ ನಮ್ಮ ಪರಿಶ್ರಮವು ಸಾರ್ಥಕವಾಗುವುದಲ್ಲವೆ ? ಆದ್ದರಿಂದ ಈ ನಮ್ಮ ಗ್ರಂಥದಲ್ಲಿ ವೀರಶೈವಸಿದ್ಧಾಂತವು ಯುಕ್ತಿಯುಕ್ತವಾಗಿ ನಿರೂಪಿಸಲ್ಪಟ್ಟಿರುವಕಾರಣ ಈ ಗ್ರಂಥವನ್ನು ಸಿದ್ಧಾಂತ ಸುಧಾಕರವೆಂಬ ನಾಮದಿಂದ ಪ್ರಕಟಿಸಿರುತ್ತೇವೆ. ಸುಧಾಕರನೆಂದರೆ ಚಂದ್ರನು. ಇವನು ತನ್ನ ಅಮೃತಮಯಕಿರಣಗಳಿಂದ ಹಗಲು ಅನೇಕ ವ್ಯವಹಾರಗಳಿಂದುಂಟಾದ ಪರಿಶ್ರಮವನ್ನು ಹೋಗಲಾಡಿಸಿ ಸುಖವನ್ನು ಹೇಗೆಕೊಡುವನೋ ಹಾಗೆ ಸಿದ್ಧಾಂತ ಸುಧಾಕರವೆಂಬ ಈ ಗ್ರಂಥವೂಕೂಡ ಸಾಂಸಾರಿಕ ತಾಪತ್ರಯವೆಂಬ ಅಗ್ನಿಯಿಂದ ಬೆಂದು ಬೆಂಡಾದ ಜನಗಳ ದಾಹವನ್ನು ತನ್ನಲ್ಲಿರುವ ಸಿದ್ಧಾಂತ ಜ್ಞಾನದ್ವಾರಾ ಹೋಗಲಾಡಿಸಿ ನಿತ್ಯಸುಖವನ್ನು ಕೊಡದಿರಲಾರದು. ಎಂದುನಂಬಿದ್ದೇವೆ. "ವೀರಶೈವ ಸಿದ್ಧಾಂತ ಸುಧಾಕರದಲ್ಲಿ ವಾದಕಾಂಡವೆಂತಲೂ, ಮೋಕ್ಷಕಾಂಡ ವೆಂತಲೂ ಎರಡು ವಿಭಾಗಗಳನ್ನು ಮಾಡಿದ್ದೇವೆ. ಅವುಗಳಲ್ಲಿಮೊದಲು ಎರಡನ್ನು ಸೇರಿಸಿ ಅಚ್ಚುಹಾಕಿಸಿದರೆ ಗ್ರಂಥವು ಬಹು ದೊಡ್ಡದಾಗುವುದೆಂತಲೂ, ವಾದಕಾಂಡವನ್ನೇ ಮೊದಲು ಅಚ್ಚುಹಾಕಿಸಿದರೆ ನಮ್ಮ ಮತೀಯರಾದ ಕೆಲವರಿಗೆ ಪರಮತದ ಸಿದ್ಧಾಂತದಲ್ಲಿರುವ ಶ್ರದ್ಧೆಯು ಕಡಮೆಯಾಗಬಹುದೆಂತಲೂ, ಪರಮತೀಯರ ಸಿದ್ಧಾಂತಕ್ಕೆ ಮೋಹಿಸಿ ನಮ್ಮ ಮತೀಯರಲ್ಲಿ ಕೆಲವರು ಕೇವಲ ಮೋಕ್ಷಸ್ವರೂಪವಾದ ಇಷ್ಟಲಿಂಗವನ್ನೇ ಬಿಟ್ಟು ವಾಗದ್ವೈತಿಗಳಾಗುವದು ತಪ್ಪಬಹುದೆಂತಲೂ, ನಮ್ಮಲ್ಲಿ ವೀರಶೈವಸಿದ್ಧಾಂತಗಳಮೇಲೆ ಕೀರ್ತನ ಪುರಾಣಗಳನ್ನು ಹೇಳತಕ್ಕವರಿಗೆ ಬಹಳ ಅನುಕೂಲವಾಗುವದೆಂತಲೂ, ಆಂಗ್ಲ ವಿದ್ಯಾವಿಶಾರದರಾದ ನಮ್ಮ ವೀರಶೈವ ಬಂಧುಗಳು ತಮ್ಮ ವೀರಶೈವಮತದ ಸಿದ್ಧಾಂತವಾವುದೆನ್ನುವದನ್ನು ತಿಳಿದುಕೊಳ್ಳಬೇಕೆಂತಲೂ ಆಲೋಚಿಸಿ, ವಾದಕಾಂಡ ಒಂದನ್ನೇ ಅಚ್ಚು ಹಾಕಿಸಿರುವೆವು. ಇನ್ನು ಸ್ವಲ್ಪಕಾಲದಲ್ಲಿಯೇ ಕೆಲವು ಸಾಧನ ಸಾಮಗ್ರಿಗಳನ್ನು ಪಡೆದುಕೊಂಡು ಮೋಕ್ಷಕಾಂಡವನ್ನೂ ಕೂಡ ಅಚ್ಚುಹಾಕಿಸುವೆವು.

ಈ ವಾದಕಾಂಡದ ಮುದ್ರಣಕ್ಕಾಗಿ ಹರಿಹರದ ಹೊಸಮಠದ ಕೈಲಾಸವಾಸಿಗಳಾದ ತೀ|| ಚರಂತೆಪ್ಪನವರು, ಇವರ ಚಿ|| ಚನ್ನಬಸಯ್ಯನವರು, ಈ ಉಭಯರ ಆತ್ಮಶಾಂತಿಗೋಸ್ಕರ ಅವರ ಚಿ|| ಚನ್ನಯ್ಯನವರು, ಚಂದ್ರಶೇಖರಯ್ಯನವರು, ಶಂಭುಲಿಂಗಯ್ಯನವರು ನಮಗೆ ಉದಾರಾಶ್ರಯವನ್ನು ಕೊಟ್ಟದ್ದಕ್ಕಾಗಿಯೂ, ಹಾಗೂ ಬಳ್ಳಾರಿಜಿಲ್ಲಾ ಹೊಸಪೇಟೆ ತಾಲ್ಲೂಕು ಚಿತ್ತವಾಡಿಗಿ

ಗ್ರಾಮದ ರಾ|| ರಾ|| ಶ್ರೀ ಜಂಬಣ್ಣನವರ ಧರ್ಮಪತ್ನೀ ರಾಚಮ್ಮನವರ ಗರ್ಭ ಶುಕ್ತಿಯಿಂದ ಮುಕ್ತಾಯಮಾನರಾಗಿ ಜನಿಸಿದ ಶಿವಧರ್ಮೋನ್ನತಿಯಸಲುವಾಗಿ ತ್ರಿಕರಣಪೂರ್ವಕವಾಗಿ ಪ್ರಯತ್ನಪಡುತ್ತಿರುವ ಸದ್ಭಕ್ತರಾದ ಶ್ರೀಮಂತ ಗುಗ್ರಿ ದೊಡ್ಡ ಹುಚ್ಚಪ್ಪ ಚಿತವಾಡಿಗಿ ಇವರೂ ಅತ್ಯುದಾರಾಶ್ರಯವನ್ನು ಕೊಟ್ಟದ್ದಕ್ಕಾಗಿಯೂ ಈ ಶಿವಧರ್ಮಾಭಿಮಾನಿಗಳಿಗೆ ಶ್ರೀ ಸಾಂಬನು ಆಯು ರಾರೋಗ್ಯ ಶ್ರೇಯೋಭಿವೃದ್ಧಿಯನ್ನುಂಟುಮಾಡಲೆಂದು ನಾನು ಸಾಂಬಮೂರ್ತಿಯನ್ನು ಅನನ್ಯಭಾವದಿಂದ ಪ್ರಾರ್ಥಿಸುತ್ತೇನೆ.

**ಗ್ರಂಥಕಾರ ಶಂಕರಶಾಸ್ತ್ರಿ, ಉಮಚಿಗಿ.**

**ಶಿವಾರ್ಪಣಂ ಭೂಯಾತ್.**





ಯೇಸೋಪನಿಷದಾಂವ್ಯಾಖ್ಯಾಕೃತಾಶ್ರೀಶಾಂಕರೀಪರಾ |
ಸೋಽಯಂಶ್ರೀಶಂಕರೋಧೀಮಾರ್ಗ ಧೀಮತ್ ಪ್ರೀತಿಯುತಃಕವಿಃ ||

ಧರ್ಮರತ್ನ ಪಂ|| ಶಂಕರಶಾಸ್ತ್ರಿ, ಉಮಚಿಗಿ.

ಶ್ರೀಮಜ್ಜಗದ್ಗುರು ಪಂಚಾಚಾರ್ಯೇಭ್ಯೋನಮಃ.

## ವೀರಶೈವ ಶಿವಾದ್ವೈತ

# ಸಿದ್ಧಾಂತ ಸುಧಾಕರ.

## ವಾದಕಾಂಡ.

ಶ್ಲೋ ॥ ಸರ್ವಶಕ್ತಿ ಸಮೋಪೇತಂ ಸರ್ವಜ್ಞಂ ಸರ್ವಗಂ ಪ್ರಭುಂ ।
ಸರ್ವಾಧೀಶಂ ಶಿವಂವಂದೇ ಸರ್ವಪ್ರತ್ಯೂಹ ಶಾಂತಯೆ ॥೧॥
ಸ್ಮೃತ್ವಾ ಶ್ರೀಗುರುಪಾದಾಬ್ಜಂ ಶಂಕರೋಹಂ ಸುಧಾಕರಂ ।
ಕುರ್ವೇ ಕರ್ಣಾಟಭಾಷಾಯಾಂ ಸರ್ವೇ ಪಶ್ಯಂತು ಸಾದರಂ ॥೨॥

ಬ್ರಹ್ಮಾದ್ವೈತಿಗಳು ಅಂದರೆ ಅಧ್ಯಾಸವನ್ನು ಸ್ವೀಕರಿಸುವ ಮಾಯಾವಾದಿಗಳು ಮುಕ್ತಿಗೆ ಕೇವಲ ಜ್ಞಾನವೇ ಉಪಾಯವು ಅದೊಂದರಿಂದಲೇ ಮುಕ್ತಿಯಾಗುವುದೆಂದು ಹೇಳುವರು. ಇವರ ಮತವನ್ನೇ ಮೊದಲು ವಿಚಾರಮಾಡತಕ್ಕದ್ದು ಉಚಿತವಾಗಿದೆ. ಏಕೆಂದರೆ ಇತರ ಮತಗಳು ಈ ಶುದ್ಧಾದ್ವೈತಗಳಿಂದಲೇ ನಿರಸನ ಮಾಡಲ್ಪಟ್ಟವುಗಳಂತೆ ತೋರುವದರಿಂದಲೂ, ಇತರ ಮತಗಳನ್ನು ವಿಚಾರಿಸುವುದು ನಮ್ಮ ಗಣಾಚಾರಕ್ಕೆ ವಿರುದ್ಧವಾಗುವುದರಿಂದಲೂ, ಅವುಗಳ ವಿಚಾರದ ಗೋಜಿಗೆ ಹೋಗದೆ ಬ್ರಹ್ಮಾದ್ವೈತಮತವನ್ನೇ ವಿಚಾರಮಾಡುವುದರಿಂದ ನಮ್ಮವರು ಆ ಮತಕ್ಕೆ ಮೋಹಿಸಿ ಪರಮಪವಿತ್ರವಾದ ವೀರಶೈವಮತದಿಂದ ಚ್ಯುತವಾಗುವ ಪದ್ಧತಿಯು ಕಮ್ಮಿಯಾಗಬಹುದೆಂಬುದ್ದೇಶದಿಂದ ಈ ಮಾಯಾವಾದಿಗಳ ಮತವನ್ನೇ ವಿಚಾರಮಾಡುವೆವು. ಜ್ಞಾನವೊಂದರಿಂದಲೇ ಮುಕ್ತಿಯೊ? ಆ ಮುಕ್ತಿಗೆ ಮತ್ಯಾವುದಾದರೊಂದು ಉಪಾಯವುಬೇಕೊ ಎಂಬುವ ವಿಚಾರವಂ ಮಾಡುವುದಕ್ಕಿಂತ ಮೊದಲು ಆ ಮಾಯಾವಾದಿಗಳ ಮತಕ್ಕೂ ಮತ್ತು ವೀರಶೈವಾಚಾರ್ಯರ ಮತಕ್ಕೂ ಇರುವ ಅಂತರವೇನೆಂಬುವದನ್ನು ತಿಳಿಸುವದು ಯುಕ್ತವಾಗಿದೆ. ಇದರಿಂದ ಮುಂದೆ ನಾವು ಮಾಡುವ ವಿಚಾರವು ಸ್ಪಷ್ಟವಾಗಬಹುದಲ್ಲವೆ?

೧. ಆ ಬ್ರಹ್ಮಾದ್ವೈತಿಗಳು ಜ್ಞಾನವೊಂದರಿಂದಲೇ ಮುಕ್ತಿಯೆನ್ನುವರು. ಶಿವಾದ್ವೈತಿಗಳು ಜ್ಞಾನ ಕರ್ಮಗಳೆರಡರಿಂದಲೇ ಮುಕ್ತಿಯೆನ್ನುವರು.

೨. ಅವರು ಜಗತ್ತು ಮಿಥ್ಯವೆನ್ನುವರು. ಶಿವಾದ್ವೈತಿಗಳು ಸತ್ಯವೆನ್ನುವರು

೩. ಅವರು ವೇದಾಂತಾದಿ ಶಾಸ್ತ್ರಗಳು ಅಜ್ಞಾನಿಗಳಿಗಲ್ಲದೆ ಜ್ಞಾನಿಗಳಿಗಲ್ಲವೆನ್ನುವರು. ವೀರಶೈವರು ಜ್ಞಾನಿಗಳಿಗೂ ಶಾಸ್ತ್ರಗಳು ಬೇಕೆನ್ನುವರು.

೪. ಅವರು ಅಭೇದವೊಂದೇ ಪಾರಮಾರ್ಥಿಕವೆಂದರೆ ಇವರು ಭೇದವೂ ಕೂಡ ಪಾರಮಾರ್ಥಿಕವೆನ್ನುವರು.

೫. ಅವರು "ಆದಿತ್ಯಮಂಬಿಕಾಂವಿಷ್ಣುಂ ಗಣನಾಥಂ ಮಹೇಶ್ವರಂ" ಎಂಬ ಸ್ಮೃತಿಯನ್ನನುಸರಿಸಿ ಸೂರ್ಯ, ಅಂಬಿಕೆ, ವಿಷ್ಣು, ಗಣಪತಿ, ಮಹೇಶ್ವರರುಗಳಾದ ಪಂಚದೇವತೆಗಳನ್ನು ಪೂಜಿಸುವರು. ವೀರಶೈವರು ಇವರೊಳ್ ಐದನೇಯವನಾದ ಮಹೇಶ್ವರನೊಬ್ಬನನ್ನೇ ಪೂಜಿಸುವರು.

೬. ಬ್ರಹ್ಮಾದ್ವೈತಿಗಳು ಯೋಗದಿಂದ ಮುಕ್ತಿಯಿಲ್ಲವೆನ್ನುವರು. ಶಿವಾದ್ವೈತಿಗಳಾದ ಲಿಂಗಾಂಗಿಗಳು ಶಿವಯೋಗದಿಂದಲೇ ಮುಕ್ತಿಯೆನ್ನುವರು.

೭. ಆ ನಿರ್ವಿಶೇಷಬ್ರಹ್ಮವಾದಿಗಳು ಮುಮುಕ್ಷುಗಳಿಗೆ ಜಿಜ್ಞಾಸ್ಯವಾದ ವಸ್ತುವು ನಿರ್ವಿಶೇಷ ಬ್ರಹ್ಮವೆಂದರೆ ಇವರು ಅದನ್ನು ಸವಿಶೇಷ ಬ್ರಹ್ಮವೆನ್ನುವರು.

೮. ಆ ಬ್ರಹ್ಮಾದ್ವೈತಿಗಳು ಅಂತಃಕರಣವೃತ್ತಿಗಳು ಅನಿತ್ಯಗಳೆನ್ನುವರು ಶಿವಾದ್ವೈತಿಗಳಾದ ವೀರಶೈವರು ನಿತ್ಯಗಳೆನ್ನುವರು.

೯. ಸಂಸಾರಕ್ಕೆ ಕಾರಣವಾದ ಅವಿದ್ಯೆಯು ಬ್ರಹ್ಮಕ್ಕೆ ಭಿನ್ನವಾದದ್ದು ಬ್ರಹ್ಮಜ್ಞಾನದಿಂದ ಅವಿದ್ಯೆಯು ಸ್ವರೂಪತಃ ನಷ್ಟವಾಗುತ್ತದೆ ಎಂದು ಅವರು ಹೇಳುವರು. ವೀರಶೈವರು ಅವಿದ್ಯೆಯು ಬ್ರಹ್ಮಕ್ಕೆ ಭಿನ್ನವಾದದ್ದಲ್ಲಾ (ಅದು ಶುದ್ಧವಾದ ಕಾಲಕ್ಕೆ ಬ್ರಹ್ಮಕ್ಕೆ ಭಿನ್ನವಲ್ಲಾ) ಮತ್ತು ಅದು ಸ್ವರೂಪತಃ ನಷ್ಟವಾಗುವದಿಲ್ಲವು. ಆದರೆ ತನಗೆ ಕಾರಣವಾದ ಶಕ್ತಿಯಲ್ಲಿ ಲೀನವಾಗುತ್ತದೆಂದು ಹೇಳುವರು.

೧೦. ಮಾಯಾವಾದಿಗಳು ಸಾಧನಚತುಷ್ಟಯಸಂಪನ್ನನೇ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯೆಂದು ಹೇಳುವರು. ಇವರು ಅಷ್ಟಾವರಣ ಪಂಚಾಚಾರ ಪರಾಯಣನಾಗಿ ಲಿಂಗಧಾರಣಸಾಧನವಾದ ಶಿವದೀಕ್ಷೆಯಂ ಪಡೆದಾತನೇ ಅಧಿಕಾರಿಯನ್ನುವರು.

೧೧. ಅವರು ಬ್ರಹ್ಮದ ವಿವರ್ತವೇ ಜಗತ್ತು ಎಂದು ಹೇಳುವರು. ಇವರು ಜಗತ್ತು ಬ್ರಹ್ಮದ ಪರಿಣಾಮವೆನ್ನುವರು.

೧೨. ಅವರು ಅಂತಃಕರಣದಲ್ಲಿ ಶುದ್ಧಬ್ರಹ್ಮದ ಪ್ರತಿಬಿಂಬವೇ ಜೀವನೆಂದರೆ ಇವರು ಚಿತಿಶಕ್ತಿಯ (ಚಿಚ್ಛಕ್ತಿಯ) ಸಂಕೋಚರೂಪವಾದ ಚಿತ್ತವಿಶಿಷ್ಟನೇ ಜೀವನೆಂದು ಹೇಳುವರು.

೧೩. ಅವರು ಚಿಚ್ಛಕ್ತಿಗೇನೇ ಬ್ರಹ್ಮವೆಂದರೆ ಇವರು ಚಿಚ್ಛಕ್ತಿವಿಶಿಷ್ಟನಿಗೆ ಬ್ರಹ್ಮವೆನ್ನುವರು.

೧೪. ಅವರು ಬ್ರಹ್ಮವು ಅಹಂಪದಾರ್ಥವಲ್ಲವೆನ್ನುವರು. ಇವರು ಅಹಂಪದಾರ್ಥವನ್ನೇ ಬ್ರಹ್ಮವನ್ನಾಗಿ ಹೇಳುವರು. (ಕೃತ್ರಿಮ ಅಹಂಕಾರಕ್ಕೆ ವಿಷಯವಲ್ಲ. ಆದರೆ ಪರಾಹಂಕಾರಕ್ಕೆ ವಿಷಯವಾಗುತ್ತದೆನ್ನುವರು.)

೧೫. ಅವರು ಅನರ್ಥಭೂತಗಳಾದ ಚಿತ್ತಾದಿಗಳು ನಾಶವಾಗಿ ಪರಮಾನಂದಪ್ರಾಪ್ತಿಯೇ ಮೋಕ್ಷವೆಂದರೆ—ಇವರು ಆ ಚಿತ್ತಾದಿಗಳು ನಾಶವಾಗದೆ ವಿಕಾಸವಾಗಿ ಶಿವತ್ವಪ್ರಾಪ್ತಿಯೇ ಮೋಕ್ಷವೆನ್ನುವರು. ಇವುಗಳೆಲ್ಲವೂ ಅವರಿಗೂ ವೀರಶೈವರಿಗೂ ಇರುವ ಸ್ಥೂಲಗಳಾದ ವಿಶೇಷಭೇದಗಳು. ಇನ್ನೂ ಸೂಕ್ಷ್ಮಭೇದಗಳನೇಕಿರುವವು. ಅವೆಲ್ಲವನ್ನೂ ಇಷ್ಟರಲ್ಲೇ ಅಂತರ್ಗತಮಾಡಿ ಮುಂದೆ ಹೇಳುತ್ತೇವೆ.

ಇನ್ನು ಜ್ಞಾನವೊಂದರಿಂದಲೇ ಮುಕ್ತಿಯೊ ಜ್ಞಾನಕರ್ಮವೆರಡರಿಂದಲೇ ಮುಕ್ತಿಯೊ ಎಂಬ ವಿಚಾರವನ್ನು ಮೊದಲು ಶ್ರುತಿ ದೃಷ್ಟಿಯಿಂದ ಮಾಡುತ್ತೇವೆ. „ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃಪಂಥಾವಿದ್ಯತೇಯನಾಯ" ಅಂದರೆ ಬ್ರಹ್ಮವನ್ನು ತಿಳಿದವನು ಮುಕ್ತಿಯನ್ನು ಹೊಂದುವನು. ಮುಕ್ತಿಗೆ ಮತ್ತೊಂದು ಮಾರ್ಗವಿಲ್ಲವು. ಬ್ರಹ್ಮಜ್ಞಾನವಂದೇ ಮಾರ್ಗವು. ಎಂಬ ಶ್ರುತಿಯಿಂದ ಜ್ಞಾನದಿಂದಲೇ ಮುಕ್ತಿಯೆಂದು ಕಂಡುಬರುತ್ತದೆ. „ತಂಧ್ಯಾತ್ವಾ ಮೃತ್ಯುಮತೀತ್ಯ ನಾನ್ಯಃ ಪಂಥಾವಿಮುಕ್ತಯೆ" ಅದನ್ನು ಧ್ಯಾನಿಸಿ ಮೃತ್ಯುವನ್ನು ದಾಟಿ ಮುಕ್ತನಾಗುವನು. ಮುಕ್ತಿಗೆ ಮತ್ತೊಂದು ಮಾರ್ಗವಿಲ್ಲವು. ಧ್ಯಾನವೊಂದೇ ಮಾರ್ಗವಾಗಿದೆ. ಇದರಿಂದ ಧ್ಯಾನದಿಂದಲೇ ಮುಕ್ತಿ ಎಂದು ಕಂಡುಬರುತ್ತದೆ. ಮತ್ತು „ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" ಅಂದರೆ ಮನನಶೀಲನು ಧ್ಯಾನಿಸಿ ಸಮಸ್ತ ಪ್ರಪಂಚಕ್ಕೆ ಕಾರಣನಾದ ಪರಶಿವನನ್ನು ಹೊಂದುತ್ತಾನೆ. ಇದರಿಂದಲೂ ಧ್ಯಾನವೇ ಮುಕ್ತಿಗೆ ಕಾರಣವೆಂದು ತಿಳಿಯುತ್ತದೆ. ಧ್ಯಾನವೆಂದರೆ ಮಾನಸಕರ್ಮವು ಅವಿಚ್ಛಿನ್ನವಾದ ತೈಲಧಾರೆಯಂತೆ ಧ್ಯೇಯವಸ್ತುವಿನಲ್ಲಿ ತದಾಕಾರ ವೃತ್ತಿಗಳನ್ನು ಮಾಡುತ್ತ ಹೋಗುವುದೇ ಧ್ಯಾನವು. ಇದಕ್ಕೇನೆ

ಶಿವಾದ್ವೈತಿಗಳಾದ ವೀರಶೈವರು ಅಂತರ್ಲಿಂಗಧಾರಣವೆನ್ನುವರು. ಇದು ಶಿವಯೋಗದ ಒಂದು ಅಂಗವೆಂತಲೂ ಹೇಳುವರು. ಧ್ಯಾನದಿಂದ ಮುಕ್ತಿ ಎಂಬುವ ಶ್ರುತಿಗೂ ಜ್ಞಾನದಿಂದ ಮುಕ್ತಿ ಎಂಬುವ ಶ್ರುತಿಗೂ ವೈದಿಕರು ಪ್ರಾಮಾಣ್ಯವನ್ನೇ ಸ್ವೀಕರಿಸಬೇಕಷ್ಟೆ; ಒಂದು ಪ್ರಮಾಣವು ಮತ್ತೊಂದು ಅಪ್ರಮಾಣವೆಂದರೆ ನಿಷ್ಪಕ್ಷಪಾತಿಗಳು ನಂಬಲಾರರು. ಆದುದರಿಂದ ಜ್ಞಾನಸಹಿತ ಧ್ಯಾನದಿಂದ ಅಥವಾ ಧ್ಯಾನಸಹಿತ ಜ್ಞಾನದಿಂದ ಮುಕ್ತಿ ಎಂದು ಹೇಳಬೇಕು. ಮೊದಲು ಶಿವಸ್ವರೂಪ ಜ್ಞಾನವಿಲ್ಲದಿದ್ದರೆ ಶಿವನ ಧ್ಯಾನವನ್ನು ಮಾಡಲಿಕ್ಕಾಗುವುದಿಲ್ಲ. ಆದ್ದರಿಂದ ಧ್ಯಾನವೆಂಬ ಮಾನಸ ಕರ್ಮವೂ, ಜ್ಞಾನವೂ, ಎರಡೂ ಮುಕ್ತಿಗೆ ಉಪಾಯಗಳೆಂದು ತಿಳಿದುಬರುತ್ತದೆ. ಧ್ಯಾನವಾದರೂ ಏಕದಾ ಸೂಕ್ಷ್ಮವಸ್ತುವಿನಲ್ಲಿಯೇ ಸಂಭವಿಸುವುದಿಲ್ಲವು. ಅದಕ್ಕೋಸ್ಕರ ಬಾಹ್ಯೇಷ್ಟಲಿಂಗದಲ್ಲಿ ಮನಸ್ಸನ್ನು ನಿಲ್ಲಿಸುವುದನ್ನು ಕಲಿಯಬೇಕು. ಧಾನುಷ್ಕನಾದರೂ (ಬಿಲ್ಲುಗಾರನು) ಆರಂಭಕ್ಕೇನೆ ಸೂಕ್ಷ್ಮಗುರಿಯನ್ನು ಹೊಡೆಯಲಾರನಷ್ಟೆ; ಯಜ್ಞದ ಕಟ್ಟಿಗೆಯೊಳಗೆ ಬೆಂಕಿಯಿದ್ದರೆ ಅದರಿಂದ ನಮಗೇನು ಪ್ರಯೋಜನವು. ಘರ್ಷಿಸಿ ಅದನ್ನು ಹೊರಗೆ ಬರುವಂತೆ ಮಾಡಿಕೊಂಡರೆ ಪಾಕಾದಿ ಕ್ರಿಯೆಗಳಿಗೆ ಆ ಬೆಂಕಿಯು ಉಪಯುಕ್ತವಾಗುವುದು. ಆಕಳ ಹೊಟ್ಟೆಯೊಳಗೆ ಹಾಲಿದ್ದರೇನಾಯಿತು; ಮೊಲೆಗೆ ಕೈಬೆರಳನ್ನು ಹಚ್ಚಿ ಹಿಂಡಿದರಲ್ಲವೆ ಹಾಲು ಸಿಕ್ಕುವುದು; ಅದರಿಂದ ನಮಗೆ ತೃಪ್ತಿಯು. ಹಾಗೆ ತನ್ನ ಮನಸ್ಸಿನಲ್ಲಿಯೇ ಮಹಾದೇವನಿದ್ದಾನೆಂದು ಸುಮ್ಮನೆ ಕುಳಿತರೆ ಏನುಪ್ರಯೋಜನವು? ಆ ಮಹಾದೇವನನ್ನೇ ಬಹಿರಂಗಕ್ಕೆ ತಂದು ಅವನನ್ನು ಪೂಜಿಸಿದರೆ ಶಾಶ್ವತ ತೃಪ್ತಿಯಾಗುವುದು. ಇಂಥ ಅಂತರ್ಲಿಂಗಧಾರಣ ಬಾಹ್ಯಲಿಂಗಧಾರಣ ಮೊದಲಾದ ಕರ್ಮಗಳಿಲ್ಲದೆ ಕೇವಲ ಒಂದು ಜ್ಞಾನದಿಂದಲೇ ಮುಕ್ತಿಯಾಗಲಾರದು. ಆ ಬ್ರಹ್ಮವೇ ನಾನೆಂಬ ಜ್ಞಾನವೆಷ್ಟೋಜನರಿಗಿರಬಹುದು. ಅವರೆಲ್ಲರೂ ಮುಕ್ತರಾದರೆ ಅವರಲ್ಲಿ ಸಾಂಸಾರಿಕ ಗುಣಗಳು ಕಾಣಿಸುವವೇಕೆ. ಕಾಲಿಲ್ಲದ ಮನುಷ್ಯನೂ ಕಣ್ಣಿಲ್ಲದವನೂ ಒಬ್ಬೊಬ್ಬರೇ ಬೇರೆಯಾಗಿ ಪಟ್ಟಣಕ್ಕೆ ಹೋಗಲಾರರು; ಕೂಡಿಕೊಂಡೇ ಹೋಗುವರು. ಜ್ಞಾನವಿಲ್ಲದ ಕರ್ಮವುಳ್ಳವನೂ, ಕರ್ಮವಿಲ್ಲದ ಜ್ಞಾನವುಳ್ಳವನೂ ಮುಕ್ತಿಪಟ್ಟಣಕ್ಕೆ ಹೋಗಲಾರನು. ಅವೆರಡನ್ನೂ ಕೂಡಿಕೊಂಡೇ ಹೋಗುವನು. ಶಿರೋವ್ಯಾಧಿಯ ನಿವೃತ್ತಿಯು ಮೂಲಿಕೆಯಿಂದಾಗುತ್ತದೆಂದು ತಿಳಿದು ಸುಮ್ಮನೆ ಕುಳಿತರೆ ತನ್ನ ಶಿರೋವ್ಯಾಧಿಯು ನಿವೃತ್ತವಾಗಲಾರದು. ಮೂಲಿಕೆಯನ್ನು ತಂದು ಘರ್ಷಿಸಿ ತಲೆಗೆ ಲೇಪನ

ಮಾಡಿದರೆ ನಿವೃತ್ತವಾಗುವದು. ಆದ್ದರಿಂದಲೇ ಈಶಾವಾಸ್ಯೋಪನಿಷತ್ತಿನಲ್ಲಿ— "ವಿದ್ಯಾಂಚಾವಿದ್ಯಾಂಚ ಯಸ್ತದ್ವೇದೋಭಯಂ ಸಹ | ಅವಿದ್ಯಯಾಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ||" ಅಂದರೆ ಜ್ಞಾನಕರ್ಮಗಳೆರಡನ್ನೂ ಮುಕ್ತಿಗೆ ಉಪಾಯಗಳನ್ನಾಗಿ ಯಾವನು ತಿಳಿಯುತ್ತಾನೋ ಅವನು ವಿದ್ಯೆಗೆ ಭಿನ್ನವಾದ ಸತ್ಕರ್ಮದಿಂದ ಮೃತ್ಯುವನ್ನು ದಾಟಿ ಜ್ಞಾನದಿಂದ ಶಿವತ್ವವನ್ನು ಹೊಂದುತ್ತಾನೆ ಎಂದು ಜ್ಞಾನಕರ್ಮಗಳಿಗೆ ಸಮಸಮುಚ್ಚಯವು ಹೇಳಲ್ಪಟ್ಟಿದೆ. ಈ ಮಂತ್ರದಲ್ಲಿರುವ ಉತ್ತರಾರ್ಧದಿಂದ ಹೇಳಲ್ಪಟ್ಟ ಕ್ರಮಸಮುಚ್ಚಯವು ಮಲನಾಶವಾಗದ ವಿನಹ ಶಿವತ್ವವಿಲ್ಲೆಂಬುದರಲ್ಲಿ ತಾತ್ಪರ್ಯವು. ಇಲ್ಲದಿದ್ದರೆ ಪೂರ್ವಾರ್ಧದಲ್ಲಿ ಹೇಳಿದ ಸಮಸಮುಚ್ಚಯಕ್ಕೆ ವಿರೋಧವಾದೀತು. "ನ ಕರ್ಮಣಾ ನ ಪ್ರಜಯಾ ನ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ" "ನಾಸ್ತ್ಯಕೃತಃ ಕೃತೇನ" ಕರ್ಮದಿಂದ ಮುಕ್ತಿಯಿಲ್ಲ. ಕರ್ಮದಿಂದ ಅಕೃತವಾದ ಅಂದರೆ ನಿತ್ಯವಾದ ಮೋಕ್ಷವಿಲ್ಲ. ಎಂಬರ್ಥವುಳ್ಳ ಅನೇಕ ಶ್ರುತಿಗಳು ಕೇವಲ ಕರ್ಮಗಳನ್ನು ನಿಂದಿಸುತ್ತವೆಯಲ್ಲದೆ ಜ್ಞಾನ ಸಮುಚ್ಚಿತ ಅಂದರೆ ಜ್ಞಾನದಿಂದ ಕೂಡಿದ ಕರ್ಮಗಳನ್ನು ನಿಂದಿಸುವುದಿಲ್ಲ. ಜ್ಯೋತಿಶ್ಶಾಸ್ತ್ರಜ್ಞಾನದಂತೆ ವಿಚಾರಜನ್ಯವಾದ ಕೇವಲ ಜ್ಞಾನದಿಂದ ಮುಕ್ತಿಯು ಸಿದ್ಧಿಸುವುದಿಲ್ಲ. ಜನಕಾದಿಗಳು ಧ್ಯಾನಯೋಗವಿಲ್ಲದೆ ಕೇವಲ ಜ್ಞಾನದಿಂದಲೇ ಮುಕ್ತರಾದರೆಂದರೆ ಅದಿಲ್ಲದೇ ಆದರೆನ್ನುವಲ್ಲಿ ಪ್ರಮಾಣವೇನು? ಮತ್ತು ಸನ್ಯಾಸವಿಲ್ಲದವನಿಗೆ ಮೋಕ್ಷಾಧಿಕಾರವಿಲ್ಲವೆನ್ನುವ ನೀವು ಆ ಜನಕಾದಿಗಳಿಗೆ ಪೂರ್ವಜನ್ಮದ ಸನ್ಯಾಸವನ್ನು ಹೇಗೆ ಕಲ್ಪಿಸುವಿರೋ ಅದರಂತೆ ಧ್ಯಾನಾದಿ ಯೋಗವನ್ನು ಪೂರ್ವಜನ್ಮದಲ್ಲಿ ಆಚರಿಸಿದವರಾದ ಕಾರಣ ಮುಕ್ತರಾದರೆಂದು ಹೇಳಲಿಕ್ಕೆ ಬರಲಾರದೇನು? ಇದರಿಂದ ಮುಕ್ತಿಗೆ ಜ್ಞಾನಕರ್ಮಗಳೆರಡೂ ಬೇಕೆಂದು ಸಿದ್ಧವಾಗುತ್ತದೆ. ಮತ್ತು "ಯದೇವಜ್ಞಾನಫಲಂ ತದೇವ ಕರ್ಮಫಲಂ" ಎಂಬ ಶ್ರುತಿಯಿಂದ ಯಾವುದು ಜ್ಞಾನದಫಲವೋ ಅದೇ ಕರ್ಮದ ಫಲವೆಂದು ತಿಳಿದು ಬರುವಕಾರಣ ಶಿವಾರ್ಪಣ ಬುದ್ಧಿಯಿಂದ ಆಚರಿಸಿದ ಪತಿ ಕರ್ಮಗಳಿಗೆ ಮುಕ್ತಿಫಲವನ್ನೇ ಹೇಳುವುದರಿಂದ ಕರ್ಮಜ್ಞಾನಗಳಿಗೆ ವಿರೋಧವಿಲ್ಲವು. ಫಲಗಳು ಭಿನ್ನಭಿನ್ನವಾಗದ ಹೊರತು ಕರ್ಮಜ್ಞಾನಗಳಿಗೆ ವಿರೋಧವು ಸಂಭವಿಸುವುದಿಲ್ಲವು.

ಇನ್ನು ಜಗತ್ತು ಮಿಥ್ಯೆಯೋ ಅಥವಾ ಸತ್ಯವೋ ಎಂಬುವ ಎರಡನೇ ವಿಷಯವನ್ನು ವಿಚಾರಮಾಡುತ್ತೇನೆ. ಬ್ರಹ್ಮಜ್ಞಾನಾನಂತರದಲ್ಲಿ ಪ್ರಪಂಚವು ಸ್ವಪ್ನ

ಪ್ರಪಂಚದಂತೆ ಮಿಥ್ಯೆ ಎಂದು ಕಂಡುಬರುತ್ತದೆ. ಆದ್ದರಿಂದ ಅದು ಸತ್ಯವೆನ್ನುವದು ಯುಕ್ತವಲ್ಲ. ಅಂದರೆ ಎಲೈ ಬ್ರಹ್ಮಾದ್ವೈತಿಯೇ ಅರ್ಥಸಿದ್ಧಿಯು ಕ್ರಿಯಾಸಿದ್ಧಿಗಳು ಪ್ರಪಂಚದಲ್ಲಿ ತೋರುವುದರಿಂದ ಅದು ಹ್ಯಾಗೆ ಮಿಥ್ಯೆಯಾದೀತು? ಮತ್ತು ವಿಧಿನಿಷೇಧಶಾಸ್ತ್ರಗಳೂ ಆಚಾರೋಪದೇಶಗಳೂ ಮಿಥ್ಯೆ ಎಂದ ಮೇಲೆ ಬೌದ್ಧಮತಪ್ರವೇಶವಾಗಲಿಲ್ಲವೇನು ? ಮತ್ತು ಸ್ವಪ್ನ ದೃಷ್ಟಾಂತವಾದರೂ ಹೇಗೆ ಸಂಗತವಾಗುವದು ? ಸ್ವಪ್ನದಲ್ಲಿ ಕಾಣಿಸುವ ವಿಷ ಪೀಯೂಷ ಪಾನಗಳಿಂದ ಯಾವನಾದರೂ ಮೃತನಾದದ್ದೂ ಚಿರಕಾಲ ಬದಕಿದ್ದೂ ಯಾರನುಭವದಲ್ಲಿಯೂ ಇಲ್ಲ. ಜಾಗ್ರದವಸ್ಥೆಯಲ್ಲಿ ವಿಷ ಕುಡಿದರೆ ಉಳಿಯಲಾರನು. ಆದ್ದರಿಂದ ಸ್ವಪ್ನದೃಷ್ಟಾಂತವು ವ್ಯರ್ಥವು. ಲೋಕವ್ಯವಹಾರವೂಕೂಡ ಭ್ರಮವಿಷಯವಾಗುವುದೆಂದರೆ ತನ್ನ ಸತಿಯಲ್ಲಿ ಸತಿ ಎಂಬುವ ಬುದ್ಧಿಯೂ, ತಾಯಿಯಲ್ಲಿ ತಾಯಿ ಎಂಬುವ ಬುದ್ಧಿಯೂ, ಭ್ರಮರೂಪವೆಂದು ಹೇಳಬೇಕಷ್ಟೆ ? ಅದೂ ಭ್ರಮವಾದರೆ ಇನ್ನಾವ ಬುದ್ಧಿಯು ಯಥಾರ್ಥವಾದದ್ದು ? ಬ್ರಹ್ಮಸೂತ್ರದ ದ್ವಿತೀಯಾಧ್ಯಾಯದಲ್ಲಿ ‹‹ನಾಭಾವ ಉಪಲಬ್ಧೇಃ ವೈಧರ್ಮ್ಯಾತ್ ನಸ್ವಪ್ನಾದಿವತ್,, ಎಂಬುವ ಸೂತ್ರದಿಂದ ಸ್ವಪ್ನ ಇಂದ್ರಜಾಲಗಳಂತೆ ಪ್ರಪಂಚವು ಸುಳ್ಳೆಂಬುವ ಮತವನ್ನು ಚನ್ನಾಗಿ ನಿರಾಕರಿಸಿರುವರು. ಕೃಷ್ಣಗೀತೆಯಲ್ಲಿಯಾದರೂ ‹‹ಅಸತ್ಯಮ ಪ್ರತಿಷ್ಟಂತೆ ಜಗದಾಹುರ್ನಿರೀಶ್ವರಾಃ | ಅಪರಸ್ಪರ ಸಂಭೂತಂ ಕಮನ್ಯತ್ಕಾರ್ಯ ಹೇತುಕಂ,, ಎಂದು ಈ ಮತವು ಖಂಡಿಸಲ್ಪಟ್ಟಿರುವುದು. ‹‹ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತ್ಯಿಕೇತ್ಯೇವಸತ್ಯಂ›› ಎಂಬುವ ಶ್ರುತಿಯೂ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವುದಿಲ್ಲ. ಕಿಂತು ಮೃತ್ತಿಕೆಯಿಂದುಂಟಾದ ಘಟ ಶರಾವಾದಿಗಳು ಹೇಗೆ ಮೃತ್ತಿಕೆಯ ಸ್ವರೂಪಗಳೋ ಅದರಂತೆ ಶಿವನಿಂದುಂಟಾದ ಸಮಸ್ತ ಜಗತ್ತು ಶಿವಸ್ವರೂಪವೇ ಎಂದು ಕಾರಣದ ಅಭೇದವನ್ನು ಹೇಳುತ್ತದೆ. ಆದ್ದರಿಂದಲೇ ಶ್ರೀ ವ್ಯಾಸರು ‹‹ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ›› ಎಂದು ಆ ಶ್ರುತ್ಯರ್ಥವನ್ನೇ ಕಾರಣದ ಅಭೇದಪರವನ್ನಾಗಿ ಹೇಳಿರುವರು.

ಎಲೈ ಬ್ರಹ್ಮಾದ್ವೈತಿಯೇ ಅಧ್ಯಾರೋಪವನ್ನು ನೀನು ಬ್ರಹ್ಮಕ್ಕೆ ಹೇಳುವೆಯೋ ಅಥವಾ ಬ್ರಹ್ಮೇತರ ವಸ್ತುವಿಗೆ ಹೇಳುವೆಯೋ ? ಬ್ರಹ್ಮಕ್ಕೆ ಶರೀರೇಂದ್ರಿಯಾದಿಗಳಿಲ್ಲದ್ದರಿಂದ ಅದಕ್ಕೆ ಹೇಗೆ ಹೇಳುವಿ? ಸೃಷ್ಟ್ಯಾದಿಯಲ್ಲಿ ಮತ್ತೊಂದಿಲ್ಲದ್ದರಿಂದ ಬ್ರಹ್ಮೇತರ ವಸ್ತುವಿಗಾದರೂ ಹೇಗೆ ಹೇಳುವಿ ? ಆಗ ಬ್ರಹ್ಮೇತರ ವಸ್ತುವನ್ನು ಮಾನಿಸಿದರೆ ಅದ್ವೈತಹಾನಿಯಾಗುವುದಿಲ್ಲವೆ ? ‹‹ಸದೇ

ವಸೌಮ್ಯೇದಮಗ್ರ ಆಸೀತ್'' ಎಂಬ ಶ್ರುತಿಯಿಂದ ಸೃಷ್ಟಿಯ ಆದಿಯಲ್ಲಿ ಮತ್ತೊಂದು ಇರಲಿಲ್ಲವೆಂದು ಗೊತ್ತಾಗುತ್ತದೆ. ''ಸರ್ವೋವೈರುದ್ರಃ'' ''ಸರ್ವಂ ಖಲ್ವಿದಂಬ್ರಹ್ಮ'' ಮೊದಲಾದ ಶ್ರುತಿಗಳಿಂದ ಸರ್ವ ಜಗತ್ತೂ ಶಿವಸ್ವರೂಪವೇ ಆಗಿರುವದು. ಆದ್ದರಿಂದ ಪ್ರಪಂಚ ನಿಷೇಧವು ಬ್ರಹ್ಮಜ್ಞಾನದಿಂದ ಆಗುವುದಿಲ್ಲವೆಂದು ತಿಳಿದುಬರುತ್ತದೆ. ಈರೀತಿಯಿಂದ ಘಟತ್ವ ಪಟತ್ವ ಬುದ್ಧಿಯು ಸಂಕೋಚವಾಗುತ್ತದೆಯೇ ಹೊರತು ಘಟಪಟಾದಿಗಳು ನಿವೃತ್ತಿಯಾಗುವುದಿಲ್ಲ. ಅವು ಶಿವಸ್ವರೂಪಗಳೇ ಆಗಿರುವವು. ನ್ಯಾಯದರ್ಶನಕಾರರೂಕೂಡ ''ಮಿಥ್ಯೋಪಲಬ್ಧಿ ವಿನಾಶಸ್ತತ್ವಜ್ಞಾನಾತ್ ಸ್ವಪ್ನ ವಿಷಯಾಭಿಮಾನ ಪ್ರಣಾಶವತ್ ಪ್ರತಿಬೋಧೆ' ಅಂದರೆ ತತ್ವಜ್ಞಾನದಿಂದ ಮಿಥ್ಯೋಪಲಬ್ಧಿಯೇ ನಾಶವಲ್ಲದೆ ಅರ್ಥದ ನಾಶವಿಲ್ಲಾ ಪ್ರತಿಬೋಧಾವಸ್ಥೆಯಲ್ಲಿ (ಜಾಗ್ರದಲ್ಲಿ) ಸ್ವಪ್ನವಿಷಯಾಭಿಮಾನದ ನಿವೃತ್ತಿಯಂತೆ ಇದರ ಭಾಷ್ಯಕಾರರಾದ ವಾತ್ಸ್ಯಾಯನ ಋಷಿಗಳೂ ಕೂಡ ''ತತ್ವಜ್ಞಾನೇನ ಮಿಥ್ಯೋಪಲಬ್ಧಿರ್ನಿವರ್ತ್ಯತೆ ನಾರ್ಥಃ'' ಎಂದು ಹೇಳಿರುವರು. ಮರುಮರೀಚಿಕೆಯಲ್ಲಿ ಉದಕತ್ವಬುದ್ಧಿಯ ಸಂಕೋಚವಲ್ಲದೆ ಉದಕ ಪದಾರ್ಥಕ್ಕೆ ನಾಶವಿಲ್ಲ. ಉದಕತ್ವಬುದ್ಧಿಯಾದರೂ ಮಿಥ್ಯವೆಂದು ಹೇಗೆ ಹೇಳಬೇಕು? ಸೂರ್ಯನ ಕಿರಣಗಳು ಭೂಮಿಯಲ್ಲಿರುವ ಉಷ್ಣದಿಂದ ಕೂಡಿ ಸ್ಪಂದಿಸಲು ಮನುಷ್ಯನಿಗೆ ಪೂರ್ವದಲ್ಲಿ ಅನುಭೂತವಾದ ಉದಕಬುದ್ಧಿಯು ಆವಿರ್ಭಾವವಾಗುವದು. ಶಂಖದಲ್ಲಿ ಪೀತಿಮೆಯ ಬುದ್ಧಿಯಾದರೋ ತನ್ನ ನೇತ್ರದಲ್ಲಿರತಕ್ಕ ಪಿತ್ತದೋಷದಿಂದ ಪೂರ್ವದಲ್ಲಿ ಅನುಭೂತವಾದ ಪೀತಬುದ್ಧಿಯ ಆವಿರ್ಭಾವವೆಂದೇ ಹೇಳಬೇಕು. ಪೂರ್ವದಲ್ಲಿ ಪೀತವರ್ಣವನ್ನು ನೋಡದಿದ್ದರೆ ಪೀತವರ್ಣವುಳ್ಳುದೆಂದು ಸ್ಮರಣೆಯಾಗಲಾರದಷ್ಟೆ? ಮರುಮರೀಚಿಕೆಯಲ್ಲಿ ಉದಕಬುದ್ಧಿಯ ಕಾರಣವೂ, ಶಂಖದಲ್ಲಿ ಪೀತಬುದ್ಧಿಯ ಕಾರಣವೂ ಸತ್ಯಗಳಾಗಿರುವುದರಿಂದ ಕಾರ್ಯವಾದ ಆ ಬುದ್ಧಿಯು ಅಸತ್ಯವಾಗಲಾರದು. ಮರುಮರೀಚಿಕೆಯಲ್ಲಿ ಉದಕವೂ ಉದಕಬುದ್ಧಿಯೂ ಸತ್ಯವಾದರೆ ''ಉಚ್ಚಾವಚ ಮುಚ್ಚಲತ್ತುಂಗ ತರಂಗ ಮಾಲೇಯಮಭ್ಯರಣಮವತೀರ್ಣಾ ಮಂದಾಕಿನೀತಿ ತತ್ತೋಯ ಮಾಪೀಯ ಪಿಪಾಸಾಮುಪಶಮಯೇತ್'', ಎಂಬ ಭಾವತೀಪತಿಗಳ ಉಕ್ತಿಯಂತೆ ಮರುಭೂಮಿಯಲ್ಲಿ ಗಂಗಾಜಲವನ್ನು ಕುಡಿದು ಪಿಪಾಸೆಯನ್ನು ಹೋಗಲಾಡಿಸಿಕೊಳ್ಳಬಹುದಲ್ಲವೆ? ಅಂದರೆ ಎಲೈ ಬ್ರಹ್ಮಾದ್ವೈತಿಯೇ ನಿನ್ನ ಮನಸ್ಸಿನಲ್ಲಿ ಜಲಸ್ಮೃತಿಯಾದರೆ ನೀನಾದರೂ ಜಲವನ್ನು ಕುಡಿಯುತ್ತೀಯೊ? ಇಲ್ಲ. ಅಂದಮೇಲೆ ಮರುಭೂಮಿಯಲ್ಲಿ ಅಂಥ ಬುದ್ಧಿಯಾ

ಗಲು ಪಿಪಾಸೆಯನ್ನು ಕಳೆದುಕೊಳ್ಳುವುದು ಹೇಗೆ ? ನಾವಾದರೂ ಅಲ್ಲಿ ಜಲವೇ ಹುಟ್ಟುತ್ತದೆಂದು ಹೇಳುವುದಿಲ್ಲ. ಆದರೆ ಪೂರ್ವದಲ್ಲಿ ಸತ್ಯವಾದ ಜಲದ ಅನುಭವವು ಕೆಲವು ಕಾರಣಗಳಿಂದ ಮರುಭೂಮಿಯಲ್ಲಿ ಅಭಿವ್ಯಕ್ತವಾಗುವದೆಂದು ಹೇಳುತ್ತೇವೆ. ನೀನು ಮಾತ್ರ ಅಲ್ಲಿಂದ ಜಲವೇ ಹುಟ್ಟುತ್ತದೆಂದು ಹೇಳುತ್ತಿ. ಆದ್ದರಿಂದ ಪಿಪಾಸೆಯನ್ನು ಕಳೆದುಕೊಳ್ಳಬಹುದಲ್ಲವೇ ಎಂಬುವ ಪ್ರಶ್ನೆಯು ನಿನ್ನಮೇಲೆಯೇ ಬರುತ್ತದೆ.

ಎಲ್ಲೈ ಶಿವಾದ್ವೈತಿಯೇ ಪ್ರಾತಿಭಾಸಿಕಗಳಾದ ಪಿಪಾಸೆ ಮೊದಲಾದ ನಿವೃತ್ತಿಕಾರ್ಯಗಳಾಗುವುದಿಲ್ಲವೆಂದರೆ ಬುದ್ಧಿಯಲ್ಲಿ ತೋರುವ ಪದಾರ್ಥದಿಂದಲಾದರೂ ಹೇಗೆ ಆದೀತು ? ಹಾಗಾದರೆ ಎಲ್ಲೈ ಶಿವಾದ್ವೈತಿಯೇ ವಾಸ್ತವವಾದ ರಜತಜ್ಞಾನಕ್ಕೂ ಶುಕ್ತಿರಜತಜ್ಞಾನಕ್ಕೂ ವೈಲಕ್ಷಣ್ಯವೇನು? ಅಂದರೆ ವಾಸ್ತವವಾದರಜತಜ್ಞಾನಕ್ಕೆ ವಿಷಯವಾದ ರಜತದಿಂದ ಅಲಂಕಾರ ಕಾರ್ಯವಾಗುತ್ತದೆ. ಶುಕ್ತಿರಜತಜ್ಞಾನಕ್ಕೆ ವಿಷಯವಾದ ರಜತದಿಂದ ಕಾರ್ಯವಾಗುವುದಿಲ್ಲವೆಂಬುವದೇ ವೈಲಕ್ಷಣ್ಯವು. ಪರಂತು ಆ ಬುದ್ಧಿಯೂ ಅಸತ್ಯವಲ್ಲ. ಆ ಬುದ್ಧಿಯಲ್ಲಿ ತೋರುವ ರಜತವೂ ಅಸತ್ಯವಲ್ಲ. ಆದ್ದರಿಂದ ಈ ಶುಕ್ತಿರಜತ ದೃಷ್ಟಾಂತದಿಂದ ಜಗತ್ತು ಮಿಥ್ಯೆ ಎಂದೂ ಸಿದ್ಧವಾಗಲಾರದು. ಭಂಗಾರದ ಘಟ್ಟಿಯಲ್ಲಿ ಮೊದಲು ಕುಂಡಲವಿದ್ದಿಲ್ಲವೆಂದು ಹೇಳಲಿಕ್ಕೂ ಆಗುವುದಿಲ್ಲ. ಕುಂಡಲವಿದ್ದಕಾಲದಲ್ಲಿ ಕುಂಡಲವಿಲ್ಲೆಂದು ಹೇಳಲಿಕ್ಕೂ ಆಗುವುದಿಲ್ಲ. ಮುಂದೆ ಕುಂಡಲವಿರುವುದಿಲ್ಲವೆಂದು ಹೇಳಲಿಕ್ಕೂ ಆಗುವುದಿಲ್ಲ. ಕುಂಡಲವು ತಯಾರಾಗದೆಯಿದ್ದಕಾಲದಲ್ಲಿ ಈ ಸುವರ್ಣವು ಕುಂಡಲವಾಗುವದು. ಎಂಬುವ ಕ್ರಿಯಕ್ಕೆ ಆಶ್ರಯವು ಕುಂಡಲವಲ್ಲವೆ ? ಕುಂಡಲವೇ ಆ ಸುವರ್ಣದಲ್ಲಿಲ್ಲದಿದ್ದರೆ ಕುಂಡಲವಾಗುತ್ತದೆಂಬ ಕ್ರಿಯೆಗೆ ಆಶ್ರಯವಾವುದು ? ಕುಂಡಲದ ವರ್ತಮಾನಕಾಲದಲ್ಲಿಯಾದರೂ ಕುಂಡಲದ ಸತ್ಯತ್ವವು ಪ್ರತ್ಯಕ್ಷಸಿದ್ಧವೇ ಇರುವುದು. ಭವಿಷ್ಯತ್ಕಾಲದಲ್ಲಿಯಾದರೋ ಕುಂಡಲವಿರುವುದಿಲ್ಲೆಂದು ಹೇಳಲಿಕ್ಕಾಗುವುದಿಲ್ಲ. ಆದ್ದರಿಂದ ಕುಂಡಲಕ್ಕೆ ಹೇಗೆ ಭೂತ ಭವಿಷತ್ ವರ್ತಮಾನ ಕಾಲಗಳಲ್ಲಿಯೂ ಸತ್ಯತ್ವವಿರುವದೋ ಹಾಗೆ ಶಿವನಲ್ಲಿ ಜಗತ್ತಿಗೆ ತ್ರೈಕಾಲಿಕ ಸತ್ಯತ್ವವನ್ನೇ ಹೇಳಬೇಕು. ಒಳ್ಳೇದು ಎಲ್ಲೈ ಶಿವಾದ್ವೈತಿಯೇ ಇದು ಶುಕ್ತಿಯೇ ಎಂಬುವ ಜ್ಞಾನದಿಂದ ಪೂರ್ವದಲ್ಲಿ ಇಲ್ಲಿ ರಜತವಿದ್ದಿಲ್ಲ. ಈಗಲೂ ರಜತವಿಲ್ಲ. ಮುಂದೆಯೂ ಇಲ್ಲವೆಂದು ತ್ರೈಕಾಲಿಕ ನಿಷೇಧವು ರಜತಕ್ಕೆ ಸಿದ್ಧವಾಗುವಂತೆ ಬ್ರಹ್ಮಜ್ಞಾನೋತ್ತರಕಾಲದಲ್ಲಿ ಜಗತ್ತಿಗೆ ತ್ರೈಕಾಲಿಕ ನಿಷೇಧವು

ಸಿದ್ಧವಾಗುವುದಿಲ್ಲವೆ? ಅಂದರೆ ಬ್ರಹ್ಮಾದ್ವೈತಿಯೇ ಬ್ರಹ್ಮದಲ್ಲಿ ಮೂರು ಕಾಲಗಳಲ್ಲಿಯೂ ಜಗತ್ತು ಇಲ್ಲವೆಂದು ಹೇಳುತ್ತಿರುವೆಯಷ್ಟೆ? ಪರಂತು ನೀನು ಆ ಬ್ರಹ್ಮಜದಲ್ಲಿ ಮೂರುಕಾಲಗಳೂ ಇಲ್ಲವೆಂದು ಹೇಳುವುದಿಲ್ಲ. ಅಂದಮೇಲೆ ಮೂರುಕಾಲಗಳ ಸತ್ಯತ್ವವನ್ನು ಒಪ್ಪಬೇಕಾಗುವದು. ಹೀಗೆಒಪ್ಪಿದಲ್ಲಿ ಸಮಸ್ತ ಜಗತ್ತಿಗೇನೆ ಮಿಥ್ಯಾತ್ವವನ್ನು ಹೇಳುವದು ಸಮಂಜಸವಾಗುವುದಿಲ್ಲ.

ಕುಂಡಲವು ಪುನಃ ಭಂಗಾರದ ಘಟ್ಟಿಯಾದರೆ ಅದು ತೋರಿಕೆಯು ಇಡ ಗಿತ್ತಲ್ಲದೆ ಅದರಸತ್ಯತ್ವಕ್ಕೆ ಬಾಧೆಯಿಲ್ಲ. ಪದಾರ್ಥಗಳು ಕಾಣಿಸದಿರುವಮಾತ್ರದಿಂದ ಅವು ನಷ್ಟವಾದುವೆಂಬುದು ಮೂರ್ಖತನವು. ತನ್ನ ಲೀಲೆಯಿಂದ ಹೊರಬಿದ್ದ ಆಮೆಯ ಕಾಲುಗಳು ಪುನಃ ಹೊಟ್ಟೆಯೊಳಗೆ ಹೋದರೆ ಅವು ನಷ್ಟವಾದವೇನು? ಆದ್ದರಿಂದ ಜಗತ್ತು ಪೂರ್ವದಲ್ಲಿ ಅಂಡದಸನ್ಯಾಯದಂತೆ ಶಿವನಲ್ಲಿತ್ತು. ಈಗೂ ಪ್ರತ್ಯಕ್ಷವಾಗಿಯೇ ಇದೆ. ಮುಂದಾದರೂ ಸಂಕುಚಿತವಾಗಿರುತ್ತದೆ ಎಂದು ಎಲ್ಲರ ಅನುಭವಕ್ಕೆ ಬರುವ ಕಾರಣ ತ್ರೈಕಾಲಿಕ ಸತ್ಯತ್ವವೇ ಜಗತ್ತಿಗೆ ಸಿದ್ಧವಾಗುವುದು. ಬ್ರಹ್ಮಜ್ಞಾನವು ಬಾಧಕವು. ಜಗತ್ತು ಬಾಧ್ಯವು ಎಂದು ಹೇಳುವ ನೀವುಗಳೂ ಕೂಡ ತ್ರೈಕಾಲಿಕವಾದ ಮಿಥ್ಯಾತ್ವವನ್ನು ಜಗತ್ತಿಗೆ ಹೇಳುವಿರಿ. ಬಾಧ್ಯಕೋಟಿಯಲ್ಲಿ ಕಾಲವು ಪ್ರವಿಷ್ಟವಾಗಲಿಲ್ಲ. ಕಾಲವು ಬ್ರಹ್ಮಜ್ಞಾನದಿಂದ ನಷ್ಟವಾದಂತಾಗಲಿಲ್ಲ. ಭೂತ ಭವಿಷತ್‌ವರ್ತಮಾನಕಾಲಗಳುಳಿದ ಸೂರ್ಯ ಚಂದ್ರರುಳಿದಂತಾಯಿತು. ಇಲ್ಲದಿದ್ದರೆ ಆ ಕಾಲ ವ್ಯವಹಾರವೇ ಜಗಲಿಕ್ಕಿಲ್ಲ. ಮೂರುಕಾಲಗಳಲ್ಲಿ ಜಗತ್ತು ಸತ್ಯವೆಂಬ ವ್ಯವಹಾರವು ಸಂಗತವಾಗಲಾರದು. ಸೂರ್ಯನಿಲ್ಲದಿದ್ದರೆ ಕಾಲವ್ಯವಹಾರವು ಹೇಗಾದೀತು? ಸೂರ್ಯನಿದ್ದಮೇಲೆ ಅವನ ತೇಜಃಪ್ರಧಾನವಾದ ಶರೀರವು ಇದ್ದಂತಾಯಿತು. ತೇಜಸ್ಸಿದ್ದಮೇಲೆ ಪೃಥಿವ್ಯಾದಿಗಳು ಇರಲೇಬೇಕು. ಅಂದಮೇಲೆ ಜಗತ್ತಿನ ಸತ್ಯತ್ವವನ್ನು ವುದಕ್ಕೆ ನಿಮ್ಮ ಮನಸ್ಸಾದರೂ ಒಪ್ಪುವದೇನು? ಆದ್ದರಿಂದಲೇ ‟ನಾಸತೋವಿದ್ಯತೇ ಭಾವೊ ನಾಭಾವೊ ವಿದ್ಯತೇಸತಃ" ಎಂಬ ವಾಕ್ಯವು ಜಗತ್ತಿಗೆ ಸತ್ಯತ್ವವನ್ನು ಹೇಳುವದು. ಶಿವಯೋಗಿ ಶಿವಾಚಾರ್ಯರಾದರೂ ‘ಚಿದಾತ್ಮೈವಹಿದೇವೋಂತಃ ಸ್ಥಿತಮಿಚ್ಛಾವಶಾದ್ಬಹಿಃ| ಯೋಗೀವ ನಿರುಪಾದಾನ ಮರ್ಥಜಾತಂ ಪ್ರಕಾಶಯೇತ್" ಅಂದರೆ ಚಿದ್ರೂಪ ಪರಶಿವನೇ ತನ್ನಲ್ಲಿದ್ದ ಪ್ರಪಂಚವನ್ನು ತನ್ನ ಇಚ್ಛಾಮಾತ್ರದಿಂದ ತನಗೆ ಇತರವಾದ ಮತ್ತೊಂದು ಕಾರಣವನ್ನಪೇಕ್ಷಿಸದೆ ಪ್ರಕಾಶಗೊಳಿಸುವನೆಂದು ಹೇಳಿರುವನು. ಜ್ಞಾನದಿಂದ ವಿಕಲ್ಪಬುದ್ಧಿಯು (ನಾನು ಶಿವನಲ್ಲ

ನಾನು ಪೂರ್ಣನಲ್ಲ ಎಂಬುವ ಬುದ್ಧಿಯು) ಲಯವಾಗುತ್ತದೆ. ಸ್ವರೂಪತಃ ನಾಶವಾಗುವುದಿಲ್ಲ. ಪರಂತು ತನ್ನ ಕಾರಣದಲ್ಲಿ ಕೂಡಿಬಿಡುತ್ತದೆಂಬುದನ್ನು ಮಾತ್ರ ಒಪ್ಪಲೇ ಬೇಕು. ಅಂದರೆ ಅಶುದ್ಧ ವಿದ್ಯೆಯು ಶುದ್ಧ ವಿದ್ಯಾ ಸ್ವರೂಪವೇ ಆಗುವದು. “ಅಖಂಡಾ ದ್ವೈತ ಭಾನೇತು ಸರ್ವಂಬ್ರಹ್ಮೈವ ನಾನ್ಯಥಾ ಜ್ಞಾನಾದ್ವಿಕಲ್ಪ ಬುದ್ಧಿಸ್ತು ಲೀಯತೆ ನಸ್ವರೂಪತಃ” ಎಂಬುಕ್ತಿಯಂತೆ ಎಲ್ಲಾ ಪ್ರಪಂಚವೂ ಪ್ರಕಾಶಾಂತರ್ಗತವಾದ್ದರಿಂದ ಶಿವ ಪ್ರಕಾಶ ಸ್ವರೂಪವೆಂದು ತಿಳಿಯಬೇಕು. ಜಗತ್ತು ಸತ್ಯವಾದರೂ ಇದನ್ನು ಶಿವಾತಿರಿಕ್ತವನ್ನಾಗಿ ನೋಡದೆ ಶಿವಸ್ವರೂಪವನ್ನಾಗಿ ನೋಡಿದರೆ ಇದರಿಂದ ಮುಕ್ತಿಗೆ ಬಾಧಕವೇನು? ಆದ್ದರಿಂದಲೇ ವಾಚಸ್ಪತಿ ಮಿಶ್ರರೂ ಕೂಡ ತಮ್ಮ ಸಾಂಖ್ಯತತ್ವ ಕೌಮುದಿಯಲ್ಲಿ “ ಸತಿ ಪ್ರತಿಬಂಧಕೆ ನಶಕ್ಯೋಮಿಥ್ಯೇತಿ ವದಿತುಂ,, ಎಂದು ಹೇಳಿರುವರು. ಅದಕ್ಕೋಸ್ಕರವೇ ಶಿವಾಧಿಕ್ಯ ರತ್ನಾವಳಿಕಾರನು “ ಮಿಥ್ಯಾತ್ವೇಸ್ತಿನವಾ ಸಮಸ್ತಜಗತಾಂ ಹಾನಂ ಯದಸ್ತ್ಯೇವ ಚೇತ್ | ತತ್ಸತ್ಯಂಯದಿ ಸಂಭವೇ ದಭಿಮತಾದ್ವೈತಸ್ಯ ಹಾನಿಸ್ತತಃ || ಮಿಥ್ಯಾಚೇದ್ಯಪಿತಸ್ಯ ಸಿದ್ಧ್ಯತಿ ಜಗನ್ಮಿಥ್ಯಾತ್ವಮೇತತ್ತಥಾ | ಸತ್ಯಂಬ್ರಹ್ಮತದನ್ಯದೇತದಖಿಲಂ ಮಿಥ್ಯೇತಿವಕ್ತಾಜಡಃ ||,, ಎಂದು ಬ್ರಹ್ಮಸತ್ಯಂಜಗನ್ಮಿಥ್ಯಾ ಎಂಬುವ ಮತದವರಿಗೆ ಜಡರೆಂದು ಪ್ರಯೋಗಿಸುವರು.

ಇನ್ನು ಜ್ಞಾನಿಗಳಿಗೆ ವೇದಾಂತಾದಿ ಶಾಸ್ತ್ರಗಳಿಂದ ಪ್ರಯೋಜನವಿದೆಯೋ ಇಲ್ಲವೊ ಎಂಬುವ ಮೂರನೇ ವಿಚಾರವನ್ನು ಮಾಡುವೆವು. ವೇದಾಂತಾದಿ ಶಾಸ್ತ್ರವು ತನ್ನ ಸಚ್ಚಿದಾನಂದ ಸ್ವರೂಪವನ್ನು ನೋಡಿಕೊಳ್ಳುವುದಕ್ಕೆ ಒಂದು ಕನ್ನಡಿಯಂತಿದೆ. ಕನ್ನಡಿಯನ್ನು ಎಂದೂ ನೋಡದ ಮನುಷ್ಯನು ನೋಡಿದ ಕೂಡಲೆ ತನ್ನ ಎಲ್ಲಾ ಮುಖಸ್ವರೂಪದ ಜ್ಞಾನವಾಗುತ್ತದೆ. ಆದಾಗ್ಯೂ ಅವನು ಪುನಃ ಪುನಃ ಕನ್ನಡಿಯನ್ನು ಯಾವುದಕ್ಕೋಸ್ಕರ ನೋಡುವನು? ಪ್ರಥಮಾವಲೋಕನದಿಂದ ತನ್ನಮುಖದ ಜ್ಞಾನವಾಗಿ ಆದರಿಂದ ಒಂದು ತರದ ಆಂದವಾಗಿದ್ದಾಗ್ಯೂ ಪುನಃ ಪುನಃ ಕನ್ನಡಿಯನ್ನು ನೋಡೇನೋಡುತ್ತಿರುತ್ತಾನಷ್ಟೆ? ಆ ನೋಟದಿಂದ ಅವನಿಗೆ ಮತ್ತಿಷ್ಟು ಆನಂದವಾಗುತ್ತದೆಯಲ್ಲದೆ ದುಃಖವಾಗುವುದಿಲ್ಲ. ಅಂದಮೇಲೆ ಶಾಸ್ತ್ರ ಜಿಜ್ಞಾಸೆಯಿಂದ ತನ್ನ ಸಚ್ಚಿದಾನಂದಸ್ವರೂಪ ಜ್ಞಾನವಾಗಿ, ಆನಂದವಾಗಿದ್ದರೂ, ಪುನಃಪುನಃ ಶಾಸ್ತ್ರಾವಲೋಕನ ಮಾಡುವುದರಿಂದ ಕ್ಷತಿಯೇನು? ದುಃಖವೇನಾದರೂ ಆಗುವುದುಂಟೆ? ಎಂದೂ ಆಗುವುದಿಲ್ಲ. ಅಂದಮೇಲೆ ಜ್ಞಾನಿಗಳಿಗೆ ಶಾಸ್ತ್ರಗಳು ನಿಷ್ಪ್ರಯೋಜಕಗಳಲ್ಲ

ಶರೀರ ಪಂಜರವಿರುವವರೆಗೂ ಶಿವಸಂಬಂಧವಾದ ಶಾಸ್ತ್ರಚಿಂತನೆ, ಶಿವಪೂಜಾ ಮೊದಲಾದ ಸತ್ಕರ್ಮಗಳನ್ನು ಅನುಷ್ಠಾನ ಮಾಡುತ್ತಲೇ ಇರಬೇಕೆಂದು ಈಶಾವಾಸ್ಯೋಪನಿಷತ್ತಿನ ದ್ವಿತೀಯಮಂತ್ರವು ಹೇಳುತ್ತದೆ. ಆದರೆ ಬ್ರಹ್ಮಜ್ಞಾನಿಯಾದ ಜೀವನ್ಮುಕ್ತನು ಶಿವಶಾಸ್ತ್ರ ಚಿಂತನ ಮೊದಲಾದ ಕರ್ಮಗಳನ್ನು ಬಿಟ್ಟುಬಿಟ್ಟರೆ ಶ್ರುತಿವಾಕ್ಯಕ್ಕೆ ಗತಿಯೇನು? ಆದ್ದರಿಂದ ಅವಿದ್ಯಾವದ್ವಿಷಯಾಣ್ಯೇವ ಶಾಸ್ತ್ರಾಣಿ ಎಂಬುವ ಮಾತು ಯುಕ್ತಿಗೂ ಅನುಭವಕ್ಕೂ ಶ್ರುತಿಗೂ ವಿರುದ್ಧವಾಗಿದೆಯಲ್ಲದೆ ಆಸುಪ್ತೇರಾಮೃತೇಃ ಕಾಲಂನಯೇದ್ವೇದಾಂತ ಚಿಂತಯಾ,, ಎಂಬುಕ್ತಿಗೂ ವಿರುದ್ಧವಾಗಿದೆ, ಜೀವನ್ಮುಕ್ತದಶೆಯಲ್ಲಿ ಮೃತನಾಗಿರುವದಿಲ್ಲವಷ್ಟೆ?

ಇನ್ನು ಅಭೇದವೊಂದೇ ಪಾರಮಾರ್ಥಿಕವೊ ಭೇದವೂಕೂಡ ಪಾರಮಾರ್ಥಿಕವಾಗುವದೋ ಎಂಬುವ ನಾಲ್ಕನೇ ವಿಷಯವನ್ನು ವಿಚಾರಿಸುವೆವು. ‹‹ದ್ವಾಸುಪರ್ಣಾಸಯುಜಾಸಖಾಯಂ ಸಮಾನಂ ವೃಕ್ಷಂ ಪರಿಷಸ್ವಜಾತೆ›› ಎಂಬುವ ಶ್ರುತಿಯು ಜೀವಬ್ರಹ್ಮರುಗಳಿಗೆ ಭೇದವನ್ನು ಹೇಳುತ್ತದೆ. ‹‹ತತ್ವಮಸಿ ಅಹಂಬ್ರಹ್ಮಾಸ್ಮಿ›› ಎಂಬುವ ಶ್ರುತಿವಾಕ್ಯಗಳು ಜೀವಬ್ರಹ್ಮರುಗಳಿಗೆ ಅಭೇದವನ್ನು ಹೇಳುತ್ತವೆ. ಶ್ರುತ್ಯರ್ಥವನ್ನು ಸಂಕೋಚಮಾಡುವುದರಲ್ಲಿ ಯುಕ್ತಿಯಿಲ್ಲಾ. ಆದ್ದರಿಂದ ಭೇದಾಭೇದಗಳೆರಡೂ ಪಾರಮಾರ್ಥಿಕಗಳೆಂದೇ ಹೇಳಬೇಕು. ಅವುಗಳಿಗೆ ಪರಸ್ಪರ ವಿರೋಧವಿರುವುದರಿಂದ ಎರಡನ್ನು ಒಂದರಲ್ಲಿ ಹೇಳುವ ಬಗೆ ಹೇಗೆ? ಅಂದರೆ ವೃಕ್ಷದಲ್ಲಿ ಕಪಿಯಿಲ್ಲದ ಕಾಲದಲ್ಲಿ ಕಪಿಸಂಯೋಗಿ ಭೇದವೂ, ಕಪಿ ಇರುಕಾಲದಲ್ಲಿ ಅದರ ಅಭೇದವೂ ಎಂದು ಹೇಳುವಂತೆ ಬದ್ಧದಶೆಯಲ್ಲಿ ಭೇದವು ಮುಕ್ತಾವಸ್ಥೆಯಲ್ಲಿ ಅಭೇದವು ಎಂದು ಏಕೆ ಹೇಳಬಾರದು? ಕಾಣಾದಋಷಿಗಳು ಪ್ರಪಂಚದಲ್ಲಿ ನಿತ್ಯ ಭಿನ್ನತ್ವವನ್ನೂ, ನಿತ್ಯಾಭಿನ್ನತ್ವವನ್ನೂ ಸ್ವೀಕರಿಸಿಲ್ಲವೆ? ಭಿನ್ನತ್ವಾಭಿನ್ನತ್ವಗಳೆಂದರೆ (ಭೇದಾಭೇದಗಳು) ಅವುಗಳಿಗೆ ವಿರೋಧವಿದ್ದರೆ ಅವರು ಹೇಗೆ ಸ್ವೀಕರಿಸಿರುವರು. ಅರ್ಧನಾರೀಶ್ವರನಲ್ಲಿ ನಾರೀ ಭೇದವನ್ನು ನಾರಿಯ ಅಭೇದವನ್ನು ಸ್ವೀಕರಿಸಲೇಬೇಕು. ನೃಸಿಂಹನಲ್ಲಿ ಮನುಷ್ಯ ಭೇದವನ್ನು ಮನುಷ್ಯನಅಭೇದವನ್ನು ಹೇಳುವುದಿಲ್ಲವೆ? ಮತ್ತು ಲಕ್ಷಣವೊಂದರಲ್ಲಿ ಜಹದ್ಭಿನ್ನತ್ವ ಜಹದಭಿನ್ನತ್ವವನ್ನು ಎಲ್ಲಾಶಾಸ್ತ್ರಕಾರರೂ ಸ್ವೀಕರಿಸಿರುವರು. ಮನುಷ್ಯನಲ್ಲಿ ಧರ್ಮ ವಿರೋಧಿಯಾದ ಅಧರ್ಮವನ್ನು, ಧರ್ಮವನ್ನೂ ಕೂಡ ಎಲ್ಲರೂ ಒಪ್ಪುತ್ತಾರೆ. ಅವೆರಡೂ ಪರಸ್ಪರ ವಿರುದ್ಧ ಧರ್ಮಗಳಲ್ಲವೆ? ಖದ್ಯೋತದಲ್ಲಿ ಪ್ರಕಾಶಕತ್ವಾ ಪ್ರಕಾಶಕತ್ವಗಳು ಕಾಣುವವು. ಅಂದಮೇಲೆ ಭೇದಾಭೇದಗಳೆರಡೂ

ಪರಸ್ಪರ ವಿರುದ್ಧಗಳಾದ್ದರಿಂದ ಅವೆರಡೂ ಕೂಡಿ ಒಂದರಲ್ಲಿರಲಾರದೆಂಬುವ ಮಾತನ್ನು ಹೇಗೆ ನಂಬಬೇಕು? ಸರ್ಪವು ದೀರ್ಘವಾಗಿದ್ದಾಗಲೂ, ಹ್ರಸ್ವ ಅಂದರೆ (ಸುರುಳಿಯಾಗಿದ್ದಾಗಲೂ) ಆಸರ್ಪದಲ್ಲಿ ಸರ್ಪತ್ವವಿರುತ್ತದೆ. ದೀರ್ಘತನ, ಹ್ರಸ್ವತನಗಳೆರಡೂ ಒಂದೇ ಸರ್ಪದಲ್ಲಿ ಕಾಣಿಸುವವು. ಸುರುಳಿಯಾಗಿದ್ದಾಗ ಸರ್ಪದ ಸುರುಳಿಯು ಎಂದು ಭೇದ ತೋರುತ್ತದೆ. ಅದೇ ಸರ್ಪವು ದೀರ್ಘವಾದಾಗ ಮೊದಲು ತೋರಿದ ಕುಂಡಲಾಕಾರವು ಆ ಸರ್ಪದಲ್ಲಡಗಿ ಅಭೇದವು ತೋರುತ್ತದೆ. ಮತ್ತು ಸೂರ್ಯಮಂಡಲದಲ್ಲಿ ಮತ್ತು ಅದರ ಪ್ರಕಾಶದಲ್ಲಿ ಸೂರ್ಯತ್ವವೊಂದೇಯಿದ್ದರೂ ಪ್ರಕಾಶದಲ್ಲಿ ವ್ಯಾಪಕತ್ವವು ಮಂಡಲದಲ್ಲಿ ಪರಿಚ್ಛಿನ್ನತ್ವವು ಕಂಡುಬರುವದು. ಅಂದಮೇಲೆ ಆ ಪರಿಚ್ಛಿನ್ನಸೂರ್ಯನು ಮಿಥ್ಯಾಭೂತನೆಂದು ಹೇಳಲಿಕ್ಕೆ ಹ್ಯಾಗಾದೀತು? ಮತ್ತು ಪಟದಲ್ಲಿರುವ ಸಂಕೋಚತೆಯು, ವಿಸ್ತೃತೆಯು ಇವುಗಳಲ್ಲಿ ಯಾವುದಾದರೊಂದು ಸುಳ್ಳೆನ್ನಬಹುದೆ? ಅನ್ನುವುದಕ್ಕೆ ಬರುವುದಿಲ್ಲ. ‹‹ಬ್ರಹ್ಮವೇದ ಬ್ರಹ್ಮೈವಭವತಿ,, ಜ್ಞಾತ್ವಾಶಿವಂಶಾಂತಿ ಮತ್ಯಂತಮೇತಿ,, ಇವೇ ಮೊದಲಾದ ಶ್ರುತಿಗಳಿಂದ ಶಿವಯೋಗರೂಪವಾದ ಉಪಾಸನದ್ವಾರಾ ಶಿವಭಾವಪ್ರಾಪ್ತಿಯು ಅಂದರೆ ಶಿವಾಭಿನ್ನತ್ವವು ಸಿದ್ಧಿಸುವಕಾರಣ ಭೇದಾಭೇದಗಳಿಗೆ ವಿರೋಧವಿಲ್ಲೆನ್ನುವುದೇ ಸಿದ್ಧಾಂತವು. ಈ ಭೇದಾಭೇದಮತವೇ ಮುಮುಕ್ಷುಗಳಿಗೆ ಗ್ರಾಹ್ಯವು. ಪುರಾಣದಲ್ಲಿಯಾದರೊ' ಶ್ಲೋ|| ಕೇಚಿದ್ವೈತಂ ಪ್ರಶಂಸಂತಿಕೇಚಿದದ್ವೈತವಾದಿನಃ| ದ್ವಯೋಶ್ಶ್ರುತ್ಯೇಕದೇಶತ್ವಾತ್ ಸರ್ವಶ್ರುತಿಸಮನ್ವಯಃ|| ಭೇದಾಭೇದಮತೇ ಶ್ರೌತೈಃ ಪರಿಗ್ರಾಹ್ಯೇ ಮುಮುಕ್ಷುಭಿಃ || ಕೆಲವರು ದ್ವೈತವನ್ನೂ ಕೆಲವರು ಅದ್ವೈತವನ್ನೂ ಹೇಳುವರು. ಭೇದವು ಕೆಲವು ಶ್ರುತಿಗಳಿಂದಲೂ ಅಭೇದವು ಕೆಲವು ಶ್ರುತಿಗಳಿಂದಲೂ ಹೇಳಲ್ಪಟ್ಟಿರುವಕಾರಣ ದ್ವೈತಮತವು ಶ್ರುತಿಯ ಒಂದು ಭಾಗದಲ್ಲಿ ಹೇಳಲ್ಪಟ್ಟಂತಾಯಿತು. ಅದ್ವೈತಮತವೂಕೂಡ ಸರ್ವಶ್ರುತಿಗಳಿಂದ ಹೇಳಲ್ಪಡದೆ ಶ್ರುತಿಯ ಒಂದು ದೇಶದಲ್ಲಿ ಹೇಳಲ್ಪಟ್ಟಂತಾಯಿತು. ವೈದಿಕರೂ ಮುಮುಕ್ಷುಗಳೂ ಆದ ಪುರುಷರಿಂದ ಪರಿಗ್ರಹಿಸಲು ಯೋಗ್ಯವಾದ ದ್ವೈತಾದ್ವೈತವೆಂಬ ವೀರಶೈವಮತವು ಸರ್ವ ಶ್ರುತಿಗಳಿಂದಲೂ ಹೇಳಲ್ಪಟ್ಟಿರುವಕಾರಣ ಇದೇ ಮತದಲ್ಲಿ ಸರ್ವಶ್ರುತಿ ಸಮನ್ವಯವಾಗುತ್ತದೆಂದು ಪುರಾಣ ತಾತ್ಪರ್ಯವು. ಇದೇ ವಿಷಯವು ಸಿದ್ಧಾಂತಶಿಖಾಮಣಿಯಲ್ಲಿಯೂ ಕೂಡ ‹‹ಸರ್ವವೇದಾನುಸಾರಿತ್ವಾ ಚ್ಛೈವತಂತ್ರಂ ವಿಶಿಷ್ಯತೆ›› ಎಂದು ಹೇಳಲ್ಪಟ್ಟಿದೆ. ದ್ವೈತವು ಅಧ್ಯಾಸಕೃತವಾದುದರಿಂದ ಅಧ್ಯಾಸವು ಜ್ಞಾನದಿಂದ ನಷ್ಟವಾಗಲು

ಅದರ ಕಾರ್ಯವಾದ ದ್ವೈತವೂ ಕೂಡ ನಷ್ಟವಾಗುವುದು. ಆದ್ದರಿಂದ ಅಭೇದ ವೊಂದೇ ಪಾರಮಾರ್ಥಿಕವೆಂದು ನಾವು ಹೇಳುತ್ತೇವೆ. ಅಂದರೆ ಅಧ್ಯಾಸವನ್ನು ನಿಮ್ಮ ಮತಕ್ಕೆ ಮೂಲಗಳಾದ ಸೂತ್ರಗಳನ್ನು ರಚಿಸಿರುವ ವ್ಯಾಸರು ಎಲ್ಲಿಯಾ ದರೂ ಪ್ರತಿಪಾದನೆ ಮಾಡಿರುವರೇನು ? ಎಲ್ಲಿಯೂ ಇಲ್ಲ. ಆದ್ದರಿಂದ ಅಧ್ಯಾಸ ಏದೆ ಎಂಬುವದರಲ್ಲೇ ವಿವಾದವು. ''ಅಥಾತೋ ಬ್ರಹ್ಮಜಿಜ್ಞಾಸಾ'' ಎಂಬುವ ಸೂತ್ರದಲ್ಲಿ ಅಧ್ಯಾಸವು ಉಕ್ತವಾಗಿಲ್ಲ. ಆದರೂ ನಿಮ್ಮ ಆಚಾರ್ಯರು ಸೂತ್ರಗಳಿಗೆ ವ್ಯಾಖ್ಯಾನಮಾಡುವ ಆರಂಭದಲ್ಲಿ ಅಧ್ಯಾಸವೊಂದನ್ನು ಸೂತ್ರಕಾರರ ಅಭಿಪ್ರಾ ಯವಿಲ್ಲದಿದ್ದರೂ ಅಂಗೀಕರಿಸಿರುವರು. ಈ ಪ್ರಥಮ ಸೂತ್ರವು ವಿಷಯಸಂಬಂ ಧಾದಿಗಳನ್ನು ಸೂಚಿಸುವುದರಿಂದ ಅರ್ಥಾತ್ ಅಧ್ಯಾಸವು ವ್ಯಾಸರಿಂದ ಅಭಿಪ್ರೇ ತವಾಗಿದೆ. ಹೇಗೆಂದರೆ ಈ ಶಾಸ್ತ್ರಕ್ಕೆ ವಿಷಯವು ಜೀವ ಬ್ರಹ್ಮರುಗಳ ಸ್ವರೂಪೈ ಕ್ಯವು. ಈ ಐಕ್ಯವು ಸಿದ್ಧಿಸಬೇಕಾದರೆ ಜೀವ ಬ್ರಹ್ಮರುಗಳ ಭೇದವು ನಷ್ಟವಾಗ ಲೇಬೇಕು. ಅದು ನಷ್ಟವಾಗದಿದ್ದರೆ ಸ್ವರೂಪತಃ ಐಕ್ಯವೇ ಸಂಭವಿಸುವುದಿಲ್ಲ. ಆದ್ದರಿಂದ ಸ್ವರೂಪೈಕ್ಯವು ಅಧ್ಯಾಸಾಧೀನವಾದುದರಿಂದ ವ್ಯಾಸರು ಅಧ್ಯಾಸ ವನ್ನು ಅರ್ಥಾತ್ ಹೇಳಿದಂತಾಯಿತಲ್ಲವೆ? ಅಂದರೆ ಜೀವ ಬ್ರಹ್ಮರುಗಳಿಗೆ ಸ್ವರೂಪೈಕ್ಯವಿಲ್ಲವು. ಇದು ಶಾಸ್ತ್ರಕ್ಕೆ ವಿಷಯವೂ ಅಲ್ಲ. ವ್ಯಾಸರು ತಮ್ಮ ಸೂತ್ರಗಳಲ್ಲಿ ಎಲ್ಲಿಯೂ ಸ್ವರೂಪೈಕ್ಯವನ್ನು ಹೇಳಿರುವುದಿಲ್ಲ. "ಅಂಶೋ ನಾನಾವ್ಯಪದೇಶಾತ್'' ಎಂಬುವದರಿಂದ ಜೀವ ಬ್ರಹ್ಮರಿಗೆ ಭೇದಾಭೇದವನ್ನೇ ಹೇಳಿರುವರೆಂದು ಸ್ಪಷ್ಟವಾಗುತ್ತದೆ. ಶಿವಯೋಗಶಾಸ್ತ್ರದಲ್ಲಿಯೂಕೂಡ ''ಆತ್ಮಾ ಯಂ ಕೇವಲಂಶುದ್ಧಃ ಶಿವಸ್ಯಾಂಶಸ್ಸದಾಮಲಃ | ಸ್ವಸ್ಮಿನ್ನೇವಸ್ಥಿತಾ ವಿದ್ಯಾ ಮೋಹಿತಃ ಪುರುಷಃ ಸ್ವಕಂ | ಶಿವಾಂಶತ್ವಂ ಸ್ವಕಾಂಶಕ್ತಿಂ ಅವಿಜ್ಞಾಯ'' ಎಂದು ಶಿವಜೀವರುಗಳಿಗೆ ಭೇದಾಭೇದಗಳೇ ಉಕ್ತಗಳಾಗಿವೆ. ಹೇಗೆಂದರೆ ತನ್ನ ಶಕ್ತಿಯನ್ನು ಮರೆತು ನಾನು ಕಿಂಚಿಜ್ಞನೂ, ನಾನು ಸ್ವಲ್ಪಶಕ್ತಿಯುಳ್ಳವನೂ ಎಂಬು ವುದರಿಂದ ಆತ್ಮನು ಬದ್ಧನಾಗುತ್ತಾನೆ. ಅವನೇ ಗುರುಮುಖದಿಂದ ಉಪದೇಶವಂ ಪಡೆದು ಶಾಸ್ತ್ರಾದಿಗಳ ಚಿಂತನೆಯನ್ನು ಮಾಡುತ್ತ ಬರಬು ತನ್ನ ಯಥಾರ್ಥ ಶಕ್ತಿ ಯನ್ನು ತಿಳಿದುಕೊಂಡು ಅಲ್ಪವಾಗಿ ತೋರುತ್ತಿರುವ ತನ್ನ ಶಕ್ತಿಯನ್ನು ವಿಕಾಸ ಗೊಳಿಸಲು ಸರ್ವಜ್ಞನೂ, ಸರ್ವಶಕ್ತಿಯುಳ್ಳ ಪರಮೇಶ್ವರನೂ ಆಗುವನು. ಎಲೈ ಶಿವಾದ್ವೈತಿಯೇ ಭೇದವು ಪಾರಮಾರ್ಥಿಕವೆಂದರೆ ''ನೇಹನಾನಾಸ್ತಿ ಕಿಂಚನ'' ಎಂಬುವ ಶ್ರುತಿಯೂ, ವಾಚಾರಂಭಣಶ್ರುತಿಯೂ, ಭೇದವನ್ನು ನಿಕೆಸಿರಾಕರಿಸು

ವವು. ಅಂದರೆ ಆ ಶ್ರುತಿಗಳು ಭೇದವನ್ನು ನಿರಾಕರಿಸುವುದಿಲ್ಲ. ಆದರೆ ಶಿವಾತಿರಿಕ್ತ ವಸ್ತುವಿಲ್ಲೆಂದು ಹೇಳುತ್ತವೆ. ನಿಮ್ಮಂತೆ ವಿಚಾರಿಸಿದರೂ ಪ್ರತ್ಯಕ್ಷಸಿದ್ಧವಾದ ಭೇದವನ್ನು ಶ್ರುತಿಯು ಹೇಗೆ ಇಲ್ಲವೆಂದು ಹೇಳುತ್ತದೆ. ಶ್ರುತಿಯು ಸರ್ವರ ಪ್ರತ್ಯಕ್ಷಕ್ಕೆ ವಿರುದ್ಧವಾದರೆ ಅದಕ್ಕೆ ಲಕ್ಷ್ಯಾರ್ಥವನ್ನು ಹೇಳಲೇಬೇಕು. ನೀವಾದರೂ "ತತ್ವಮಸಿ" ಎಂಬಲ್ಲಿ ವಾಚ್ಯಾರ್ಥಗಳಿಗೆ ಅಭೇದವು ಪ್ರತ್ಯಕ್ಷಬಾಧಿತವಾಗುವುದರಿಂದಲ್ಲವೇ ಲಕ್ಷ್ಯಾರ್ಥವನ್ನು ಹೇಳುವದು. ಅಂದಮೇಲೆ "ನೇಹನಾನಾ" ಎಂಬಲ್ಲಿ ವಾಚ್ಯಾರ್ಥವು ಪ್ರತ್ಯಕ್ಷಬಾಧಿತವಾಗುವುದರಿಂದ ಲಕ್ಷ್ಯಾರ್ಥವನ್ನು ಏಕೆ ಹೇಳಬಾರದು? ತತ್ವಮಸ್ಯಾದಿ ಶ್ರುತಿಜನ್ಯವಾದ ಜ್ಞಾನದಿಂದ ದ್ವೈತಪ್ರಪಂಚಕ್ಕೆ ಬಾಧೆಯಾಗುವುದರಿಂದ ಭೇದವು ಪಾರಮಾರ್ಥಿಕವಲ್ಲ. ಅಂದರೆ ಎಲೈ ಬ್ರಹ್ಮಾದ್ವೈತಿಯೇ ಶ್ರುತಿಯೂ ಶ್ರುತಿಯಿಂದುಂಟಾದ ಜ್ಞಾನವೂ ಪ್ರಪಂಚದ ಅಂತಃಪಾತಿಗಳಾದ್ದರಿಂದ ಅವುಗಳಿಂದ ಪ್ರಪಂಚಕ್ಕೆ ಬಾಧೆ ಹೇಗೆ? ಬಾಧೆಯನ್ನು ಹೇಳುವುದು ನನ್ನ ತಾಯಿಯು ಬಂಜೆಯು ಎಂಬ ಮಾತಿಗೆ ಸಮಾನವಾಗಿಲ್ಲವೇ? ಆದ್ದರಿಂದ "ನೇಹನಾನಾ ವಾಚಾರಂಭಣಂ" ಮೊದಲಾದ ಶ್ರುತಿಗಳು ಸರ್ವ ಪ್ರಪಂಚಕ್ಕೂ ಕಾರಣದ ಅಭೇದವನ್ನು ಹೇಳುತ್ತವೆಯಲ್ಲದೆ ದ್ವೈತಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುವುದಿಲ್ಲವೆಂದು ಸ್ಪಷ್ಟವಾಗುತ್ತದೆ. ದ್ವೈತಪ್ರಪಂಚವು ಇಲ್ಲವೇ ಇಲ್ಲವೆಂದರೆ "ಆತ್ಮನಿಖಲ್ವರೇದೃಷ್ಟೇಶ್ರುತೇ ಮತೇ ವಿಜ್ಞಾತೇ ಇದಂಸರ್ವಂವಿದಿತಂ" ಆತ್ಮಜ್ಞಾನದಿಂದ ಸಮಸ್ತ ಜಗತ್ತಿನ ಜ್ಞಾನವಾಗುವುದು. ಎಂದು ಹೇಳಿದ ಪ್ರತಿಜ್ಞಾವಾಕ್ಯವು ಹೇಗೆ ಸಂಗತವಾಗುವದು. ಆತ್ಮಜ್ಞಾನದಿಂದ ಪ್ರಪಂಚಕ್ಕೆ ಬಾಧೆಯುಂಟಾದಮೇಲೆ ಅದರ ಜ್ಞಾನವೆಲ್ಲಿ? ಘಟವಿದ್ದರಷ್ಟೇ ಘಟಜ್ಞಾನವು, ಘಟವೇ ನಷ್ಟವಾಗಿದ್ದರೆ ಅದರ ಜ್ಞಾನವು ಹೇಗಾಗಬೇಕು? ಕೇವಲ ಅಭೇದವಾದಿಯಾದ ಎಲೈ ಬ್ರಹ್ಮಾದ್ವೈತಿಯೇ ಭೇದಾಭೇದಗಳಿಗೆ ವಿರೋಧವಿರುವುದರಿಂದ ಭೇದವು ಪಾರಮಾರ್ಥಿಕವಲ್ಲೆಂದು ಹೇಳುತ್ತೀಯಷ್ಟೆ? ಹಾಗಾದರೆ ನಿನಗೆ ಭೇದಾಭೇದ ಜ್ಞಾನವಿದ್ದಂತಾಯಿತು. ಈ ಭೇದಾಭೇದಗಳ ಜ್ಞಾನವಿಲ್ಲದಿದ್ದರೆ ಅವುಗಳಿಗೆ ವಿರೋಧವೆಂಬ ಜ್ಞಾನವೇ ನಿನಗುಂಟಾಗದೆ ಹೋಗಬೇಕು. ಆದ್ದರಿಂದ ನೀನು ಹೇಳುವ ಭೇದಾಭೇದ ಜ್ಞಾನದಲ್ಲಿ ಹೇಗೆ ಭೇದಾಭೇದಗಳಿರುವವೋ ಹಾಗೇನೆ ಜ್ಞಾನಸ್ವರೂಪನಾದ ಶಿವನಲ್ಲಿಯೂ ಭೇದಾಭೇದವು ಏಕೆ ಇರಬಾರದು. ಆದುದರಿಂದಲೇ ಶ್ಲೋ॥ ಶ್ರುತ್ಯೈಕದೇಶಸ್ಯಾಮಾಣ್ಯಾಂ ದ್ವೈತಾದ್ವೈತಮತಾದಿಷು ದ್ವೈತಾದ್ವೈತಮುಕ್ತೇಶುದ್ಧೆ ವಿಶೇಷಾದ್ವೈ

ತಸೌಜ್ಞಿಕೆ ವೀರಶೈವೈಕಸಿದ್ಧಾಂತೇ ಸರ್ವಶ್ರುತಿಸಮನ್ವಯಃ” ದ್ವೈತಮತದಲ್ಲಿಯೂ ಅದ್ವೈತಮತದಲ್ಲಿಯೂ ಶ್ರುತಿಗಳಿಗೆ ಏಕದೇಶಪ್ರಾಮಾಣ್ಯವಿರುವುದು ವಿಶೇಷಾದ್ವೈತವೆಂತಲೂ, ದ್ವೈತಾದ್ವೈತವೆಂತಲೂ ಕರೆಯಿಸಿಕೊಳ್ಳುವ ಶುದ್ಧವಾದ ವೀರಶೈವಮತದಲ್ಲಿ ಸರ್ವಶ್ರುತಿಗಳಿಗೂ ಸಮನ್ವಯವಾಗುವುದು ಎಂದು ಹೇಳಿರುವಕಾರಣ ವೀರಶೈವರ ದ್ವೈತಾದ್ವೈತಸಿದ್ಧಾಂತವೇ ಮುಮುಕ್ಷುಗಳಿಗೆ ಪರಿಗ್ರಹಿಸಲು ಯೋಗ್ಯವಾದುದೆಂದು ಸ್ಪಷ್ಟವಾಗುವುದು.

ಇನ್ನು ಪಂಚ ದೇವತೆಗಳ ಉಪಾಸನೆ ಮಾಡುವುದು ಉತ್ತಮ ಮಾರ್ಗವೋ ಮಹೇಶ್ವರನೊಬ್ಬನನ್ನೇ ಉಪಾಸನೆ ಮಾಡುವುದು ಉತ್ತಮಮಾರ್ಗವೋ ಎಂಬುವ ಐದನೇ ವಿಚಾರವನ್ನು ಮಾಡುವೆವು.

“ಆದಿತ್ಯಮಂಬಿಕಾಂವಿಷ್ಣುಂ ಗಣನಾಥಂ ಮಹೇಶ್ವರಂ” ಎಂಬ ಸ್ಮೃತಿಯಂತೆ ಸೂರ್ಯ, ದೇವಿ, ವಿಷ್ಣು, ಗಣಪತಿ, ಮಹೇಶ್ವರ ಈ ಐದು ದೇವತೆಗಳಲ್ಲಿ ತಮ್ಮ ಮನಸ್ಸಿಗೆ ಬಂದಂತೆ ಯಾವುದಾದರೊಂದು ಮೂರ್ತಿಯನ್ನು ಪ್ರಧಾನವಾಗಿ ಪೂಜಿಸುವುದೂ ಮಿಕ್ಕ ದೇವತೆಗಳನ್ನು ಅಪ್ರಧಾನವಾಗಿ ಪೂಜಿಸುವುದೂ ವಿದ್ವಾಂಸರ ಮಾರ್ಗವಲ್ಲ. ಎಲ್ಲಾ ದೇವತೆಗಳಲ್ಲಿ ಸಮಾನ ಬುದ್ಧಿಯಿದ್ದು ಒಂದನ್ನು ವಿಶೇಷವಾಗಿಯೂ ಮತ್ತೊಂದನ್ನು ಗೌಣವಾಗಿಯೂ ಪೂಜಿಸಿದರೆ ದೇವತೆಗಳ ಕೋಪಕ್ಕೆ ಪಾತ್ರರಾಗಬೇಕಾದೀತು ಮಹೇಶ್ವರನನ್ನು ಬಾಕಿ ದೇವತೆಗಳಂತೆ ತಿಳಿಯುವುದು ಅನರ್ಥಕ್ಕೆ ಕಾರಣವು. ಮಹೇಶ್ವರನಿಗೂ ಇನ್ನುಳಿದ ದೇವತೆಗಳಿಗೂ ಸಮಾನತೆಯನ್ನು ತೋರಿಸಿದರೆ ದೋಷ ಬರುವುದೆಂದು ಗ್ರಂಥಗಳಲ್ಲಿ ಉಕ್ತವಾಗಿರುವುದಲ್ಲದೆ. “ನತತ್ಸಮಶ್ಚಾಪ್ಯಧಿಕಶ್ಚದೃಶ್ಯತೆ” ಎಂಬುವ ಶ್ರುತಿಗಳಿಗೂ ವಿರುದ್ಧವಾಗುವುದು. “ಪರಾತ್ಪರ ತರೋಹೀಶಸ್ತಸ್ಮಾತ್ತುಲ್ಯೋಧಿಕೋನಹಿ | ತಸ್ಮಾತ್ ಸರ್ವಾನ್ಪರಿತ್ಯಜ್ಯ ಹೇಯಾನ್ವಿಷ್ಣ್ವಾಧಿಕಾನ್ಸುರಾನ್ | ಶಿವಏವಸದಾಧ್ಯೇಯಃ ಶಿವಏಕಶ್ಶಿವಂಕರಃ” ಇವೇ ಮೊದಲಾದ ಶ್ರುತಿಗಳಿಗೂ ವಿರುದ್ಧವಾಗುವುದು. ಆದುದರಿಂದ ಶ್ರುತಿವಿರುದ್ಧವಾದ ಸ್ಮೃತಿವಾಕ್ಯವು ವೈದಿಕರಾದ ವೀರಶೈವರಿಗೆ ಮಾನ್ಯವಲ್ಲವು. ಮತ್ತು ಉಪಾಸನಾಕಾಲದಲ್ಲಿ ಪಾತಿವ್ರತ್ಯ ಸ್ವಭಾವದಿಂದ ಒಂದೇ ದೇವರನ್ನು ಉಪಾಸನೆ ಮಾಡಿದರೆ ಆ ದೇವರ ಅನುಗ್ರಹವಾಗುವುದು. ಈ ವಿಷಯದಲ್ಲಿ “ಪತಿವ್ರತಾಸ್ವಭಾವೇನ ವಿಹಾಯಾನ್ಯತ್ತುದೈವತಂ ಶಿವಮೇಕಂಭಜೇದ್ಭಕ್ತ್ಯಾ ಸರ್ವಶಾಂತಿಕರಂಪರಂ” ಎಂಬ ಸ್ಕಾಂದೋಕ್ತಿಯೂ ಪ್ರಮಾಣವಾಗಿದೆ. ಒಬ್ಬ

ಸ್ತ್ರೀಯಳು ತನ್ನ ಗಂಡನಲ್ಲಲ್ಲದೆ ಬೇರೆಯವನಲ್ಲಿ ಪ್ರೀತಿಯನ್ನಿಟ್ಟರೆ ತನ್ನ ಪತಿಯ ಪ್ರೀತಿಯು ಉಳಿಯುವುದೇನು ? ಮತ್ತು ಲೋಕದಲ್ಲಿಯೂ ನಿಂದ್ಯಳಾಗುವಳು. ಐದು ಜನರನ್ನು ಪತಿಗಳನ್ನಾಗಿಯೇ ವರಿಸಿ ಐವರಲ್ಲಿಯೂ ಪ್ರೀತಿಯಿಟ್ಟರೆ ಅವಳಿಗೆ ಯಾವ ಕುಂದಕವೂ ಇಲ್ಲದಿರುವಂತೆ ಐದು ದೇವತೆಗಳೂ ನನಗೆ ಪತಿಗಳೇ ಎಂದು ಅವರನ್ನು ಏಕೆ ಪೂಜಿಸಬಾರದು ? ಹಾಗಾದರೂ ಎಲ್ಲಿಯದೆ. ಅವರಲ್ಲಿ ಒಬ್ಬನನ್ನು ಮುಖ್ಯವಾಗಿಯೂ ಮತ್ತುಳಿದವರನ್ನು ಗೌಣವಾಗಿಯೂ ಮಾಡುವುದುಂಟಲ್ಲವೆ ? ಒಬ್ಬ ಸ್ತ್ರೀಯಳು ಐದು ಜನರನ್ನು ಗಂಡರನ್ನಾಗಿ ಮಾಡಿಕೊಳ್ಳುವುದಕ್ಕೆ ಕಲಿಯುಗದಲ್ಲಿ ಶಾಸ್ತ್ರ ಮತ್ತು ರೂಢಿಯಾದರೂ ಎಲ್ಲಿದೆ ? ಒಬ್ಬಳಿಗೆ ಒಬ್ಬನೇ ಗಂಡನಾಗುವುದು ಯುಕ್ತವಲ್ಲವೆ ? ಯುಕ್ತವೆಂದು ಒಪ್ಪಿದರೆ ಪಂಚದೇವತೆಗಳ ಉಪಾಸನೆಯು ಹೇಗೆ ಸಿದ್ಧವಾಗುವುದು. ನಮ್ಮಂತೆ ಕಾರ್ಯಕೋಟಿಯಲ್ಲಿ ಪ್ರವಿಷ್ಟರಾದ ಚತುರ್ಮುಖಾದಿಗಳ ಪಂಗ್ತಿಯಲ್ಲಿ ಸೇರಿಸಿ ಪರಮದಯಾಳುವಾದ ಶಿವನನ್ನು ಸಾಮಾನ್ಯ ದೇವತೆಗಳಂತೆ ತಿಳಿಯುವುದು ಎಂಥ ಪಾಪಕಾರ್ಯವು. ‹‹ಬ್ರಹ್ಮವಿಷ್ಣುರುದ್ರೇಂದ್ರಾಸ್ತೆ ಸಂಪ್ರಸೂಯಂತೆ›› ಎಂಬುವ ಶ್ರುತಿಯೂಕೂಡ ಪರಶಿವನಿಂದಲೇ ಬ್ರಹ್ಮಾದಿ ದೇವತೆಗಳು ಉತ್ಪನ್ನರಾಗಿದ್ದಾರೆಂದು ಹೇಳುತ್ತದೆ. ಅಂದಮೇಲೆ ಆ ಪರಮ ಕಾರಣನಾದ ಮಹೇಶ್ವರನಲ್ಲಿಯೂ ಉಳಿದ ದೇವತೆಗಳಲ್ಲಿಯೂ ಸಮಾನವಾದ ಅಭೇದ ಬುದ್ಧಿಯನ್ನಿಡುವುದು ವಿವೇಕಿಗಳಿಗೆ ಕರ್ತವ್ಯವಲ್ಲ. ಕೆಲವು ಶ್ರುತಿಗಳೇನೋ ಮುಕ್ತಿದಶೆಯಲ್ಲಿ ಶಿವನೊಡನೆ ಪ್ರಪಂಚಕ್ಕೆ ಅಭೇದವನ್ನು ಹೇಳುವಂತೆ ಪರಶಿವನಿಗೂ ಇತರ ದೇವತೆಗಳಿಗೂ ಅಭೇದವನ್ನು ಹೇಳಿರಬಹುದು. ಆದರೂ ಕಾರ್ಯಕಾರಣಗಳಿಗೆ ಅಭೇದದೃಷ್ಟಿಯಿಂದ ಹೇಳಿರಬೇಕೆಂದು ತಿಳಿಯಬೇಕಲ್ಲದೆ ಸ್ವರೂಪೈಕ್ಯವನ್ನು ತಿಳಿಯುವುದಕ್ಕಾಗುವುದಿಲ್ಲ. ಸ್ವರೂಪೈಕ್ಯವೇಯಿದ್ದರೆ ‹‹ಅಂಶೊನಾನಾವ್ಯಪದೇಶಾತ್›› ಎಂದು ವ್ಯಾಸರು ಸೂತ್ರಿಸುತ್ತಿದ್ದಿಲ್ಲ. ಮತ್ತು ಸ್ವರೂಪೈಕ್ಯವನ್ನೇ ತಿಳಿದರೆ ಐದರಲ್ಲಿ ಯಾವುದಾದರೊಂದನ್ನು ಇಟ್ಟುಕೊಂಡರೆ ಸಾಕಲ್ಲವೆ? ಐದನ್ನೂ ಏಕೆ ಪೂಜಿಸಬೇಕು. ಐದು ದೇವತೆಗಳಿಗೆ ಭೇದವಿಲ್ಲವೆನ್ನುವುದೂ ಮತ್ತೆ ಅವುಗಳಲ್ಲಿ ಗೌಣಮುಖ್ಯಭಾವವನ್ನು ಕಲ್ಪಿಸುವುದೂ ಎಂಥ ಅಸಂಬಂಧವು. ‹ ಜೀವಮುಖ್ಯಪ್ರಾಣಲಿಂಗಾನ್ನೇತಿಚೇನ್ನ ಉಪಾಸತ್ರೈವಿಧ್ಯಾದಾಶ್ರಿತತ್ವಾದಿಹತದ್ಯೋಗಾತ್›› ಎಂಬುವ ಸೂತ್ರದಿಂದ ಉಪಾಸನೆಯು ಮೂರುಪ್ರಕಾರ ಹೇಳಲ್ಪಡುತ್ತದೆಯೇ ಹೊರತು ಐದು ದೇವತೆಗಳ ಉಪಾಸನೆಯು ಬ್ರಹ್ಮಸೂತ್ರಗಳಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲವಾದ್ದರಿಂದ

ಸ್ಥಾನಭೇದದಿಂದ ಪರಶಿವನೊಬ್ಬನೇ ಇಷ್ಟ ಪ್ರಾಣ ಭಾವಲಿಂಗಗಳ ಸ್ವರೂಪ ನಾದುದರಿಂದ ಯಾವ ಯಾವ ಸ್ಥಾನದಲ್ಲಿ ಯಾವ ಯಾವ ಲಿಂಗವೋ ಆಯಾಯ ಲಿಂಗವನ್ನು ಉಪಾಸನೆ ಮಾಡಬೇಕು. ತ್ರಿವಿಧ ಉಪಾಸನೆಗಳೇ ಮೇಲಣ ಬ್ರಹ್ಮ ಸೂತ್ರದಿಂದ ಉಕ್ತಗಳಾದವಲ್ಲದೆ ಪಂಚದೇವತೆಗಳ ಉಪಾಸನೆಗಳು ಉಕ್ತಗಳಾ ಗಲಿಲ್ಲ. ಭಕ್ತರಿಗೆ ಚಿಂತಾಮಣಿರೂಪನಾದ ಪರಶಿವನೊಬ್ಬನೇ ಭಕ್ತರ ಇಷ್ಟಾರ್ಥ ವನ್ನು ಕೊಡುವುದಕ್ಕೆ ಸಿದ್ಧನಾಗಿರಲು ಮತ್ತೊಂದನ್ನು ಏಕೆ ಸೇವಿಸಬೇಕು. ಎಲೈ ಶಿವಾದ್ವೈತಿಯೇ ಆ ಪರಶಿವ ಬ್ರಹ್ಮದಲ್ಲಿ ಇಂಥ ಶಕ್ತಿಯು ಎಲ್ಲಿಂದ ಬರ ಬೇಕು. "ಏಕಮೇವಾದ್ವಿತೀಯಂ ಸತ್ಯಂ ಜ್ಞಾನಮಾನಂದಂ" ಇತ್ಯಾದಿ ಶ್ರುತಿ ಗಳಿಂದ ತನಗೆ ಸಜಾತೀಯವಾದ ಮತ್ತೊಂದು ಪದಾರ್ಥವಿಲ್ಲ. ತನಗೆ ವಿಜಾತೀ ಯವಾದ ಮತ್ತೊಂದಿಲ್ಲ. ವೃಕ್ಷದಲ್ಲಿ ಪತ್ರ ಶಾಖಾದಿಗಳಿರುವಂತೆ ಪರಶಿವ ಬ್ರಹ್ಮ ದಲ್ಲಿ ಸ್ವಗತವಾದ ಯಾವುದೊಂದೂ ಇಲ್ಲವೆಂದು ತಿಳಿಯುತ್ತದಲ್ಲವೆ. ಹಾಗಾದರೆ ಕಾಣುವ ಜಗತ್ತು ಎಲ್ಲಿಂದ ಬಂತು ? ಇದನ್ನು ನೋಡಿದರೆ ಅವನಲ್ಲಿ ಒಂದು ವಿಚಿ ತ್ರಶಕ್ತಿಯಿದೆ ಎಂದು ಗೊತ್ತಾಗುವುದಿಲ್ಲವೇನು? ಶಿವಾದ್ವೈತಿಯೇ ಈ ಮಾತು ನಿಜವು. ಅವನಲ್ಲಿ ಮಿಥ್ಯಾಭೂತವಾದ ಅವಿದ್ಯಾಶಕ್ತಿಯಿದೆ ಎಂದು ಹೇಳುತ್ತೇನೆ. ಆ ಅವಿದ್ಯಾ ಶಕ್ತಿಯಿಂದಲೇ ಈ ಜಗತ್ತು ಉಂಟಾಯಿತು. ಬ್ರಹ್ಮಾದ್ವೈತಿಯೇ ಅವಿದ್ಯಾಶಕ್ತಿಯು ಎಲ್ಲಿದ್ದುಕೊಂಡು ಈ ಜಗತ್ತನ್ನು ಮಾಡಿತು? ಬ್ರಹ್ಮದಲ್ಲಿದ್ದು ಕೊಂಡೇ ಮಾಡಿತೆಂದರೆ ಬ್ರಹ್ಮವು ನಿರಾಕಾರ ನಿರಂಶನೆಂದು ಹೇಳುವುದಿಲ್ಲ ವೇನು ? ಹೇಳುತ್ತೇವೆಯೆಂದರೆ ನಿರಂಶದಲ್ಲಿ ಮತ್ತೊಂದು ಹೇಗೆಯಿರುತ್ತದೆ. ಇದಕ್ಕೆ ಲೋಕದಲ್ಲಿ ಯಾವುದಾದರೂ ಒಂದು ದೃಷ್ಟಾಂತವನ್ನು ತೋರಿಸುವಿಯಾ ಏಕೆ, ನೀಲಪೀತಾದಿ ರೂಪಗಳು ನಿರಂಶಗಳಿದ್ದು ಅವುಗಳಲ್ಲಿ ಸತ್ತಾದಿಗಳನ್ನು ಪರ ಮಾಣುಗಳು ನಿರಂಶಗಳಿದ್ದು ಅವುಗಳಲ್ಲಿ ರೂಪಾದಿಗಳನ್ನೂ ನೈಯ್ಯಾಯಿಕರು ಮಾನಿಸುತ್ತಾರಷ್ಟೆ? ಹಾಗಾದರೆ ಎಲೈ ಬ್ರಹ್ಮಾದ್ವೈತಿಯೆ ನೈಯ್ಯಾಯಿಕರು ನಿರಂಶಗಳಾದ ಪರಮಾಣುಗಳಿಗೆ ವಾಸ್ತವಿಕವಾದ ಸಂಯೋಗ ಸಂಬಂಧವನ್ನು ಸ್ವೀಕರಿಸಿ ಅದರಿಂದ ದ್ವ್ಯಣುಕಾದಿ ಕ್ರಮದಿಂದ ಸೃಷ್ಟಿಯನ್ನು ಹೇಳುವರು. ಇದರಂತೆ ನೀವು ನಿರಂಶಬ್ರಹ್ಮಕ್ಕೆ ಮತ್ತೊಂದರ ಸಂಬಂಧವನ್ನು ಹೇಳುತ್ತೀ ರೇನು ? ಇಲ್ಲ. ಹಾಗಾದರೆ ಆ ದೃಷ್ಟಾಂತವನ್ನು ನೀವೇಕೆ ತೆಗೆದುಕೊಳ್ಳು ವಿರಿ. ನಿಮ್ಮ ಭಾಷ್ಯಕಾರರು ನಿರಂಶಗಳಿಗೆ ಸಂಯೋಗವು ಸಂಭವಿಸುವುದಿಲ್ಲ ವೆಂದು ಖಂಡನೆ ಮಾಡಿರುವುದು ನಿಮಗೆ ಗೊತ್ತಿಲ್ಲವೇನು? ಖಂಡಿಸಿರುವದು

ನಿಜವು. ಆದರೇನಾಯಿತು, ಅಂದರೆ ಬ್ರಹ್ಮಾದ್ವೈತಿಯೆ ನಿರವಯವ ಬ್ರಹ್ಮದಲ್ಲಿ ನಿಮ್ಮ ಅವಿದ್ಯೆಯು ಸಂಯೋಗದಿಂದ ಇರಲಾರದೆಂದು ಒಪ್ಪಿಕೊಂಡಂತಾಯಿತು. ಸಂಯೋಗವಿರಬೇಕಾದರೆ ಊರ್ಧ್ವಾಧೋ ದೇಶಗಳು ಬೇಕೆಂದು ಹೇಳಿದಂತಾಯಿತು. ನಾವು ಬ್ರಹ್ಮದಲ್ಲಿ ಅವಿದ್ಯೆಯು ಸಂಯೋಗದಿಂದಿರುತ್ತದೆಂದು ಹೇಳುವುದಿಲ್ಲ. ಕಲ್ಪಿತವಾದೊಂದು ಸಂಬಂಧವನ್ನು ಹೇಳುತ್ತೇವೆ. ಅಂದರೆ ಮೊದಲು ಅವಿದ್ಯೆಗೆ ಇರಲಿಕ್ಕೆ ಸ್ಥಾನ ಸಿಕ್ಕರಲ್ಲವೆ ಅವಿದ್ಯೆಯನ್ನು ಕಲ್ಪನೆಮಾಡುವುದು. ಸ್ಥಾನವೇ ಇಲ್ಲದಿದ್ದ ಪಕ್ಷದಲ್ಲಿ ಕಲ್ಪನೆ ಮಾಡುವ ಬಗೆ ಹೇಗೆ? ಆದ್ದರಿಂದ ಪರಶಿವನಲ್ಲಿ ಸತ್ಯವಾದ, ಬೇಡಿದವರಿಗೆ ಇಷ್ಟಾರ್ಥವನ್ನು ಕೊಡುವ, ಸಾಮರ್ಥ್ಯವಿದೆಯೆಂದು ಹೇಳಬೇಕು. ಆದ್ದರಿಂದಲೇ ಶ್ಲೋ|| ಚಿಂತಾಮಣೌ ಸ್ವರೂಪೇಣ ನ ಕಿಂಚಿದುಪಲಭ್ಯತೆ || ಅಥ ಚಾಭಿಮತಂಸೂತೆ ಬ್ರಹ್ಮೈವಂ ಸರ್ವಶಕ್ತಿಕಂ || ಅಂದರೆ ಚಿಂತಾಮಣಿಯನ್ನು ಕೈಯ್ಯಲ್ಲಿಟ್ಟುಕೊಂಡು ಚನ್ನಾಗಿ ನೋಡಿದರೆ ಅದರ ಸ್ವರೂಪದಲ್ಲಿ ಏನೊಂದು ಫಲವೂ ಕಂಡುಬರುವುದಿಲ್ಲ. ಅದೇ ಚಿಂತಾಮಣಿಯನ್ನು ಪವಿತ್ರವಾದ ಭೂಮಿಯಲ್ಲಿಟ್ಟು ಆಯಾಯ ಫಲಗಳ ಸಂಕಲ್ಪವಂ ಮಾಡಿದ್ದಾದರೆ ಆ ಚಿಂತಾಮಣಿಯು ಸಂಕಲ್ಪಕ್ಕೆ ತಕ್ಕಂತೆ ಫಲವನ್ನು ಕೊಡುವಂತೆ ಬ್ರಹ್ಮವು ಸರ್ವಫಲವನ್ನು ಕೊಡುವ ಶಕ್ತಿಯುಳ್ಳದ್ದಾಗಿದೆ ಎಂಬುವ ಪ್ರಾಮಾಣಿಕರ ಮಾತು ಸಂಗತವಾಗುತ್ತದೆ. ಮತ್ತು ‹‹ಪರಾಸ್ಯಶಕ್ತಿರ್ವಿವಿಧೈವಶ್ರೂಯತೆ ಸ್ವಾಭಾವಿಕೀಜ್ಞಾನಬಲಕ್ರಿಯಾಚ›› ಎಂಬುವ ಶ್ರುತಿಯಿಂದಲೂ ಶಿವನ ಶಕ್ತಿಯು ಯಥಾರ್ಥವಾದದ್ದು (ಸತ್ಯವಾದದ್ದು) ಶಿವಸ್ವರೂಪವಾದದ್ದು ಎಂದು ಗೊತ್ತಾಗುತ್ತದೆ. ಎಲೈ ಶಿವಾದ್ವೈತಿಯೆ ಪಂಚದೇವತೆಗಳನ್ನು ಉಪಾಸನೆ ಮಾಡಬಾರದು ಎಂಬದಾಗಿ ನಿಮ್ಮ ಅಭಿಪ್ರಾಯವಿದ್ದರೆ ನಿಮ್ಮ ಮತೀಯರಲ್ಲಿಯೇ ಕೆಲವರು ಕಾಮ್ಯಫಲಗಳಿಗೋಸ್ಕರ ಶಕ್ತಿ, ಗಣಪತಿ ಮೊದಲಾದುವುಗಳ ಉಪಾಸನೆ ಮಾಡುತ್ತಾರೆ. ಅಂದರೆ ನಮ್ಮ ವೀರಶೈವ ಮತೀಯರಲ್ಲಿ ಕೆಲವು ಮೂಢರು ದೇವಿಯ ಪೂಜಾ ಸ್ತುತಿ ಮೊದಲಾದುವುಗಳನ್ನು ಮಹಾನವಮಿ ಮೊದಲಾದ ತಿಥಿಗಳಲ್ಲಿ ಮಾಡುವುದುಂಟು ಆದರೂ ಅದು ನಮ್ಮ ವೀರಶೈವಶಾಸ್ತ್ರದಲ್ಲಿ ವಿಹಿತವಲ್ಲ. ಪರಮ ಮುಕ್ತಿಯನ್ನೇ (ನಿತ್ಯಸುಖವನ್ನು) ಕೊಡತಕ್ಕ ಪರಶಿವ ಲಿಂಗದಲ್ಲಿ ಅಲ್ಪವಾದ ವಿಷಯ ಸುಖವನ್ನು ಕೊಡುವ ಸಾಮರ್ಥ್ಯವಿಲ್ಲವೇನು? ಇದ್ದೇ ಇರುವುದು. ಇದರಮೇಲೆ ದೇವಿಯನ್ನು ಏಕೆ ಪೂಜಿಸಬೇಕು? ಆ ದೇವಿಯ ಪೂಜೆಗೋಸ್ಕರ ತಯಾರಿಸಿಕೊಂಡಿದ್ದ ಕುಂಕುಮವನ್ನಾದರೂ ಏಕೆ ಹಚ್ಚಿಕೊಳ್ಳಬೇಕು? ಮುಖ್ಯ

ವಾಗಿ ನಮ್ಮ ವೀರಶೈವರಿಗೆ ಧರಿಸಲು, ಪೂಜಿಸಲು ಅಷ್ಟಾವರಣಗಳೇ ಯೋಗ್ಯ ಗಳಲ್ಲವೆ? ಗುರು ಲಿಂಗ ಜಂಗಮರನ್ನಲ್ಲದೆ ಉಳಿದ ದೇವತೆಗಳನ್ನು ಪೂಜಿಸುವ ವನು ವೀರಶೈವನೆನಿಸಲಾರನು. ಇದನ್ನು ತಿಳಿದಿದ್ದರೂ ಭಸ್ಮವನ್ನು ಧರಿಸಿಕೊಂ ಡು ಅದರ ಮೇಲೆ ದೇವಿಯ ಕುಂಕುಮ ಬಂಡಾರವನ್ನು ಹಚ್ಚಿಕೊಂಡು ನಾವು ಶಿವಭಕ್ತರು ವೀರಶೈವರು ಎಂದು ಹೇಳುವದೇಕೆ? ದೇವಿಯ ಭಕ್ತರು ಎಲ್ಲ ಮ್ಮನ ಪೂಜಾರಿಗಳು ಎಂದು ಹೇಳುವುದು ವಿಹಿತವಲ್ಲವೆ? ಆದ್ದರಿಂದ ಎಲ್ಲೈ ಬ್ರಹ್ಮದ್ವೈತಿಯೇ ಲಿಂಗಧಾರಿಗಳಂತೂ ದೇವಿಯನ್ನು ಪೃಥಕ್ಕಾಗಿ ಪೂಜಿಸು ವುದು ಪಾಪಕ್ಕೇನೆ ಕಾರಣವಲ್ಲದೆ ಫಲವೇನೂ ಇಲ್ಲ. ಏಕೆಂದರೆ ಗುರುವು ಲಿಂಗವನ್ನು ಕೊಡಬೇಕಾದರೆ, ಎಲ್ಲೈ ಶಿಷ್ಯನೇ ಲಿಂಗ ಗುರು ಜಂಗಮರನ್ನ ಲ್ಲದೆ ಬೇರೆ ದೇವತೆಗಳನ್ನು ಪೂಜಿಸಬೇಡ. ಭಸ್ಮವನ್ನು ಧರಿಸಿಕೊಳ್ಳುವುದಲ್ಲದೆ ಬೇರೆ ಕುಂಕುಮ ಭಂಡಾರಗಳನ್ನು ಧರಿಸಬೇಡ. ಈ ಪ್ರಕಾರವಾಗಿ ಆಗಮಗ ಳಲ್ಲಿ ಶಿವನ ವಾಕ್ಯಗಳಿರುವುವು. ಎಂದು ಆಜ್ಞೆ ಮಾಡಿಯೇ ಕೊಟ್ಟಿರುತ್ತಾನೆ. ಆದ್ದರಿಂದ ದೇವಿಯನ್ನು ಪೃಥಕ್ಕಾಗಿ ಪೂಜಿಸುವವರು ಗುರುದ್ರೋಹಿಗಳೂ, ಶಿವ ದ್ರೋಹಿಗಳೂ ಆಗುವರು. ಇದೇ ಅಭಿಪ್ರಾಯವನ್ನು „ವಿಹಾಯ ಸಾಂಬಮಾ ಶಾಸಂಯುಜಂತೆ ದೇವತಾಂತರಂ ತೇಮಹಾಘೋರನರಕೆ ಪತಂತ್ಯೇವನಸಂಶ ಯಃ" ಎಂದು ಪಾರಾಶರ ಪುರಾಣವೂ ಹೇಳಿರುವದು.

ಎಲ್ಲೈ ಬ್ರಹ್ಮದ್ವೈತಿಯೇ, ಶ್ಲೋ॥ ಲಿಂಗ ಮಧ್ಯೆ ಜಗತ್ಸರ್ವಂತ್ರೈ ಲೋಕ್ಯಂಸಚರಾಚರಂ ಲಿಂಗಬಾಹ್ಯಾತ್ಪರಂನಾಸ್ತಿ ॥ ಎಂಬ ಉಕ್ತಿಯಂತೆ ಲಿಂಗದಲ್ಲಿಯೇ ಸಮಸ್ತದೇವರುಗಳು, ಎಲ್ಲ ಪ್ರಪಂಚವು ಇದ್ದಮೇಲೆ ಲಿಂಗಕ್ಕೆ ಪೃಥಕ್ಕಾಗಿ ದೇವಿ ಎಲ್ಲಿಂದ ಬಂದಳು? ಬೇರೆಯಾಗಿರುವುದಿಲ್ಲ. ಆದ್ದರಿಂದ ವೀರಶೈವರು ಇತರ ದೇವತೆಗಳನ್ನು ಪೂಜಿಸುವದು ಶಿವಮತಕ್ಕೆ ವಿರುದ್ಧವು. ಕೆಲವರು ಪೂಜಿಸುವರೆಂಬುವ ದೃಷ್ಟಾಂತವನ್ನು ನೀನು ಹೇಳತಕ್ಕದ್ದಲ್ಲ. ಇದರಲ್ಲಿ ಅಪ್ಪಯ್ಯ ದೀಕ್ಷಿತರೂ ಕೂಡ ತಮ್ಮ ಕುವಲಯಾನಂದದಲ್ಲಿ— ಶ್ಲೋ॥ ತ್ವಯಿಸತಿ ಶಿವ ದಾತರ್ಯಸ್ಮದಭ್ಯರ್ಥಿತಾನಾಂ ಇತರ ಮನುಸರಂತೊ ದರ್ಶಯಂತೋರ್ಥಿಮುದ್ರಾಂ ॥ ಚರಮಚರಣ ಘಾತೈರ್ದುಗ್ರ್ದಹಂ ದೋ ಗ್ಧುಕಾಮಾಃ ಕರಭಮನುಸರಾಮಃ ಕಾಮಧೇನೌಸ್ಥಿತಾಯಾಂ ॥ ಅಂದರೆ ಎಲೈ ಸ್ವತಃಪ್ರಕಾಶವಾದ ಶಕ್ತಿಯಿಂದ ಕೂಡಿದ ಪರಶಿವನೆ ನೀನು ನಮ್ಮಗಳ ಇಷ್ಟಾರ್ಥವನ್ನು ಕೊಡುವವನಾಗಿರುತ್ತಿರಲಿಕ್ಕೆ ನಿನ್ನನ್ನು ಬಿಟ್ಟು ಇತರ ಕ್ಷುದ್ರ

ಪ್ರಾಣಿಗಳನ್ನನುಸರಿಸಿ, ಆ ಕ್ಷುದ್ರಮಾನವರೆದುರಿಗೆ ಯಾಚಕ ಮುದ್ರೆಯನ್ನು ತೋರಿಸುವುದು ಹ್ಯಾಗಾಗುತ್ತದಂದರೆ ಕಾಮಧೇನುವು ಸಮಿಾಪದಲ್ಲಿರುತಿರಲಿಕ್ಕೆ ಹಿಂಗಾಲುಗಳಿಂದ ಒದೆಯುತ್ತಿರುವ ಹಿಡಿಯಲಿಕ್ಕೆ ಅಶಕ್ಯವಾದ ಒಂಟಿಮರಿಯನ್ನು ಹಿಂಡಲಿಚ್ಛೆಯುಳ್ಳವರಾಗಿ ಹಿಂಬಾಲಿಸಿದಂತಾಗುತ್ತದೆ ಎಂದು ಹೇಳಿರುವರು. ಆದ್ದರಿಂದ ದೀಕ್ಷಿತರೂಕೂಡ ಪರಶಿವನಲ್ಲಿ ಬೇಡಿದವರಿಗೆ ಬೇಡಿದ್ದನ್ನು ಕೊಡುವ ಸತ್ಯವಾದ ಸಾಮರ್ಥವಿದೆ ಯಂದು ಒಪ್ಪಿಕೊಂಡಿರುವರೆಂದು ತಿಳಿದುಬರುತ್ತದೆ. ಈ ಸಾಮರ್ಥ್ಯವು ಮಿಾಥ್ಯಾಭೂತವಾದ ಅಧ್ಯಾಸಸ್ವರೂಪವೇ ಅಂದರೆ ಸಲ್ಲಲಾರದು ಏಕೆಂದರೆ ತಾನೆ ಅಸತ್ಯವಿದ್ದು ಸತ್ಯವಾದ ಮೋಕ್ಷಾದಿ ಫಲಗಳನ್ನು ಆ ಅಧ್ಯಾಸವು ಫಲಗಳನ್ನು ಹೇಗೆ ಕೊಟ್ಟೀತು? ಅವಿದ್ಯಾಶಕ್ತಿಯಿಂದ ಬ್ರಹ್ಮವೇ ಕೊಡುವುದೆಂದರೆ ಈ ಮಾತು ಮೊಲವು ತನ್ನ ಕೋಡುಗಳಿಂದ ಹಾಯುತ್ತದೆ ಎಂಬ ಮಾತಿಗೆ ಸಮಾನವಾಗುತ್ತದೆ. ಸತ್ವಗುಣಪ್ರಧಾನವಾದ ಮಾಯೆಯಲ್ಲಿ ಪ್ರತಿಬಿಂಬರೂಪನಾದ ಈಶ್ವರನೆ ಪ್ರಾಣಿಗಳ ಕರ್ಮಾನುಗುಣವಾಗಿ ಫಲಗಳನ್ನು ಕೊಡುತ್ತಾನೆಂದರೆ ಸಲ್ಲದು- ಕನ್ನಡಿಯಲ್ಲಿ ಪ್ರತಿಬಿಂಬಿಸಿದ ಧನಿಕನು ಯಾರಿಗಾದರೂ ಫಲಗಳನ್ನು ಕೊಡಬಲ್ಲನೊ? ಎಂದಿಗೂ ಇಲ್ಲ. ಅಂದಮೇಲೆ ಆ ಬ್ರಹ್ಮದ ಪ್ರತಿಬಿಂಬರೂಪನಾದ ಈಶ್ವರನು ಹೇಗೆ ಕೊಡುವನು? ಅಯ್ಯೋ! ಇಂಥ ಈಶ್ವರನನ್ನು ಹೇಳುವುದಕ್ಕಿಂತ ಈಶ್ವರನಿಲ್ಲವೆನ್ನುವುದೇ ಉತ್ತಮವಲ್ಲವೆ? ಶಿವಾದ್ವೈತಿಯೆ ವಾಸ್ತವಿಕವಾಗಿ ಈಶ್ವರನು ಇಲ್ಲವೇಇಲ್ಲ. ಇರುವುದು ಅದೊಂದೇ ಬ್ರಹ್ಮವು. ಅಂದರೆ ಬ್ರಹ್ಮಾದ್ವೈತಿಯೆ ಈಶ್ವರನಿಲ್ಲವೆನ್ನುವವರಿಗೆ ಏನೆನ್ನಬೇಕು. ನೀನೆ ಹೇಳು. ಸಚ್ಚಿದಾನಂದವಾದ ಬ್ರಹ್ಮವನ್ನು ನಾವು ಹೇಳುತ್ತೇವೆ. ಆದ್ದರಿಂದ ಶಿವಾದ್ವೈತಿಯೇ ನಾವು ನಾಸ್ತಿಕರಲ್ಲ. ಅಂದರೆ ಬ್ರಹ್ಮಾದ್ವೈತಿಯೆ ಆ ವಸ್ತುವಿನಲ್ಲಿ ಯಾವುದೋ ಒಂದು ಶಕ್ತಿಯು ಯಥಾರ್ಥವಾಗಿಲ್ಲ. ಎಂದಮೇಲೆ ಶಕ್ತಿಶೂನ್ಯವಾಗಿದ್ದ ಬ್ರಹ್ಮವು ಅನ್ಯರನ್ನು ಹೇಗೆ ಶಕ್ತರನ್ನಾಗಿ ಮಾಡೀತು? ತನ್ನ ಸ್ವರೂಪ ಎಂಥಾದ್ದು ಎಂದು ತಿಳಿಯತಕ್ಕ ಸಾಮರ್ಥ್ಯವಿಲ್ಲದಿರುವುದರಿಂದ ಸ್ಫಟಿಕಶಿಲೆಯು ಜಡವೆನಿಸಿರುವುದು. ಹಾಗೇನೆ ಬ್ರಹ್ಮಕ್ಕೆ ತನ್ನ ಸ್ವರೂಪವನ್ನು ತಿಳಿದುಕೊಳ್ಳುವ ಸಾಮರ್ಥ್ಯವು ಸತ್ಯವಾಗಿಯೂ, ಇಲ್ಲದಿದ್ದರೆ ಜಡವೆಂದು ಏಕೆ ಹೇಳಬಾರದು? ಎಲೈ ಬ್ರಹ್ಮಾದ್ವೈತಿಯೇ, ಸರ್ವಶಕ್ತನಾದ ಮಹೇಶ್ವರನೊಬ್ಬನನ್ನೇ ಪೂಜಿಸುವುದು ಯೋಗ್ಯವಲ್ಲವೆ? ಮಹೇಶ್ವರನಿಗಿಂತಲೂ, ಮತ್ತಾವ ದೇವತೆಯೂ, ಶ್ರೇಷ್ಠವಿಲ್ಲೆಂದು ಮತ್ತು

ಮಹೇಶ್ವರ ಪೂಜೆಯಿಂದ ಸರ್ವದೇವತೆಗಳ ಪೂಜೆಯಾಗುವುದು. ಇತರ ದೇವತೆಗಳು ಮಹೇಶ್ವರನಿಗೆ ಸಮಾನವಲ್ಲವು. ಎಂಬ ಅಭಿಪ್ರಾಯವನ್ನು ಲಿಂಗಪುರಾಣದಲ್ಲಿಯೂ, ಬ್ರಹ್ಮಗೀತೆಯಲ್ಲಿಯೂ ಶ್ರೀ ವ್ಯಾಸಮಹರ್ಷಿಗಳು ಸ್ಪಷ್ಟವಾಗಿ ಹೇಳಿರುವರು. ಆ ಶ್ಲೋಕಗಳನ್ನು ಇಲ್ಲಿ ಉದಾಹರಿಸುವೆನು.

ಶ್ಲೋ|| ಪೂಜಿತೇ ದೇವ ದೇವೇಶೇ ಪುರಾಣೇ ಸರ್ವಕಾರಣೇ | ಪೂಜಿತಾದೇವತಾಃ ಸರ್ವಾ ಇತಿ ವೇದಾಂತ ನಿಶ್ಚಯಃ || ತ್ವಂವಿಶ್ವಕರ್ತಾ ತವನಾಸ್ತಿ ಕರ್ತಾ ತ್ವಂವಿಶ್ವಭರ್ತಾತವನಾಸ್ತಿ ಭರ್ತಾ | ತ್ವಂವಿಶ್ವಹರ್ತಾತವನಾಸ್ತಿ ಹರ್ತಾ ತ್ವಂವಿಶ್ವನಾಥ ಸ್ತವನಾಸ್ತಿ ನಾಥಃ || ಮಾಯಾಬಲೇನೈವಹರಿಂ ಶಿವೇನ ಸಮಾನಮಾಹುಃ ಪುರುಷಾ ಧಮಾಶ್ಚ | ಮೋಹೇನ ಕೇಚಿನ್ಮಮಸಾಮ್ಯಮಾಹುರ್ಮಾಯಾತು ಶೈವೀಖಲುದುಸ್ತರೇಯಂ || ಇದಲ್ಲದೆ ದೇವದೇವನಾದ ಶಿವನ ಚಿಹ್ನವೆನಿಸಿದ ವಿಭೂತಿಯಂ ಧರಿಸದ ಹಣೆಯು ನಿಂದ್ಯವಾದುದೆಂದೂ ಹೇಳಲ್ಪಡುವುದು.

ಶ್ಲೋ || ಧಿಗ್ಭಸ್ಮರಹಿತಂಫಾಲಂ ಧಿಗ್ರಾಮಮಶಿವಾಲಯಂ ಧಿಗನೀಶಾರ್ಚನಂಕರ್ಮ ಧಿಗ್ವಿದ್ಯಾಮಶಿವಾಶ್ರಯಾಂ || ಅಂದರೆ ಭಸ್ಮವಿಲ್ಲದ ಹಣೆಯು ವ್ಯರ್ಥವು. ಶಿವಾಲಯವಿಲ್ಲದ ಊರಿಗೆ ಧಿಕ್ಕಾರವು. ಶಿವಪೂಜೆಯಿಲ್ಲದ ಕರ್ಮಕ್ಕೆ ಧಿಕ್ಕಾರವು. ಶಿವವಿದ್ಯೆಯಿಲ್ಲದ ವಿದ್ಯೆಯು ನಿಂದ್ಯವಾದುದು. ಮತ್ತು ವೃದ್ಧಶಾತಾತಪದಲ್ಲಿಯೂ, ಶ್ಲೋ || ವಿಭೂತಿರ್ಯಸ್ಯನೋಫಾಲೆ ಕಂಠೇರುದ್ರಾಕ್ಷಮಾಲಿಕಾ ಮುಖೇಪಂಚಾಕ್ಷರೀ ಮಂತ್ರಃ ತಂತ್ಯಜೇದಂತ್ಯಜಂಯಥಾ|| ಅಂದರೆ ಯಾವನ ಹಣೆಯಲ್ಲಿ ವಿಭೂತಿಯಿಲ್ಲವೋ, ಕಂಠದಲ್ಲಿ ರುದ್ರಾಕ್ಷಮಾಲೆಯಿಲ್ಲವೋ, ಅವನನ್ನು ಅಂತ್ಯಜನಂತೆ ದೂರದಲ್ಲಿಯೇ ಬಿಡಬೇಕೆಂದು ಉಕ್ತವಾಗಿರುವುದಲ್ಲದೆ, ‶ತ್ರಿಪುಂಡ್ರಧಾರಣಂವಿದ್ವಾನ್ ಮನಸಾಪಿನಲಂಘಯೇತ್ | ಶ್ರುತ್ಯಾ ವಿಧೀಯತೆ ಯಸ್ಮಾತ್ ತತ್ಯಾಗೀಪತಿತೋಭವೇತ್″ ಎಂಬದಾಗಿ ತ್ರಿಪುಂಡ್ರಧಾರಣವಿಲ್ಲದವನು ಪತಿತನಾಗುವನೆಂತಲೂ, ತ್ರಿಪುಂಡ್ರವನ್ನು ಮನಸ್ಸಿನಿಂದಲೂ ಮೀರಬಾರದೆಂತಲೂ, ಅನೇಕ ಶ್ರುತಿ ಸ್ಮೃತ್ಯಾದಿಗಳಲ್ಲಿ ಭಸ್ಮಧಾರಣಾದಿಗಳ ವಿಷಯವಾಗಿ ಶ್ರೇಷ್ಠತ್ವವು ಹೇಳಲ್ಪಟ್ಟಿರುವುದಲ್ಲದೆ ವೀರಶೈವರಿಗೆ ಕುಂಕುಮ ಭಂಡಾರಗಳನ್ನು ಧರಿಸುವುದು ಯಲ್ಲಿಯೂ ಹೇಳಲ್ಪಟ್ಟಿಲ್ಲವು. ಹಾಗಾದರೆ ಎಲೈ ಶಿವಾದ್ವೈತಿಯೆ! ನಿಮ್ಮ ಮತದವರಲ್ಲಿಯೇ ಕೆಲವರು ಮಹೇಶ್ವರನಲ್ಲದೆ ಬೇರೆ ಹೆಣ್ಣು ದೇವತೆಗಳಿಗೆ ನಮಸ್ಕರಿಸುವುದುಂಟಲ್ಲವೆ? ಅಂದರೆ ವೀರಶೈವರಿಗೆ

ಅದು ಅತ್ಯಂತ ವಿರುದ್ಧವಾಗುತ್ತದೆ. ಪತಿವ್ರತಾಸ್ವಭಾವೇನ ವಿಹಾಯಾನ್ಯತ್ತು ದೈವತಂ ಶಿವಮೇಕಂ ಭಜೇದ್ಭಕ್ತ್ಯಾ ಸರ್ವಶಾಂತಿಕರಂಪರಂ || ಅಂದರೆ ಪತಿವ್ರತಾಸ್ವಭಾವದಿಂದ ಅನ್ಯದೇವತೆಗಳನ್ನು ಬಿಟ್ಟು, ಸರ್ವಸುಖಗಳಿಗೂ ಆಕರನಾದ ಶಿವನೊಬ್ಬನನ್ನೇ ಪೂಜಿಸಬೇಕೆಂಬ ಸ್ಕಾಂದೋಕ್ತಿಯಿರುವುದರಿಂದ ಲಿಂಗಾಂಗಿಗಳು ಇತರರು ಶಿವನನ್ನೇ ಪೂಜಿಸುವುದು ಯೋಗ್ಯವೆಂದು ಶ್ರುತಿ ಸ್ಮೃತೀತಿಹಾಸ ಪುರಾಣಗಳಿಂದ ಸಿದ್ಧವಾಗುತ್ತಿರಲು ಪಂಚದೇವತೆಗಳ ಉಪಾಸನೆಯಂ ಮಾಡುವುದರಿಂದ ಪತಿವ್ರತಾ ಸ್ವಭಾವವು ನಿಲ್ಲುವುದಿಲ್ಲವು. ಆದುದರಿಂದ ಮಹೇಶ್ವರನೊಬ್ಬನನ್ನೇ ಪೂಜಿಸುವುದು ಸರ್ವೋತ್ತಮವು.

ಇನ್ನು ಶಿವಯೋಗದಿಂದ ಮೋಕ್ಷವೊ ಕೇವಲ ಜ್ಞಾನದಿಂದ ಮೋಕ್ಷವೊ ಎಂಬುವ ಆರನೆ ವಿಷಯುವನ್ನು ಪರಿಶೀಲಿಸುತ್ತೇನೆ. ಇಲ್ಲಿ ಅವರು ಹೇಳುವ ಜ್ಞಾನದ ಸ್ವರೂಪವೇನು ? ಶಿವಯೋಗಿಗಳು ಹೇಳುವ ಶಿವಯೋಗವಾವುದು. ‘‘ತಚ್ಚ ಜ್ಞಾನಂ ಬ್ರಹ್ಮಾತ್ಮೈಕ್ಯಗೋಚರಂ’’ ಅಂದರೆ ತತ್ವಮಸ್ಯಾದಿ ವಾಕ್ಯದಿಂದುಂಟಾದ ಜೀವ ಬ್ರಹ್ಮರುಗಳ ಅಭೇದ ವಿಷಯಕವಾದುದನ್ನೇ ಜ್ಞಾನವನ್ನಾಗಿ ಹೇಳುವರು. ಶಿವಯೋಗವೆಂದರೆ ಶಿವಾರ್ಚನೆಯು. ಇದು ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತಗಳೆಂಬ ನಾಲ್ಕು ಅಂಗಗಳುಳ್ಳದ್ದು ಎಂದು ಶಿವಯೋಗಿಗಳು ಹೇಳುವರು. ಇದನ್ನು ಮುಂದಣ ಶಿವಯೋಗ ನಿರೂಪಣ ಪ್ರಕರಣದಲ್ಲಿ ವಿಸ್ತಾರವಾಗಿ ಹೇಳುವೆವು. ಭಕ್ತಿ, ಧ್ಯಾನ, ವ್ರತಗಳೆಂಬುವುಗಳು ಬಾಹ್ಯಾಭ್ಯಂತರ ಕ್ರಿಯಾರೂಪಗಳಾದುದರಿಂದ ಆ ಮೂರನ್ನೂ ಕರ್ಮದಲ್ಲಿಯೇ ಸೇರಿಸಿ, ಹಿಂದೆ ಕರ್ಮಜ್ಞಾನ ಸಮುಸಮುಚ್ಚಯವಾದದಲ್ಲಿ ಸಂಕ್ಷೇಪವಾಗಿ ಹೇಳಿದ್ದರೂ ಈಗ ಜ್ಞಾನದಿಂದ ಕೂಡಿದ ಶಿವಭಕ್ತಿ ಶಿವಧ್ಯಾನಾದಿರೂಪವಾದ ಯೋಗದಿಂದಲೇ ಮುಕ್ತಿಯು ಲಾಭವಾಗುವುದಲ್ಲದೆ ಕೇವಲ ಜ್ಞಾನದಿಂದ ಮುಕ್ತಿಯು ಲಾಭವಾಗಲಾರದೆಂತಲೂ, ಧ್ಯಾನಾದಿಗಳು ಮುಕ್ತಿಗೆ ಪರಂಪರಾಕಾರಣಗಳಲ್ಲವೆಂತಲೂ ಯುಕ್ತಿಯಿಂದಲೂ ಪ್ರಮಾಣದಿಂದಲೂ ಹೇಳುತ್ತೇವೆ. ತನ್ನ ಸ್ವರೂಪ ಪ್ರಕಾಶವೇ ಮುಕ್ತಿಯು. ಅಂದರೆ ಈ ವಿಧವಾದ ಮುಕ್ತಿಯಿಂದ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿರತಕ್ಕ ಪಾಶಗಳು (ಸ್ಥೂಲಶರೀರದ ಅಭಿಮಾನವು) ವಾತ ಪಿತ್ತಾದಿಗಳಿಂದುಂಟಾದ ರೋಗಾದಿಗಳೂ, (ಸೂಕ್ಷ್ಮಶರೀರದ ಅಭಿಮಾನವು) ವಾಸನೆಯಿಂದುಂಟಾದ ವಿಷಯಗಳಲ್ಲುಂಟಾಗುವ ರಾಗಾದಿಗಳು (ಕಾರಣ ಶರೀರದ ಅಭಿಮಾನವು) ಅವುಗಳಲ್ಲಿರುವ ಸಂಸ್ಕಾರಗಳು ಇವುಗಳೆಲ್ಲವೂ ಲಯವನ್ನು

ಹೊಂದುವುದೇ ಇಲ್ಲವು. ಸ್ವಸ್ವರೂಪವಾದ ಶಿವನ ಶಕ್ತಿಯೂ ಕೂಡಾ ವಿಕಾಸ ವಾಗಲಾರದು. ಈ ವಿಧವಾದ ವಾಸನಾದಿಗಳ ಲಯವು ಕೇವಲ ಜ್ಞಾನದಿಂದಾ ಗಲಾರದು. ತನ್ನ ಸ್ವರೂಪವನ್ನು ತಿಳಿದುಕೊಂಡು ಆ ಸ್ವರೂಪ ಚಿಂತನೆಯನ್ನು ಮಾಡುತ್ತ ನೋದರೆ ತನ್ನ ಸ್ವರೂಪವು ಪ್ರಕಾಶವಾಗುವುದು. (ತನ್ನ ಸರ್ವಜ್ಞ ತ್ವಾದಿ ಶಕ್ತಿಗಳ ವಿಕಾಸವಾಗುವುದು) ಸ್ವರೂಪಚಿಂತನೆಗೆ ಮನಸ್ಸಿನ ಸ್ವಸ್ಥತೆಯು ಇರಬೇಕು. ಆ ಮನಸ್ಸಿನ ಶಾಂತಿಗೆ ಶರೀರಾರೋಗ್ಯವು ಬೇಕು. ಆದ್ದರಿಂದಲೇ ‘ಶರೀರಮಾದ್ಯಂ ಖಲುಧರ್ಮಸಾಧನಂ’’ ಎಂದು ಹೇಳಿರುವರು. ಪತಂಜಲೀ ಋಷಿಗಳೂಕೂಡ ‘‘ವ್ಯಾಧಿ ಸ್ತ್ಯಾನ ಸಂಶಯ ಪ್ರಮಾದಾಲಸ್ಯಾವಿರತಿ ಭ್ರಾಂತಿದರ್ಶನಾಲಬ್ಧ ಭೂಮಿಕತ್ವಾನವಸ್ಥಿತತ್ವಾನಿ ಚಿತ್ತವಿಕ್ಷೇಪಾಸ್ತೆ ಅಂತರಾಯಾಃ’’ ಎಂದು ಹೇಳಿರುವರು. ಅಂದರೆ ರೋಗಾದಿಗಳು ಚಿತ್ತವಿಕ್ಷೇಪಕ್ಕೆ ಕಾರಣಗಳೆಂದು ಅವರ ಅಭಿಪ್ರಾಯವು. ಆದ್ದರಿಂದ ಸಾಧಕನು ಮೊದಲು ತನ್ನ ಶರೀರ ವನ್ನು ಚನ್ನಾಗಿ ಆರೋಗ್ಯದಲ್ಲಿರಿಸಿರಬೇಕು. ಈ ಸ್ಥೂಲಶರೀರದ ಆರೋಗ್ಯಕ್ಕಾಗಿ ಹಠಯೋಗವು ಬೇಕು. ಸೂಕ್ಷ್ಮಶರೀರದ ಕಾಮಕ್ರೋಧರೂಪಗಳಾದ ರೋಗ ನಾಶಕ್ಕಾಗಿ ಸವಿಕಲ್ಪಕ ಶಿವಯೋಗವು ಬೇಕು. ಕಾರಣ ಶರೀರದ ಅಜ್ಞಾನ ನಾಶಕ್ಕಾಗಿ ನಿರ್ವಿಕಲ್ಪಕ ಶಿವಯೋಗವು ಬೇಕು. ಇದಕ್ಕೇನೆ ಪತಂಜಲಿಋಷಿಗಳು ಸಮಾಧಿ ಎಂದು ಹೇಳಿರುವರು. ಇದನ್ನು ನಮ್ಮ ಆಚಾರ್ಯರು ಲಿಂಗಾಂಗಸಾ ಮರಸ್ಯವೆಂದು ಹೇಳುತ್ತಾರೆ. ಹೇಗೆಂದರೆ ‘‘ಪಂಚಾಚಾರ ಪುರಸ್ಕೃತಾಷ್ಟಾವರ ಣಾಂತರ್ಗತ ಪಂಚಾಕ್ಷರ ಮಂತ್ರಾರ್ಥಾನುಸಂಧಾನರೂಪ ಲಿಂಗಾಂಗಸಾ ಮರಸ್ಯಂ ಮನೋವೃತ್ತಿ ವಿಶೇಷಸ್ಸಾಧನಂ’’ ಅಂದರೆ, ಭೃತ್ಯಾಚಾರ, ಶಿವಾ ಚಾರ, ಗಣಾಚಾರ, ಲಿಂಗಾಚಾರ, ಸದಾಚಾರಗಳೆಂಬ ಪಂಚಾಚಾರಗಳಿಂದ ಕೂಡಿದ ‘‘ಭಸ್ಮ ರುದ್ರಾಕ್ಷ ಲಿಂಗಾನಿ ಗುರುರ್ಮಂತ್ರಂ ತಥಾಚರಃ | ಪಾ ದೋದಕಪ್ರಸಾದೌಚ ಶೈವಾಷ್ಟಾವರಣಾನಿಹಿ’’ ಎಂಬದಾಗಿ ಹೇಳಲ್ಪಟ್ಟ ಎಂಟು ಆವರಣಗಳಲ್ಲಿರುವ ಪಂಚಾಕ್ಷರ ಮಂತ್ರಾರ್ಥರೂಪನಾದ ಸರ್ವಾತ್ಮಕ ಶಿವನೇ ನಾನೆಂಬ ಶಿವಜೀವರುಗಳ ಐಕ್ಯದ ಅನುಸಂಧಾನರೂಪವಾದ ಲಿಂಗಾಂಗ ಸಾ ಮರಸ್ಯವೇ ಮನೋವೃತ್ತಿ ವಿಶೇಷವು. ಇದುವೇ ಮೋಕ್ಷಕ್ಕೆ ಸಾಧನವು ಎಂದು ಹೇಳಿರುವರು. ಮತ್ತು ‘‘ಸಮ್ಯಗ್ಯೋಗೋಹಿ ಸಂಯೋಗಃ’’ ಎಂದು ಲಿಂಗಾಂ ಗೈಕ್ಯರೂಪ ಮುಕ್ತಿಫಲವನ್ನೂ ಯೋಗವೆಂದೇ ಹೇಳಿರುವರು. ‘‘ಯುಜಸ ಮಾಧೌ ಯುಜುರ್ಯೋಗೇ’’ ಎಂಬ ಧಾತುಗಳಿಂದ ಎರಡರ್ಥವೂ ಸಂಗತವಾಗು

ತ್ತದೆ. ಇಂತಹ ಸಾಧನರೂಪವಾದ ಶಿವಯೋಗದಿಂದ ಶಿವತ್ವಪ್ರಾಪ್ತಿಯಾಗುವುದರಿಂದ ಮನುಷ್ಯನು ಶಿವಯೋಗದಿಂದ ಶಿವನೇ ಆಗುತ್ತಾನೆಂದು "ಮಾನವಶ್ಶಿವಯೋಗೇನ ಶಿವೋಭವತಿಸರ್ವದಾ" ಎಂದು ಶಂಖಲಿಖಿತಸ್ಮೃತಿಯಲ್ಲಿಯೂ ಹೇಳುತ್ತದೆ. ಮನುಷ್ಯನು ಕಿಂಚಿಜ್ಞನಾಗಿದ್ದು ಸರ್ವಜ್ಞನಾದ ಶಿವನೇ ಹೇಗಾಗುವನೆಂದರೆ ಈ ಜೀವನು ವಸ್ತುತಃ ಕಿಂಚಿಜ್ಞನಲ್ಲವು. ಸರ್ವಜ್ಞತ್ವ ಶಕ್ತಿಯುಳ್ಳವನೇ ಇರುವನು. ಇವನಲ್ಲಿ ಸರ್ವಜ್ಞತ್ವಶಕ್ತಿ ಇಲ್ಲದಿದ್ದರೆ ನಾವು ಎಷ್ಟೋ ದಿವಸಗಳ ಹಿಂದೆ ನೋಡಿದ ಪದಾರ್ಥಗಳನ್ನು ಮರೆತಿರುತ್ತೇವೆ. ಪುನಃ ಅವುಗಳ ಸ್ಮರಣೆಯು ಹೇಗಾದೀತು? ಇದು ಸರ್ವಜ್ಞತ್ವಶಕ್ತಿಯ ಅಲ್ಪವಾದ ಸ್ಫುರಣವಲ್ಲವೆ? ಇದರಿಂದ ಎಲ್ಲಾ ಪ್ರಾಣಿಗಳಲ್ಲಿಯೂ ಸರ್ವಜ್ಞತ್ವ ಶಕ್ತಿಯಿರುವುದೆಂದು ಕಂಡುಬರುವದು ತಿಳಿವಳಿಕೆಯು ಹೊಸದಾಗಿ ಶಿಕ್ಷಣದಿಂದ ಪ್ರಾಪ್ತವಾಗುವುದಿಲ್ಲವು. ಮೊದಲು ಇದ್ದುದೇ ಆವಿರ್ಭೂತವಾಗುತ್ತದೆ. ಶಿಕ್ಷಣಾದಿಗಳಿಂದಲೇ ಆಯಾಯ ಪದಾರ್ಥಗಳ ಜ್ಞಾನವು ಹುಟ್ಟುತ್ತದೆಂದು ಹೇಳುವವರು ತಾವು ಹುಟ್ಟಿದಕೂಡಲೆ ತಮಗೆ ಸ್ತನ್ಯಪಾನವನ್ನು ಮಾಡಲಿಕ್ಕೆ ಯಾರು ಎಲ್ಲಿ ಶಿಕ್ಷಣಕೊಟ್ಟರೆಂಬುವುದನ್ನು ಹೇಳುವುದಕ್ಕಾದೀತೆ? ಸ್ತನ್ಯಪಾನ ಜ್ಞಾನವು ಯಾವ ಶಿಕ್ಷಣದಿಂ ಹುಟ್ಟಿತು. ಸ್ತನ್ಯಪಾನ ಜ್ಞಾನವಿಲ್ಲದಿದ್ದರೆ ಶಿಶುವಿಗೆ ಸ್ತನ್ಯಪಾನದಲ್ಲಿ ಪ್ರವೃತ್ತಿಯು ಹೇಗೆ? ಆ ಸ್ತನ್ಯಪಾನದ ಪ್ರವೃತ್ತಿಯನ್ನು ಕುರಿತು ಸ್ತನ್ಯಪಾನವು ನನ್ನ ಸುಖಕ್ಕೆ ಸಾಧನವಾಗಿದೆ ಎಂಬುವ ಜ್ಞಾನವು ಕಾರಣವಾಗುತ್ತದೆಯಲ್ಲವೇ? ಆದ್ದರಿಂದ ಪೂರ್ವಜನ್ಮದಲ್ಲಿದ್ದ ಸ್ತನ್ಯಪಾನಜ್ಞಾನವೆಂಬ ಅಂತಃಕರಣವೃತ್ತಿಯೇ ಶಿಶುವಿನ ಅದೃಷ್ಟವಶದಿಂದ ಆವಿರ್ಭೂತವಾಗಿ ಈ ಜನ್ಮದಲ್ಲಿ ಶಿಶುವಿಗೆ ಸ್ತನ್ಯಪಾನದಲ್ಲಿ ಪ್ರವೃತ್ತಿಯಾಗುವುದೆಂದು ನಾವು ಹೇಳುತ್ತೇವೆ. ಆದ್ದರಿಂದ ಸಮಸ್ತ ಅಂತಃಕರಣವೃತ್ತಿಗಳು ನಿತ್ಯಗಳೇ ಆಗಿರುವವು. ಮತ್ತು ಪಶುಗಳಿಗೂ ಜಲಚರಪ್ರಾಣಿಗಳಿಗೂ ನೀರಲ್ಲಿ ಈಜಾಡುವುದಕ್ಕೆ ಯಾರು ಕಲಿಸಿದರು? ಮುಗ್ಧಬುದ್ಧಿಯುಳ್ಳ ಜಿಂಕೆಗೆ ಸಂಗೀತವಂ ಕೇಳುವದರಲ್ಲಿ ಪ್ರೀತಿಯು ಹೇಗೆ ಹುಟ್ಟುವುದು? ಆ ಸಂಗೀತಮಾಧುರ್ಯವು ಆ ಜಿಂಕೆಗೆ ತಿಳಿಯುವಬಗೆಹೇಗೆ? ಇವೆಲ್ಲವನ್ನು ನೋಡಿದರೆ ಪೂರ್ವದಲ್ಲಿದ್ದ ಆಯಾಯ ವೃತ್ತಿಗಳೇ ಆವಿರ್ಭಾವವಾಗುತ್ತದೆಂದು ಕಂಡುಬರುತ್ತದೆ. ಆದ್ದರಿಂದ ಜ್ಞಾನವು ಶಿಕ್ಷಣದಿಂದ ಹುಟ್ಟುವುದಿಲ್ಲವು. ಮೊದಲು ಇದ್ದದ್ದೇ ಆವಿರ್ಭೂತವಾಗುತ್ತದೆಂದು ತಿಳಿಯುತ್ತದೆ. ಮತ್ತು ಬೆಕ್ಕು ನನ್ನನ್ನು ತಿನ್ನಲಿಕ್ಕೆ ಬರುತ್ತದೆಂಬ ಜ್ಞಾನವು ಬಿಲದಲ್ಲಿರತಕ್ಕ ಇಲಿಗಳಿಗೆ ತನ್ನಲ್ಲಿರುವ ಸರ್ವಜ್ಞತ್ವ ಶಕ್ತಿಯು

ಕಿಂಚಿತ್ ಸ್ಫುರಣವಿಲ್ಲದಿದ್ದರೆ ತೋರುವುದೇ? ವಿವೇಕವಿಲ್ಲದ ಆಮೆಯು ನನ್ನನ್ನು ಹೊಡೆಯುತ್ತಾರೆಂದು ತಿಳಿದು ನೀರೊಳಗೆ ಪ್ರವೇಶಮಾಡುತ್ತದೆ. ಇದು ಸರ್ವಜ್ಞತ್ವಶಕ್ತಿಯ ಚೇಷ್ಟೆಯಲ್ಲವೆ? ಕೆಲ ದೊಡ್ಡ ಜಲಚರಪ್ರಾಣಿಗಳು ಸಣ್ಣ ಜಲಚರಪ್ರಾಣಿಗಳನ್ನು ಅಗಾಧವಾದ ಜಲದಲ್ಲಿ ಹಿಡಿದು ತಿನ್ನುವುದನ್ನು ಯಾರು ಕಲಿಸಿದರು? ಇದೂ ಕೂಡ ಸರ್ವಜ್ಞತ್ವಶಕ್ತಿಯ ಪ್ರಕಾರವೆಂದೇ ಹೇಳಬೇಕು. ನೀರೂ ಹಾಲೂ ಎರಡನ್ನೂ ಬೆರಸಿಟ್ಟರೆ ನೀರನ್ನು ಬೇರೆಮಾಡಿ ಹಾಲನ್ನೇ ಕುಡಿಯುವ ಶಕ್ತಿಯು ಹಂಸಪಕ್ಷಿಗೆ ತನ್ನ ಹೃದಯದಲ್ಲಿ ಸರ್ವಜ್ಞತ್ವ ಶಕ್ತಿಯಿಲ್ಲದಿದ್ದರೆ ಬಂದೀತೆ? ಆನೆಗಳೂ ಮತ್ತು ಸಿಂಹಗಳೂ ತಮ್ಮತಮ್ಮ ಶಕ್ತಿಗಳನ್ನು ತಿಳಿದುಕೊಳ್ಳುತ್ತವೆಯಲ್ಲವೆ? ಇವುಗಳಿಗೆಲ್ಲಾ ಕಾರಣವೇನು? ಭಯಂಕರವಾದ ಸಿಂಹಾದಿಗಳು ಪ್ರಾಣಿಗಳಮೇಲೆ ಒಮ್ಮೊಮ್ಮೆ ಪ್ರೀತಿಸುತ್ತವೆ. ಈ ಪ್ರೀತಿಯು ಆ ಸಿಂಹಾದಿಗಳಿಗೆಲ್ಲಿಂದ ಬರಬೇಕು? ಒಳಗಿರುವ ಸರ್ವಜ್ಞತ್ವಶಕ್ತಿಯುಳ್ಳ ಶಿವನಿಂದಲ್ಲವೆ? ಇನ್ನು ಲೋಕದಲ್ಲಿ ಆಲೋಚನೆ ಮಾಡಿದರೆ ಆ ತನ್ನ ಸರ್ವಜ್ಞತ್ವಶಕ್ತಿಯ ಸ್ಫುರಣವು ಒಮ್ಮೊಮ್ಮೆ ಆಗುತ್ತದೆಂದು ಕಂಡುಬರುತ್ತದೆ. ಮನುಷ್ಯನು ತಾನು ಸರ್ವಜ್ಞತ್ವ ಶಕ್ತಿಯುಳ್ಳವನಲ್ಲವೇನು? ಆದರೂ ಆ ಶಕ್ತಿಯು ಬೂದಿಯೊಳಗಿನ ಕೆಂಡದಂತೆ ಮುಚ್ಚಿಕೊಂಡಿದೆ. ಬೂದಿಯೊಳಗೆ ಕೆಂಡವಿರುವುದೆಂದು ತಿಳಿದು ಸುಮ್ಮನೆ ಕೂತರೆ ಅದರಿಂದ ಮನೆಯೊಳಗಿನ ಕತ್ತಲೆಯು ಹೋಗಲಾರದು. ಮೇಲಿರುವ ಬೂದಿಯನ್ನು ತೆಗೆದು ಬೆಂಕಿಯ ಕೆಂಡದ ಮೇಲೆ ಹುಲ್ಲನ್ನು ಹಾಕಿ ಕೆಂಡವನ್ನು ಊದುಗೊಳವೆಯಿಂದ ಪ್ರಜ್ವಲಗೊಳಿಸಿದರೆ ಮನೆಯೊಳಗಿರುವ ಕತ್ತಲೆಯೆಲ್ಲವೂ ನಾಶವಾಗುವಂತೆ ತನ್ನ ಸ್ವರೂಪ ಪ್ರಕಾಶವನ್ನು ಮುಚ್ಚಿರುವ ಕಾರ್ಮಿಕಾದಿ ಮಲತ್ರಯವನ್ನು ದೀಕ್ಷಾತ್ರಯದಿಂದ ತೆಗೆದು ವಿಷಯಗಳೆಂಬ ಶುಷ್ಕತೃಣಗಳನ್ನು ತನ್ನ ಸ್ವರೂಪವಾದ ಲಿಂಗವೆಂಬ ಕೆಂಡದಮೇಲೆ ಹಾಕಿ ಸುಷುಮ್ನೆ ಎಂಬ ಕೊಳವೆಯಲ್ಲಿ ತನ್ನ ಪ್ರಾಣವಾಯುವನ್ನು ಸೇರಿಸಿ ಊದುತ್ತ ಆ ಲಿಂಗಾಗ್ನಿಯನ್ನು ಮತ್ತಷ್ಟು ಪ್ರಜ್ವಲಗೊಳಿಸಿ ಅದು ನಂದದಂತೆ ಧ್ಯಾನ, ಧಾರಣವನ್ನು ಮಾಡಿದರೆ ಅಜ್ಞಾನಾದಿಗಳೆಂಬ ಆಣವಾದಿ ಮಲರೂಪವಾದ ಕತ್ತಲೆಯು ಉಳಿಯಲಾರದು. ಆಗ ತನ್ನ ಸರ್ವಜ್ಞತ್ವಾದಿ ಶಕ್ತಿಗಳು ತನಗೆ ಚನ್ನಾಗಿ ಕಾಣುತ್ತವೆ. ಆದ್ದರಿಂದ ತನ್ನ ಸ್ವರೂಪಪ್ರಕಾಶಕ್ಕಾಗಿ ಶಿವಯೋಗವು ಬೇಕು. ಈ ಶಿವಯೋಗವಿಲ್ಲದೆ ತತ್ವಮಸ್ಯಾದಿ ವಾಕ್ಯದಿಂದುಂಟಾದ ಜ್ಞಾನದಿಂದ ಕಾರ್ಯಸಹಿತವಾಗಿ ಮಲನಾಶವಾಗಲಾರದು.

ಈ ವಿಷಯದಲ್ಲಿ ಒಂದು ಶ್ಲೋಕವು ಸ್ಮೃತಿಪಥಕ್ಕೆ ಬರುತ್ತದೇನೆಂದರೆ—ಪುರುಷಾಪರಾಧಮಲಿನಾ ಧಿಷಣಾ ನಿರವದ್ಯ ಚಕ್ಷುರುದಯಾಪಿಯಥಾ ನಫಲಾಯಭರ್ಜವಿಷಯಾಭವತಿ ಶ್ರುತಿಸಂಭವಾಪಿ ತಥಾತ್ಮನಿ ಧೀಃ || ಅಂದರೆ ಇಲ್ಲಿ ಒಂದು ಕಥೆಯಿರುವುದು. ಏನೆಂದರೆ—ಪೂರ್ವದಲ್ಲಿ ಭರ್ಜ ಎಂಬ ಹೆಸರಿನ ಬ್ರಾಹ್ಮಣನಿದ್ದನು. ಅವನು ಒಬ್ಬ ರಾಜನಿಗೆ ಬಹಳ ಪ್ರಿಯನಾಗಿದ್ದನು, ಈ ಬ್ರಾಹ್ಮಣನನ್ನು ನೋಡಿ ಸಹಿಸಲಾರದೆ ಕೆಲವು ಮತ್ಸರಬುದ್ಧಿಯುಳ್ಳ ರಾಜಸೇವಕರು ಈ ಬ್ರಾಹ್ಮಣನ ಮೇಲಣ ದ್ವೇಷದಿಂದ ಆತನ ಮೇಲೆ ಯಾವುದೋ ಒಂದು ಅಪರಾಧವನ್ನು ಆರೋಪಿಸಿ ರಾಜನಿಗೆ ಹೇಳಲಾಗಿ ರಾಜನು ಆ ಬ್ರಾಹ್ಮಣನನ್ನು ಕಣ್ಣು ಕಟ್ಟಿ ಮನುಷ್ಯ ಸಂಚಾರವಿಲ್ಲದ ಅರಣ್ಯದಲ್ಲಿ ಬಿಡಬೇಕೆಂದು ಅಪ್ಪಣೆ ಮಾಡಿದನು. ಅದರಂತೆ ಅವನನ್ನು ಕಣ್ಣುಕಟ್ಟಿ ಅರಣ್ಯದಲ್ಲಿ ಬಿಟ್ಟರು. ಆಮೇಲೆ ಆ ಬ್ರಾಹ್ಮಣನು ಅರಣ್ಯದಲ್ಲಿಯೇ ಬಹು ಕಷ್ಟದಿಂದ ಕೆಲವು ಕಾಲವನ್ನು ಕಳೆಯಲು ದೈವಯೋಗದಿಂದ ಅವನಿಗೆ ಕಾಡುಜನರ ಸ್ನೇಹವಾಗಿ ಆ ಕಾಡುಜನರು ಆ ಬ್ರಾಹ್ಮಣನನ್ನು ಕಣ್ಣುಬಿಚ್ಚಿ ಅವನನ್ನು ಆ ಧೊರೆಯ ಪಟ್ಟಣದ ಸಮೀಪಕ್ಕೆ ತಂದುಬಿಟ್ಟರು. ಆ ಬ್ರಾಹ್ಮಣನು ಪಟ್ಟಣದೊಳಗೆ ಹೋಗಬೇಕೆಂದರೆ ಅವನ ಶತ್ರುಗಳು ತಡೆಯುತ್ತಿದ್ದರು. ಅವನು ಒಳಗೆ ಪ್ರವೇಶಮಾಡದೆ ಹೊರಗೆ ಅಲ್ಲಲ್ಲಿಯೇ ತಿರುಗುತ್ತಿದ್ದನು. ಅದನ್ನು ಕಂಡು ಅವನ ಶತ್ರುಗಳು ಯಾವುದಾದರೊಂದುಪಾಯದಿಂದ ಇವನು ರಾಜನ ಹತ್ತಿರಕ್ಕೆಬರಬಹುದು. ಆದ್ದರಿಂದ ಇವನಮೇಲೆ ರಾಜನ ವಿಶ್ವಾಸವೇ ಹುಟ್ಟದಂತೆ ಯಾವುದಾದರೊಂದುಪಾಯ ಮಾಡಬೇಕೆಂದಾಲೋಚಿಸಿ ರಾಜನೆದುರಿಗೆ ಹೋಗಿ ಮಹಾರಾಜನೆ ಭರ್ಜ ಎಂಬ ಬ್ರಾಹ್ಮಣನು ಮೃತಪಟ್ಟು ಬ್ರಹ್ಮರಾಕ್ಷಸನಾಗಿ ಪಟ್ಟಣದ ಹೊರಗೆ ಸಂಚರಿಸುತ್ತಿದ್ದಾನಂತೆ. ಇದು ನಿಶ್ಚಯವೆಂದು ರಾಜನಿಗೆ ಕ್ಷುದ್ರನನ್ನು ಹೇಳಿದರು. ರಾಜನಾದರೊ ಅದನ್ನು ಯಥಾರ್ಥವೆಂದು ತಿಳಿದನು. ರಾಜನು ಒಂದು ಸಮಯದಲ್ಲಿ ವಿಹಾರಕ್ಕಾಗಿ ಪಟ್ಟಣದ ಹೊರಗೆ ಹೋದಾಗ ಅಕಸ್ಮಾತ್ ಆ ಬ್ರಾಹ್ಮಣನನ್ನು ನೋಡಿ ಬ್ರಹ್ಮರಾಕ್ಷಸನೆಂತಲೇ ತಿಳಿದುಕೊಂಡನು. ಇಲ್ಲಿ ನೋಡಿರಿ, ರಾಜನಿಗೆ ಆ ಬ್ರಾಹ್ಮಣನನ್ನು ತನ್ನ ಕಣ್ಣಿಂದಲೇ ನೋಡಿದ್ದರೂ ಮೃತನಾದ ಬ್ರಾಹ್ಮಣನು ಕಾಣಿಸ್ಪಡುವುದು ಹೇಗೆ? ನಾನು ನೋಡಿದ್ದು ಬ್ರಹ್ಮರಾಕ್ಷಸನೆ ಎಂಬ ಅಸಂಭಾವನೆಯನ್ನೂ, ಅವನು ಬ್ರಾಹ್ಮಣನಲ್ಲವೆಂಬ ವಿಪರೀತ ಭಾವನೆಯನ್ನೂ, ನಾಶಮಾಡಲಿಲ್ಲವೆಂದ ಮೇಲೆ ಅಹಂ ಬ್ರಹ್ಮಾಸ್ಮಿ ಎಂಬುವ ಜ್ಞಾನವು ನಿರ್ದುಷ್ಟವಾದ ವೇದಾಂತವಾ

ಕ್ಯಜನ್ಯವಾಗಿದ್ದರೂ, ನಾನು ಕಿಂಚಿಜ್ಞನೂ ಸುಖದುಃಖವುಳ್ಳವನಾಗಿರುವಾಗ ಆ ಬ್ರಹ್ಮನು ಹೇಗೆ ಆದೇನು? ನಾನು ಬ್ರಹ್ಮಸ್ವರೂಪನಲ್ಲ ಎಂಬುವ ಅಸಂಭಾವನೆ ವಿಪರೀತಭಾವನೆಗಳನ್ನು ನಿವೃತ್ತಿಗೊಳಿಸುವುದಕ್ಕೆ ಹೇಗೆ ಸಮರ್ಥವಾದೀತು? ಆಗುವುದಿಲ್ಲ. ಆದ್ದರಿಂದಲೇ ಯೋಗಬೀಜದಲ್ಲಿ ಶ್ಲೋ॥ ಜ್ಞಾನಾದೇವಹಿಮೋಕ್ಷಂಚವದಂತಿ ಜ್ಞಾನಿನಸ್ಸದಾ। ಸಕಥಂ ಸಿದ್ಧಯೋಗೇನ ಯೋಗಃ ಕಿಂ ಮೋಕ್ಷದೋಭವೇತ್॥ ಹೀಗೆ ಗೌರಿಯು ಪ್ರಶ್ನೆಮಾಡಲು, „ಜ್ಞಾನೇನೈವಹಿಮೋಕ್ಷೋಹಿ ತೇಷಾಂ ವಾಕ್ಯಂತು ನಾನ್ಯಥಾ। ಸರ್ವೇವದಂತಿಖಡ್ಗೇನ ಜಯೋಭವತಿ ತರ್ಹಿಕಿಂ॥ ವಿನಾಯುದ್ಧೇನ ವೀರ್ಯೇಣಕಥಂ ಜಯಮವಾಪ್ನುಯಾತ್। ತಥಾಯೋಗೇನರಹಿತಂ ಜ್ಞಾನಂ ಮೋಕ್ಷಾಯನೋ ಭವೇತ್॥ ಅಂದರೆ ಕೆಲವರು ಜ್ಞಾನದಿಂದಲೇ ಮುಕ್ತಿಯನ್ನು ಹೇಳುವರು. ಯೋಗದಿಂದ ಮುಕ್ತಿಯಾಗುವುದಿಲ್ಲವೇನು? ಎಂದು ಗೌರಿಯು ಪ್ರಶ್ನೆಮಾಡಲು, ಶಿವನು ಹೇಳುವುದೇನೆಂದರೆ—ಎಲೈ ಗೌರಿಯೆ! ಜ್ಞಾನದಿಂದಲೂ ಮುಕ್ತಿಯಾಗುವುದು. ಅವರ ಮಾತೂ ಸುಳ್ಳಲ್ಲವು. ಆದರೆ ಖಡ್ಗದಿಂದ ಜಯವೆಂದು ಎಲ್ಲರೂ ಹೇಳುತ್ತಾರೇನು? ತನ್ನಲ್ಲಿ ಪರಾಕ್ರಮವಿಲ್ಲದೆ ತಾನುಯುದ್ಧವನ್ನೂ ಮಾಡದಿದ್ದರೆ ಜಯವಾಗಬಹುದೆ?ಎಂದೂ ಆಗಲಾರದು. ಆದ್ದರಿಂದ ಯೋಗದಿಂದ ರಹಿತವಾದ ಜ್ಞಾನವು? ಜ್ಞಾನದಿಂದ ರಹಿತವಾದ ಯೋಗವು? ಮೋಕ್ಷವನ್ನು ಕೊಡಲಾರವೆಂದು ಹೇಳಿದನು. ಈ ರೀತಿಯಾದ ಶಿವನವಾಕ್ಯದಿಂದ ಜ್ಞಾನಯೋಗಗಳೆರಡೂ ಮುಕ್ತಿಗೆ ಉಪಾಯವೆಂದು ಸಿದ್ಧವಾಗುವದು. ಯೋಗವು ಚಿತ್ತಶುದ್ಧಿದ್ವಾರಾ ಜ್ಞಾನಕ್ಕೆ ಕಾರಣವಲ್ಲದೆ ಮುಕ್ತಿಗೆ ಕಾರಣವಲ್ಲವೆಂದರೆ, ಯುದ್ಧವಿಲ್ಲದೆ ಖಡ್ಗದಿಂದ ಜಯವಾಗಬೇಕಾಗುವದು. ಮೇಲಣ ಶಿವನ ಉಕ್ತಿಯಲ್ಲಿ ಖಡ್ಗದಂತೆ ಜ್ಞಾನವೂ ಯುದ್ಧದಂತೆ ಯೋಗವೂ ಎಂದು ತಿಳಿಯಲ್ಪಡುತ್ತದೆ. ಶಿವಯೋಗವಿಲ್ಲದೆ ಜ್ಞಾನದಿಂದ ಮುಕ್ತಿಯನ್ನು ಹೇಳುವುದು ಯುದ್ಧಮಾಡದೇಯಿದ್ದ ಹೇಡಿಯು ಕೈಯೊಳಗಿನ ಖಡ್ಗದಿಂದ ಜಯವಾಗುತ್ತದೆಂದು ಹೇಳುವ ಮಾತಿಗೆ ಸಮಾನವಾಗಿದೆ. ಶಿವಯೋಗವೆಂಬ ಯುದ್ಧದಿಂದ ದುಷ್ಟರೂ ಬಲಿಷ್ಠರೂ ಆದ ಇಂದ್ರಿಯಗಳೆಂಬ ಶತ್ರುಗಳನ್ನು ಸಮೂಲವಾಗಿ ನಾಶಮಾಡಿ, ಅವರ ಸರ್ವಸ್ವವನ್ನು ಕೀಳದಿದ್ದರೆ ಆ ಇಂದ್ರಿಯಗಳೆಂಬ ಶತ್ರುಗಳು ಇವನನ್ನು ಸ್ವತಂತ್ರತೆಯಿಂದ ಇರಗೊಡಲಾರವು. ಆದ್ದರಿಂದ ಆ ಶತ್ರುಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ಸ್ವತಂತ್ರನಾಗಬೇಕು. ಆದರೆ ಬಹಳ ದಿವಸದಿಂದಲೂ ತಮ್ಮ ತಮ್ಮ ಪಟ್ಟಣಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸಿ, ಮೈಯುಂಡ ಶತ್ರು

ಗಳು ಬೇಗನೆ ತನಗೆ ಅನುಕೂಲವಾಗಲಾರರು. ಆದ್ದರಿಂದ ಮೊದಲು ಆ ಶತ್ರುಗಳ ಪಟ್ಟಣಗಳನ್ನೇ ಲೂಟಿಮಾಡಬೇಕಾಗುತ್ತದೆ. ರೂಪರಸಾದಿಗಳೆಂಬ ವಿಷಯ ರೂಪಗಳಾದ ಪಟ್ಟಣಗಳನ್ನು ಸುಲಿಗೆಮಾಡಿ ತನ್ನ ಅಧೀನದಲ್ಲಿಟ್ಟುಕೊಂಡುಬಿಟ್ಟರೆ ಆ ಇಂದ್ರಿಯ ರೂಪಗಳಾದ ಶತ್ರುಗಳು ಇರಲಿಕ್ಕೆ ಸ್ಥಾನ ಸಿಕ್ಕದೇ ಹೇಳಿದಂತೆ ಕೇಳುವರು. ಹೀಗೆ ಯುದ್ಧಮಾಡಿ ಜಯಿಸುವುದಕ್ಕೇನೆ ನಮ್ಮ ಶಿವಾಚಾರ್ಯರು ದೇಹಶುದ್ಧಿ ಅಥವಾ ಶರೀರಜಯ, ಭೂತಶುದ್ಧಿ ಅಥವಾ ಭೂತಜಯವೆಂದೆನ್ನುವರು. ಇದು ಹೇಗೆಂಬುವುದನ್ನು ಮುಂದಣ ಮೋಕ್ಷಕಾಂಡದಲ್ಲಿ ತೋರಿಸುತ್ತೇವೆ. ಇದೇ ಅರ್ಥವನ್ನೇ ‹‹ಪರಾಂಚಿಖಾನಿ ವ್ಯತೃಣತ್ಸಯಂಭೂಃ ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ಕಶ್ಚಿದ್ಧೀರಃ ಪ್ರತ್ಯಗಾತ್ಮಾನ ಮೈಕ್ಷತ್ ಆವೃತ್ತಚಕ್ಷುರ ಮೃತತ್ವಮಿಚ್ಛನ್›› ಎಂದು ಕಾಠಕ ಶ್ರುತಿಯು ಹೇಳುತ್ತದೆ. ಏನೆಂದರೆ, ಪರಮಾತ್ಮನು ಇಂದ್ರಿಯಗಳನ್ನು ಬಹಿರ್ಮುಖವಾಗಿ ಹರಿಯುವ ಸ್ವಭಾವವುಳ್ಳವುಗಳನ್ನಾಗಿ ನಿರ್ಮಿಸಿದ ಕಾರಣ ಅವುಗಳನ್ನು ನಾಶಮಾಡಿದನೆಂದು ತಿಳಿಯತಕ್ಕದ್ದು. ಈ ಇಂದ್ರಿಯಗಳನ್ನು ಬಹಿರ್ಮುಖವಾಗಿ ನಿರ್ಮಿಸಿದ ಕಾರಣವೇ ಇಂದ್ರಿಯಗಳು ಅಂತರಾತ್ಮನನ್ನು ನೋಡದೆ ಬಾಹ್ಯವಿಷಯಗಳನ್ನೇ ನೋಡುತ್ತವೆ. ಇವರೊಳಗೆ ಒಬ್ಬಾನೊಬ್ಬ ಧೀರನು ಮಾತ್ರ ಆ ಇಂದ್ರಿಯಗಳನ್ನು ಹೊರಗೆಡಹದಂತೆ ತಡೆದು, ಅಂತರಾತ್ಮನನ್ನು ನೋಡಿ ಮುಕ್ತಿಯನ್ನು ಹೊಂದಿದನು. ಎಂದು ಶ್ರುತಿಯ ಅರ್ಥವು. ಆದ್ದರಿಂದ ಶಿವಯೋಗದಿಂದಲೇ ಸ್ವಸ್ವರೂಪಪ್ರಕಾಶವೆಂದು ಹೇಳಬೇಕಲ್ಲದೆ, ಕೇವಲ ವಾಕ್ಯದಿಂದ ತನ್ನ ಸ್ವರೂಪ ಸಾಕ್ಷಾತ್ಕಾರವಾಗಲಾರದೆಂದು ಮುಖ್ಯ ನಮ್ಮ ಆಶಯವು. ಹಾಗಾದರೆ ಎಲೈ ಶಿವಾದ್ವೈತಿಯೆ! ‹‹ದಶಮಸ್ತ್ವಮಸಿ›› (ನೀನು ಹತ್ತನೆಯವನೇ ಇರುವಿಯೆ) ಎಂಬ ವಾಕ್ಯದಿಂದ ಹತ್ತನೆಯವನಿಗೆ ತನ್ನ ಸ್ವರೂಪ ಸಾಕ್ಷಾತ್ಕಾರವಾಗುವಂತೆ ವೇದಾಂತ ಮಹಾವಾಕ್ಯದಿಂದ ತನ್ನ ಸ್ವರೂಪ ಸಾಕ್ಷಾತ್ಕಾರವಾಗುವುದಿಲ್ಲವೇಕೆ? ಅಂದರೆ ಎಲೈ ಬ್ರಹ್ಮಾದ್ವೈತಿಯೆ! ಗರ್ಭದಲ್ಲಿದ್ದ ವಾಮದೇವನಿಗೆ ಬ್ರಹ್ಮಸಾಕ್ಷಾತ್ಕಾರವಿತ್ತಷ್ಟೆ. ಅವನಿಗೆ ತತ್ವಮಸಿ ಮೊದಲಾದ ವಾಕ್ಯಗಳಂ ಉಪದೇಶಮಾಡಿದವರಾರು? ಆಗ ಅವನಿಗೆ ಯಾವ ವಾಕ್ಯದಿಂದ ಸಾಕ್ಷಾತ್ಕಾರವಾಯಿತು? ಸಾಕ್ಷಾತ್ಕಾರವು ಗರ್ಭದಲ್ಲಿರುವಾಗ ತತ್ವಮಸ್ಯಾದಿ ವಾಕ್ಯವಿಲ್ಲದೆ ಹೇಗಾಯಿತು? ಆದ್ದರಿಂದ ಶುದ್ಧಚಿತ್ತವೇ ಸಾಕ್ಷಾತ್ಕಾರಕ್ಕೆ ಸಾಧನವಲ್ಲದೆ ವಾಕ್ಯವಲ್ಲವೆಂದು ಸ್ಪಷ್ಟವಾಗುತ್ತದೆ. ಮತ್ತು ದಶಮ ಸ್ತ್ವಮಸಿ ಎಂಬಲ್ಲಿಯಾದರೂ ಆ ದಶಮನ

ಸಾಕ್ಷಾತ್ಕಾರಕ್ಕೆ ಆ ವಾಕ್ಯವೇ ಕಾರಣವಲ್ಲ. ಇಂದ್ರಿಯವೂ ಕಾರಣವು. ‹‹ದಶಮಸ್ತ್ವಮಸಿ›› ಎಂಬ ವಾಕ್ಯವು ಸಹಕಾರಿ ಕಾರಣವೆಂತಲೇ ಹೇಳಬೇಕು. ಇಲ್ಲದಿದ್ದರೆ ನದೀ ತೀರದಲ್ಲಿ ಘಟವುಂಟು. ಎಂಬ ವಾಕ್ಯದಿಂದಲಾದರೂ, ಮನೆಯಲ್ಲಿರುವವನಿಗೆ ಘಟವು ಪ್ರತ್ಯಕ್ಷವಾಗಬೇಕಾದೀತು. ಇದಲ್ಲದೆ ಶಿವಾದ್ವೈತಿಯೆ! ಕಗ್ಗತ್ತಲೆಯಲ್ಲಿ ಕಣ್ಣಿಲ್ಲದ ಮನುಷ್ಯನಿಗೆ ನೀನೇ ಹತ್ತನೆಯವನು ಎಂದು ಹೇಳಿದರೆ ಅವನಿಗೆ ಮೊದಲಿನ ಭ್ರಮವು ನಿವೃತ್ತವಾಗಿ ಹತ್ತನೆಯವನು ನಾನೇ ಎಂದು ಸಾಕ್ಷಾತ್ಕಾರವಾಗುತ್ತದಷ್ಟೆ. ಚಕ್ಷುರಿಂದ್ರಿಯವೇ ಆ ಸಾಕ್ಷಾತ್ಕಾರಕ್ಕೆ ಕಾರಣವೆಂದರೆ ಕಣ್ಣಿಲ್ಲದವನಿಗೆ ಆ ಸಾಕ್ಷಾತ್ಕಾರವಾಗಬಾರದಷ್ಟೆ? ಆದ್ದರಿಂದ ವಾಕ್ಯಜನ್ಯಜ್ಞಾನದಿಂದಲೇ ತನ್ನ ಸ್ವರೂಪ ಸಾಕ್ಷಾತ್ಕಾರವೆಂದು ಹೇಳಬೇಕೇ ಹೊರತು ಶಿವಯೋಗದಿಂದ ಹೇಳಬಾರದು. ಅಂದರೆ ಎಲೈ ಬ್ರಹ್ಮಾದ್ವೈತಿಯೆ! ಕಗ್ಗತ್ತಲೆಯಲ್ಲಿ ನಡೆಯುತ್ತಿರುವ ಅಂಧನಿಗೆ ಹತ್ತನೆಯವನಿಲ್ಲವೆಂಬುವ ಭ್ರಮವೇ ಸಂಭವಿಸುವುದಿಲ್ಲ, ಮತ್ತು ಹನ್ನೊಂದನೆ ಆಪ್ತನಾದರೂ ಇವನಿಗೆ ಭ್ರಮವುಂಟಾಗಿದೆ ಎಂದು ನಿಶ್ಚಯವಿಲ್ಲದೆ ಇರುವುದರಿಂದ ಹತ್ತನೇಯವನು ನೀನೆ ಆಗಿರುವೆ. ಎಂದು ಹೇಳುವದಕ್ಕೂ ಹೋಗಲಾರನು. ಮತ್ತು ಹತ್ತನೆಯವನು ನೀನೇ ಎಂದು ಅನ್ನುವ ಸಮಯದಲ್ಲಿ ಆ ಕುರುಡನು ಎಲ್ಲರನ್ನೂ ಎಣಿಸದೆ ತನ್ನನ್ನು ಹತ್ತನೆಯವನನ್ನಾಗಿ ತಿಳಿಯುವುದಿಲ್ಲವು. ಆದ್ದರಿಂದ ಆ ಗಣನೆಯೇ ಸಾಕ್ಷಾತ್ಕಾರಕ್ಕೆ ಕಾರಣವೆಂದು ಹೇಳಬೇಕು.

ಶಬ್ದವು ಸಹಕಾರಿ ಕಾರಣವಲ್ಲದೆ ಮುಖ್ಯ ಕಾರಣವಲ್ಲವೆಂದು ತಿಳಿಯಬೇಕು. ಆದ್ದರಿಂದ ಸ್ವಸ್ವರೂಪ, ಸರ್ವಜ್ಞತ್ವ, ಸಚ್ಚಿದಾನಂದ ಪ್ರಕಾಶಕ್ಕೆ ಶಿವಯೋಗವೇ ಮುಖ್ಯ ಕಾರಣವಲ್ಲದೆ ಜ್ಞಾನವೊಂದೇ ಅಲ್ಲವು. ಆದ್ದರಿಂದಲೇ ಸ್ಕಾಂದಪುರಾಣದಲ್ಲಿ ‹‹ವೃತ್ತಿಹೀನಂಮನಃಕೃತ್ವಾ ಕ್ಷೇತ್ರಜ್ಞಂ ಪರಮಾತ್ಮನೇ! ಏಕೀಕೃತ್ಯವಿಮುಚ್ಯೇತ ಯೋಗಯುಕ್ತಸ್ಸಉಚ್ಯತೇ›› ಅಂದರೆ ಯಾವನು ತನ್ನ ಮನಸ್ಸನ್ನು ವೃತ್ತಿಗಳಿಲ್ಲದ್ದನ್ನಾಗಿ ಮಾಡಿ ಕ್ಷೇತ್ರಜ್ಞನಾದ ಜೀವನನ್ನು ಪರಮಾತ್ಮನಲ್ಲಿ ಸಮರಸಗೊಳಿಸಿ ಮುಕ್ತನಾಗುವನೋ ಅವನೇ ಯೋಗಿಯೆಂದು ಹೇಳಲ್ಪಟ್ಟಿರುವುದು. ಚಿತ್ತವು ಎಲ್ಲಿಯ ವರಿವಿಗೂ ಸುಖ, ದುಃಖ, ಮೋಹ, ಕಾಮ, ಕ್ರೋಧಾದಿ ವೃತ್ತಿಗಳುಳ್ಳದ್ದಾಗುವುದೋ ಅಲ್ಲಿಯವರಿವಿಗೂ ಬಂಧವು. ಯಾವಾಗ ವೃತ್ತಿಗಳಿಲ್ಲದ್ದಾಗಿ ಚಿತಿರೂಪವೇ ಆಗುವುದೋ ಆಗ ಮುಕ್ತನಾಗುವನು. ಇದೇ ತಾತ್ಪರ್ಯವನ್ನು ‹‹ಜ್ಞಾನಂಬಂಧಃ›› ಎಂಬ ಶಿವಸೂತ್ರವು ಹೇಳುತ್ತದೆ. ಈ

ಬಂಧನಿವೃತ್ತಿಗಾಗಿ ಶಿವಯೋಗವೇ ಬೇಕು. ಕೇವಲ ಜ್ಞಾನವೊಂದರಿಂದ ಮುಕ್ತಿಯಿಲ್ಲವು. ಆದ್ದರಿಂದಲೇ "ಯೋಗಹೀನಂ ಕಥಂ ಜ್ಞಾನಂ ಮೋಕ್ಷದಂ ಭವತೀಶ್ವರಿ ಯೋಗೋಪಿ ಜ್ಞಾನಹೀನಸ್ತು ನಕ್ಷಮೋ ಮೋಕ್ಷಕರ್ಮಣಿ" ಎಂಬೀ ಶಿವೋಕ್ತಿಯಿರುವುದು. ಅಂದರೆ ಯೋಗವಿಲ್ಲದ ಜ್ಞಾನವು ಮೋಕ್ಷವನ್ನು ಹೇಗೆ ಕೊಟ್ಟೀತು? ಎಲೈ ಪಾರ್ವತಿಯೆ! ಜ್ಞಾನವಿಲ್ಲದ ಯೋಗವಾದರೂ ಮೋಕ್ಷಫಲವನ್ನು ಕೊಡುವುದರಲ್ಲಿ ಸಮರ್ಥವಾಗಲಾರದು. ಎಂದು ಆ ಶ್ಲೋಕದರ್ಥವು. ಕೇವಲ ಜ್ಞಾನದಿಂದಲೇ ಮುಕ್ತಿ ಎಂದು ಹೇಳಿದರೆ ಶ್ಲೋ॥ ತಸ್ಮಾದ್ಯೋಗಾತ್ಪರತರೋನಾಸ್ತಿ ಮಾರ್ಗಸ್ತು ಮೋಕ್ಷದಃ | ಯೋಗಾತ್ಪರತರಂ ಪುಣ್ಯಾತ್ ಯೋಗಾತ್ಪರತರಂ ಸುಖಂ | ಯೋಗಾತ್ಪರತರಂ ಸೂಕ್ಷ್ಮಂ ಯೋಗಮಾರ್ಗಾತ್ಪರಂ ನಹಿ | ಜೀವನ್ಮುಕ್ತೋ ಭವೇದ್ಯೋಗಾತ್ ಪುನರತ್ರನ ಸಂಶಯಃ ॥ ಇವೇ ಮೊದಲಾದ ಶಿವೋಕ್ತಿಗಳು ಹೇಗೆ ಪ್ರಮಾಣಗಳಾಗುವುವು ಆ ಶ್ಲೋಕಗಳ ತಾತ್ಪರ್ಯವೇನೆಂದರೆ ಶ್ರೇಷ್ಠವಾದ ಯೋಗಕ್ಕಿಂತಲೂ ಮೋಕ್ಷವನ್ನು ಕೊಡುವ ಮತ್ತೊಂದು ಉತ್ತಮಮಾರ್ಗವಿಲ್ಲವು. ಪವಿತ್ರವಾದ ಯೋಗದಿಂದಲೇ ಶ್ರೇಷ್ಠ ವಸ್ತುವನ್ನು ಹೊಂದುವನು. ಯೋಗದಿಂದಲೇ ಶ್ರೇಷ್ಠವಾದ ಸುಖವನ್ನೂ ಯೋಗದಿಂದಲೇ ಶ್ರೇಷ್ಠತರವಾದ ಸೂಕ್ಷ್ಮವಸ್ತುವನ್ನೂ ಹೊಂದುವನು. ಯೋಗಮಾರ್ಗಕ್ಕಿಂತಲೂ ಶ್ರೇಷ್ಠವಾದ ಮಾರ್ಗವಿಲ್ಲವು. ಯೋಗದಿಂದಲೇ ಮನುಷ್ಯನು ಜೀವನ್ಮುಕ್ತನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲವು. ಯೋಗಿಯಾದವನು ಕೇವಲ ಸ್ವಸ್ವರೂಪ ಪ್ರಾಪ್ತಿರೂಪವಾದ ಮುಕ್ತಿಗೇನೆ ಪ್ರಯತ್ನಪಡಬೇಕಲ್ಲದೆ ಸಿದ್ಧಿಗಳನ್ನು ಮನಸ್ಸಿನಿಂದಲೂ ಇಚ್ಛಿಸಬಾರದು. ಸಿದ್ಧಿಗಳಿಚ್ಛೆಯಿಂದ ಯೋಗವನ್ನು ಮಾಡಿದರೆ ಯೋಗಸಿದ್ಧಿಯಾಗಲಾರದು. ಮುಕ್ತಿಯಾದರೂ ದೂರೇ ಉಳಿಯುವದು. ಆ ಸಿದ್ಧಿಗಳು ಒಂದು ದೊಡ್ಡ ಪಟ್ಟಣಕ್ಕೆ ಹೋಗುವಾಗ ಮಧ್ಯಮಾರ್ಗದಲ್ಲಿ ಎಷ್ಟೋ ಗ್ರಾಮಗಳೂ ವಸ್ತುಗಳೂ ದೊರೆಯುವಂತೆ ತಮ್ಮಿಂದ ತಾವೇ ಪ್ರಾಪ್ತಗಳಾಗುವವು. ಹಾಗೆ ಅಕಸ್ಮಾತ್ ಪ್ರಾಪ್ತವಾದ ಸಿದ್ಧಿಗಳಿಂದ ತನ್ನ ಮುಕ್ತಿಯನ್ನು ತಾನು ತಿಳಿದುಕೊಳ್ಳಬೇಕು. ಈಗಣ ಕೆಲವು ಹುಚ್ಚರು ಯಾವ ಸಿದ್ಧಿಗಳಿಲ್ಲದಿದ್ದರೂ ನಾವು ಮುಕ್ತರಾಗಿರುವೆವೆಂದು ಜಡಬಡಿಸಿ ನಮಗೆ ಕರ್ಮದ ಸಂಬಂಧವಿಲ್ಲವೆಂದು ಏನೇನೋ ಮನಸ್ಸಿಗೆ ಬಂದಂತೆ ಅತ್ಯಾಚಾರ ಅನಾಚಾರಗಳನ್ನೂ ಕೂಡ ಮಾಡುತ್ತಾರೆ. ಇದಕ್ಕಾಗಿ ಯಮನು ಘನಘೋರವಾದ ನರಕವನ್ನು ತಯಾರಿಸಿ ಇವರು ಬರುವುದನ್ನೇ ಯದುರು

ನೋಡುತ್ತ ಕುಳಿತಿರುವನು. ಇದರಿಂದ ಕೇವಲ ಸಿದ್ಧಿಗಳನ್ನೇ ಇಚ್ಛಿಸಬಾರ ದೆಂಬುವ ವಿಷಯದಲ್ಲಿಯೂ, ರೋಗಗಳಿಂದಲೇ ಸಕಲ ಸಿದ್ಧಿಗಳುಂಟಾಗು ವವೆಂಬುವ ವಿಷಯದಲ್ಲಿಯೂ, ಶಿವೋಕ್ತಿಗಳೇ ಪ್ರಮಾಣಗಳಾಗಿರುವುವು. ಶ್ಲೋ ॥ ಯಥಾಕಾಶೀಸಮುದ್ದಿಶ್ಯ ಗಚ್ಛದ್ಭಿಃ ಪಥಿಕೈಃ ಪಥಿ । ನಾನಾತೀ ರ್ಥಾನಿ ದೃಶ್ಯಂತೆ ತಥಾ ಮೋಕ್ಷೇಷು ಸಿದ್ಧಯಃ । ಸ್ವಯಮೇವಪ್ರಜಾ ಯಂತೆ ಲಾಭಾಲಾಭವಿವರ್ಜಿತೆ । ಯೋಗಮಾರ್ಗೇ ತಥೈವೇದಂ ಸಿದ್ಧಿಜಾಲಂ ಪ್ರವರ್ತತೆ । ಪರೀಕ್ಷಕೈಃ ಸ್ವರ್ಣಕಾರೈಃ ಹೇಮ್ನಸ್ಸಂಲಕ್ಷತೇ ಯಥಾ । ಸಿದ್ಧಿಭಿ ರ್ಲಕ್ಷಯೇತ್ ಸಿದ್ಧಿಂ ಜೀವನ್ಮುಕ್ತಿಂ ತಥೈವಚ । ಅಲೌಕಿಕಗುಣಸ್ತಸ್ಯ ಕದಾ ಚಿತ್ ದೃಶ್ಯತೇಧ್ರುವಂ ಇತ್ಯೇತತ್ಕಥಿತಂದೇವಿ ಯೋಗಸಿದ್ಧಸ್ಯಲಕ್ಷಣಂ ಸಿದ್ಧಿ ಭಿಃ ಪರಿಹೀನಂತಂ ನರಂ ಬಂಧಂತುಲಕ್ಷಯೇತ್ ॥

ಯೋಗವೇ ಮುಕ್ತಿಗೆ ಕಾರಣವೆಂದರೆ ಯೋಗದರ್ಶನದಲ್ಲಿ ಹೇಳಿರುವ ‘‘ಏತೇನಯೋಗೋಪಿಪ್ರತ್ಯುಕ್ತಃ’’ ಎಂಬುವ ಸೂತ್ರದಿಂದ ಯೋಗವು ನಿರಾಕ ರಿಸಲ್ಪಟ್ಟಿರುವಕಾರಣ ಅದಕ್ಕೆ ಪ್ರಾಮಾಣ್ಯವನ್ನೂ, ಮುಕ್ತಿಗೆ ಕಾರಣವಾಗುವಿ ಕೆಯನ್ನೂ ಹೇಗೆ ಅಂಗೀಕರಿಸಬೇಕು ಎಂದಾಕ್ಷೇಪಿಸಿದಲ್ಲಿ ‘‘ಏತೇನಯೋಗಃ ಪ್ರತ್ಯುಕ್ತಃ’’ ಎಂಬ ಈ ಸೂತ್ರದ ಅರ್ಥವೇನಂದರೆ–ಪ್ರಧಾನವೇ ಜಗತ್ಕಾರಣವೆಂ ಬುವ ಸಾಂಖ್ಯಸ್ಮೃತಿಯ ನಿರಾಕರಣದಿಂದ ಯೋಗವೂ ಕೂಡಾ ನಿರಾಕರಿಸಲ್ಪ ಟ್ಟಿತು ಎಂಬುವವ್ಯಾಸಸೂತ್ರದಿಂದ ಯೋಗಶಾಸ್ತ್ರವು ಜಗಜ್ಜನ್ಮಾದಿ ಕರ್ತೃತ್ವ ವನ್ನು ಪ್ರಧಾನಕ್ಕೆ ಹೇಳುವ ಪಕ್ಷದಲ್ಲಿ ಶಿವನಿಗೆ ನಿಮಿತ್ತೋಪಾದಾನಕಾರಣತನ ವನ್ನು ಹೇಳುವ ಅನೇಕಶ್ರುತಿಗಳಿಗೆ ವಿರೋಧವಾಗುವುದರಿಂದ ಯೋಗಶಾಸ್ತ್ರಕ್ಕೆ ಆ ಭಾಗದಲ್ಲಿ ಅಪ್ರಾಮಾಣ್ಯವನ್ನು ಒಪ್ಪಿಕೊಂಡರೂ ‘‘ಶ್ರೋತವ್ಯೋಮಂತವ್ಯೋ ನಿಧಿಧ್ಯಾಸಿತವ್ಯಃ’’ ‘‘ತಾಂ ಯೋಗಮಿತಿ ಮನ್ಯಂತೆ । ಸ್ಥಿರಾಮಿಂದ್ರಿಯಧಾ ರಣಾಂ’’ ‘‘ವಿದ್ಯಾಮೇತಾಂ ಯೋಗವಿಧಿಂಚಕೃತ್ಸ್ನಂ’’ ಮೊದಲಾದ ಶ್ರುತಿಗ ಳಿಂದ ಧ್ಯಾನಧಾರಣಾದಿ ಅಂಶಗಳಲ್ಲಿ ಯೋಗಶಾಸ್ತ್ರಕ್ಕೆ ಪ್ರಾಮಾಣ್ಯವನ್ನೇ ಒಪ್ಪಿಕೊಳ್ಳಬೇಕಲ್ಲವೇ ? ಇಲ್ಲದಿದ್ದರೆ ಶ್ರುತಿಗಳಿಗೂ ಅಪ್ರಾಮಾಣ್ಯವೇ ಬರುವುದು. ಆದುದರಿಂದಲೇ ಶ್ರೀಮನ್ನೀಲಕಂಠ ಶಿವಾಚಾರ್ಯರೂಕೂಡ ‘‘ಧ್ಯಾನಾದ್ಯಂ ಶೇಸ್ಮೃತೇಸ್ತಸ್ಯಪ್ರಾಮಾಣ್ಯಂ ನ್ಯಾಯಗೌರವಾತ್’’ ಈ ವಿಷಯದಲ್ಲಿ ನ್ಯಾಯ ವಿರುವುದರಿಂದ ಧ್ಯಾನಾದ್ಯಂಶದಲ್ಲಿ ಯೋಗಸ್ಮೃತಿಯು ಪ್ರಮಾಣವಾಗಿದೆಎಂದು ಹೇಳಿರುವರು. ಎಲೈ ಶಿವಾದ್ವೈತಿಯೇ ಇದು ಹೇಗೆ ಸಂಭವಿಸುವದು. ಒಂದರಲ್ಲಿ

ಪ್ರಮಾಣವೆನ್ನುವದೂ ಮತ್ತೊಂದರಲ್ಲಿ ಅಪ್ರಮಾಣವೆನ್ನುವದೂ ಅರ್ಧಜರತೀಯ ತ್ವವಾಗಲಿಲ್ಲವೇ? ಅಂದರೆ ಇದಕ್ಕೆ ಉತ್ತರವನ್ನು ಭಾಮತೀಕಾರರೇ ಕೊಟ್ಟಿರುವ ರೇನಂದರೆ—ಪ್ರಧಾನವು ಯೋಗಶಾಸ್ತ್ರಕ್ಕೆ ವಿಷಯವೇ ಅಲ್ಲವು. ಯಮನಿಯ ಮಾದಿಗಳೇ ವಿಷಯಗಳು. ಆದುದರಿಂದ ತನಗೆ ಅವಿಷಯವಾದ ಪ್ರಧಾನದಲ್ಲಿ ಯೋಗಶಾಸ್ತ್ರವು ಅಪ್ರಮಾಣವಾದರೂ ತನಗೆ ವಿಷಯವಾದ ಯಮಾದ್ಯಷ್ಟಾಂ ಗಯೋಗದಲ್ಲಿಯೂ ಅಪ್ರಮಾಣವಾಗಲಾರದು. ಚಕ್ಷುರಿಂದ್ರಿಯವು ತನಗೆ ಅವಿ ಷಯವಾದ ರಸದಲ್ಲಿ ಅಪ್ರಮಾಣವಾದರೂ ತನಗೆ ವಿಷಯಗಳಾದ ರೂಪಾದಿಗ ಳಲ್ಲಿ ಪ್ರಮಾಣವೇ ಆಗಿರುವದಷ್ಟೆ? ಆದುದರಿಂದ ಯೋಗಶಾಸ್ತ್ರವು ಧ್ಯಾನಾದಿ ಯೋಗದಲ್ಲಿ ಪ್ರಮಾಣವೇ ಆಗುವದು. ಇದೇ ಅರ್ಥವನ್ನು ಶ್ರೀಕಂಠಭಾಷ್ಯ ಕಾರರೂ ಕೂಡ ಅಂಗೀಕರಿಸಿರುವರು. „ತಸ್ಯಯೋಗಶ್ಚಿತ್ತವೃತ್ತಿನಿರೋಧ ಇತ್ಯಾ ಶಭ್ಯ ವೈದಿಕಾಷ್ಟಾಂಗಯೋಗ ಪ್ರತಿಪಾದನಮಾತ್ರೇ ತಾತ್ಪರ್ಯಂ ನಾ ವೈದಿಕೆ ಪ್ರಧಾನಕಾರಣವಾದೇಪಿಯದಿ ತತ್ರಾಪಿ ತಾತ್ಪರ್ಯಂ ಸಾಂಖ್ಯಸ್ಮೃತಿವದ ಸ್ಯಾಪಿ ಪ್ರತ್ಯಾಖ್ಯಾ ನಮೇವನ್ಯಾಯಂ" ಅಂದರೆ „ಯೋಗಶ್ಚಿತ್ತವೃತ್ತಿನಿರೋ ಧಃ" ಎಂಬ ಸೂತ್ರ ಮೊದಲುಗೊಂಡು ಇರತಕ್ಕ ಯೋಗಶಾಸ್ತ್ರವು ವೈದಿಕವಾದ ಅಷ್ಟಾಂಗಯೋಗದ ಪ್ರತಿಪಾದನ ಮಾತ್ರದಲ್ಲಿ ತಾತ್ಪರ್ಯವುಳ್ಳದ್ದಲ್ಲದೆ ಅವೈ ದಿಕವಾದ ಪ್ರಧಾನಕಾರಣವಾದದಲ್ಲಿ ತಾತ್ಪರ್ಯವುಳ್ಳದ್ದಲ್ಲವು. ಅದಕ್ಕೆ ಪ್ರಧಾ ನಕಾರಣವಾದದಲ್ಲಿ ತಾತ್ಪರ್ಯವಿದೆಯೆಂದು ಹೇಳಿದರೆ ಸಾಂಖ್ಯಸ್ಮೃತಿ ಯಂತೆ ಯೋಗಸ್ಮೃತಿಯನ್ನೂ ತಿರಸ್ಕಾರ ಮಾಡತಕ್ಕದ್ದು ಎಂದು ಹೇಳಿರು ವರು. ಇದೇ ಸೂತ್ರದ ವ್ಯಾಖ್ಯಾನದಲ್ಲಿ ಕಾರಿಕಾಕಾರರು ಯಾವುದಕ್ಕೆ ಯೋಗವೆನ್ನಬೇಕೆಂಬ ವಿಷಯದಲ್ಲಿ ಸ್ಪಷ್ಟವಾಗಿ ಹೇಳಿರುವದೇನಂದರೆ—„ಯೋ ಗೋನಾಮಹಿಸಂಬಂಧೋ ಜೀವಾತ್ಮ ಪರಮಾತ್ಮನೋಃ | ಧ್ಯಾನಯೋಗೇತಿ ವಾಕ್ಯೇನ ಯೋಗನಿಷ್ಠಾ ಉದಾಹೃತಾ | ಅಂಗಂಜೀವಃ ಪರಂಲಿಂಗಂ ಸಾಮ ರಸ್ಯಂತಯೋಃ ಶುಭಂ | ಯೋಗಇತ್ಯುಚ್ಯತೆ ಸದ್ಭಿಃ ಶಿವತತ್ವಾರ್ಥವೇದಿಭಿಃ || ಅಂದರೆ ಲಿಂಗಾಂಗರೂಪರಾದ ಶಿವಜೀವರುಗಳ ಸಂಬಂಧರೂಪವಾದ ಸಾಮ ರಸ್ಯವೇ ಯೋಗವು. ಈ ಯೋಗನಿಷ್ಠರಾದ ವೀರಶೈವರೇ „ತೇಧ್ಯಾನಯೋಗಾ ನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ" ಎಂಬುವ ಶ್ರುತಿ ಯಿಂದ ಹೇಳಲ್ಪಟ್ಟಿರುವರು. ಮತ್ತು „ಯದಿದಮಸ್ಮಿನ್ ಬ್ರಹ್ಮಪುರೆದಹರಂ ಪುಂಡರೀಕಂ ವೇಶ್ಮದಹರೋಸ್ಮಿನ್ನಂತರಾಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟ

ವ್ಯಂ'' ಅಂದರೆ ಶರೀರವೆಂಬ ಬ್ರಹ್ಮಪುರಿಯಲ್ಲಿ ಹೃದಯಕಮಲವೆಂಬ ಮನೆಯಿರುವುದು. ಆ ಮನೆಯಲ್ಲಿ ದಹರಾಕಾಶವೆಂಬ ಸೂಕ್ಷ್ಮಸ್ಥಾನದಲ್ಲಿ ಯಾವ ಬ್ರಹ್ಮವಿದೆಯೋ ಆ ಲಿಂಗರೂಪವಾದ ಬ್ರಹ್ಮವನ್ನೇ ಹುಡುಕಬೇಕು. ಎಂಬರ್ಥವುಳ್ಳ ಈ ಶ್ರುತಿಯಿಂದ ಹೃದಯದಲ್ಲಿ ಶಿವಲಿಂಗಧ್ಯಾನಧಾರಣರೂಪವಾದ ಶಿವಯೋಗವೇ ಹೇಳಲ್ಪಟ್ಟಿತು. ಈ ಶ್ರುತ್ಯರ್ಥವನ್ನೇ ಕಾರಿಕಾಕಾರರು ''ದೃಶ್ಯತೇತಚ್ಛರೀರೇಸ್ಮಿಂಸ್ತಸ್ಮಾದ್ಬ್ರಹ್ಮಪುರಂಚತತ್ | ಎಂಬುದು ಮೊದಲಾದ ಶ್ಲೋಕಗಳಿಂದ ಹೇಳಿರುವರು. ಮತ್ತು ''ಅಯಮೇವಹಿ ಯೋಗೋತ್ರ ಸರ್ವಶಾಸ್ತ್ರಾರ್ಥಸಮ್ಮತಃ | ಯೋಗಸ್ಮೃತೇಸ್ತದಂಶೇತು ಪ್ರಾಮಾಣ್ಯಂನೇತರತ್ರಚ||''ಎಂಬದಾಗಿ ಶಿವಯೋಗವೇ ವೇದಾಗಮಾದಿಗಳಲ್ಲಿ ಸಮ್ಮತವಾಗಿದೆ ಎಂದು ಹೇಳಿರುವರು. ಆದ್ದರಿಂದ ಯೋಗಶಾಸ್ತ್ರಕ್ಕೆ ಶಿವಲಿಂಗಧ್ಯಾನಧಾರಣಾದಿ ಶಿವಯೋಗಾಂಶದಲ್ಲಿಯೇ ಪ್ರಾಮಾಣ್ಯವಲ್ಲದೆ ಮಿಕ್ಕ ಅಂಶದಲ್ಲಿ ಪ್ರಮಾಣ್ಯವಿಲ್ಲವು. ಅಷ್ಟಾಂಗಯೋಗವೂ, ''ತಸ್ಯವಾಚಕಃ ಪ್ರಣವಃ'' ''ತಜ್ಜಪಸ್ತದರ್ಥಭಾವನಂ'' ಆ ಈಶ್ವರವಾಚಕವಾದ ಪ್ರಣವದ ಜಪವೂ, ಆ ಪ್ರಣವಾರ್ಥವಾದ ಈಶ್ವರನ ಭಾವನೆಯೂ, ಎಂಬುವ ಮುಂತಾದ ಅಂಶಗಳಲ್ಲಿ ಪ್ರಮಾಣವಲ್ಲದೆ ಇತರವಾದ ಪ್ರಧಾನಕಾರಣವಾದದಲ್ಲಿ ಪ್ರಮಾಣವಲ್ಲವೆಂದು ಕಾರಿಕಾಕಾರರ ಅಭಿಪ್ರಾಯವು. ಶ್ರುತಿ ಸ್ಮೃತಿಗಳಿಗೆ ವಿರೋಧವಾದಲ್ಲಿ ಶ್ರುತಿಯೇ ಬಲಿಷ್ಠವಾಗುತ್ತದೆ. ಆದುದರಿಂದ ''ಸರ್ವಲಿಂಗಂಸ್ಥಾಪಯತಿ'' ಅಂದರೆ ಸರ್ವರೂ ಲಿಂಗವನ್ನು ಧರಿಸುತ್ತಾರೆ. ''ಅಮೃತಸ್ಯ ದೇವಧಾರಣೋ ಭೂಯಾಸಂ'' ಮುಕ್ತಿಗೋಸ್ಕರ ದೇವರೂಪನಾದ ಲಿಂಗದ ಧಾರಣೆಯುಳ್ಳವನಾಗುವೆನು. ಎಂಬುವ ಮೊದಲಾದ ಶ್ರುತಿವಾಕ್ಯಗಳಿಂದ ಬಾಹ್ಯೇಷ್ಟಲಿಂಗಧಾರಣೆಗೆ ಪ್ರಮಾಣ ಸಿದ್ಧವಾಗಲು—ಲಿಂಗಿನಂ ಚಕ್ರಿಣಂ ದೃಷ್ಟ್ವಾ ಸಚೇಲಂ ಸ್ನಾನಮಾಚರೇತ್ || ಎಂಬುವ ಮೊದಲಾದ ಸ್ಮೃತಿಗಳಿಗೇನೆ ಅಪ್ರಾಮಾಣ್ಯವನ್ನು ಹೇಳಬೇಕು. ಇದನ್ನೇ ಶ್ರೀಮನ್ನೀಲಕಂಠ ಶಿವಾಚಾರ್ಯರು ''ಅತಃ ಶೈವೀಯಧರ್ಮಾಣಾಂ ಪ್ರಮಾಣೈಸ್ತು ಶ್ರುತೀತರೈಃ| ನಿಷೇಧೇಚ ಕ್ವಚಿದ್ದೃಷ್ಟೇಚಾಮೃತಸ್ಯೇತಿವಾಕ್ಯತಃ || ತೇಷಾಂ ಬಾಧನಮೇವಸ್ಯಾನ್ನೈಪತ್ಯೈಃ ಶ್ರುತಿಬಾಧನಂ|| ಅಂದರೆ ವೀರಶೈವಸಂಬಂಧಗಳಾದ ಶಿವಲಿಂಗಧಾರಣ ಮೊದಲಾದ ಧರ್ಮಗಳಿಗೆ ಕೆಲವು ಕಡೆಯಲ್ಲಿ ನಿಷೇಧವು ಕಂಡುಬಂದರೂ ಪ್ರಬಲ ಶ್ರುತಿವಾಕ್ಯಗಳಿಂದ ದುರ್ಬಲಗಳಾದ ಶ್ರುತಿ ಭಿನ್ನವಾಕ್ಯಗಳೇ ಬಾಧಿಸಲ್ಪಡುತ್ತವೆಯಲ್ಲದೆ ಆ ಸ್ಮೃತ್ಯಾದಿ ಶ್ರುತೀತರ ವಾಕ್ಯಗಳಿಂದ ಶ್ರುತಿ ವಾಕ್ಯಗಳು ಬಾಧಿಸಲ್ಪಡುವದಿಲ್ಲವೆಂದು

ಹೇಳಿರುವರು. ಆದ್ದರಿಂದ ಮೇಲೆ ಹೇಳಿದ—ಲಿಂಗಿನಂಚಕ್ರಿಣಃ" ಎಂಬ ನಿಷೇಧ ವಾಕ್ಯವು ಶ್ರುತಿಮೂಲಕವಾಗದಿರುವದರಿಂದ ಯಾರೋ ವಂಚಕರು ಕಲ್ಪಿಸಿರುವ ರೆಂದು ಸ್ಪಷ್ಟವಾಗುತ್ತದೆ. ಆದುದರಿಂದಲೇ ಶ್ರೀಕರ ಭಾಷ್ಯಕಾರರೂ ಕೂಡ। ಲಿಂಗಿಸಂಚಕ್ರಿಣಮಿತ್ಯಾದಿ ನಿಷೇಧಕಸ್ಮೃತೀನಾಂ ಪ್ರಾತ್ಯಕ್ಷಿಕವೇದಮೂಲ ಕತ್ವಾಭಾವಾತ್ । ಸಾಂಖ್ಯಸ್ಮೃತಿವನ್ನವಿಧೇಯಂ ಶ್ರೌತವಿಧೇರ್ಬಲೀಯ ಸ್ತ್ವಾತ್ "ಉದಿತೆ ಜುಹೋತಿ ಅನುದಿತೆ ಜುಹೋತೀತಿ ವಚನದ್ವ ಯವಿರೋಧೆ ಶಾಖಾಂತರ ವಿಷಯವನ್ಮೂಲಾನುಟ್ಟಂಕಿತಧೂರ್ತಸ್ಮಾರ್ತ ಮಾಯಾವಾದಿಕಲ್ಪಿತ ನಿಷೇಧವಾಕ್ಯಾನಾಂಗಗನಾರವಿಂದವತ್ಪ್ರಾಮಾಣ್ಯಾಂ ಗೀಕಾರೆ । ಅವೈದಿಕ ತಪ್ತಲಿಂಗಾದಿ ವಿಷಯತ್ವಂ ಗ್ರಾಹ್ಯಂಚಕ್ರಿಪದ ಸಾಮಾನಾಧಿಕರಣ್ಯದರ್ಶನಾತ್ ॥ ಎಂದು ಹೇಳಿರುವರು. ವೀರಶೈವೀಯ ಲಿಂಗಧಾರಣಾದಿ ರೂಪವಾದ ಶಿವಯೋಗಕ್ಕೆ "ಅಮೃತಸ್ಯ ದೇವಧಾರಣೋ ಭೂಯಾಸಂ" ಮೊದಲಾದ ಶ್ರುತಿಗಳಿಂದ ಪ್ರಾಮಾಣ್ಯವನ್ನು ಸ್ವೀಕರಿಸಿದ ಪಕ್ಷದಲ್ಲಿ ಪೂರ್ವಕಾಂಡದಲ್ಲಿ ಪ್ರಸಿದ್ಧಗಳಾದ ಅಗ್ನಿಷ್ಟೋಮಾದಿ ಧರ್ಮಗ ಳಿಗೂ ವೀರಶೈವೀಯ ಧರ್ಮಗಳಿಗೂ ಪರಸ್ಪರ ವಿರೋಧವಾಗುವದು. ಆದ್ದ ರಿಂದ ವೀರಶೈವ ಧರ್ಮಗಳನ್ನು ಪ್ರತಿಪಾದಿಸುವ ವಾಕ್ಯಗಳಿಗೇನೇ ಬಹುವಾಕ್ಯ ಗಳಿಗನುಸಾರವಾಗಿ ಬೇರೇ ಅರ್ಥವನ್ನು ಹೇಳಬೇಕೆಂದರೆ— ಅರ್ಥಾಂತರಪರ ತ್ವಂತುವಕ್ತವ್ಯಮಿತಿಚೇತ್ಸುಣು" ಎಂದು ಆಚಾರ್ಯರು ಹೇಳಿದ ಸಮಾಧಾನದ ತಾತ್ಪರ್ಯವನ್ನೇ ಹೇಳುವೆನು. "ಸರ್ವಮನ್ಯತ್ಪರಿತ್ಯಜ್ಯ ಶಿವಏಕೋಧ್ಯೇಯಃ ಶಿವಂಕರಃ" ನಕರ್ಮಣಾನಪ್ರಜಯಾನಧನೇನತ್ಯಾಗೇನೈಕೆ । ಅಮೃತತ್ವಮಾನ ಶುಃ" ನಾಸ್ತ್ಯಕೃತಃಕೃತೇನ" ಇವೇ ಮೊದಲಾದ ಶ್ರುತಿಗಳಿಂದ ಪಶುಕರ್ಮ ಪ್ರತಿಪಾದಕವಾದ ಕರ್ಮಕಾಂಡದ ಕರ್ಮಗಳಿಗೆ ದೌರ್ಬಲ್ಯವು ಕಂಡುಬರುವ ದ್ದರಿಂದ ಬ್ರಹ್ಮಕಾಂಡೋಕ್ತ ವೀರಶೈವೀಯ ಧರ್ಮಗಳು ಸ್ಥಿರವಾದ ಮು ಕ್ತಿಸುಖವನ್ನು ಕೊಡುವವಾದ್ದರಿಂದ ಪ್ರಬಲಗಳೆಂದು ಹೇಳಬೇಕು. ಮತ್ತು ಉತ್ತಮರತ್ನಗಳಂತೆ ಗ್ರಹಿಸಲು ಯೋಗ್ಯಗಳಾಗಿರುವವು. ಕರ್ಮಕಾಂಡೀಯ ಅಗ್ನಿಷ್ಟೋಮಾದಿ ಪಶುಧರ್ಮಗಳು ಅಸ್ಥಿರ ಸ್ವರ್ಗಾದಿ ಫಲವನ್ನು ಕೊಡತಕ್ಕ ವುಗಳಾದುದರಿಂದ ದುರ್ಬಲಗಳು ಮತ್ತು ಗಾಜಿನ ಮಣಿಯಂತೆ ಗ್ರಹಿಸಲು ಅಯೋಗ್ಯಗಳಾಗಿರುವವು. ಎಲೈ ವೀರಶೈವನೇ! "ನಕರ್ಮಣಾ" ಎಂಬುವ ಮೊದಲಾದ ಶ್ರುತಿಗಳಿಂದ ಕರ್ಮಕಾಂಡವು ದುರ್ಬಲವಾದ್ದರಿಂದ ವ್ಯರ್ಥ

ವಾಯಿತಲ್ಲಾ ? ಸ್ಥಿರವಾಗಿಯೂ, ಅತಿ ಘಟ್ಟಿಯಾಗಿಯೂ, ಅತಿ ತೇಜಃ ಸ್ಸುಳ್ಳದ್ದಾಗಿಯೂ ಇರುವ ಉತ್ತಮ ರತ್ನವನ್ನು ಬಿಟ್ಟು ಗಾಜಿನ ರತ್ನಕ್ಕೆ ಯಾರಾದರೂ ಮೋಹಿಸುವದುಂಟೆ? ಯಾರೂ ಮೋಹಿಸುವದಿಲ್ಲವೆಂದಮೇಲೆ ಗಾಜಿನ ಮಣಿಯಂತಿರುವ ಕರ್ಮ ಪ್ರತಿಪಾದಕವಾದ ಪೂರ್ವಕಾಂಡವು ವ್ಯರ್ಥ ವು. ಅದು ವ್ಯರ್ಥವಾದರೆ ಬಾಕಿ ವೇದಭಾಗವಾದರೂ ಹೇಗೆ ಸಾರ್ಥಕವಾಗು ವದು ? ಅಂದರೆ ಎಲೈ ಪೂರ್ವವಾದಿಯೇ ! ವೇದದ ಯಾವದೊಂದು ಭಾಗಕ್ಕಾ ದರೂ ನಾವು ಅಪ್ರಾಮಾಣ್ಯವನ್ನು ಹೇಳುವದಿಲ್ಲ. ಪರಂತು ಅವುಗಳಲ್ಲಿ ಬ್ರಹ್ಮ ಕಾಂಡಕ್ಕೆ ಮಾತ್ರ ಮುಖ್ಯತ್ವವನ್ನು ಹೇಳುತ್ತೇವೆ. ಇದರಿಂದ ಕರ್ಮಕಾಂಡವು ವ್ಯರ್ಥವಾಗಲಿಲ್ಲವು. ಅದಕ್ಕೆ ಯೋಗ್ಯರಾದ ಅಧಿಕಾರಿಗಳಿಗೆ ಅದು ಉಪಯುಕ್ತ ವಾದುದರಿಂದ ಸಾರ್ಥಕವೇ ಆಯಿತು. ಕೋಟಾ ರತ್ನಗಳೂ ಕೋಟಾ ಮುತ್ತುಗ ಳೂ ಒಳ್ಳೇ ಮುತ್ತುಗಳೂ ಉತ್ತಮ ರತ್ನಗಳೂ ಮೊದಲಾದ ಅನೇಕ ವಸ್ತುಗಳುಳ್ಳ ಅಂಗಡೀ ಬಜಾರದಲ್ಲಿ ಧನಿಕರೂ ದರಿದ್ರರೂ ಪ್ರವೇಶ ಮಾಡುತ್ತಾರೆ. ವ್ಯಾಪಾ ರಿಯು ಅವರವರ ಯೋಗ್ಯತೆಗನುಸಾರವಾಗಿಯೇ ಪದಾರ್ಥಗಳನ್ನು ತೋರಿಸ ಬೇಕಾಗುತ್ತದೆ. ಗ್ರಾಹಕರಾದರೂ ತಮ್ಮ ತಮ್ಮ ಶಕ್ತಿಗೆ ತಕ್ಕಂತೆ ಒಬ್ಬನು ಗಾಜಿನ ಮಣಿಯನ್ನೂ, ಮತ್ತೊಬ್ಬನು ಮುತ್ತನ್ನೂ ಕೊಂಡುಕೊಳ್ಳುತ್ತಾನೆ. ಇದ್ದರಿಂದ ಕಡಿಮೆ ಶಕ್ತಿಯುಳ್ಳವನಿಗೆ ಗಾಜಿನ ಮಣಿಯನ್ನು ತೋರಿಸಿದ ವ್ಯಾಪಾ ರಿಗೆ ಯಾವ ದೋಷವೂ ಇಲ್ಲ. ಮತ್ತು ತನ್ನ ಶಕ್ತಿಗೆ ತಕ್ಕಂತೆ ಗಾಜಿನ ಮಣಿ ಯನ್ನು ಕೊಂಡುಕೊಳ್ಳುವವನಿಗೆ ಅಪಮಾನವಾವದೂ ಇಲ್ಲ. ಧನಿಕನಾದರೂ ತನ್ನ ಶಕ್ತಿಗೆ ತಕ್ಕಂತೆ ಉತ್ತಮ ರತ್ನವನ್ನೇ ಗ್ರಹಿಸುತ್ತಾನೆ. ಇವನಾದರೂ ಒಂ ದುಕಾಲದಲ್ಲಿ (ತಾನು ದರಿದ್ರನಿದ್ದಾಗ) ಗಾಜಿನ ಮಣಿಯನ್ನೇ ಗ್ರಹಿಸಿರಬಹು ದು. ಅದೇ ದರಿದ್ರನೇ ತನ್ನ ಪ್ರಯತ್ನದಿಂದ ಧನಿಕನಾದರೆ ಉತ್ತಮ ರತ್ನಗಳನ್ನೇ ಕೊಂಡುಕೊಳ್ಳಬಹುದು. ವ್ಯಾಪಾರಿಯು ಮಾತ್ರ ಎಲ್ಲಾ ತರದ ಸಾಮಾನುಗಳ ನ್ನು ಅಂದರೆ ಕನಿಷ್ಠ, ಮಧ್ಯಮ, ಉತ್ತಮ ಪದಾರ್ಥಗಳನ್ನೆಲ್ಲಾ ಮಡಗಿರಲೇಬೇ ಕಾಗುತ್ತದೆ. ಇಲ್ಲದಿದ್ದರೆ ಎಲ್ಲಾ ಗ್ರಾಹಕರೂ ಅವನ ಹತ್ತಿರ ಹೋಗುವದಿಲ್ಲಾ. ಇದರಂತೆಯೇ ವೇದವು ಅವರವರ ಅಧಿಕಾರಕ್ಕನುಸಾರವಾಗಿ ಅನೇಕ ಕರ್ಮ ಗಳನ್ನು ತೋರಿಸುತ್ತದೆ. ಕೆಲವರು ಸ್ವರ್ಗ ಸಾಧನ ಕರ್ಮಗಳನ್ನೂ, ಕೆಲವರು ಸ್ವಾರಾಜ್ಯಸಾಧನ ಕರ್ಮಗಳನ್ನೂ, ಬೇರೆ ಕೆಲವರು ಮೋಕ್ಷಸಾಧನ ಕರ್ಮಗ ಳನ್ನೂ ಅಂಗೀಕರಿಸಬಹುದು. ನಶ್ವರಗಳಾದ ಸಾತಿಶಯಗಳಾದ ಸ್ವರ್ಗಾದಿ ಫಲ

ಗಳನ್ನು ತೃಣೀಕರಿಸಿದವರಾದುದರಿಂದ ಅಗ್ನಿಷ್ಟೋಮಾದಿ ಧರ್ಮಗಳನ್ನು ವೀರಶೈವರು ಆಚರಿಸುವದಿಲ್ಲವು. ಆದರೆ ಕೇವಲ ಮೋಕ್ಷೋಪಯುಕ್ತವಾದ ಪತಿಕರ್ಮಗಳನ್ನು ಆಚರಿಸುವರು. ಇದರಿಂದ ಇವರಿಗೆ ದೋಷವೇನು? ಬಜಾರದಲ್ಲಿ ಗಾಜಿನ ಮಣಿಯನ್ನು ಬಿಟ್ಟು ಕೇವಲ ಉತ್ತಮ ರತ್ನವನ್ನೇ ಗ್ರಹಿಸಿದರೆ ಗಾಜಿನ ಮಣಿಗೆ ದೋಷಕೊಟ್ಟಂತಾಗಲಿಲ್ಲ. ಗಾಜಿನ ಮಣಿಯನ್ನು ತೋರಿಸಿದ ವ್ಯಾಪಾರಿಗೂ ದೋಷವನ್ನು ಹೇಳಲಿಕ್ಕಾಗುವದಿಲ್ಲ. ಪರಂತು ಅದು ತನಗೆ ಬೇಕಾಗಿಲ್ಲವೆಂದು ಅದನ್ನು ಬಿಟ್ಟಂತಾಯಿತು. ಹಾಗೆ ವೀರಶೈವರು ಅಸ್ಥಿರ ಫಲವನ್ನು ಕೊಡುವ ಕರ್ಮಗಳಿಗೂ, ಹಾಗೂ ಅವುಗಳನ್ನು ತೋರಿಸುವ ವೇದಭಾಗಕ್ಕೂ ಅಪ್ರಾಮಾಣ್ಯದೋಷವನ್ನು ಹೇಳುವದಿಲ್ಲ. ಅವುಗಳಿಂದಾಗುವ ಅಸ್ಥಿರ ಫಲವು ಬೇಕಿಲ್ಲವೆಂದು ಬಿಟ್ಟಿರುವರು. ಯಾರುತಾನೆ ಬಜಾರದಲ್ಲಿರುವ ಎಲ್ಲಾ ಸಾಮಾನುಗಳನ್ನು ಕೊಂಡುಕೊಳ್ಳುವರು? ತಮಗೆ ಬೇಕಾದದ್ದನ್ನು ಮಾತ್ರ ಆರಿಸಿ ತೆಗೆದುಕೊಳ್ಳುವರು. ಹಾಗೆ ವೇದಗಳಲ್ಲಿ ಹೇಳಿದ ಯಾವತ್ಕರ್ಮಾನುಷ್ಠಾನವು ಯಾರಿಂದಲೂ ಆಗದು. ಆದುದರಿಂದಲೇ "ಯಾವತಾಂಸಮನುಷ್ಠಾನಂ ಸಪ್ತಸಾಗರಶೋಷಣಂ" ಎಂದು ನೀಲಕಂಠ ಶಿವಾಚಾರ್ಯರು ಹೇಳಿರುವರು. ಅಂದರೆ ವೇದಗಳಲ್ಲಿ ವಿಹಿತಗಳಾದ ಎಲ್ಲಾ ಕರ್ಮಾನುಷ್ಠಾನವನ್ನೂ ಮಾಡತಕ್ಕದ್ದೆಂದು ಹೇಳುವವನ ಮಾತು ಏಳು ಸಮುದ್ರಗಳನ್ನೇ ಒಣಗಿಸುವೆನು ಎಂಬುವ ಮಾತನ್ನು ಹೋಲುವದು. ಆದ್ದರಿಂದ ತಮ್ಮತಮ್ಮ ಅಧಿಕಾರಕ್ಕೆ ತಕ್ಕವುಗಳಾಗಿಯೂ, ತಮ್ಮತಮ್ಮ ಆಶ್ರಮಕ್ಕೆ ಉಚಿತಗಳಾಗಿಯೂ ಇರುವ ಮತಧರ್ಮಗಳನ್ನು ಆಚರಿಸುವದು ಯುಕ್ತವು. ಅದರಂತೆ ವೀರಶೈವರು ತಮಗುಚಿತಗಳಾದ ಭೂತಿಧಾರಣ, ರುದ್ರಾಕ್ಷಧಾರಣ, ಲಿಂಗಧಾರಣ, ಲಿಂಗಧ್ಯಾನ, ಲಿಂಗಪೂಜಾ ಮೊದಲಾದ ಪತಿಧರ್ಮಗಳನ್ನು ಆಚರಿಸುವರು. ಸೋಪಾನಮಾರ್ಗದಲ್ಲಿ ಎರಡು ಮೂರು ಹಂತಗಳನ್ನು ಬಿಟ್ಟು ಹತ್ತಿದರೆ ಸೋಪಾನೋತ್ಪಾಟನವನ್ನೇ ಮಾಡಿದಂತಾಗುವದಿಲ್ಲವು. ಗಿಡವನ್ನೇರಿ ಕೂತಿರುವವನಿಗಿಂತಲೂ ಕೆಳಗಿನಿಂದ ಯೇರತಕ್ಕವನಿಗೆ ಸ್ವಲ್ಪ ವಿಳಂಬವಾಗಿ ಹಣ್ಣು ಸಿಗಬಹುದು. ಗಿಡದ ಮೇಲಣ ಹಣ್ಣು ಅವನಿಗೆ ದುರ್ಲಭವೆಂದು ಹೇಳಲು ಆಗುವದಿಲ್ಲ. ಅಲ್ಪ ಶ್ರಮವೆಂಬ ಬೆಲೆಯಂ ಕೊಟ್ಟು ಪತಿಕರ್ಮವೆಂಬ ರತ್ನವನ್ನು ಗ್ರಹಿಸಿ, ಅದರಿಂದ ನಿತ್ಯಾನಂದದಲ್ಲಿರುವದನ್ನು ಬಿಟ್ಟು ಬಹು ಆಯಾಸ ಸಾಧ್ಯವಾದ ಅನಿತ್ಯ ಫಲಕ್ಕೆ ಕಾರಣವಾದ ಪಶುಕರ್ಮಕ್ಕೆ ವೀರಶೈವರು ಮೋಹಿಸುವ

ದಿಲ್ಲ. ತಮ್ಮಲ್ಲಿದ್ದವುಗಳ ಪೈಕಿ ಅಲ್ಪಕ್ರಿಯದ ಉತ್ತಮ ಮಣಿಯನ್ನು ಧರಿಸಿದರೆ ಬೇರೆ ಕೆಲವು ಅವಿವೇಕಿಗಳು ಇವರನ್ನು ದೂಷಿಸುವದು ಎಂಥಾ ಅನ್ಯಾಯವು? ಧನಿಕನೇ ಆಗಲಿ ರಾಜನೇ ಆಗಲಿ ತಮ್ಮಧೀನದಲ್ಲಿದ್ದ ಅಲ್ಪಕ್ರಿಯದ ಮಣಿಯನ್ನು ಧರಿಸಿದರೆ ಅವರಿಗೆ ನಿಂದಿಸಬಹುದೆ? ನಿಂದಿಸುವವರಿಗೆ ವಿವೇಕಿಗಳು ತಿಳಿಗೇಡಿಗಳನ್ನಲಿಕ್ಕಿಲ್ಲವೆ? ಆದುದರಿಂದ ವೀರಶೈವೀಯ ಧರ್ಮಗಳಿಗೆ ಶ್ರುತೀತರಗಳಾದ ಕೆಲವು ಸ್ಮೃತಿಗಳಲ್ಲಿ ನಿಷೇಧವು ಕಂಡರೂ ಆ ನಿಷೇಧ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕಲ್ಲದೆ, ಅವುಗಳಿಂದ ವೀರಶೈವೀಯ ಲಿಂಗಾರ್ಚನ, ಲಿಂಗಧಾರಣ, ಲಿಂಗಧ್ಯಾನ, ಲಿಂಗಾರ್ಪಣ, ಲಿಂಗಾರ್ಪಿತಗ್ರಹಣ ಮೊದಲಾದ ಶಿವಯೋಗ ಪ್ರತಿಪಾದಕಗಳಾದ ಶ್ರೌತವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಹೇಳುವವರು ವೇದಬಾಹ್ಯರಾಗುವದಿಲ್ಲವೇ? ಆದ್ದರಿಂದ ವೀರಶೈವೀಯ ಧರ್ಮಗಳು ಪ್ರಮಾಣದಿಂದ ಸಿದ್ಧವಾದವುಗಳಿರುತ್ತವೆ. ‹‹ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ›› ‹‹ತೇಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ›› ‹‹ಧ್ಯಾನನಿರ್ಮಥನಾಭ್ಯಾಸಾತ್ ಪಾಶಂದಹತಿಪಂಡಿತಃ›› ಅಮೃತಸ್ಯದೇವಧಾರಣೊ ಭೂಯಾಸಂ›› ‹‹ತಸ್ಯಾಭಿಧ್ಯಾನಾದ್ಯೋಜನಾತ್ತತ್ವಭಾವಾದ್ಭೂಯಸ್ಯಾಂತೆ ವಿಶ್ವಮಾಯಾನಿವೃತ್ತಿಃ›› ‹‹ಯಮೈವೈಷವೃಣುತೇ ತೇನಲಭ್ಯಸ್ತಸ್ಯೈಷ ಆತ್ಮಾವಿವೃಣುತೆ ತನೂಂಸ್ವಾಂ›› ಇತ್ಯಾದಿ ಅನೇಕ ಶ್ರುತಿಗಳಿಂದಲೂ, ಕೀಟೋಭ್ರಮರಯೋಗೇನ ಭ್ರಮರೋಭವತಿಧ್ರುವಂ | ಮಾನವಃ ಶಿವಯೋಗೇನ ಶಿವೋ ಭವತಿ ಸರ್ವದಾ || ಕಾಶ್ಯಾಂ ಮೃತಾನಾಂ ಜಂತೂನಾಂ ಯತೀನಾಂ ಲಿಂಗಧಾರಿಣಾಂ ಬ್ರಹ್ಮತ್ವಮೇವ ಭವತಿ ಪ್ರೇತತ್ವಂ ನಹಿವಿದ್ಯತೆ || ಇತ್ಯಾದಿ ಅನೇಕ ಸ್ಮೃತಿಗಳಿಂದಲೂ, ಮೋಕ್ಷಾರ್ಥಿನಾಂ ಮುಕ್ತಿಹೇತುರ್ಲಿಂಗಧಾರಣಮಿಷ್ಯತೆ | ಪುನರ್ಭವೋನತೆ ವತ್ಸವಿದ್ಯತೆ ಮಾತೃಯೋನಿಷು || ಇವೇ ಮೊದಲಾದ ಅನೇಕ ಪುರಾಣವಾಕ್ಯಗಳಿಂದಲೂ, ಶ್ರುತಿ ಸ್ಮೃತಿಪುರಾಣೇಷುವೈದಿಕಾನಾಂವರಾನನೆ | ಲಿಂಗಧಾರಣಮಾಖ್ಯಾತಂ ಸರ್ವಸಿದ್ಧಿಪ್ರದಾಯಕಂ || ಮೊದಲಾದ ಅನೇಕ ಶಿವಾಗಮ ವಾಕ್ಯಗಳಿಂದಲೂ, ಶಿವಲಿಂಗದ ಅರ್ಚನ ಅನುಸಂಧಾನ ಧಾರಣಾದಿ ರೂಪವಾದ ಶಿವಯೋಗದಿಂದ ಮೋಕ್ಷಲಾಭವೆಂದು ಸಿದ್ಧವಾಗುತ್ತಿರಲು ವೇದವನ್ನು ಮಾನಿಸುವ ಯಾವ ಆಸ್ತಿಕನು ಶಿವಯೋಗದಿಂದ ಮುಕ್ತಿಯು ಲಾಭವಿಲ್ಲೆಂದು ಹೇಳುವನು? ಶಿವಯೋಗನಾದರೂ ಸ್ವೀಯಸ್ವರೂಪ ಜ್ಞಾನವಿಲ್ಲದಿದ್ದರೆ ಸಂಭವಿಸಲಾರದು. ಆನ್ನು

ದರಿಂದ ವೇದಾಂತಗಳಲ್ಲಿ ಸಪ್ತದ್ವೀಪಾವಸುಮತೀ | ರಾಜಾಸೌಗಚ್ಛತಿ | ಎಂಬ ವಾಕ್ಯಗಳಂತೆ ಪ್ರವೃತ್ತಿ ನಿವೃತ್ತಿಗೆ ಕಾರಣವಾಗದಿರುವ ಕೆಲವು ಸಿದ್ಧವಸ್ತು ಪ್ರತಿಪಾದಕ ವಾಕ್ಯಗಳು ಕಂಡುಬರುತ್ತವೆ. ಎಲ್ಲಾ ವೇದಾಂತಗಳೂ ಶಿವಯೋಗವಿಧಾಯಕಗಳೇ ಆಗಿರುವುವು. ಶಿವಯೋಗಕ್ಕೆ ವಿಷಯವು ಯಾವದು ಎಂದು ಪ್ರಶ್ನವು ಹುಟ್ಟಲು, ಆ ವಿಷಯವನ್ನು ತೋರಿಸಿಕೊಡುವುದಕ್ಕಾಗಿಯೇ "ಸತ್ಯಂ ಜ್ಞಾನಮನಂತಂಬ್ರಹ್ಮ" "ಪ್ರಜ್ಞಾನಂಬ್ರಹ್ಮ" ಇತ್ಯಾದಿ ಸಿದ್ಧವಸ್ತು ಪ್ರತಿಪಾದಕ ವಾಕ್ಯಗಳು ಹೊರಟಿರುವವು. ಆದಕಾರಣ ಶಿವಯೋಗಿಗಳು ಜ್ಞಾನವನ್ನು ಶಿವಯೋಗದ ಒಂದು ಅಂಗವನ್ನಾಗಿ ಸ್ವೀಕರಿಸುವರು. ಜ್ಞಾನಂ ಶಿವಮಯಂಭಕ್ತಿಃ ಶೈವೀಧ್ಯಾನಂ ಶಿವಾತ್ಮಕಂ | ಶೈವವ್ರತಂ ಶಿವಾರ್ಚೇತಿ ಶಿವಯೋಗೋಹಿಪಂಚಧಾ || ಅಂದರೆಶಿವಾರ್ಚನೆಯೇ ಮುಖ್ಯವೆನಿಪ ಶಿವಯೋಗಕ್ಕೆ ಶಿವಜ್ಞಾನವೂ, ಶಿವಭಕ್ತಿಯೂ, ಶಿವಧ್ಯಾನವೂ, ಶಿವವ್ರತವೂ ಅಂಗಗಳಾಗಿರುವವು. ಎಂದು ಹೇಳಿರುವದರಿಂದ ಜ್ಞಾನವು ಶಿವಯೋಗದ ಒಂದು ಅಂಗವಾಗುವದು. ಆದ್ದರಿಂದ ಸಾಂಗವಾದ ಶಿವಯೋಗವೇ ಮುಕ್ತಿಗೆ ಕಾರಣವಲ್ಲದೆ ಶಿವಯೋಗದ ಒಂದು ಅಂಗವಾದಜ್ಞಾನವು ಕಾರಣವಲ್ಲ. ಆದುದರಿಂದ ಮುಮುಕ್ಷುಗಳು ಸಾಂಗಶಿವಯೋಗವನ್ನೇ ಸಂಪಾದಿಸಬೇಕು. ಶಿವಸೂತ್ರದಲ್ಲಿಯೂಕೂಡ "ಜ್ಞಾನಂಬಂಧ" ಯೋನಿವರ್ಗಃ ಕಲಾಶರೀರಂ" ಎಂಬುವ ಎರಡು ಸೂತ್ರಗಳಿಂದ ಮಲತ್ರಯವನ್ನು ನಿರೂಪಿಸಿ, ಈ ಮಲತ್ರಯವನ್ನು ಕಳೆದುಕೊಂಡು ಶಿವತ್ವಪ್ರಾಪ್ತಿಯನ್ನು ಮಾಡಿಕೊಳ್ಳುವದು ಹೇಗೆಂದು ಪ್ರಶ್ನವು ಹುಟ್ಟಲು, "ಉದ್ಯಮೊಭೈರವಃ" ಅಥವಾ "ಉದ್ಯಮಃಶಿವಃ" ಎಂಬುವ ಸೂತ್ರದಿಂದ ಮೂರು ಮಲಗಳನ್ನು ದೂರಮಾಡಿ, ಶಿವತ್ವವನ್ನುಂಟುಮಾಡಿಕೊಡುವದಕ್ಕೆ ಉದ್ಯೋಗವೇ ಬೇಕೆಂದು ಹೇಳಲ್ಪಟ್ಟಿದೆ. ಅಂದರೆ ಶಿವಾರ್ಚನೆಯೇ ಶಿವಯೋಗವು. ಇದಕ್ಕೆ ನಾಲ್ಕುಅಂಗಗಳು-ಶಿವಜ್ಞಾನ, ಶಿವಧ್ಯಾನ, ಶಿವಭಕ್ತಿ, ಶಿವವ್ರತಗಳೇ ಅಂಗಗಳು. ಇಂಥ ಅಂಗಗಳುಳ್ಳ ಶಿವಾರ್ಚನೆಯೇ ಮುಕ್ತಿಗೆ ಕಾರಣವೆಂದು ನಮ್ಮಭಿಪ್ರಾಯದಂತೆ ಉದ್ಯಮವೇ ಮಲತ್ರಯ ನಾಶಕ್ಕೆ ಕಾರಣವೆಂದು ಶಿವಸೂತ್ರವು ಕೂಡಾ ಹೇಳುತ್ತದೆ. ಉದ್ಯಮವೆಂದರೆ ನಾವು ಹೇಳಿದ ಶಿವಾರ್ಚನೆಯಂದೇ ಅರ್ಥಮಾಡಬೇಕು. ಇತರ ಕೃಷಿವಾಣಿಜ್ಯಾದಿ ಉದ್ಯೋಗದಿಂದ ಆಣವಾದಿ ಮಲಗಳು ನಾಶವಾಗಲಾರವು. ಆದುದರಿಂದ ಉದ್ಯಮವೆಂದರೆ ಶಿವಪೂಜಾರೂಪವಾದ ಉದ್ಯೋಗವೆಂದೇ ತಿಳಿಯತಕ್ಕದ್ದು.

ಇನ್ನು ಬ್ರಹ್ಮವು ನಿರ್ವಿಶೇಷವೋ ಅಥವಾ ಸವಿಶೇಷವೋ ಎಂಬ ಏಳನೇ ವಿಚಾರವನ್ನು ಮಾಡುತ್ತೇವೆ. ಬ್ರಹ್ಮವು ನಿರ್ವಿಶೇಷವೆಂದು ಹೇಳುವ ಎಲೈ ಮಾಯಾವಾದಿಯೆ! ನಿನ್ನ ಬ್ರಹ್ಮವು ಜ್ಞಾನಸ್ವರೂಪವೋ ಅಥವಾ ಅಜ್ಞಾನ ಸ್ವರೂಪವೋ? ಜ್ಞಾನಸ್ವರೂಪವೆಂದರೆ ಆ ಜ್ಞಾನವು ಸವಿಷಯಕವಾಗಿಯೇ ಇರಬೇಕಲ್ಲವೇ? ಸವಿಷಯಕವೆಂದು ಒಪ್ಪಿದರೆ ವಿಷಯಗಳು ನಿತ್ಯಗಳಾಗಬೇಕಾಗುವದು. ನಿತ್ಯಜ್ಞಾನಕ್ಕೆ ವಿಷಯಗಳೂ ನಿತ್ಯಗಳಾಗಿರುವದು ಆವಶ್ಯಕವು. ಬ್ರಹ್ಮದಲ್ಲಿ ವಿಷಯುಗಳನ್ನು ಸತ್ಯವಾಗಿ ಒಪ್ಪಿದರೆ ಬ್ರಹ್ಮವು ನಿರ್ವಿಶೇಷವು ಹ್ಯಾಗೆ? ವಿಷಯರೂಪಗಳಾದ ವಿಶೇಷಗಳಿಂದ ಸಹಿತವಾಗಲಿಲ್ಲವೇ? ಎಲೈ ಶಿವಾದ್ವೈತಿಯೆ ನಾವು ಜ್ಞಾನರೂಪವಾದ ಬ್ರಹ್ಮವು ಸವಿಷಯಕವೆಂದು ಹೇಳುವದಿಲ್ಲ. ಆದರೆ ನಿರ್ವಿಷಯವೆಂದು ಹೇಳುತ್ತೇವೆ. ಅಂದರೆ ಅದಕ್ಕೆ ಜ್ಞಾನಸ್ವರೂಪವನ್ನು ಹೇಳುವದು ತಪ್ಪಾಗುವದು. ನಿರ್ವಿಷಯಕವಾದ ಬ್ರಹ್ಮಕ್ಕೆ ಜ್ಞಾನಸ್ವರೂಪವನ್ನು ಹೇಳುತ್ತೇವೆ. ಅದರಿಂದ ಹಾನಿ ಏನು? ಅಂದರೆ ನಿರ್ವಿಷಯಕವಾದ ಶರೀರಾದಿಗಳಿಗೂ ಜ್ಞಾನಸ್ವರೂಪವನ್ನು ಹೇಳಬೇಕಾಗುವದು. ಹೀಗೆ ಹೇಳಿದ! ಜ್ಞಾನಸ್ವರೂಪವಾದ ಶರೀರವನ್ನೇ ತಿಳಿದುಕೊಂಡು ಮುಕ್ತರಾಗಬಹುದಲ್ಲವೇ? ಘಟಪಟಾದಿ ಪ್ರಪಂಚವನ್ನು ಸುಳ್ಳೆನ್ನುವದೇಕೆ? ನಿರ್ವಿಷಯುವಾದ ಶರೀರಕ್ಕೆ ಜ್ಞಾನಸ್ವರೂಪವನ್ನು ಹೇಳಿದರೆ ಅದಕ್ಕೆ ಜ್ಞಾನಸರೂಪವಾದ ಆತ್ಮಸ್ವರೂಪವನ್ನು ಹೇಳಬೇಕಾದೀತು. ಇದರಿಂದ ಶರೀರಾತ್ಮವಾದಿಗಳಾದ ಚಾರ್ವಾಕರೆನಿಸಬೇಕಾದೀತು. ಆದ್ದರಿಂದ ಜ್ಞಾನವು ನಿರ್ವಿಷಯವೆಂದು ಹೇಳುವದು ನಿಮಗಾದರೂ ಹೇಗೆ ತೋರುತ್ತದೆ. ಎಲೈ ವೀರಶೈವನೇ! ನ್ಯಯಾಯಿಕರು ನಿರ್ವಿಕಲ್ಪಕ ಜ್ಞಾನಕ್ಕೆ ನಿರ್ವಿಷಯತ್ವವನ್ನು ಹೇಳಿದರೂ ಅವಕ್ಕೆ ಜ್ಞಾನಸ್ವರೂಪವನ್ನು ಸ್ವೀಕರಿಸುವಂತೆ ನಾವಾದರೂ ನಿರ್ವಿಶೇಷಜ್ಞಾನಸರೂಪವಾದ ಬ್ರಹ್ಮಕ್ಕೆ ನಿರ್ವಿಷಯತ್ವವನ್ನು ಹೇಳುತ್ತೇವೆ. ಆದ್ದರಿಂದ ಜ್ಞಾನಸ್ವರೂಪಕ್ಕೆ ಬಾಧೆಯೇನು? ಅವರು ನಿರ್ವಿಕಲ್ಪ ಜ್ಞಾನದಲ್ಲಿ ವಿಶೇಷ್ಯತಾಖ್ಯ ವಿಷಯತ್ವವನ್ನೂ ಸಂಸರ್ಗತಾಖ್ಯವಿಷಯತ್ವವನ್ನೂ, ವಿಶೇಷಣತಾಖ್ಯವಿಷಯತ್ವವನ್ನೂ ಮಾನಿಸದಿದ್ದರೂ ಈ ಮೂರು ವಿಷಯತ್ವಗಳಿಗಿಂತಲೂ ವಿಲಕ್ಷಣವಾದ ಚತುರ್ಥೀ ವಿಷಯತ್ವವನ್ನು ಅಂಗೀಕರಿಸುವರು. ಇಲ್ಲದಿದ್ದರೆ „ನಿರ್ವಿಷಯಸ್ಯಜ್ಞಾನತ್ವೇ ಮಾನಾಭಾವಃ" (ನಿರ್ವಿಷಯವಾದದ್ದು ಜ್ಞಾನವೆಂಬುವಲ್ಲಿ ಪ್ರಮಾಣವಿಲ್ಲ) ಎಂದು ಹೇಗೆ ಹೇಳುವರು? ಆದ್ದರಿಂದವರ ನಿರ್ವಿಕಲ್ಪಜ್ಞಾನದ ದೃಷ್ಟಾಂತವು ನಿನಗೆ

ವ್ಯರ್ಥವು. ‹‹ನಿರ್ವಿಷಯಾ ನಿರಾಕಾರಾಸಂವಿದನುಭವಸಿದ್ಧಾ›› ವಿಷಯವಿಲ್ಲದ ಆಕಾರವಿಲ್ಲದ ಜ್ಞಾನವು ಅನುಭವಸಿದ್ಧವಾದದ್ದು ಎಂದು ಹೇಳುವದು ತುಚ್ಛ ವೇಸರಿ. ‹‹ದೃಷ್ಟಾನುಸಾರೇಣಕಲ್ಪನಾ›› ದೃಷ್ಟಾಂತಕ್ಕನುಸಾರವಾಗಿ ಪದಾ ರ್ಥಗಳನ್ನು ಕಲ್ಪಿಸತಕ್ಕದ್ದು ಎಂದು ನ್ಯಾಯವಿರುವದು. ನಿರ್ವಿಶೇಷಬ್ರಹ್ಮಕ್ಕೆ ಜ್ಞಾನಸ್ವರೂಪವನ್ನು ಹೇಳುವಲ್ಲಿ ಲೋಕದಲ್ಲಿ ಯಾವ ದೃಷ್ಟಾಂತವೂ ಇಲ್ಲದಿರು ವದರಿಂದ ನಿರ್ವಿಷಯನಾದ ನಿರಾಕಾರವಾದ ಸಂವಿತ್ತು ಅನುಭವಸಿದ್ಧವಾದ ದ್ದೆಂಬುವ ಮಾತು ಪಂಡಿತರಿಗೆ ಮಾನ್ಯವಲ್ಲ. ಲೋಕದಲ್ಲಿ ಇದು ಘಟವು. ಘಟ ವನ್ನು ತಿಳಿಯುತ್ತೇನೆ ಎಂಬದಾಗಿ ಸವಿಷಯ ಜ್ಞಾನವೇ ಕಂಡುಬರುವಕಾರಣ, ಅವರು ಹೇಳುವ ನಿರ್ವಿಷಯಜ್ಞಾನಸ್ವರೂಪವಾದ ಬ್ರಹ್ಮವು ಗಗನಪುಷ್ಪಕ್ಕೆ ಸಮಾ ನವಾಗುವದು. ಎಲೈ ಬ್ರಹ್ಮಾದ್ವೈತಿಯೆ! ನೀನು ನಿರ್ವಿಶೇಷ ಬ್ರಹ್ಮವು ಅಜ್ಞಾ ನಸ್ವರೂಪವೆಂದರೆ ನಿನ್ನ ಸಿದ್ಧಾಂತವ್ಯಾಘಾತವಾಗುವದು. ಮತ್ತು ನಿರ್ವಿಶೇಷ ಬ್ರಹ್ಮವೆಂದರೇನು ? ಪ್ರಪಂಚದ ಯಾವದೂ ಒಂದು ಭೇದವಿಲ್ಲದ್ದು. ಅಂದರೆ ಮೊದಲು ಪ್ರಪಂಚಕ್ಕೂ ಬ್ರಹ್ಮಕ್ಕೂ ಇರುವ ಭೇದವು ಸತ್ಯವೋ ಅಥವಾ ಅಸ ತ್ಯವೋ? ಸತ್ಯವೆಂದರೆ ನಿನ್ನ ಅದ್ವೈತ ಸಿದ್ಧಾಂತಕ್ಕೆ ಹಾನಿಯಾಗುವದು. ಮಿಥ್ಯೆ ಯಂದರೆ ‹‹ಯಯೋರ್ಭೇದೋ ಮಿಥ್ಯಾ ತಯೋರೈಕ್ಯಮಿತಿನಿಯಮಾತ್›› ಯಾವ ಎರಡು ಪದಾರ್ಥಗಳಭೇದವು ಮಿಥ್ಯೆಯೋ? ಅವುಗಳಿಗೆ ಐಕ್ಯವೆ ಸಿದ್ಧಿಸುವದೆಂದು ನಿಯಮವಿರುವದರಿಂದ) ಪ್ರಪಂಚಕ್ಕೂ ಬ್ರಹ್ಮಕ್ಕೂ ಐಕ್ಯವೇ ಸಿದ್ಧವಾಗುವದಾ ದ್ದರಿಂದ ನಮ್ಮ ಶಿವಾದ್ವೈತಮತ ಪ್ರವೇಶವಾಗುವದು. ಭಂಗಾರದ ಕುಂಡಲ ದಲ್ಲಿ ಭಂಗಾರದ ಭೇದವೊಂದೇ ಸಿದ್ಧವಾಗದಿರುವದರಿಂದ ಸ್ವರ್ಣಕುಂಡಲದಲ್ಲಿ ಸ್ವರ್ಣದ ಅಭೇದವು, ಹಾಗೆ ಪ್ರಪಂಚದ ಭೇದವು ಬ್ರಹ್ಮದಲ್ಲಿ ಮಿಥ್ಯೆಯಾದರೆ ಆ ಪ್ರಪಂಚಕ್ಕೆ ಬ್ರಹ್ಮದ ಅಭೇದವನ್ನು ಸ್ವೀಕರಿಸಿದಂತಾಗಲಿಲ್ಲವೆ ? ಆದರೆ ಹಾನಿ ಏನು ? ಜಗತ್ತು ಮಿಥ್ಯೆಯನ್ನುವದನ್ನು ಬಿಟ್ಟು ಜಗತ್ಸತ್ಯತ್ವವಾದಿಗಳಾದ ನಮ್ಮ ಸಿದ್ಧಾಂತವನ್ನು ಸ್ವೀಕರಿಸಿದಂತಾಯಿತು. ಎಲೈ ಸವಿಶೇಷ ಬ್ರಹ್ಮವಾದಿಯಾದ ವೀರಶೈವನೆ ! ಭೇದಾಭೇದಗಳೆರಡೂ ಮಿಥ್ಯೆಗಳೇ ಅಂದರೆ ದೋಷವೇನು ? ಹೀಗೆ ನೀವು ಒಪ್ಪಿಕೊಂಡಲ್ಲಿ ನಿಷ್ಪಕ್ಷಪಾತಿಗಳೆಂದು ಹೇಳಬಹುದು. ಆದರೆ ಜೀವ ಬ್ರಹ್ಮರುಗಳಿಗೆ ಭೇದಾಭೇದಗಳೆರಡೂ ಅಸತ್ಯಗಳೆನ್ನುವದಿಲ್ಲ. ಅಂದಮೇಲೆ ನಿಮಗೆ ನಿಷ್ಪಕ್ಷಪಾತಿಗಳೆಂದು ಹೇಗೆ ಹೇಳಬೇಕು? ಎಲೈ ವೀರಶೈವನೆ ಆ ಜೀವ ಬ್ರಹ್ಮರ ಅಭೇದವು ಮಿಥ್ಯೆಯಂದರೆ ಜೀವ ಬ್ರಹ್ಮರ ಅಭೇದವನ್ನು ಹೇಳುವ

ತತ್ವಮಸ್ಯಾದಿ ಶ್ರುತಿವಾಕ್ಯಗಳಿಗೆ ವಿರುದ್ಧವಾಗುವದಾದ್ದರಿಂದ ಭೇದವೊಂದೇ ಮಿಥ್ಯೆಯಲ್ಲದೆ ಅಭೇದವು ಮಿಥ್ಯೆಯಲ್ಲೆಂದು ಶ್ರುತಿಗಳಿಗನುಸರಿಸಿ ಹೇಳುವ ನಾವು ಗಳು ಪಕ್ಷಪಾತಿಗಳಾಗುವದಿಲ್ಲ. ಅಂದರೆ ‹‹ಸರ್ವೋಹ್ಯೇಷರುದ್ರಃ›› ‹‹ಸರ್ವಂಖಲ್ವಿದಂಬ್ರಹ್ಮ›› ‹‹ಏತದಾತ್ಮ್ಯಮಿದಂ ಸರ್ವಂ›› ಇವೇ ಮೊದಲಾದ ಅನೇಕ ಶ್ರುತಿಗಳೂ ಕೂಡ ಪ್ರಪಂಚಕ್ಕೆ ಬ್ರಹ್ಮಾಭೇದವನ್ನು ಹೇಳುತ್ತವೆ. ಇವುಗಳನ್ನನುಸರಿಸಿ ಪ್ರಪಂಚಕ್ಕೆ ಬ್ರಹ್ಮೈಕ್ಯವನ್ನು ಏಕೆ ಹೇಳಬಾರದು? ನೀವು ಹೀಗೆ ಹೇಳುವದಿಲ್ಲವೆಂದಮೇಲೆ ಪಕ್ಷಪಾತಿಗಳಾಗಲಿಲ್ಲವೆ? ತತ್ವಮಸ್ಯಾದಿ ಮಹಾವಾಕ್ಯಗಳಲ್ಲಿ ತತ್ತ್ವಂಪದಗಳು ಸವಿಶೇಷ ಬ್ರಹ್ಮಜೀವರುಗಳ ವಾಚಕಗಳಾದ್ದರಿಂದ ನಿರ್ವಿಶೇಷ ಬ್ರಹ್ಮೈಕ್ಯವು ಉಪದೇಶಿಸಲ್ಪಡುವದಿಲ್ಲ. ಆದರೆ ‹‹ತದೈಕ್ಷತಬಹುಸ್ಯಾಂ›› ಇತ್ಯಾದಿಗಳಲ್ಲಿ ತಚ್ಛಬ್ದವಾಚ್ಯನಾದ ಜಗತ್ಕಾರಣ ಪರಮೇಶ್ವರನಿಗೆ ಸವಿಶೇಷತ್ವವೇ ಹೇಳಲ್ಪಡುವದರಿಂದ ತತ್ತ್ವಮಸ್ಯಾದಿ ವಾಕ್ಯಗಳಲ್ಲಿಯೂ ಬ್ರಹ್ಮಜೀವರುಗಳಿಗೆ ಸವಿಶೇಷತ್ವವೇ ನಿರೂಪಿಸಲ್ಪಟ್ಟಿರುವದೆಂದು ತಿಳಿಯಬೇಕು. ಹಾಗಾದರೆ ವೀರಶೈವನೇ! ಸರ್ವಜ್ಞತ್ವಾದಿ ವಿಶಿಷ್ಟ ಈಶ್ವರನಿಗೂ ಕಿಂಚಿಜ್ಞತ್ವಾದಿ ವಿಶಿಷ್ಟ ಜೀವನಿಗೂ ಗವಾಶ್ವಾದಿಗಳಂತೆ ಐಕ್ಯವು ಸಂಭವಿಸುವದಿಲ್ಲ. ಆದ್ದರಿಂದ ಮಾಯಾ ಅವಿದ್ಯಾರೂಪಗಳಾದ ಉಪಾಧಿಗಳನ್ನು ಬಿಟ್ಟು ಶುದ್ಧ ಚೈತನ್ಯಮಾತ್ರದಲ್ಲಿ ಭಾಗತ್ಯಾಗಲಕ್ಷಣೆಯನ್ನು ಸ್ವೀಕರಿಸಿ ನಿರ್ವಿಶೇಷ ಬ್ರಹ್ಮೈಕ್ಯವನ್ನು ಹೇಳಬೇಕು. ಅಂದರೆ ‹‹ಬ್ರಹ್ಮವೇದ ಬ್ರಹ್ಮೈವಭವತಿ›› ‹‹ದಿವ್ಯಂ ಪರಂಜ್ಯೋತಿರುಪ ಸಂಪದ್ಯಸ್ವೇನರೂಪೇಣಾಭಿ ನಿಷ್ಪದ್ಯತೆ›› ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್›› ಇವೇ ಮೊದಲಾದ ಶ್ರುತಿಗಳಿಂದ ಭ್ರಮರಕೀಟನ್ಯಾಯವಾಗಿ ಜ್ಞಾನಧ್ಯಾನಧಾರಣರೂಪವಾದ ಶಿವಯೋಗದಿಂದ ಶಿವತ್ವಪ್ರಾಪ್ತಿಯ ಉಪದೇಶವಿರುವದರಿಂದ ಅಭೇದಕ್ಕಾಗಿ ಲಕ್ಷಣಾವೃತ್ತಿಯನ್ನು ಸ್ವೀಕರಿಸುವದು ವ್ಯರ್ಥವು. ಮೋಕ್ಷದಶೆಯಲ್ಲಿ ಅಭೇದಾನ್ವಯಕ್ಕೆ ಅನುಪಪತ್ತಿ ಮೊದಲಾದವುಗಳಿಲ್ಲದಿರುವದರಿಂದ ಭಾಗತ್ಯಾಗಲಕ್ಷಣೆಯನ್ನು ಸ್ವೀಕರಿಸುವಲ್ಲಿ ಬೀಜವಿಲ್ಲ. ಇದಲ್ಲದೆ ಲಕ್ಷಣಾವೃತ್ತಿಯನ್ನು ಸ್ವೀಕರಿಸಿದರೆ ಗೌರವದೋಷವು ಕೂಡಾ ಬರುವದು. ಮತ್ತು ‹‹ತದೈಕ್ಷತಬಹುಸ್ಯಾಂ›› ಎಂಬುವ ಸವಿಶೇಷ ಬ್ರಹ್ಮಪ್ರತಿಪಾದಕವಾದ ಉಪಕ್ರಮವಾಕ್ಯಕ್ಕೂ ವಿರೋಧವಾಗುವದು. ಏಕಂದರೆ ‹‹ತತ್ತ್ವಮಸಿ›› ಎಂಬಲ್ಲಿ ನಿರ್ವಿಶೇಷರೂಪವಾದ ಲಕ್ಷ್ಯಾರ್ಥವನ್ನು ಹೇಳುತ್ತೀರಷ್ಟೆ? ‹‹ಯಥಾನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂ

ಗಚ್ಛಂತಿ ನಾಮರೂಪೇ ವಿಹಾಯ ತಥಾ ವಿದ್ವಾನ್ನಾಮರೂಪಾ ದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿದಿವ್ಯಂ" ಎಂಬುವ ಶ್ರುತಿಯಿಂದ ಪ್ರಾಪ್ಯಪ್ರಾಪಕ ಭಾವವು ಸ್ಪಷ್ಟವಾಗಿ ಉಕ್ತವಾಗಿರುವದರಿಂದ ಷಡಂಗ ಶಿವಯೋಗವೇ ಪರಶಿವ ಸಾಮರಸ್ಯರೂಪವಾದ ಅಭೇದಕ್ಕೆಮುಖ್ಯಸಾಧಕವೆಂದು ಸಿದ್ಧವಾಗುವದು. ಆದ್ದರಿಂದ ತತ್ತ್ವಮಸ್ಯಾದಿ ಅಭೇದಶ್ರುತಿಗಳಲ್ಲಿ ಮುಖ್ಯಾರ್ಥಕ್ಕೆ ಬಾಧೆಯಿಲ್ಲದಿರುವ ಕಾರಣ ಲಕ್ಷ್ಯಾರ್ಥವನ್ನು ಅಂಗೀಕರಿಸುವದು ಯುಕ್ತವಲ್ಲ. ಮುಖ್ಯಾರ್ಥವನ್ನು ಬಿಟ್ಟಲ್ಲಿ ಈಕ್ಷತ್ಯಧಿಕರಣಕ್ಕೂ ವಿರೋಧವಾದೀತು. ಸರ್ವಜ್ಞ ಶಿಖಾಮಣಿಗಳಾದ ವ್ಯಾಸರ ತಾತ್ಪರ್ಯವು ನಿರ್ವಿಶೇಷ ಬ್ರಹ್ಮದಲ್ಲಿದ್ದರೆ "ಈಕ್ಷತೇರ್ನಾಶಬ್ದಂ" "ಗೌಣಶ್ಚೇನ್ನಾತ್ಮಶಬ್ದಾತ್" "ಅದೃಶ್ಯತ್ವಾದಿಗುಣಕೋಧರ್ಮೋಕ್ತೇಃ" "ದ್ಯುಭ್ವಾದ್ಯಾಯತನಂ ಸ್ವ ಶಬ್ದಾತ್" "ಶಬ್ದಾದೇವಪ್ರಮಿತಃ" ಇತ್ಯಾದಿ ಸೂತ್ರಗಳಿಂದುಕ್ತಗಳಾದ ಅಸಾಧಾರಣ ಬ್ರಹ್ಮಧರ್ಮಗಳಿಂದಲೂ, ಬ್ರಹ್ಮವಾಚಕ ಶಬ್ದಗಳಿಂದಲೂ ಬ್ರಹ್ಮನಿರ್ಣಯವನ್ನು ಮಾಡುತ್ತಿದ್ದಿಲ್ಲ. ಆದ್ದರಿಂದ ಬ್ರಹ್ಮವು ಯಾವದೊಂದು ಧರ್ಮವಿಲ್ಲದ್ದೂ, ಯಾವದೊಂದು ವಿಶೇಷವಿಲ್ಲದ್ದೂ, ಯಾವ ಶಬ್ದಕ್ಕೂ ವಾಚ್ಯವಲ್ಲದ್ದೂ ಎನ್ನುವದು ಸೂತ್ರವಿರುದ್ಧವು. ಬ್ರಹ್ಮದಲ್ಲಿ ವಾಸ್ತವಧರ್ಮಗಳಿಲ್ಲದಿದ್ದರೂ ಆರೋಪಿತ ಧರ್ಮಗಳು ಸಂಭವಿಸುವದರಿಂದ ವಿರೋಧವಿಲ್ಲ. ಅಂದರೆ ಎಲೈ ನಿರ್ವಿಶೇಷ ಬ್ರಹ್ಮವಾದಿಯೇ ? ಜಗತ್ಕಾರಣತ್ವಾದಿ ಧರ್ಮಗಳು ಬ್ರಹ್ಮದಲ್ಲಿ ಆರೋಪಿಸಲ್ಪಟ್ಟವೆ. (ಅಯತಾರ್ಥಗಳು) ಎಂದು ಯಾವ ಸೂತ್ರದಲ್ಲಿ ಹೇಳಲ್ಪಟ್ಟಿದೆ ? ಎಲ್ಲಿಯೂ ಹೇಳಲ್ಪಟ್ಟಿಲ್ಲವು. ಅಂದಮೇಲೆ ನೀನು ಹೇಳುವದನ್ನು ಹೇಗೆ ನಂಬಬೇಕು. "ಯತೋವಾ ಇಮಾನಿ ಭೂತಾನಿ ಜಾಯಂತೆ ಯೇನಜಾತಾನಿ ಜೀವಂತಿ" ಇತ್ಯಾದಿ ಶ್ರುತಿಗಳು ಆರೋಪಿತಗಳಾದ ಜಗತ್ಕಾರಣತ್ವಾದಿಗಳನ್ನು ಹೇಳುತ್ತವೆಯಂದರೆ ಆ ಶ್ರುತಿಗಳು ಅಪ್ರಮಾಣಗಳಾಗಬೇಕು. ಶುಕ್ತಿಗೆ ರಜತವೆಂದು ಹೇಳುವ ಮಾತು ಅಪ್ರಮಾಣವಷ್ಟೆ? "ದೇಹಾತ್ಮಪ್ರತ್ಯಯೊ ಯದ್ವತ್ಪ್ರಮಾಣತ್ವೇನ ನಿಶ್ಚಿತಃ | ಲೌಕಿಕಂ ತದ್ವದೇವೇದಂ ಪ್ರಮಾಣಂತ್ವಾತ್ಮನಿಶ್ಚಯಾತ್" ಎಂಬುವಂತೆ ಆತ್ಮಜ್ಞಾನವಾಗುವವರಿವಿಗೂ ವೇದಾಂತಗಳು ಪ್ರಮಾಣಗಳೇ ಆಗಿರುವವು. ಆಮೇಲೆ ಏನಾದರೂ ಆಗಲಿ ಅದರಿಂದೇನು ಅಂದರೆ—ದೇಹವೇ ಆತ್ಮವೆಂದು ಲೋಕಾಯತಿಕನೊಬ್ಬನನ್ನು ಬಿಟ್ಟು ಯಾವನೂ ಅನ್ನುವದಿಲ್ಲ. ಯಾವ ಆಸ್ತಿಕನು ದೇಹವೇ ಆತ್ಮವೆಂಬುವದಕ್ಕೆ ಪ್ರಮಾಣವೆನ್ನುವನು ? ಯಾವನೂ ಅನ್ನುವದಿಲ್ಲ.

ಆದ್ದರಿಂದ ಅದಕ್ಕೆ ಪ್ರಮಾಣವೆನ್ನುವವನು ಯಾವಾಗಲೂ ಅದನ್ನು ಪ್ರಮಾಣವೆಂದೇ ಹೇಳುತ್ತಾನೆ. ಮತ್ತೊಂದು ಕಾಲದಲ್ಲಿ ಅದಕ್ಕೆ ಅವನು ಅಪ್ರಮಾಣವೆನ್ನುವದೇ ಇಲ್ಲವು. ಆ ದೃಷ್ಟಾಂತದಿಂದ ನಿಮಗೇನು ಪ್ರಯೋಜನವಾಯಿತು ? ಏನೂ ಆಗಲಿಲ್ಲ. ಯಾವದು ಪ್ರಮಾಣವಾಗಿದೆಯೋ ಅದು ಎಂದೂ ಅಪ್ರಮಾಣವಾಗಲಾರದು. ಯಾವದಕ್ಕೆ ಬಾಧೆಯುಂಟೋ ಅದು ಅಪ್ರಮಾಣವು. ಯಾವದಕ್ಕೆ ಇಲ್ಲವೊ ಅದು ಪ್ರಮಾಣವೆಂದು ನೀವು ಹೇಳುತ್ತೀರಿ. ಅಂದಮೇಲೆ ಬ್ರಹ್ಮಕ್ಕೆ ಅಬಾಧೆಯು, ಪ್ರಪಂಚಕ್ಕೆ ಬಾಧೆಯು ಎಂದು ಹೇಳುವ ವೇದಾಂತವಂದರಲ್ಲಿ ಬಾಧಾಬಾಧೆಗಳು ವಿರುದ್ಧಗಳಾದ್ದರಿಂದ ಭೇದಾಭೇದಗಳಿಗೆ ವಿರೋಧವೆನ್ನುವ ನೀವು ಅವುಗಳನ್ನು ವೇದಾಂತದಲ್ಲಿ ಹೇಗೆ ಹೇಳುವಿರಿ ? ಬಾಧೆಯಂದರೆ ತ್ರೈಕಾಲಿಕ ನಿಷೇಧವೆಂದು ಹೇಳುವದರಿಂದ ಯಾವದಕ್ಕೆ ಯಲ್ಲಿ ಮೂರು ಕಾಲಗಳಲ್ಲಿ ಬಾಧೆಯನ್ನುವಿರೋ ಅದಕ್ಕೆ ಅಲ್ಲಿ ಪ್ರಮಾಣರೂಪವಾಗಿದೆ ಎಂದು ಹೇಳುವದು ಯಂಥ ಹುಚ್ಚತನವು ? ಬ್ರಹ್ಮಭಿನ್ನವಾದ ವೇದವೇದಾಂತಾದಿಗಳು ಮೂರುಕಾಲಗಳಲ್ಲಿಲ್ಲವೆನ್ನುವ ನೀವು ಬ್ರಹ್ಮಜ್ಞಾನಕ್ಕಿಂತ ಪೂರ್ವಕಾಲದಲ್ಲಿರುತ್ತವೆಂದು ಹೇಳುವದು ವಿಚಾರವಿಲ್ಲದೆ ಬಾಯಿಗೆ ಬಂದಂತೆ ಕೂಗಿಕೊಂಡಂತಾಗುವದಿಲ್ಲವೆ ? ಆದ್ದರಿಂದ ಯಾವದು ಪ್ರಮಾಣವಾಗಿದೆಯೋ ಅದು ಯಾವಾಗಲೂ ಪ್ರಮಾಣವೆಂದೇ ಹೇಳಬೇಕು. ಯಾವದು ಅಪ್ರಮಾಣವೊ ಅದು ಯಾವಾಗಲೂ ಅಪ್ರಮಾಣವೇಸರಿ. ದೇಹಾತ್ಮಪ್ರತ್ಯಯವು ಯಾವಾಗಲೂ ಅಪ್ರಮಾಣವು ಅದರಂತೆ ವೇದಾಂತಗಳೂ ಕೂಡಾ ಅಪ್ರಮಾಣಗಳಾದರೆ ವೇದಾಂತಾರ್ಥವನ್ನು ನಿರ್ಣಯಿಸುವ ವಿಚಾರ ಶಾಸ್ತ್ರವೇ ವ್ಯರ್ಥವಾಗಬೇಕು. ಮತ್ತು ವೇದವೇದಾಂತಾದಿಗಳು ಅಪ್ರಮಾಣಗಳಾದರೆ ನಾಸ್ತಿಕರೆನಿಸಬೇಕು. ಆದ್ದರಿಂದ "ಯತೋವಾ ಇಮಾನಿಭೂತಾನಿ ಜಾಯಂತೇ" ಎಂಬುವ ಮೊದಲಾದ ಜಗತ್ಕಾರಣತ್ವಾದಿಗಳನ್ನು ಹೇಳುವ ವೇದಾಂತಗಳೂ ಕೂಡ ಯಾವಾಗಲೂ ಪ್ರಮಾಣಗಳೆಂದೇ ಹೇಳಬೇಕು. ಇದರಂತೆ ಹೇಳಿದರೆ ನಿಮ್ಮ ನಿರ್ವಿಶೇಷಬ್ರಹ್ಮದ ಸಿದ್ಧಿಯಾಗದೆ ಬ್ರಹ್ಮವು ಸವಿಶೇಷವೆಂದು ಸಿದ್ಧವಾಯಿತು. ನಿರ್ವಿಶೇಷವಾದಿಯೇ ನೀವು ಹೇಳುವ ನಿರ್ವಿಶೇಷ ಬ್ರಹ್ಮವು ಸಿದ್ಧಿಸುತ್ತದೆಯೊ ? ಇಲ್ಲವೊ ? ಸಿದ್ಧಿಸುತ್ತದೆಂದರೆ ಸಿದ್ಧಿಯೆಂಬ ವಿಶೇಷದಿಂದ ಸಹಿತವಾಗಿಲ್ಲಿಲ್ಲವೆ ? ಸಿದ್ಧಿಸುವದಿಲ್ಲವೆಂದರೆ ಯಾವದು ಸಿದ್ಧಿಸುವದಿಲ್ಲವೊ ಅದು ತುಚ್ಛವು. ಗಗನಕುಸುಮಾದಿಗಳು ಸಿದ್ಧಿಸುವದಿಲ್ಲವಾದ್ದರಿಂದ ಅವು ತುಚ್ಛಗಳಾಗಿರುವವು. ಆದ್ದರಿಂದ ಸಿದ್ಧಿಸುವದಿಲ್ಲವೆಂದು ಹೇಳಬಾರದು,

ಅದಕ್ಕೆ ಸಿದ್ಧಿಯನ್ನು ಹೇಳಬೇಕು. ಹೇಳಿದರೆ ಅದು ಸವಿಶೇಷವೇ ಆಗುವದು ವಿಂಲಕ್ಷೈವನೆ? ಸಿದ್ಧಿಯೆಂದರೆ ಬೇರೆಯಲ್ಲ. ನಿರ್ವಿಶೇಷ ಬ್ರಹ್ಮದ ಸ್ವರೂಪವೇ ಎಂದು ನಾವು ಹೇಳುವೆವು. ಆದ್ದರಿಂದ ಸಿದ್ಧಿಯೆಂಬ ವಿಶೇಷದಿಂದ ಬ್ರಹ್ಮಕ್ಕೆ ಸಾಹಿತ್ಯವಿಲ್ಲ. ಆದುದರಿಂದ ಬ್ರಹ್ಮವು ನಿರ್ವಿಶೇಷವೇ ಆಗುವದು. ಅಂದರೆ ಪೂರ್ವಪಕ್ಷಿಯೆ? ಸಿದ್ಧಿಯು ಯಾರಿಗೆ? ಯಾವದರ ಸಿದ್ಧಿಯಾಯಿತು? ಎಂದು ಕೇಳಬೇಕಾಗುವದು. ಸಿದ್ಧಿಯಾಯಿತೆಂದರೆ ಯಾರಿಗೆ ಆಯಿತು? ಯಾವದರ ಸಿದ್ಧಿಯಾಯಿತೆಂದು ಪಂಡಿತಪಾಮರರೂ ಕೂಡಾ ಕೇಳುತ್ತಾರಷ್ಟೆ? ನಿರ್ವಿಶೇಷಬ್ರಹ್ಮದ ಸಿದ್ಧಿಯು ನಿರ್ವಿಶೇಷ ಸ್ವರೂಪವೇ ಅಂದರೆ ಅದಕ್ಕೆ ಸಿದ್ಧಿಯೆಂದು ಅನ್ನುವದು ವ್ಯರ್ಥವು. ಅದು ಸಿದ್ಧಿಯೇ ಅಲ್ಲವು, ಆದುದರಿಂದ ಬ್ರಹ್ಮವು ಸವಿಶೇಷವೆಂದೇ ಹೇಳಿ. ಶ್ರೀಕಂಠಾಚಾರ್ಯರೂ ಕೂಡ ಬ್ರಹ್ಮವು ಸವಿಶೇಷವೆಂದು ಸ್ವೀಕರಿಸಿರುವರು. ಕೆಲವರು ಶ್ರೀಕಂಠಾಚಾರ್ಯರಿಗೆ ನಿರ್ವಿಶೇಷ ಬ್ರಹ್ಮವು ಅಭಿಮತವಾಗಿದೆ ಎಂದು ಊಹಿಸುವರು. ಇದು ತಪ್ಪು, ಯಾಕಂದರೆ ‚‚ತದೇವ ಜಗತ್ಕಾರಣಂ ಬ್ರಹ್ಮೇತ್ಯುಚ್ಯತೆ‛‛ ಎಂಬುವ ಅವರ ಭಾಷ್ಯಪಂಕ್ತಿಯಿಂದ ಜಗತ್ಕಾರಣವಾದದ್ದೇ ಬ್ರಹ್ಮವು. ಅಕಾರಣವು ಬ್ರಹ್ಮವಲ್ಲೆಂದು ಸ್ಪಷ್ಟವಾಗುತ್ತದೆ. ಮತ್ತು ಸ್ವಾಭಾವಿಕ ಶಕ್ತಿ ಮತ್ವಮಲುಪ್ತ ಶಕ್ತಿತ್ವಂ ತಥಾಹಿ ಶ್ರವಣಂ‛‛ ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೆ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ‛‛ ಇತ್ಯಾದಿ ಚಿದಚಿತ್ಪ್ರಪಂಚರೂಪ ಶಕ್ತಿ ವಿಶಿಷ್ಟತ್ವಂ ಸ್ವಾಭಾವಿಕ ಮೇವ ಬ್ರಹ್ಮಣಃ ಕದಾಚಿದಪಿನ ನಿರ್ವಿಶೇಷತ್ವ ಮಿತ್ಯನೇನ ಸಿದ್ಧಂ। ಎಂಬುವ ಮೊದಲಾದ ವಾಕ್ಯಗಳಿಂದ ಅವರು ಕಂಠತಃ ಬ್ರಹ್ಮವು ನಿರ್ವಿಶೇಷವಲ್ಲವೆಂದು ಹೇಳಿದ್ದರೂ ಅವರ ಅಭಿಪ್ರಾಯವು ನಿರ್ವಿಶೇಷ ಬ್ರಹ್ಮದಲ್ಲಿ ಇದೆಯೆಂದು ಹ್ಯಾಗೆ ಹೇಳುವರೊ ಏನೊ. ನಮಗೆ ಮಾತ್ರ ಅವರ ಅಭಿಪ್ರಾಯವು ನಿರ್ವಿಶೇಷದಲ್ಲಿ ಇದೆಯೆಂದು ಹೇಳಲಿಕ್ಕಾಗುವದಿಲ್ಲ. ನಾವೂ ನಿರ್ಗುಣ ಬ್ರಹ್ಮವನ್ನು ಹೇಳುತ್ತೇವೆ. ಆದರೂ ಅವರು ಹೇಳುವಂತೆ ಹೇಳುವದಿಲ್ಲ. ಪರಂತು ನಿರ್ಗುಣವೆಂದರೆ ಆರನೇ ಮಾಯಾ ತತ್ವದಿಂದ ಉಂಟಾದ ಗುಣಗಳಿಲ್ಲವೆಂದು ಹೇಳುತ್ತೇವೆ. ಇದರಂತೆ ಎಲ್ಲಾ ನಿರ್ಗುಣ ನಿಷ್ಕಲ ಮೊದಲಾದ ಶಬ್ದಗಳಿಗೆ ಅರ್ಥವನ್ನು ಹೇಳಬೇಕಲ್ಲದೇ ನಿರ್ಗುಣ ಶಬ್ದಕ್ಕೆ ಬ್ರಹ್ಮವು ಯಾವದೊಂದೂ ಗುಣವಿಲ್ಲದ್ದು ಎಂದು ಹೇಳಿದರೆ ‚‚ಯಸ್ಸರ್ವಜ್ಞ ಸ್ಸಸರ್ವವಿತ್‛‛ ಇತ್ಯಾದ್ಯನಂತ ಶ್ರುತಿಗಳಿಗೆ ವಿರೋಧವಾಗುವದು. ಆದ್ದರಿಂದ ಮುಮುಕ್ಷುಗಳು ಸವಿಶೇಷ ಬ್ರಹ್ಮವನ್ನೇ ವಿಚಾರಿಸಬೇಕು.

ಇನ್ನೂ ಈ ವಾದದಲ್ಲಿ ಅತಿ ಸೂಕ್ಷ್ಮವಿಚಾರವು ಎಷ್ಟೋ ಇದ್ದರೂ ಕನ್ನಡದಲ್ಲಿ ಎಲ್ಲವನ್ನೂ ಸುಲಭವಾಗಿ ತಿಳಿಯುವಂತೆ ಬರೆಯುವದು ಶ್ರಮಸಾಧ್ಯವಾಗಿದೆಯಾ ದ್ದರಿಂದ ವಿರಮಿಸುವೆನು,

ಇನ್ನು ವೃತ್ತಿಗಳು ನಿತ್ಯಗಳೋ ಅಥವಾ ಮಾಯಾವಾದಿಗಳು ಹೇಳುವಂತೆ ಅನಿತ್ಯಗಳೋ ಎಂಬುವ ಎಂಟನೇ ವಿಚಾರವನ್ನು ಮಾಡುತ್ತೇವೆ. "ಅಯಂಘಟಃ" (ಇದು ಕೊಡವು) ಎಂಬುವ ಪೃಥುಬುಧ್ನೋದರಾದ್ಯಾಕಾರ ವಾದ (ಘಟಾಕಾರವಾದ) ಬುದ್ಧಿವೃತ್ತಿಯು (ಘಟದ ಜ್ಞಾನವು) ಇದಕ್ಕೆ ವಿಷಯವು ಘಟವು. ಇದೇ ನಶ್ವರವಾದದ್ದು. ಇದರ ಜ್ಞಾನವು ನಷ್ಟವಾಗುವ ದಿಲ್ಲ. ದಂಡಾದಿಗಳಿಂದ ಘಟದ ನಾಶವೇ ಕಂಡುಬರುವದಲ್ಲದೆ ವಳಗಿನ ಘಟಾ ಕಾರವೃತ್ತಿಗೆ ನಾಶವಿಲ್ಲ. ಆದ್ದರಿಂದಲೇ ಯಾವಾಗಲೋ ಹಿಂದೆ ಶತ್ರುವಿನೊಡನೆ ಯುದ್ಧಮಾಡಿ ಭಯಪಟ್ಟು ಗಾಬರಿಯಾಗಿ ಏನೋ ಒಂದು ಉಪಾಯದಿಂದ ಅವನ ಶಿರಃಚ್ಛೇದನ ಮಾಡಿದ ಮೇಲಾದರೂ ಮನುಷ್ಯನಿಗೆ ಆ ಶತ್ರುವಿನಿಂದುಂ ಟಾದ ವಿಪತ್ತು ತನ್ನ ಜೀವವಿರುವವರಿವಿಗೂ ಕಂಡೇ ಕಾಣುತ್ತದೆ. ವೃತ್ತಿರೂಪ ವಾಗಿ ಆ ಶತ್ರುವೂ ಅವನ ಹೊಡತವೂ ಮತ್ತೊಬ್ಬನ ಮನಸ್ಸಿನಲ್ಲಿಲ್ಲದೆ ನಷ್ಟಗ ಳಾಗಿಯೇ ಹೋಗಿದ್ದರೆ ಒಮ್ಮೊಮ್ಮೆ ಅದನ್ನು ಮನಸ್ಸಿನಲ್ಲಿ ನೋಡಿ ಗಾಬರಿ ಯಾಗುವದೇಕೆ? ಆದ್ದರಿಂದ ವೃತ್ತಿಗಳು ನಿತ್ಯಗಳೇ ಆಗಿರುವವೆಂದು ಹೇಳಬೇ ಕು. ವೃತ್ತಿಗಳು ನಿತ್ಯಗಳೆನ್ನುವ ತಿವಾದ್ವೈತಿಯೇ! ಘಟಪಟಾದಿ ವೃತ್ತಿಗಳು ಬಾಹ್ಯೇಂದ್ರಿಯ ವಿಷಯಗಳ ಸಂಬಂಧಾಧೀನಗಳು. ಆ ಸಂಬಂಧವು ನಷ್ಟವಾದ ಕೂಡಲೇ ಅದರಿಂದುಂಟಾದ ಘಟಜ್ಞಾನವೂ ಕೂಡ ನಷ್ಟವಾಗಲೇಬೇಕಲ್ಲವೆ? ಇದು ಘಟವು ಎಂಬುವ ಜ್ಞಾನವು ಘಟಕ್ಕೆ ಇಂದ್ರಿಯಸಂಬಂಧವಿಲ್ಲದಿದ್ದರಾಗ ದು. ಮತ್ತು ನಾನು ಘಟಜ್ಞಾನವುಳ್ಳವನು ಎಂಬುವ ಮಾನಸ ಪ್ರತ್ಯಕ್ಷಕ್ಕಾ ದರೂ ಮೊದಲು ಬಾಹ್ಯೇಂದ್ರಿಯ ಸಂಬಂಧವು ಬೇಕು. ಯಾವಾಗ ಬಾಹ್ಯೇಂ ದ್ರಿಯ ಸಂಬಂಧವು ನಷ್ಟವಾಗುವದೋ ಆಗ ಮಾನಸ ಪ್ರತ್ಯಕ್ಷಕ್ಕೆ ವಿಷಯ ವಾದ ಘಟವೃತ್ತಿಯು ನಷ್ಟವಾಗುವದು. ಘಟವೃತ್ತಿಯು ನಷ್ಟವಾಗಲು ಬುದ್ಧಿ ಶಕ್ತಿಗೂ ನಾಶವನ್ನು ಹೇಳಬೇಕು. ಬುದ್ಧಿಶಕ್ತಿಯು ನಷ್ಟವಾದರೆ ಶಕ್ತಿವಿಶಿಷ್ಟ ನಾದ ಆತ್ಮನಿಗೂ ನಾಶವನ್ನು ಹೇಳಬೇಕಾಗುವದು. ಆದ್ದರಿಂದ ಆತ್ಮನು ಶಕ್ತಿ ವಿಶಿಷ್ಟನಲ್ಲವೆಂತಲೇ ಹೇಳಬೇಕು. ಅಂದರೆ ನಾನು ಘಟವನ್ನು ತಿಳಿಯುತ್ತೇನೆ ಎಂಬುವ ಆಭ್ಯಂತರ ಪ್ರತ್ಯಕ್ಷಕ್ಕೆ ವಿಷಯವಾದ ಘಟವೃತ್ತಿಯು ಇಂದ್ರಿಯಸಂ

ಬಂಧದ ನಾಶದಿಂದ ನಷ್ಟವಾಗುವದೆಂದರೆ ಬಾಹ್ಯಚಾಕ್ಷುಷಪ್ರತ್ಯಕ್ಷಕ್ಕೆ ವಿಷಯವಾದ ಘಟದ ನಾಶವೂ ಕೂಡ ಬಾಹ್ಯಸೂರ್ಯಾದ್ಯಾಲೋಕದ ಸಂಬಂಧ ನಾಶದಿಂದ ಆಗಲೇಬೇಕು. ಅದು ನಷ್ಟವಾದರೆ ತದ್ವಿಶಿಷ್ಟಕಪಾಲಕ್ಕೂ ನಾಶವನ್ನು ಹೇಳಬೇಕಾಗುವದಿಲ್ಲವೆ? ಬ್ರಹ್ಮಾದ್ವೈತಿಯೇ! ಇದಕ್ಕೆ ನೀನು ಇದೇ ಉತ್ತರವನ್ನು ಹೇಳಬಹುದು. ಸೂರ್ಯಾದ್ಯಾಲೋಕಸಂಬಂಧವು ಘಟಕ್ಕೆ ಕಾರಣವಲ್ಲ. ಆ ಸಂಬಂಧದಿಂದ ಅಥವಾ ಅದರ ನಾಶದಿಂದ ಘಟದ ಉತ್ಪತ್ತಿಯೂ ಅದರ ನಾಶವೂ ಆಗುವದಿಲ್ಲ. ಪರಂತು ಬಾಹ್ಯಾಂಧಕಾರನಾಶಕ್ಕಾಗಿ ಬೇಕೆಂದು ಹೇಳಬಹುದು. ಹಾಗಾದರೆ ಬ್ರಹ್ಮಾದ್ವೈತಿಯೇ! ನೀನು ಹೇಳುವಂತೆಯೇ ಘಟಾದಿ ಜ್ಞಾನಕ್ಕೆ ಇಂದ್ರಿಯ ಸಂಬಂಧವು ಕಾರಣವಲ್ಲ. ಅದರಿಂದಲೂ ಅದರ ನಾಶದಿಂದಲೂ ಘಟಾದಿ ವೃತ್ತಿಯ ಉತ್ಪತ್ತಿಯೂ ಅದರ ನಾಶವೂ ಆಗಲಾರದು, ಪರಂತು ಘಟವೆಂಬ ವಿಷಯವನ್ನು ಆವರಿಸಿರುವ ಕಿಂಚಿತ್ತಾಮಸೀಶಕ್ತಿಯ ನಾಶಕ್ಕಾಗಿ ಬೇಕೆಂದು ನಾನೂ ಹೇಳುವೆನು. ಹಾಗಾದರೆ ಇಂದ್ರಿಯಗಳಿಲ್ಲದೆ ಘಟಾದಿಗಳು ಪ್ರತ್ಯಕ್ಷವಾಗಲಿ ಅಂದರೆ, ನಾವು ಘಟಾದಿಗಳ ವೃತ್ತಿಗಳಿಗೆ ನಿತ್ಯತ್ವವನ್ನು ಹೇಳುತ್ತೇವೆ. ಆದರೂ ಆ ವಿಷಯಾಕಾರಬುದ್ಧಿವೃತ್ತಿಗಳ ಆವಿರ್ಭಾವಕ್ಕೆ ಇಂದ್ರಿಯಗಳು ಬೇಕು. ಯಾಕಂದರೆ ವಿಷಯಾಕಾರವೃತ್ತಿಗಳಿಗೆ ಆವರಕವಾದ ತ್ರಿಗುಣಾತ್ಮಕ ಬುದ್ಧಿಯ ತಾಮಸೀ ಶಕ್ತಿಯು ನಾಶವಾಗದೆ ವಿಷಯಾಕಾರವೃತ್ತಿಗಳು ಆವಿರ್ಭಾವವಾಗಲಾರವಾದ್ದರಿಂದ ಆ ಆವರಣದ ನಾಶಕ್ಕಾಗಿಯೇ ಇಂದ್ರಿಯಗಳು ಬೇಕು. ಇಂದ್ರಿಯಗಳಿಲ್ಲದಿದ್ದರೆ ವೃತ್ತಿಗಳ ಆವಿರ್ಭಾವವು ಹ್ಯಾಗಾದೀತು? ಬುದ್ಧಿಶಕ್ತಿಯ ಕಾರ್ಯವಾದ ಆವರಣರೂಪವಾದ ಮಾಲಿನ್ಯದ ನಾಶವಾದರೂ ಬುದ್ಧಿಶಕ್ತಿಯು ನಾಶವಾಗಲಾರದು. ದಂಡದಿಂದ ಘಟವು ನಾಶವಾದರೂ ಮೃತ್ತಿಕೆಯು ನಾಶವಾಗುವದಿಲ್ಲವಷ್ಟೆ? ಆ ತಾಮಸ ಅವಿದ್ಯಾಶಕ್ತಿಯ ನಾಶವೆಂದರೆ ಸ್ವರೂಪತಃ ನಾಶವಲ್ಲ. ಆದರೆ ಕತ್ತಲೆಯಲ್ಲಿ ದೀಪವನ್ನು ಹಚ್ಚುವದರಿಂದ ಕತ್ತಲೆಯ ಅಪಸರಣವು ಹ್ಯಾಗೋ ಹಾಗೆ ಇಂದ್ರಿಯಗಳನ್ನು ವಿಷಯದೇಶವನ್ನು ಹೊಂದಿಸುವದರಿಂದ ಆ ವಿಷಯಾಕಾರವೃತ್ತಿಗೆ ಆವರಕವಾದ ತಾಮಸ ಶಕ್ತಿಯ ಅಪಸರಣವು. ಅಂದರೆ ಇಂದ್ರಿಯ ಸಂಬಂಧವು ಬುದ್ಧಿಶಕ್ತಿಯ ಆವರಣದ ಅಭಿಭವಕ್ಕೆ ಕಾರಣವಲ್ಲದೆ ಬುದ್ಧಿಶಕ್ತಿಗೆ ಕಾರಣವಲ್ಲವೆಂದು ಲಕ್ಷ್ಯದಲ್ಲಿಡತಕ್ಕದ್ದು. ಆದ್ದರಿಂದ ಘಟಪಟಾದಿ ಬುದ್ಧಿವೃತ್ತಿಗಳು ನಿತ್ಯಗಳೇ ಆಗಿರುವವು. ಇಂದ್ರಿಯಜನ್ಯವಾದ ಜ್ಞಾನವೇ ಪ್ರತ್ಯಕ್ಷವೆಂದರೆ ಈಶ್ವರೀ

ಯಜ್ಞಾನವು ಇಂದ್ರಿಯಜನ್ಯವಾಗದೆ ಇರುವದರಿಂದ ಅದು ಪ್ರತ್ಯಕ್ಷವಲ್ಲವೇನು ? ಹೌದು. ಅದಕ್ಕೆಅಜನ್ಯಪ್ರತ್ಯಕ್ಷವೆನ್ನುವೆವು. ಹಾಗಾದರೆ ನಮ್ಮಗಳ ಘಟಾದಿಪ್ರತ್ಯಕ್ಷಕ್ಕೂ ಅಜನ್ಯವೆಂದು ಹೇಳಬೇಕಲ್ಲವೆ? ಒಂದು ಅಜನ್ಯವು ಮತ್ತೊಂದು ಜನ್ಯವೆನ್ನುವಲ್ಲಿ ಯುಕ್ತಿಯೇನಿರುತ್ತದೆ? ಎಲ್ಲಾ ಪ್ರತ್ಯಕ್ಷಕ್ಕೆ ಒಂದೇ ಅಜನ್ಯತ್ವ ಲಕ್ಷಣವನ್ನು ಹೇಳುವದಕ್ಕಿಂತಲೂ ಜನ್ಯತ್ವ ಅಜನ್ಯತ್ವಲಕ್ಷಣಗಳೆರಡನ್ನೂ ಹೇಳುವದು ಗೌರವವಲ್ಲವೆ? ಹಾಗಾದರೆ ಘಟಾದಿ ಪ್ರತ್ಯಕ್ಷವು ನಿತ್ಯವೆನ್ನುವಿರೋ? ಆಹುದು ಅನ್ನುತ್ತೇವೆ. ಅದರಿಂದ ಹಾನಿಯೇನು? ಆ ಪ್ರತ್ಯಕ್ಷವು ಯಾವಾಗಲೂ ಇರಬೇಕಲ್ಲವೆ? ಇದ್ದೇ ಇರುವದು. ಹಾಗಾದರೆ ಘಟವೃತ್ತಿಯು ಪಟಾದಿ ಜ್ಞಾನಕಾಲದಲ್ಲಿ ಯಾಕೆ ತೋರುವದಿಲ್ಲ. ಅಂದರೆ ನಿಮ್ಮ ಮತದಲ್ಲಿಯಾದರೂ ಆತ್ಮನು ನಿತ್ಯಪ್ರತ್ಯಕ್ಷಸ್ವರೂಪನೇ ಇರುವನು. ಈ ನಿತ್ಯಪ್ರತ್ಯಕ್ಷಸ್ವರೂಪವಾದ ಆತ್ಮನಿಗೋಸ್ಕರವಾಗಿ ಶ್ರವಣ ಮನನ ನಿದಿಧ್ಯಾಸನಾದಿಗಳು ಯಾತಕ್ಕೆ ಬೇಕೆಂದು ನಿಮ್ಮನ್ನು ಕೇಳಿದರೆ ನೀವು ಏನು ಹೇಳುವಿರಿ? ಪ್ರತ್ಯಕ್ಷರೂಪವಾದ ಬ್ರಹ್ಮವು ನಿತ್ಯವಾಗಿದ್ದರೂ ಅದಕ್ಕೆ ಆವರಕವಾದ ಅಜ್ಞಾನ ನಾಶಕ್ಕೋಸ್ಕರ ಶ್ರವಣಮನನಾದಿ ಪ್ರಯತ್ನವು ಬೇಕು. ಅಂದರೆ ಘಟಪ್ರತ್ಯಕ್ಷರೂಪವಾದ ವೃತ್ತಿಯು ನಿತ್ಯವಾಗಿದ್ದರೂ ಅದರ ಆವರಣ ನಾಶಕ್ಕಾಗಿ ಇಂದ್ರಿಯ ಸಂಬಂಧಾದಿಗಳು ಬೇಕಾಗುವವು. ಪಟಪ್ರತ್ಯಕ್ಷ ಕಾಲದಲ್ಲಿ ಘಟಕ್ಕೂ ಇಂದ್ರಿಯಕ್ಕೂ ಸಂಬಂಧವಿಲ್ಲದಿರುವದರಿಂದ ಘಟವೃತ್ತ್ಯಾವರಕವಾದ ಅವಿದ್ಯಾಶಕ್ತಿಯು ನಾಶವಾಗುವದಿಲ್ಲವಾದ್ದರಿಂದ ಘಟಪ್ರತ್ಯಕ್ಷವಾಗುವದಿಲ್ಲವೆಂದು ಹೇಳುತ್ತೇವೆ. ಬ್ರಹ್ಮಚೈತನ್ಯದ ಅಜ್ಞಾನನಾಶಕ್ಕಾಗಿ ಕೇವಲ ಅಹಂಬ್ರಹ್ಮಾಸ್ಮಿ ಎಂಬುವ ಬುದ್ಧಿವೃತ್ತಿಯನ್ನೇ ಹೇಳುವದಿಲ್ಲ. ಕೇವಲ ವೃತ್ತಿಯನ್ನೇ ಹೇಳಿದರೆ ಆಗ ನೀವು ನಮ್ಮಂತೆ ಘಟಚೈತನ್ಯಾವರಕವಾದ ಆವರಣ ನಾಶಕ್ಕಾಗಿ ಕೇವಲ ಇಂದ್ರಿಯ ವೃತ್ತಿಯನ್ನು ಹೇಳಬಹುದು. ಹಾಗಾದರೆ ಬ್ರಹ್ಮಾದ್ವೈತಿಯೆ! ನಾನು ಬ್ರಹ್ಮನು ಎಂಬುವ ವೃತ್ತ್ಯುಪಹಿತವಾದ ಚೈತನ್ಯಕ್ಕೆ ನಾನು ಬ್ರಹ್ಮನಲ್ಲವೆಂಬುವ ಅಜ್ಞಾನ ನಾಶದ ಕಾರಣತನವನ್ನು ಹೇಳುವಿಯೊ? ಹೀಗೆ ಹೇಳುವದಕ್ಕಿಂತಲೂ ಆ ವೃತ್ತಿಗೇನೇ ಕಾರಣತನವನ್ನು ಹೇಳುವದು ಲಾಘವವಲ್ಲವೆ? ನಾನು ಬ್ರಹ್ಮನಲ್ಲವೆಂಬುವ ಅಜ್ಞಾನನಾಶಕ್ಕಾಗಿ ನಾನು ಬ್ರಹ್ಮನು ಎಂಬುವ ವೃತ್ತಿಯೇ ನಿಮ್ಮ ಮತದಂತೆ ವಿರೋಧಿಯಾಗುವದು. ಈ ವಿರೋಧಿವೃತ್ತಿಯಿಂದಲೇ ಅಜ್ಞಾನಕ್ಕೆ ನಾಶವನ್ನು ಹೇಳುವದನ್ನು ಬಿಟ್ಟು ಅಂಥ ವೃತ್ತಿಯಿಂದ ಕೂಡಿದ ಚೈತನ್ಯಕ್ಕೆ ಹೇಳುವಲ್ಲಿ ಬೀಜವೇನು?

ನಿಮ್ಮ ವೇದಾಂತ ಪರಿಭಾಷಾಕಾರರಾದರೂ ಸ್ವವಿರೋಧಿವೃತ್ತ್ಯುತ್ಪತ್ತಿಪರ್ಯಂತಂ ಸ್ಥಾಯಿತ್ವಾಭ್ಯುಪಗಮಾತ್ || ಎಂದು ಕೇವಲ ವಿರೋಧಿವೃತ್ತಿಗಳಿಗೇನೆ ವೃತ್ತಿನಾಶಕಾರಣತನವನ್ನು ಒಪ್ಪಿರುವರು. ಜಡವಾದ ವೃತ್ತಿಯು ಅಜ್ಞಾನವನ್ನು ನಾಶಮಾಡಲಾರದು. ಪರಿಭಾಷಾಕಾರರ ತಾತ್ಪರ್ಯವಾದರೂ ವೃತ್ತ್ಯುಪಹಿತ ಚೈತನ್ಯದಲ್ಲಿಯೆ ಇರುವುದೆಂದರೆ ಇಂಥ ಜಡವಾದ ವೃತ್ತಿಯ ಸಲುವಾಗಿ ವೇದಾಂತಾದಿ ಶಾಸ್ತ್ರವಿಚಾರವೇತಕ್ಕೆ? ಅದು ದೇಹಪಾತಾನಂತರದಲ್ಲಿ ನಾಶವನ್ನು ಹೊಂದಿದರೆ ಶ್ರವಣಾದಿಗಳಿಲ್ಲದ ಅಜ್ಞಾನಕಾಲಕ್ಕಿಂತಲೂ ವಿಶೇಷವೇನು? ನಿರತಿಶಯವಾದ ಆತ್ಮಸುಖವು ವ್ಯರ್ಥವು. ಕಾಮಿನಿಯಿಲ್ಲದ ಅಲಂಕೃತವಾದ ಕೇಳೀಗೃಹವು ವ್ಯರ್ಥವು. ಉನ್ಮತ್ತಜನರಿಗೆ ಮಾಡುವ ವೈರಾಗ್ಯೋಪದೇಶವೂ ಬಧಿರನಿಗೆ ಸಂಗೀತ ಶ್ರವಣವೂ, ಅಂಧನಿಗಿರುವ ರೂಪಲಾವಣ್ಯಾದಿಗಳೂ ವ್ಯರ್ಥಗಳಲ್ಲವೆ? ತನ್ನ ರೂಪಲಾವಣ್ಯಾದಿಗಳಿಂದಾಗತಕ್ಕ ಸಂತೋಷದ ಅನುಭವವು ಕಣ್ಣಿಲ್ಲದಿದ್ದರೆ ಆಗಲಾರದು. ಆದ್ದರಿಂದ ಅವನ ರೂಪಲಾವಣ್ಯವು ಅವನಿಗೆ ವ್ಯರ್ಥವು. ಹಾಗೆ ತನ್ನ ನಿರತಿಶಯ ಸುಖದ ಅನುಭವವು ಬುದ್ಧಿಶಕ್ತಿರೂಪವಾದ ವೃತ್ತಿಯಿಲ್ಲದಿದ್ದರೆ ಆಗಲಾರದು. ಆದುದರಿಂದ ತನ್ನ ನಿರತಿಶಯ ಸುಖವು ತನಗೆ ವ್ಯರ್ಥವು. ‹‹ಅಹಂಬ್ರಹ್ಮಾಸ್ಮಿ›› ಎಂಬುವ ಅಖಂಡವೃತ್ತಿಯು ಶರೀರಪಾತಾನಂತರದಲ್ಲಿ ನಷ್ಟವಾದರೆ ಶ್ರವಣಾದಿಗಳನ್ನು ಮಾಡದ ಪುರುಷನಂತೆ ಪುನಶ್ಚಿತ್ತಶುದ್ಧಿಗಾಗಿ ಅನೇಕ ಕರ್ಮಗಳನ್ನಾಚರಿಸಬೇಕಾಗುವದು. ಅದರಿಂದ ಪುನಃ ಬಂಧಾನುವೃತ್ತಿಯಾದೀತು. ಆದುದರಿಂದ ಸರ್ವಶ್ರೇಷ್ಠವಾದ ಆತ್ಮವಿಷಯಕ ಬುದ್ಧಿಶಕ್ತಿಯ ನಿತ್ಯಸಂಬಂಧವನ್ನು ಆತ್ಮನಿಗೆ ಹೇಳಬೇಕು. ಇಲ್ಲದಿದ್ದರೆ ‹‹ಆತ್ಮರತಿಃ›› ‹‹ಆತ್ಮಕ್ರೀಡಃ›› ‹‹ಆತ್ಮೈವೇದಂಸರ್ವಂ›› ಎಂಬುಪನಿಷತ್ತಿನಿಂದ ಹೇಳಲ್ಪಟ್ಟ ಆತ್ಮವಿಷಯಕ ರತಿಕ್ರೀಡೆಗಳು ಸಂಗತಗಳಾಗಲಾರವು. ಶಕ್ತಿಯೂ ಬ್ರಹ್ಮವೂ ಗಂಧಪುಷ್ಪಗಳಂತೆಯೂ, ಜಲಶೈತ್ಯದಂತೆಯೂ, ಅಗ್ನಿ ಉಷ್ಣತೆಗಳಂತೆಯೂ, ದೀಪದೀಪ್ತಿಗಳಂತೆಯೂ ನಿತ್ಯಸಂಬಂಧಗಳೆಂತಲೇ ಹೇಳಬೇಕು. ಪರಾಹಂತಾಕಾರಬುದ್ಧಿಶಕ್ತಿಗೆ ವಿಷಯವು ಬ್ರಹ್ಮವು. ಬ್ರಹ್ಮಕ್ಕೆ ವಿಷಯವು ಬುದ್ಧಿಯು ಮತ್ತು ಬುದ್ಧಿ ಧರ್ಮಗಳು. ಹೀಗೆ ಪರಸ್ಪರ ವಿಷಯ ವಿಷಯಿಭಾವವನ್ನು ಹೇಳಬೇಕು. ಇದೇ ಅಭಿಪ್ರಾಯದಿಂದಲೇ ಅಪ್ಪಯ್ಯ ದೀಕ್ಷಿತರು ಪರಸ್ಪರತಪಃಸಂಪತ್ಫಲಾಯಿತ ಪರಸ್ಪರೌ| ಪ್ರಪಂಚಮಾತಾಪಿತರೌ ಪ್ರಾಂಚೌಜಾಯಾಪತೀ ಸ್ತುಮಃ || ಎಂದು ಹೇಳಿರುವರು. ಈ ಆತ್ಮಸಾಕ್ಷಿಣಿಯಾದ ಜ್ಞಾನ ಶಕ್ತಿಯ ಸಲುವಾಗಿ

ಎಷ್ಟೋ ದಿವಸ ಕಷ್ಟಪಟ್ಟು ಶ್ರವಣಮನನಾದಿಗಳಿಂದಲೂ ವೈರಾಗ್ಯಾದಿ ಕೋಟ್ಯಂತರ ಆಯಾಸಗಳಿಂದಲೂ ರತ್ನ ದೀಪದಂತೆ ಇರುವ ಆ ಶಕ್ತಿ ದೀಪವನ್ನು ಪಡದುಕೊಂಡು ಎಲ್ಲಾ ಅಂಧಕಾರವನ್ನು ಕಳೆದುಕೊಂಡು ಆ ಮೇಲೆ ಉತ್ಕೃಷ್ಟವಾದ ಪ್ರಕಾಶದಲ್ಲಿ ಆನಂದ ಪಡುತ್ತೇನೆಂದು ಶಿವಸ್ವರೂಪನಾದ ಜೀವನ್ಮುಕ್ತನಿಗಾದರೂ ಆನಂದಾದ್ಯಾಕಾರವಾದ ಬುದ್ಧಿ ಶಕ್ತಿಯು ಇರಲೇಬೇಕು. ಯಾವದೊಂದೂ ಅರುವಿಲ್ಲದಿದ್ದರೆ ಮುಕ್ತನು ಅರುವಿಲ್ಲದ ಕಲ್ಲಿನಂತೆ ಜಡನೆನಿಸಬೇಕು. ಆದುದರಿಂದ ಮುಕ್ತನಿಗೆ ಸ್ವಸ್ವರೂಪವಾದ ಆನಂದಾದ್ಯಾಕಾರವಾದ ಬುದ್ಧಿ ಶಕ್ತಿಯನ್ನು ಹೇಳಲೇಬೇಕು ಇಂಥ ಬುದ್ಧಿ ಶಕ್ತಿಗೆ ದೇಹಪಾತಾನಂತರದಲ್ಲಿ ನಾಶವನ್ನು ಹೇಳಿದರೆ ವಿದೇಹಮುಕ್ತಿರೂಪವಾದ ಸುಖದ ಅನುಭವವು ಹ್ಯಾಗಾಗಬೇಕು. ಅದು ತನಗಾಗದಿದ್ದರೆ ತಾನು ಕಷ್ಟಪಟ್ಟು ಪ್ರಯೋಜನವೇನು ? ನಾನು ಸಚ್ಚಿದಾನಂದ ಸ್ವರೂಪನು ಎಂಬುವ ಅರಿವೇ ಇಲ್ಲದ ಮೇಲೆ ತಾನು ಚೇತನನೆನಿಸಿ ಕಲ್ಲಿನಗಿಂತ ಹೆಚ್ಚಿನ ಕೆಲಸವನ್ನೇನು ಮಾಡಿದಂತಾಯಿತು. ಆದ್ದರಿಂದ ಪರಾಹಂತಾಕಾರ ಬುದ್ಧಿ ಶಕ್ತಿಯು ನಿತ್ಯವೆಂದು ಹೇಳಬೇಕಲ್ಲದೆ ಅನಿತ್ಯವೆನ್ನಬಾರದು. ಇದರಂತೆ ಘಟಾಕಾರಾದಿ ಪ್ರತ್ಯಕ್ಷಾದಿ ವೃತ್ತಿಗಳೂ ಕೂಡ ನಿತ್ಯಗಳು ಇವುಗಳಿಗಾದರೂ ಬೇರೆ ವೃತ್ತಿಗಳಿಂದ ನಾಶವನ್ನು ಹೇಳಲಾಗದು. ಘಟ ಪ್ರತ್ಯಕ್ಷವು ಪಟ ಪ್ರತ್ಯಕ್ಷದಿಂದ ನಷ್ಟವಾದರೆ ಮುಂದೆ ಘಟದ ಸ್ಮರಣೆಯೇ ಆಗುವದಿಲ್ಲವಾದ್ದರಿಂದ ಪಟಜ್ಞಾನಕಾಲದಲ್ಲಿ ಘಟಜ್ಞಾನದ ನಿಮೇಷವನ್ನು ಪಟಜ್ಞಾನ ದುನ್ಮೆಷವನ್ನೂ ಹೇಳಬೇಕಲ್ಲದೆ ಪಟಜ್ಞಾನದಿಂದ ನಾಶವನ್ನು ಹೇಳಬಾರದು. ಮುಂದಣ ಸ್ಮೃತಿಯ ಸಲುವಾಗಿ ಎಲೈ ಶಿವಾದ್ವೈತಿಯೆ ! ವೃತ್ತಿಯನ್ನು ನಿತ್ಯವೆನ್ನುವಿಯುಷ್ಟೆ? ಅಹುದು. ಆ ಘಟಸ್ಮೃತಿಯು ಅದರನುಭವದಿಂದುಂಟಾದ ಸಂಸ್ಕಾರದಿಂದಲೇ ಸಂಭವಿಸುತ್ತಿರಲಿಕ್ಕೆ ಆ ಘಟದ ಅನುಭವಕ್ಕೆ ನಿತ್ಯತ್ವವನ್ನು ಏಕೆ ಹೇಳಬೇಕು ಅಂದರೆ—ಬ್ರಹ್ಮಾದ್ವೈತಿಯೆ ! ಆ ಸಂಸ್ಕಾರವು ಯಾವದನ್ನು ತನಗೆ ವಿಷಯವನ್ನಾಗಿ ಮಾಡಿಕೊಂಡಿದೆ. ಘಟವನ್ನು ಅಂದರೆ ಘಟವಿಷಯಕ ಸಂಸ್ಕಾರದಿಂದಲೇ ಸ್ಮರಣವಾಗಬೇಕು. ಘಟವಿಷಯಕವಾದ ಅನುಭವದಿಂದ ಆಗಬಾರದೆಂಬುವದು ದುರಭಿಮಾನವಲ್ಲವೇನು ? ಅದೇಕೆ ಘಟದ ಅನುಭವವು ಘಟವು ನಷ್ಟವಾದಾಗಲೂ ಮತ್ತೊಂದು ವೃತ್ತಿಯು ಹುಟ್ಟಿದನಂತರವಾಗಲೀ ನಷ್ಟವಾಗಿ ಹೋಗಿದೆ. ಆದ್ದರಿಂದಲೇ ಒಂದೇ ಸಂಸ್ಕಾರದಿಂದ ಸ್ಮರಣೆಯನ್ನು ಹೇಳುತ್ತೇವೆ. ಇದು ದುರಭಿಮಾನವೊ ? ಅಹುದು ದುರಭಿಮಾನವೇ ಸರಿ. ಯಾಕಂದರೆ ನೀವು

ನಿರಭಿಮಾನಿಗಳೇ ಆದರೆ ಘಟವಿಷಯಕ ಅನುಭವಕ್ಕೆ ಮಾತ್ರ ನಾಶವನ್ನು ಹೇಳಿ ಘಟವಿಷಯಕ ಸಂಸ್ಕಾರಕ್ಕೆ ಘಟಸ್ಮರಣೆಯವರಿಗೆ ಸ್ಥಿತಿಯನ್ನು ಹೇಳುತ್ತಿದ್ದಿಲ್ಲ. ನಾಶವನ್ನು ಹೇಳಿದರೆ ಎರಡಕ್ಕೂ ಹೇಳಬೇಕು. ಇಲ್ಲದಿದ್ದರೆ ಎರಡಕ್ಕೂ ಹೇಳಬಾರದು. ಎರಡಕ್ಕೂ ನಾಶವನ್ನು ಒಪ್ಪಿದರೆ ಮುಂದೆ ಅವರ ಸ್ಮರಣೆಯು ಹ್ಯಾಗಾಗಬೇಕು ? ಆದ್ದರಿಂದ ಘಟದ ಅನುಭವಕ್ಕೇನೇ ನಿತ್ಯವೆಂದು ಹೇಳಿಬಿಟ್ಟರಾಯಿತು. ಈ ಘಟಾನುಭವದಿಂದಲೇ ಘಟಸ್ಮರಣೆಯಾಗುತ್ತದೆ. ಈ ಸ್ಮರಣೆಯಗೋಸ್ಕರವಾಗಿ ಬೇರೆ ಸಂಸ್ಕಾರವನ್ನು ಯಾಕೆ ಕಲ್ಪಿಸಬೇಕು? ಆ ಭಾವನಾಖ್ಯಸಂಸ್ಕಾರವು ಆತ್ಮವಿಶೇಷಗುಣವೇ ಅಲ್ಲವೆ ? ಇದೂಕೂಡ ಉತ್ತರಕ್ಷಣದಲ್ಲಿ ಪಟಜ್ಞಾನದಿಂದಲಾಗಲೀ ಅಥವಾ ಪಟಜ್ಞಾನದಿಂದುಂಟಾದ ವಿರೋಧಿಭಾವನಾಖ್ಯಸಂಸ್ಕಾರದಿಂದಾಗಲಿ ನಾಶವನ್ನು ಹೊಂದಲೇಬೇಕು. "ಯೋಗ್ಯವಿಭುವಿಶೇಷಗುಣಾನಾಂ ಸ್ವೋತ್ತರವರ್ತಿಗುಣನಾಶ್ಯತ್ವನಿಯಮಾತ್" ಎಂದು ನೈಯಾಯಿಕರ ನಿಯಮವಿರುತ್ತದೆ. ಇದೇ ನಿಯಮದಂತೆಯೇ ನೀನು ಒಂದು ವೃತ್ತಿಯಿಂದ ಮತ್ತೊಂದು ವೃತ್ತಿಗೆ ನಾಶವನ್ನು ಹೇಳುತ್ತೀಯಂದಮೇಲೆ ಘಟಾನುಭವಜನ್ಯಸಂಸ್ಕಾರವೂ ಕೂಡ ಮತ್ತೊಂದು ಜ್ಞಾನದಿಂದ ಅಥವಾ ಮತ್ತೊಂದು ಸಂಸ್ಕಾರದಿಂದ ನಷ್ಟವಾಗಬಾರದೇಕೆ ? ಆದಕ್ಕೂ ನಾಶವನ್ನು ಹೇಳಿದರೆ ಮುಂದಣ ಸ್ಮೃತ್ಯುತ್ಪತ್ತಿಯನ್ನು ತಂದೆಯಿಲ್ಲದೆ ಮಗನುತ್ಪತ್ತಿಗೆ ಸಮಾನವನ್ನಾಗಿ ಹೇಳಿದಂತಾಗುವದಿಲ್ಲವೆ? ಆದ್ದರಿಂದ ವೃತ್ತಿಗಳು ನಿತ್ಯಗಳು. ಇವುಗಳಿಗೆ ಕಾರಣವಾದ ಬುದ್ಧಿಶಕ್ತಿಯಾದರೂ ನಿತ್ಯವಾದದ್ದು. ಈ ಶಕ್ತಿವಿಶಿಷ್ಟ ಆತ್ಮನು ನಿತ್ಯನೆಂದೇ ಹೇಳುವದುಚಿತವು. ಬುದ್ಧಿವೃತ್ತಿರೂಪವಾದ ಆಭ್ಯಂತರ ಪ್ರಪಂಚಕ್ಕೆ ನಿತ್ಯತ್ವವನ್ನು ಹೇಳಿದರೆ ಪ್ರಪಂಚವು ಅನಿತ್ಯವೆನ್ನುವ ಶ್ರುತಿ ಸ್ಮೃತಿಗಳಿಗೆ ವಿರೋಧವಾಗುವದಿಲ್ಲ. ಅಂದರೆ ಅವು ಕೇವಲ ನಾಮರೂಪಾತ್ಮಕವಾದ ಪ್ರಪಂಚಕ್ಕೇನೇ ಅನಿತ್ಯವೆಂದು ಹೇಳುತ್ತೇವೆಯೇ ಹೊರ್ತು ಆಂತರೀಯ ಪ್ರಪಂಚಕ್ಕೆ ಅನಿತ್ಯವೆಂದು ಅನ್ನುವದಿಲ್ಲ. ಆದ್ದರಿಂದಲೇ ಇದರಂತೆ ಅನುಭವವೂ ಕೂಡಾ ಕಂಡುಬರುತ್ತದೆ. ಕುಲಾಲನು ತಾನು ಮುಂದೆ ಮಾಡುವ ಘಟವನ್ನು ಸೂಕ್ಷ್ಮರೂಪದಿಂದ (ವೃತ್ತಿರೂಪದಿಂದ) ಇದ್ದದ್ದನ್ನು ಅನುಸಂಧಾನಿಸಿ ಆಮೇಲೆ ಹೊರಗೆ ಬಾಹ್ಯಕರಣಗಳಿಂದ ಸ್ಥೂಲಘಟವನ್ನು ಮಾಡುತ್ತಾನೆ. ಆಮೇಲೆ ಆ ಘಟವು ದಂಡಾದಿಗಳ ಹೊಡತದಿಂದ ವಡೆದು ನಷ್ಟವಾದರೂ ಆ ನಷ್ಟಘಟದ ಎಲ್ಲಾ ಆಕಾರವು ಅವನಿಂದನುಭವಿಸಲ್ಪಡುತ್ತದೆ. ಈ ಅನುಭವರೂಪವಾದ ವೃತ್ತಿಗೆ ನಾಶವನ್ನು ಹೇಳಿಬಿಟ್ಟರೆ ಪುನಃ ಕುಲಾ

ಕನ್ನಡ ಎ.ವಿ., ಹಂಪಿ.  109012 

ಲನು ಮೊದಲಿನ ಕೊಡದಂತೆ ಮತ್ತೊಮ್ಮೆ ಕೊಡವನ್ನು ಮಾಡಲಾರನು. ಯಾವನಾದರೂ ಏನನ್ನಾದರೂ ನಿರ್ಮಿಸಬೇಕಾದರೆ ಮೊದಲು ಅನುಸಂಧಾನಿಸಿಯೇ ನಿರ್ಮಿಸುತ್ತಾನಷ್ಟೆ? ಈ ಅನುಸಂಧಾನಕ್ಕೂ ಕೂಡ ಉತ್ಪತ್ತಿ ವಿನಾಶಗಳನ್ನು ಕಲ್ಪಿಸುವದರಲ್ಲಿ ಪ್ರಮಾಣವಿಲ್ಲ. ಆದ್ದರಿಂದ ಆಂತರೀಯ ಪ್ರಪಂಚವು ನಿತ್ಯವು. ಹಾಗಾದರೆ ಕೈವಲ್ಯೋಪನಿಷತ್ತಿನಲ್ಲಿ "ಸಏವಮಾಯಾಪರಿಮೋಹಿತಾತ್ಮಾ ಶರೀರಮಾಸ್ಥಾಯಕರೋತಿವಿಶ್ವಂ | ಸ್ತ್ರೀಯನ್ನಪಾನಾದಿ ವಿಚಿತ್ರಭೋಗೈಃ ಸಏವಜಾಗ್ರತ್ಪರಿತೃಪ್ತಮೇತಿ | ಸ್ವಪ್ನೇಸಜೀವಃ ಸುಖದುಃಖಭೋಕ್ತಾ ಸ್ವಮಾಯಯಾ ಕಲ್ಪಿತಜೀವಲೋಕೇ | ಸುಷುಪ್ತಿಕಾಲೆ ಸಕಲೇವಿಲೀನೇ" ಇತ್ಯಾದಿ ವಾಕ್ಯಗಳಿಂದ ಜಾಗ್ರತ್ಪ್ರಪಂಚಕ್ಕೆ ಅನಿತ್ಯತ್ವವನ್ನು ಹೇಳಿ ಆಮೇಲೆ ಅದರಂತೆ ತೈಜಸನಿಂದ ಅನುಭವಿಸಲ್ಪಡುವ ಬುದ್ಧಿ ಧರ್ಮರೂಪವಾದ ಆಂತರೀಯ ಪ್ರಪಂಚಕ್ಕೂ ಅನಿತ್ಯತ್ವವು ಕಂಡುಬರುತ್ತದೆ. ಆದ್ದರಿಂದ ನೀನು ಆಂತರೀಯ ಪ್ರಪಂಚಕ್ಕೆ ನಿತ್ಯತ್ವವನ್ನು ಸಾಧಿಸುವದು ಶ್ರುತಿವಿರುದ್ಧವೆಂದರೆ ಅಲ್ಲಿ ಜಾಗ್ರದಾದ್ಯವಸ್ಥೆಗಳಿಗೆ ಅನಿತ್ಯತ್ವ ಪ್ರತಿಪಾದನವು ಬುದ್ಧಿವೃತ್ತಿಗೆ ಆವರಕಗಳಾದ ನಿದ್ರಾದಿಗಳಿಗಲ್ಲದೆ ಬುದ್ಧಿವೃತ್ತಿಗಳಿಗಲ್ಲ. ಅದರಿಂದಲೇ "ಜಾಗ್ರತ್ಸ್ವಪ್ನಸುಷುಪ್ತ್ಯಾದಿಪ್ರಪಂಚಂ ಯತ್ಪ್ರಕಾಶತೆ ತದ್ಬ್ರಹ್ಮಾಹಮಿತಿಜ್ಞಾತ್ವಾ ಸರ್ವಬಂಧೈಃ ಪ್ರಮುಚ್ಯತೆ" ಎಂದು ಅದೇ ಕೈವಲ್ಯೋಪನಿಷತ್ತಿನಲ್ಲಿ ಜಾಗ್ರದಾದಿ ಪ್ರಪಂಚವನ್ನು ಯಾವದು ಪ್ರಕಾಶಿಸುತ್ತದೆಯೋ ಅದೇ ಬ್ರಹ್ಮವು ನಾನೆಂದು ತಿಳಿದು ಸರ್ವಬಂಧಗಳಿಂದ ಮುಕ್ತನಾಗುವನೆಂದು ಹೇಳುತ್ತಿದ್ದಿಲ್ಲ. ಇಲ್ಲಿ ವಿಚಾರಿಸೋಣ ಜಾಗ್ರದಾದಿ ಮೂರುಅವಸ್ಥೆಗಳಲ್ಲಿ ಬುದ್ಧಿವೃತ್ತಿರೂಪವಾದ ಆತ್ಮಪ್ರಕಾಶವಿಲ್ಲದಿದ್ದರೆ "ಯತ್ಪ್ರಕಾಶತೆ" ಯಾವದು ಪ್ರಕಾಶಿಸುತ್ತಿದೆಯೋ ಎಂದು ಶ್ರುತಿಯು ಹೇಳುತ್ತಿದ್ದಿಲ್ಲವು. ಆದ್ದರಿಂದ ಈ ನಿತ್ಯಸಂಬಂಧರೂಪವಾದ ಬುದ್ಧಿಶಕ್ತಿಯ ಆವರಣವು ನಶ್ವರವಾದದ್ದರಿಂದ ಜಾಗ್ರದಾವರಣ, ಸ್ವಪ್ನಾವರಣ, ಸುಷುಪ್ತಿ ಆವರಣಗಳೆಂಬ ಮೂರು ಆವರಣಗಳನ್ನೇ ಮೇಲಣ ಶ್ರುತಿಯು ನಶ್ವರಗಳನ್ನಾಗಿ ಹೇಳುತ್ತದೆ. ಆದರೆ ಅವಿದ್ಯಾವೃತ್ತಿರೂಪಗಳಾದ ತನುಗಳಿಗೆ ಆಧಾರವಾದ ಆತ್ಮನಿಗೂ ಆತ್ಮನಿಗೆ ಅಭಿನ್ನವಾದ ನಾನು ಬ್ರಹ್ಮನು ಎಂಬುವ ಬುದ್ಧಿ ವೃತ್ತಿರೂಪವಾದ ಪ್ರಕಾಶಕ್ಕೂ ಅನಿತ್ಯತ್ವವನ್ನು ಹೇಳದೇ ಪರಸ್ಪರ ವಿಷಯ ವಿಷಯಭಾವವನ್ನೇ ಹೇಳುತ್ತದೆಂದು "ಯತ್ಪ್ರಕಾಶತೆ" ಎಂಬುವ ಶ್ರುತಿಬಲದಿಂದ ನಿರ್ಧರಿಸುತ್ತೇವೆ. ಆದುದರಿಂದ ಯಾವ ಶ್ರುತಿಗೂ ವಿರೋಧವಿಲ್ಲವು. ಶಲ್ಲಟಾಚಾರ್ಯರೂ ಕೂಡಾ ಜಾಗ್ರದಾದಿ

ವಿಭೇದೇಪಿತದಭಿನ್ನೆ ಪ್ರಸರ್ಪತಿ | ನಿವರ್ತತೆ ನಿಜಾನ್ನೈವ ಸ್ವಭಾವಾದುಪಲಬ್ಧೃತಃ || ಎಂದು ಹೇಳಿರುವರು. ಸ್ವಪ್ನಾದಿಗಳಲ್ಲಿ ಬುದ್ಧಿ ಪ್ರಪಂಚವೇ ನಷ್ಟವಾಗುವ ಪಕ್ಷದಲ್ಲಿ ಸ್ವಭಾವರೂಪವಾದ ಆತ್ಮನ ಉಪಲಬ್ಧಿರೂಪವಾದ ಪ್ರಕಾಶವನ್ನು ಹೇಳುತ್ತಿದ್ದಿಲ್ಲ. ಉತ್ಪಲಾಚಾರ್ಯರೂ ಕೂಡಾ ಈ ಶ್ಲೋಕದ ವ್ಯಾಖ್ಯಾನವನ್ನು ಬರದಿದ್ದಾರೆ, ಏನಂದರೆ ಜಾಗ್ರದಾದಿ ವಿಭೇದೆ ಪ್ರಸರ್ಪತಿ ಪ್ರಸರತ್ಯಪಿಸತಿತತ್ಸ್ಪಂದ ಕತ್ವಂ ನಿಜಾದಾತ್ಮೀಯಾತ್ ಸ್ವಭಾವಾದುಪಲಬ್ಧಿರೂಪಾತ್ ಸ್ವಸಂ ವಿತ್ಸ್ವರೂಪಾನ್ನೈವ ನಿವರ್ತತೆ | ಕುತ ಉಪಲಬ್ಧೃತೊ ಹೇತೊರ್ವಾ || ಯಸ್ಮಾದು ಫಲಬ್ಧೃರೂಪತ್ವಂ ತ್ರಿಷ್ವಪ್ಯವಸ್ಥಾಸು ಸಾಧಾರಣಂ | ಉಕ್ತಂಚ ಅವಸ್ಥಾಸ್ವೇವ ಭೇದೊಯಂ ನಾವಸ್ಥಾತುಃ ಕದಾಚನ | ಯಥಾ ವಿಷಸ್ಯಾಂ ಕುರಾದೌ ತಚ್ಛಕ್ತೇರ್ನತು ಭಿನ್ನತಾ || ಇತಿ ಜಾಗ್ರತ್ಸ್ವಪ್ನಯೋಃ ಸಂವೇದನಂ ಸರ್ವೇಷಾಂ ಪ್ರಸಿದ್ಧಮೇವ ಸುಷುಪ್ತೇರುತ್ತರಕಾಲಂ ಸುಖಮಹಮಸ್ವಾಪ್ಸಂ ಇತ್ಯಾದಿ ಅಜ್ಞಸ್ಯಾಪಿಸಂವೇದನಾತ್ ಸಂವೇತ್ತಾನಿರ್ದಿಷ್ಟಏವ | ಇತ್ಯಾದಿಗಳಿಂದ ಪರಮ ಅಭಿಯುಕ್ತರೂ ಶಕ್ತಿಪಾತಪವಿತ್ರಿತ ಹೃದಯರೂ ಆದ ಕಲ್ಲಟಾಚಾರ್ಯರೂ ಉತ್ಪಲಾಚಾರ್ಯರೂ ಎಲ್ಲಾ ಅವಸ್ಥೆಗಳಲ್ಲಿಯೂ ಆಂತರೀಯ ಬುದ್ಧಿ ಪ್ರಪಂಚಕ್ಕೆ ನಿತ್ಯತ್ವವನ್ನು ವಪ್ಪಿಕೊಂಡಿರುವರಾದ್ದರಿಂದ ಪರಾಹಂತಾಕಾರ ಬುದ್ಧಿಶಕ್ತಿಯು ನಿತ್ಯವಾದದ್ದು. ಇದಕ್ಕೆ ನಿತ್ಯತ್ವವನ್ನು ಹೇಳಿದರೆ ಜಡತ್ವವಾದ ವೃತ್ತಿಯು ಉಳಿದಂತಾಯಿತು. ದ್ವೈತಾಪತ್ತಿಯಾಗುವದು. ನಿಮ್ಮ ಶಿವಾದ್ವೈತವಾದರೂ ಹೇಗೆ ಸಂಗತವಾಗುವದು ? ಅಂದರೆ ಆ ವೃತ್ತಿಯು ಜಡವೆಂದು ನೀನು ತಿಳಿದುಕೊಂಡಿರುವಿ. ಅದು ಜಡವಲ್ಲ. ಕಿಂತು ದೀಪದಿಪಿಕೆಗಳಂತೆ ಆತ್ಮಸ್ವರೂಪವೇ ಎಂದು ಮೊದಲೇ ಹೇಳಿದ್ದೇನೆ. ಈ ವೃತ್ತಿಯೂ ಕೂಡ ಜಡವು ನಶ್ವರವು ಆದ ಪಕ್ಷದಲ್ಲಿ ಕೈವಲ್ಯೋಪನಿಷತ್ತಿನಲ್ಲಿ "ಚಿನ್ಮಾತ್ರೋಹಂ ಸದಾಶಿವಃ" ಎಂಬುವ ವಾಕ್ಯದಿಂದ ಪರಮೇಷ್ಠಿಯು ಅಶ್ವಲಾಯನನನ್ನು ಕುರಿತು ಬೋಧಿಸುತ್ತಿದ್ದಿಲ್ಲ. ಚಿನ್ಮಾತ್ರನಾದ ಸದಾಶಿವನೇ ನಾನು ಎಂಬುವ ವೃತ್ತಿಯು ಜಡವಾಗಿದ್ದಪಕ್ಷದಲ್ಲಿ ಭಗವತ್ಪರಮೇಷ್ಠಿಗೂಕೂಡ ಜಾಡ್ಯವಿತ್ತೆಂದು ಹೇಳಿದಂತಾಗಲಿಲ್ಲವೆ ? ಆ ವೃತ್ತಿಯು ನಶ್ವರವಾಗಿದ್ದಪಕ್ಷದಲ್ಲಿ ಯಾವದೊಂದು ಆವರಣಾದಿ ಪ್ರತಿಬಂಧಕವಿಲ್ಲದ ಪರಮೇಷ್ಠಿಗೆ ನಾನು ಚಿನ್ಮಾತ್ರನಾದ ಸದಾಶಿವನು ಎಂದು ಅಭಿನಯ ಪುರಃಸರವಾಗಿ ಆತ್ಮಸಾಕ್ಷಿಣಿಯಾದ ಬುದ್ಧಿಶಕ್ತಿಯ ಪ್ರದರ್ಶನವು ಯುಕ್ತವಾಗಲಾರದು. ಎಲೈ ಬ್ರಹ್ಮಾದ್ವೈ

ತಿಯೆ! ನಿನ್ನ ಮತದಲ್ಲಿ "ಚಿನ್ಮಾತ್ರೋಽಹಂ ಸದಾಶಿವಃ" ಎಂಬ ವಾಕ್ಯವು ಸಂಗತವಾಗುವದಿಲ್ಲ. ನನ್ನ ಶಿವಾದ್ವೈತ ಮತದಲ್ಲಿ ಆತ್ಮಸುಖಾದ್ಯಾಕಾರವಾದ ಬುದ್ಧಿಶಕ್ತಿಯು ನಿತ್ಯವಾದುದರಿಂದ ಆ ವಾಕ್ಯವು ಸಂಗತವಾಗುತ್ತದೆ. ಆ ಪರಮೇಷ್ಠಿಯು ಆ ಪ್ರಕಾರವಾಗಿ ತನಗಭಿನ್ನವಾದ ನಾನು ಸದಾಶಿವನು ಎಂಬಾಕಾರವುಳ್ಳ ನಿತ್ಯವಾದ ಆತ್ಮಶಕ್ತಿಯನ್ನು ತೋರಿಸಿ ಉಪದೇಶಿಸಿರುವದರಿಂದ ಅಶ್ವಲಾಯನನು ತನ್ನ ಆವರಣಾದಿ ರೂಪಗಳಾದ ಮಲಗಳನ್ನು ಶಿವಯೋಗದಿಂದ ಕಳೆದುಕೊಂಡು ಬುದ್ಧಿರೂಪವಾದ ಆತ್ಮಶಕ್ತಿಯನ್ನು ಪಡೆಯುವನು. ಇದೇ ಅರ್ಥವು ಶ್ವೇತಾಶ್ವತರೋಪನಿಷತ್ತಿನಲ್ಲಿಯಾದರೂ ಹೇಳಲ್ಪಟ್ಟಿರುತ್ತದೆ. ಅದೇನಂದರೆ "ತೇಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ" ನಾನೇ ಆತ್ಮನು ಎಂಬುವ ನಿಶ್ಚಯಾತ್ಮಕವಾದ, ಬುದ್ಧಿರೂಪವಾದ, ಸ್ವಾಭಿನ್ನವಾದ ಶಕ್ತಿಯು ತನ್ನಲ್ಲಿ ಉನ್ಮಿಷಿತವಾದ ಮಾಯಿಕ ಗುಣಗಳಿಂದ ಮುಚ್ಚಲ್ಪಡಲು ಭಿತ್ಯಾದಿ ವ್ಯವಧಾನದಿಂದ ದೀಪದೀಪಿಕೆಗಳ ತೋರಿಕೆ ಇಲ್ಲದಂತೆಯೂ, ಮೇಘಾವರಣದಿಂದ ಪ್ರಭಾಕರನೂ ಅವನ ಪ್ರಭೆಯೂ ಕಾಣಿಸದಿರುವಂತೆಯೂ, ಚಿದಾನಂದಮಯನಾದ ಆತ್ಮನೂ ತನಗಭಿನ್ನವಾದ ತನ್ನ ಪ್ರಕಾಶರೂಪವಾದ ಶಕ್ತಿಯೂ ಕಾಣಲಾರದು. ಆದ್ದರಿಂದ ಆ ಮುಮುಕ್ಷುಗಳಾದ ಮುನಿಗಳು ಧ್ಯಾನಧಾರಣಾದಿ ರೂಪವಾದ ಶಿವಯೋಗದಿಂದ ಕೂಡಿದವರಾಗಿ, ಆತ್ಮಾಭಿನ್ನವಾದ ಆತ್ಮಪ್ರಕಾಶರೂಪಶಕ್ತಿಯನ್ನು ಪಡೆದರೆಂದು ಈ ಉಪನಿಷದ್ವಾಕ್ಯದಿಂದ ಸ್ಪಷ್ಟವಾಗುತ್ತದೆ. ಅವರು ಪಡೆದುಕೊಂಡ ಬುದ್ಧಿವೃತ್ತಿ ರೂಪವಾದ ಆತ್ಮಶಕ್ತಿಯು ನಶ್ವರವಾದ ಪಕ್ಷದಲ್ಲಿ ಅವರು ಬಹುದಿವಸ ಕಷ್ಟಪಟ್ಟು ಶಿವಯೋಗವನ್ನು ಸಂಪಾದಿಸಿದ್ದು ವ್ಯರ್ಥವಾಗಬೇಕಲ್ಲವೆ? ಅಯ್ಯೋ! ಆತ್ಮಶಕ್ತಿಯನ್ನು ಅನಿತ್ಯವೆನ್ನುವದು ಹುಚ್ಚುತನವು. ಅದು ಅನಿತ್ಯವೆಂದರೆ ವಿವೇಕಿಗಳು ಒಪ್ಪಿಕೊಳ್ಳಲಾರರು. ಇದೇ ಆತ್ಮಶಕ್ತಿಗೆ ಶಿವಯೋಗಿಗಳು ಚಿಚ್ಛಕ್ತಿಯಂತಲೂ, ಚಿತ್ಕಲೆಯಂತಲೂ, ಶಾಂತ್ಯತೀತೋತ್ತರೆಯಂತಲೂ, ಶುದ್ಧವಿದ್ಯೆಯಂತಲೂ, ಶುದ್ಧಭಕ್ತಿಯಂತಲೂ ವ್ಯವಹರಿಸುತ್ತಾರೆ. ಇದೇ ಚಿಚ್ಛಕ್ತಿಯು ಸ್ವಾತಂತ್ರ್ಯದಿಂದ ಸಂಕೋಚವನ್ನು ಹೊಂದಿ ಚಿತ್ತರೂಪವಾಗಲು ಅದರಿಂದ ಕೂಡಿದ ಪರಮಾತ್ಮನು ಜೀವನೆನಿಸುವನು. ಈ ವಿಷಯವನ್ನು ಮುಂದಣ ಮೋಕ್ಷಕಾಂಡದಲ್ಲಿ ವಿಸ್ತರಿಸುವೆವು. ಆದರೆ ಚಿಚ್ಛಕ್ತಿಯ ಸಂಕೋಚರೂಪವಾದ ಆವರಣದ ನಾಶಕ್ಕಾಗಿ (ಕಾರಣಾವಸ್ಥೆಯನ್ನು ಹೊಂದಿಸುವದಕ್ಕಾಗಿ) ಧ್ಯಾನಾದಿ ಯೋ

ಗವು ಬೇಕು. ಆ ಕಾರಣವಾದ ಬುದ್ಧಿಶಕ್ತಿಯು ಚಿದಾತ್ಮರೂಪವೇ ಆಗಿರುವುದು. ಆದರೂ ಶಕ್ತಿವಿಶಿಷ್ಟನು ಆತ್ಮನೆಂದು ಹೇಳುವೆವು. ತುಪ್ಪವು ಹಾಲನ್ನು ಬಿಟ್ಟು ಬೇರೆಯಾಗಿರದಿದ್ದರೂ ಕ್ಷೀರವು ತುಪ್ಪದಿಂದ ಕೂಡಿರುವಂತೆ ಬುದ್ಧಿಶಕ್ತಿಯು ಶಕ್ತನಿಗೆ ಅಭಿನ್ನವಾಗಿದ್ದರೂ ಶಕ್ತಿವಿಶಿಷ್ಟನೆಂದು ಹೇಳುತ್ತೇವೆ. ಆದ್ದರಿಂದ ಬುದ್ಧಿಯು ಶಿವಾಕಾರವಾಗಿಯೇ ಇರಲಿ ಅಥವಾ ವಿಷಯಾಕಾರವಾಗಿಯೇ ಇರಲಿ ಅದು ಅನಿತ್ಯವಲ್ಲ. ಇಷ್ಟಕ್ಕೆ ಈ ವಾದವನ್ನು ನಿಲ್ಲಿಸುತ್ತೇವೆ. ವಿಷಯಗಳು ನಿತ್ಯಗಳೆಂದು ಮುಂದೆ ಪರಿಣಾಮವಾದ ಸ್ಥಾಪನೆಕಾಲಕ್ಕೆ ಹೇಳುತ್ತೇವಾದ್ದರಿಂದ ಇಲ್ಲಿ ವಿಷಯ ನಿತ್ಯತ್ವಸ್ಥಾಪನೆಯ ಗೋಜಿಗೆ ಹೋಗದೇ ಮುಂದಣ ಒಂಭತ್ತನೇ ವಿಚಾರವನ್ನು ಆರಂಭಿಸುತ್ತೇನೆ.

ಎಲೈ ಬ್ರಹ್ಮಾದ್ವೈತಿಯೆ! ಸಂಸ್ಕಾರಕ್ಕೆ ಕಾರಣವಾದ ಅವಿದ್ಯೆಯು ಸ್ವರೂಪತಃ ನಾಶವನ್ನು ಹೊಂದುವದೆಂದು ಹೇಳುವ ನೀನು ಅದಕ್ಕೆ ಯಾವದರಿಂದ ನಾಶವನ್ನು ಹೇಳುತ್ತಿ? ನಾನು ಬ್ರಹ್ಮನು ಎಂಬುವ ಬ್ರಹ್ಮಾತ್ಮೈಕ್ಯಜ್ಞಾನದಿಂದ ಅಂದರೆ ಈ ಬ್ರಹ್ಮಾತ್ಮೈಕ್ಯಜ್ಞಾನವು ವೃತ್ತಿರೂಪವಾಗಿದೆಯೊ? ಅಥವಾ ‹‹ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ›› ಎಂಬ ಶ್ರುತ್ಯುಕ್ತ ಬ್ರಹ್ಮಸ್ವರೂಪವೊ? ವೃತ್ತಿರೂಪವೆಂದರೆ ಜಡವಾದ ವೃತ್ತಿಯು ತನಗೆ ಕಾರಣವಾದ ಅವಿದ್ಯೆಯನ್ನು ನಾಶಮಾಡಲಾರದು. ಅದರಲ್ಲಿ ಅಂಥ ಸಾಮರ್ಥ್ಯವೆಲ್ಲಿಂದಬರಬೇಕು? ಮತ್ತು ಆ ವೃತ್ತಿಯೂ ಜಡವು, ಅವಿದ್ಯೆಯೂ ಜಡವು. ಜಡವು ಜಡವನ್ನು ನಾಶಮಾಡುತ್ತದೆಂಬುವದು ಗಿಡವು ಮಣ್ಣನ್ನು ನಾಶಮಾಡುತ್ತದೆಂಬುವಂತೆ ಆಗುತ್ತದೆ. ಮತ್ತು ಕೊಡದ ನಾಶವು ದಂಡಾದಿಗಳಿಂದ ಕಪಾಲದಲ್ಲಿ ಆಗುತ್ತದೆ. ಹಾಗೆ ಈ ನಿಮ್ಮ ಅವಿದ್ಯಾನಾಶವು ವಾಕ್ಯಜನ್ಯಜ್ಞಾನದಿಂದೆಲ್ಲಿ ಆಗುತ್ತದೆ? ಬ್ರಹ್ಮದಲ್ಲಿ ಆಗುತ್ತದೆಂದರೆ ಅವಿದ್ಯಾನಾಶಕ್ಕೆ ಅಧಿಕರಣವು ಬ್ರಹ್ಮವೊ? ಅಹುದು. ಹಾಗಾದರೆ ಬ್ರಹ್ಮವು ಯಾವದೂ ಒಂದು ಧರ್ಮವುಳ್ಳದಲ್ಲವೆನ್ನುವದೇಕೆ? ಅವಿದ್ಯಾನಾಶರೂಪವಾದ ಧರ್ಮವುಳ್ಳದ್ದಾಗಲಿಲ್ಲವೆ? ಮತ್ತು ಯಾವುದರ ನಾಶವು ಎಲ್ಲಿ ಆಗುತ್ತದೆಯೋ ಅದಕ್ಕೆ ಅದು ಉಪಾದಾನಕಾರಣವಾಗಿಯೇ ಇರಬೇಕು. ಘಟದ ನಾಶವು ಕಪಾಲದಲ್ಲಿ ಆಗುತ್ತದೆ. ಆ ಘಟಕ್ಕೆ ಉಪಾದಾನಕಾರಣವು ಕಪಾಲವು. ಹಾಗೆ ನಿಮ್ಮ ಅವಿದ್ಯಾನಾಶವು ಬ್ರಹ್ಮದಲ್ಲಿ ಎಂದು ಹೇಳಿದರೆ ಆ ಅವಿದ್ಯೆಗೆ ಬ್ರಹ್ಮವು ಉಪಾದಾನಕಾರಣವಾಗಿಯೇ ಇರಬೇಕಲ್ಲವೆ? ಎಲೈ ಶಿವಾದ್ವೈತಿಯೇ! ಹೀಗೆ ಎಲ್ಲಾ ಕಡೆಯಲ್ಲಿಯೂ ನಿಯಮವಿಲ್ಲ. ಯಾಕಂದರೆ

ಶುಕ್ತಿಯಲ್ಲಿ ತೋರಿದ ರಜತ, ರಜತಜ್ಞಾನಗಳ ನಾಶವು ಶುಕ್ತಿಯಲ್ಲಿ ಆಗುತ್ತದೆ. ಆದರೂ ಆ ಶುಕ್ತಿಯು ರಜತಕ್ಕೂ ರಜತ ಜ್ಞಾನಕ್ಕೂ ಉಪಾದಾನವೇ ಅಲ್ಲ. ಪರಂತು ಶುಕ್ತಿಜ್ಞಾನಕ್ಕೆ ಆವರಕವಾದ ಅಜ್ಞಾನವು ರಜತವನ್ನು ಹುಟ್ಟಿಸುತ್ತದೆ. ಮುಂದೆ ಇದು ಶುಕ್ತಿಯು ರಜತವಲ್ಲ ಎಂಬುವ ಜ್ಞಾನದಿಂದ ತಾನು ನಷ್ಟವಾಗುವದು. ಆಮೇಲೆ ಅದರ ಕಾರ್ಯವಾದ ರಜತವೂ ಕೂಡ ನಾಶವಾಗುವದು. ಇದರಂತೆ ಬ್ರಹ್ಮದಲ್ಲಿ ತೋರಿದ ಅಜ್ಞಾನವು ಜಗತ್ತನ್ನು ಹುಟ್ಟಿಸುತ್ತದೆ. ಮುಂದೆ ನಾನು ಬ್ರಹ್ಮನು ಎಂಬುವ ತತ್ವಜ್ಞಾನದಿಂದ ತಾನು ನಷ್ಟವಾಗುವದು, ಆಮೇಲೆ ಅದರ ಕಾರ್ಯವಾದ ಪ್ರಪಂಚವೂ ಕೂಡ ನಷ್ಟವಾಗುವದು. ಈ ದೃಷ್ಟಾಂತವು ನಿಮ್ಮ ಮೂಲಾವಿದ್ಯೆಗೆ ಸಂಗತವಾಗುವದಿಲ್ಲ. ಯಾಕಂದರೆ ಶುಕ್ತಿಯಲ್ಲಿ ಶುಕ್ತಿಗೆ ಭಿನ್ನದೇಶದಲ್ಲಿ ನೋಡಿದ ರಜತವು ತೋರುತ್ತದೆ. ಪುನಃ ಶುಕ್ತಿಯನ್ನು ಚನ್ನಾಗಿ ನೋಡಲು ಆ ತೋರಿಕೆಯು ಅಡಗಿಹೋಗುತ್ತದೆ. ಇದರಂತೆ ಬ್ರಹ್ಮದಲ್ಲಿ ಬ್ರಹ್ಮಕ್ಕೆ ಭಿನ್ನದೇಶದಲ್ಲಿ ನೋಡಿದ ಜಗತ್ತು ತೋರಬೇಕು. ಆಮೇಲೆ ಬ್ರಹ್ಮಜ್ಞಾನದಿಂದ ಅಡಗಬೇಕು. ಈ ಪ್ರಕಾರವಾಗಿ ನಿಮ್ಮ ಮತದಲ್ಲಿ ಬ್ರಹ್ಮಬಾಹ್ಯದೇಶವಿಲ್ಲ. ಆದ್ದರಿಂದ ಅಜ್ಞಾನವು ಎಲ್ಲಿ ನಷ್ಟವಾಗುವದು ಹೇಳು ? ಬ್ರಹ್ಮದಲ್ಲಿ ಅಂದರೆ ಮೊದಲಿನಂತೆ ಬ್ರಹ್ಮವು ಅದಕ್ಕೆ ಉಪಾದಾನಕಾರಣವಾಗಬೇಕು. ಉಪಾದಾನ ಕಾರಣವಾದರೆ ಆ ಕಾರಣವೂ ನಿರ್ವಿಶೇಷವೂ ಎಂದು ಅವಿದ್ಯೆಯು ಅನಾದಿಯಂತಲೂ ಹೇಳುವದೇಕೆ ? ಮತ್ತು ಯಾವದು ಅನಾದಿಯೊ? (ಯಾವದರಿಂದಲೂ ಹುಟ್ಟಿಲ್ಲವೊ?) ಅದು ಎಂದೂ ನಷ್ಟವಾಗಲಾರದು. ಬ್ರಹ್ಮಾದ್ವೈತಿಯೆ! ಲೋಕದಲ್ಲಿ ಹುಟ್ಟದಿರುವ ವಸ್ತುವು ಸಾಯುವುದೇ ಇಲ್ಲವು. ಶಿವಾದ್ವೈತಿಯೇ? ಇದೇನಾಶ್ಚರ್ಯವು? ಹುಟ್ಟಿದ ವಸ್ತು ನಷ್ಟವಾಗದೇ ಇರುವದೂ ಹುಟ್ಟದಿರುವ ವಸ್ತುವು ನಷ್ಟವಾಗುವದೂ ಲೋಕದಲ್ಲಿ ಕಂಡೇ ಕಾಣುತ್ತದಲ್ಲವೆ? ಇದೇನು ವಿಚಿತ್ರ ಸಮಾಚಾರವು ಹುಟ್ಟಿದಿರುವ ವಸ್ತುವಿಗೆ ನಾಶವನ್ನು ಎಲ್ಲಿ ನೋಡಿರುವಿ. ಹೇಳು? ಶಿವಾದ್ವೈತಿಯೇ ಪ್ರಾಗಭಾವವು ಹುಟ್ಟದೇ ಇದ್ದರೂ ನಷ್ಟವಾಗುವದಿಲ್ಲವೇನು ? ಅಹುದು ಆಗುತ್ತದೆ. ಅಂದಮೇಲೆ ಅವಿದ್ಯೆಯು ಯಾವದರಿಂದಲೂ ಹುಟ್ಟದಿದ್ದರೂ ಮುಂದೆ ನಾಶವಾಗುತ್ತದೆಂದು ಹೇಳುತ್ತೇವೆ. ಅಂದರೆ ಎಲೈ ಬ್ರಹ್ಮಾದ್ವೈತಿಯೇ ? ಪ್ರಾಗಭಾವವು ಅಭಾವ ಪದಾರ್ಥವು. ನಿನ್ನ ಅವಿದ್ಯೆಯಾದರೂ ಅಭಾವಪದಾರ್ಥವೇನು? ಅಲ್ಲಾ ಹಾಗಾದರೆ ಮತ್ತೇನು? ಭಾವಪದಾರ್ಥವು. ಒಳ್ಳೇದು ಬ್ರಹ್ಮಾದ್ವೈತಿಯೇ

ಅನಾದಿಯಾದ ಭಾವಪದಾರ್ಥವು ನಾಶವಾಗುವದೆನ್ನುವಲ್ಲಿ ದೃಷ್ಟಾಂತವನ್ನು ತೋರಿಸು? ನೈಯಾಯಿಕರಾದರೂ ಅನಾದಿಭಾವಸ್ಯ ನಾಶಾ ಸಂಭವಾತ್ | ಎಂದು ಹೇಳಿರುವರು. ಮತ್ತು ಯಾವ ಬ್ರಹ್ಮಾಕಾರ ವೃತ್ತಿಯು ಅವಿದ್ಯೆಯನ್ನು ನಾಶಮಾಡುವದೊ ಅದು ಹೇಗೆ ನಷ್ಟವಾಗುವದು? ಬೆಂಕಿಯು ಕಟ್ಟಿಗೆಯನ್ನು ಸುಟ್ಟು ತನ್ನಿಂದ ತಾನೇ ನಷ್ಟವಾಗುವಂತೆ ತನ್ನಿಂದ ತಾನೇ ನಷ್ಟವಾಗುವದು. ಬ್ರಹ್ಮಾದ್ವೈತಿಯೇ ! ಇದು ನಿನ್ನ ತಪ್ಪು ತಿಳವಳಿಕೆಯು. ನಾಶವೆಂಬ ಕಾರ್ಯಕ್ಕೆ ಪ್ರತಿಯೋಗಿಗಿಂತಲೂ ಬೇರೆಯಾದ ಕಾರಣವು ಇರಲೇಬೇಕು. ಘಟದನಾಶವು ಘಟದಿಂದಲೇ ಆಗಲಾರದು. ದಂಡಾದಿಗಳು ಬೇಕು. ಹಾಗೆ ನಿಮ್ಮ ಅಂತಿಮವೃತ್ತಿ ನಾಶಕ್ಕೆ ಮತ್ತಾವದಾದರೊಂದು ಬೇಕಲ್ಲವೆ? ಅಗ್ನಿಯನಾಶವಾದರೂ ಅಗ್ನಿಯಿಂದಲೇ ಅಲ್ಲವು. ಕಾಲಾದೃಷ್ಟಾದಿಗಳಿಂದೆಂದು ಹೇಳುತ್ತೇವೆ. ಹಾಗೆ ನಿಮ್ಮ ಅಂತ್ಯವೃತ್ತಿನಾಶಕ್ಕೆ ಮತ್ತೊಂದು ಕಾರಣವಾವದು. ಮತ್ತೊಂದೇನೂ ಇಲ್ಲಾ ತನ್ನಿಂದ ತಾನೇ ನಷ್ಟವಾಗುತ್ತದೆ. ಹೀಗನ್ನುವದು ಲೋಕವಿರುದ್ಧವಾದ ಮಾತು. ಇದಕ್ಕೆ ಯಾರು ನಂಬಬೇಕು. ದೃಷ್ಟಾನುಸಾರೇಣಕಲ್ಪನಾ | ಎಂದು ಮೊದಲೇ ಹೇಳಿದ್ದೇನೆ ಕೇವಲ ಬ್ರಹ್ಮರೂಪವಾದ ಚೈತನ್ಯವೇ ಅವಿದ್ಯೆಗೆ ನಾಶಕವೆಂದರೆ ಈ ಚೈತನ್ಯವು ಮೊದಲೇ ಇರುವುದು. ಆಗಲೇ ಅವಿದ್ಯಾನಾಶವಾಗಿದ್ದರೆ ಈ ಜಗತ್ತು ಹ್ಯಾಗಾಯಿತು? ಶಿವಾದ್ವೈತಿಯೆ? ವೃತ್ತ್ಯುಪಹಿತವಾದ ಚೈತನ್ಯವೇ ಅವಿದ್ಯಾ ನಾಶಕವೆಂದು ಹೇಳುತ್ತೇನೆ. ಈ ಜಡವಾದ ವೃತ್ತಿಯಿಂದ ಅವಚ್ಛಿನ್ನವಾದ ಚೈತನ್ಯವು ಕಬ್ಬಿಣ ಪಿಂಡದಲ್ಲಿ ಜಡಿದ ಸೂಚಿಕೆಯುಚೇಷ್ಟೆಯಿಲ್ಲದ್ದಾಗಿ ಏನೊಂದೂ ಮಾಡದಿರುವಂತೆ ಅವಿದ್ಯಾನಾಶವನ್ನು ಮಾಡಲಾಗದು. ಇದಲ್ಲದೇ ಗೌರವಾದಿ ದೋಷಗಳನ್ನು ಮೊದಲೇ ಹೇಳಿದ್ದೇನೆ. ಚಿತ್ಪ್ರತಿಬಿಂಬಸಹಿತವಾದ ಬ್ರಹ್ಮಾಕಾರ ವೃತ್ತಿಯೇ ಅವಿದ್ಯೆಯನ್ನು ನಾಶಮಾಡುತ್ತದೆಂದರೆ ಇದೂ ಕೂಡ ಸಂಭವಿಸುವದಿಲ್ಲ. ವಿಶೇಷಣ ವಿಶೇಷ್ಯಗಳಲ್ಲಿಲ್ಲದ ನಾಶಕತ್ವವು ವಿಶಿಷ್ಟದಲ್ಲಿ ಹ್ಯಾಗೆ ಒಂದೀತು. ಅಯಃಪಿಂಡದಲ್ಲಿ ಸ್ವತಃ ಇಲ್ಲದ ಸುಡುವತನವು ಅಗ್ನಿಯ ಸಂಪರ್ಕದಿಂದ ಬರುವಂತೆ ಜಡವಾದ ವೃತ್ತಿಯಲ್ಲಿಲ್ಲದ ನಾಶಕತನವು ಬ್ರಹ್ಮಸಂಪರ್ಕದಿಂದ ಬರುತ್ತದೆಂದರೆ ಸಲ್ಲದು, ಯಾಕಂದರೆ ನಿನ್ನ ಬ್ರಹ್ಮವು ನಿಸ್ಸಂಗವಾದದ್ದು. ಆದಕ್ಕೆ ಸಂಪರ್ಕವು ಸಂಭವಿಸುವದಿಲ್ಲ. ಮತ್ತು ಬ್ರಹ್ಮೇತರವಾದ ವೇದ ವೇದಾಂತಾದಿ ವಾಕ್ಯಗಳೂ ತಜ್ಜನ್ಯವಾದ ಜ್ಞಾನವೂ ಅವಿದ್ಯಾಸ್ವರೂಪವೇ ಇರುವದರಿಂದ ಇದರ ನಾಶವಾದ ಕೂಡಲೇ ಎಲ್ಲರೂ ಮುಕ್ತರಾ

ಗಬೇಕಲ್ಲವೆ? ಈವರಿವಿಗೂ ಯಾರಿಗೂ ಅವಿದ್ಯಾನಾಶವಾಗಿಲ್ಲವೇನು? ಜನಕಾದಿಗಳಿಗೆ ಆಗಿ ಮುಕ್ತರಾಗಿರುವರು. ಹಾಗಾದರೆ ಆಕಾಲಕ್ಕೇನೆ ಎಲ್ಲರೂ ಮುಕ್ತರಾಗಲಿಲ್ಲವೇಕೆ? ‹‹ಅಭಯಂವೈನಕಃ ಪ್ರಾಪ್ತೋಸಿ›› ಇದೇ ಮೊದಲಾದ ಶ್ರುತಿಗಳು ಇರುವದರಿಂದ ಯಾರೂ ಮುಕ್ತರಾಗಿಲ್ಲವೆಂದು ನೀನು ಹೇಳುವಂತಿಲ್ಲಂದ ಮೇಲೆ ಈವರಿವಿಗೂ ಬದ್ಧಪ್ರಾಣಿಗಳೇಕಿರುವವು. ಅಹುದು ಅವಿದ್ಯೆಯೊಂದೇ ಯಾದರೂ ‹‹ಇಂದ್ರೋಮಾಯಾಭಿಃ ಪುರುರೂಪಃ›› ಎಂಬುವ ಶ್ರುತಿಬಲದಿಂದ ಅದರ ಆವರಣಶಕ್ತಿಗಳು ಅನಂತಗಳು ಇರುವವು. ಆದ್ದರಿಂದ ಯಾವನಿಗೆ ಬ್ರಹ್ಮಜ್ಞಾನವೊ ಅವನಿಗೆ ಮಾತ್ರ ಆವರಣಶಕ್ತಿಯಿಂದ ಕೂಡಿದ ಅವಿದ್ಯಾನಾಶವಾಗುವದು. ಮತ್ತೊಬ್ಬನಿಗೆ ಆಗುವದಿಲ್ಲಾದ್ದರಿಂದ ಒಬ್ಬನು ಮುಕ್ತನಾಗಲು ಮತ್ತೊಬ್ಬನು ಮುಕ್ತನಾಗಲಾರನು. ಈಗ ಈ ಬ್ರಹ್ಮಾದ್ವೈತಿಯ ಅಭಿಪ್ರಾಯವು ಇಲ್ಲಿಗೆ ಹತ್ತಿತು, ಅವಿದ್ಯಾಶಕ್ತಿಯು ಒಂದೇ, ಆದಾಗ್ಯೂ ಅದರ ಕಾರ್ಯಗಳಾದ ಆವರಣ ಶಕ್ತಿಗಳು ಪ್ರತಿಯೊಂದು ಜೀವರುಗಳಿಗೆ ಬೇರೆ ಬೇರೆ ಯಾಗಿವೆ. ಆದ್ದರಿಂದ ಒಬ್ಬನ ಆವರಣಶಕ್ತಿಯ ನಾಶವಾದಕೂಡಲೆ ಮತ್ತೊಬ್ಬನ ಆವರಣವು ನಷ್ಟವಾಗುವದಿಲ್ಲವಂತೆ ಇದರಿಂದ ಈ ಅದ್ವೈತಿಯ ತರ್ಕಕೌಶಲ್ಯವು ಎಷ್ಟರಮಟ್ಟಿಗದೆಂಬುವದನ್ನು ಪರೀಕ್ಷಿಸುವೆನು. ಹ್ಯಾಗಂದರೆ ಆವರಣ ಶಕ್ತಿಯು ವಿಶೇಷಣವು. ಅದಕ್ಕೆ ಕಾರಣವಾದ ಅವಿದ್ಯಾಶಕ್ತಿಯು ವಿಶೇಷ್ಯವೆಂದು ಈ ಮಾಯಾವಾದಿಯ ಅಭಿಪ್ರಾಯವಿದ್ದಂತಾಯಿತು. ಯಾಕಂದರೆ ಆವರಣಶಕ್ತಿಯು ನಾಶವಾದ ಕೂಡಲೇ ಅದರಿಂದ ಕೂಡಿದ ಮೂಲಾವಿದ್ಯೆಗೆ ನಾಶವನ್ನು ಹೇಳುವರು. ಈಗ ಇವನನ್ನು ನಾನು ಕೇಳುತ್ತೇನಲ್ಲಾ? ನೀನು ಹೇಳುವ ಆವರಣ ಶಕ್ತಿವಿಶಿಷ್ಟ ಅವಿದ್ಯಾನಾಶರೂಪವಾದ ಅಭಾವವು ವಿಶೇಷಣಾಭಾವ ಪ್ರಯುಕ್ತ ವಿಶಿಷ್ಟಾಭಾವವೊ ಅಥವಾ ವಿಶೇಷ್ಯಾಭಾವಪ್ರಯುಕ್ತ ವಿಶಿಷ್ಟಾಭಾವವೊ? ನಿನಗೆ ಉಭಯಾಭಾವಪ್ರಯುಕ್ತ ವಿಶಿಷ್ಟಾಭಾವವನ್ನು ಹೇಳಲಿಕ್ಕೆ ಬರುವದಿಲ್ಲ. ಒಂದೇ ಒಂದಾದ ಮೂಲಾವಿದ್ಯೆಯು ವಿಶೇಷ್ಯವು ಆವರಣಶಕ್ತಿಯು ವಿಶೇಷಣವು ಇವೆರಡೂ ನಾಶವಾದರೆ ಮೊದಲಿನಂತೆ ಸರ್ವಮುಕ್ತಿಪ್ರಸಂಗವೇ ಬರುವದು. ಮತ್ತು ವಿಶೇಷ್ಯಾಭಾವಪ್ರಯುಕ್ತ ವಿಶಿಷ್ಟಾಭಾವವೆಂತಲೂ ಹೇಳಲು ಬರುವದಿಲ್ಲ. ಅದೇ ದೋಷವೇ ಬರುವದು. ಆದ್ದರಿಂದ ನೀನು ಕೇವಲ ವಿಶೇಷಣಾಭಾವಪ್ರಯುಕ್ತ ವಿಶಿಷ್ಟಾಭಾವವನ್ನು ಹೇಳಬೇಕು. ಒಳ್ಳೇದು ಶಿವಾದ್ವೈತಿಯೆ! ಇದರಂತೆ ಹೇಳುವೆನು ಘಾಸಿಪನು? ಅಂದರೆ ಇದು ಬಲು ದಡ್ಡತ

ಸವು. ಯಾಕಂದರೆ ಕುಂಡಲ ವಿಶಿಷ್ಟ ದೇವದತ್ತನಲ್ಲಿರುವ ಕುಂಡಲವು ನಷ್ಟವಾದಕೂಡಲೆ ದೇವದತ್ತನೇ ಸತ್ತನೆಂದು ಹೇಳಲಿಕ್ಕಾಗದೀತೆ? ಪರಂತು ಕುಂಡಲ ವಿಶಿಷ್ಟ ದೇವದತ್ತನಿಲ್ಲೆಂದು ವ್ಯವಹಾರವಾಗುತ್ತದೆ. ಇದು ಕೇವಲ ಕುಂಡಲಾಭಾವ ವಿಷಯಕವಾದದ್ದೆಂದು ಹೇಳಬೇಕು. ಇಲ್ಲದಿದ್ದರೆ ಕುಂಡಲದಿಂದ ಕೂಡಿದ ದೇವದತ್ತನಿಲ್ಲ. ಆದರೆ ಅದಿಲ್ಲದ ದೇವದತ್ತನಿದ್ದಾನೆಂಬುವ ವ್ಯವಹಾರಕ್ಕೆ ಭಂಗ ಬಂದೀತು. ಆವರಣ ಶಕ್ತಿಯು ನಾಶವಾದಕೂಡಲೇ ಅದರಿಂದ ಕೂಡಿದ ಮೂಲಾವಿದ್ಯೆಯು ನಾಶವಾಗಲಾರದು. ಅದೇಕೆ? ಒಂದು ತಂತುವು ನಾಶವನ್ನು ಹೊಂದಿದ ಕೂಡಲೇ ಆ ತಂತುವಿನಿಂದ ಕೂಡಿದ ಪಟವೇ ನಾಶವನ್ನು ಹೊಂದುತ್ತದೆ. ಹಾಗೆ ಒಬ್ಬನ ಆವರಣ ಶಕ್ತಿಯು ನಾಶವಾದಕೂಡಲೇ ಅದರಿಂದ ಕೂಡಿದ ಮೂಲಾವಿದ್ಯೆಯೇ ನಷ್ಟವಾಗುವದು. ಅಂದರೆ ಅಲ್ಲಿ ಪಟಕ್ಕೆ ಕಾರಣವು ತಂತುವು. ಇದು ನಷ್ಟವಾದಕೂಡಲೇ ತಂತುತಂತುಗಳ ಸಂಯೋಗವು ನಷ್ಟವಾಗುವದು. ಆಮೇಲೆ ಪಟದ ನಾಶವಾಗುವದು. ಹಾಗೆ ನಿಮ್ಮ ಮೂಲಾವಿದ್ಯೆಗೆ ಆವರಣಶಕ್ತಿಯು ಕಾರಣವಲ್ಲ. ‹‹ಏಕೈವಾವಿದ್ಯಾತಸ್ಯಾ ಏವಾವಿದ್ಯಾಯಾ ಜೀವಭೇದೇನಾವರಣಶಕ್ತಯೊನಾನಾ›› ಎಂದು ಹೇಳಿರುವರು. ‹‹ಕಾರಣನಾಶಾಧೀನೊಹಿಕಾರ್ಯನಾಶಃ›› ಎಂದು ಸಕಲರನುಭವವು. ಆದ್ದರಿಂದ ಪಟದೃಷ್ಟಾಂತವು ನಿಮಗೆ ವ್ಯರ್ಥವು. ಆದ್ದರಿಂದ ಏಕಾವಿದ್ಯಾಪಕ್ಷೇಪಿ ಪ್ರತಿಜೀವವಾವರಣ ಭೇದೋಪಗಮೇನ ವ್ಯವಸ್ಥಾ ಉಪಪಾದನೀಯಾ। ಎಂದು ಹೇಳಿದ ವ್ಯವಸ್ಥೆಯು ಹೇಗೆ ಸಂಗತವು? ಮತ್ತು ವಾಕ್ಯಜನ್ಯಜ್ಞಾನದಿಂದ ಅವಿದ್ಯಾನಿವೃತ್ತಿಯೇ ಆಗುವ ಪಕ್ಷದಲ್ಲಿ ವಾಕ್ಯಜನ್ಯಜ್ಞಾನವಿದ್ದವನಿಗೆ ಸುಖದುಃಖಾದಿಗಳು ಕಾಣಿಸಿಕೊಳ್ಳುವನೇಕೆ? ಶಿವಾದ್ವೈತಿಯೇ ತತ್ವಜ್ಞಾನವಾಗಿ ಅವಿದ್ಯೆಯ ನಿವೃತ್ತಿಯಾಗಿದ್ದರೂ ಬಹು ದಿವಸದ ವಾಸನೆಗಳಿರುವದರಿಂದ ಸುಖದುಃಖಾದಿಗಳು ಕಾಣಿಸಿಕೊಳ್ಳುತ್ತವೆ. ಕರ್ಪೂರದ ಡಬ್ಬಿಯಲ್ಲಿ ಕರ್ಪೂರವೆಲ್ಲಾ ನಷ್ಟವಾಗಿದ್ದರೂ ಅದರ ವಾಸನೆಯು ಕೆಲವು ದಿವಸಗಳ ವರೆಗೆ ಇರುತ್ತದಷ್ಟೆ? ಮತ್ತು ದಂಡವು ಚಕ್ರಭ್ರಮಣವನ್ನುಂಟುಮಾಡಿ ತಾನು ನಿವೃತ್ತವಾಗಿದ್ದರೂ, ಅದರ ಕಾರ್ಯರೂಪವಾದ ಭ್ರಮಣವು ಕೆಲವುಕಾಲದವರೆಗೆ ಇದ್ದೇ ಇರುತ್ತದಷ್ಟೆ? ಹಾಗೆ ತತ್ವಜ್ಞಾನದಿಂದ ಮೂಲಾವಿದ್ಯೆಯು ನಷ್ಟವಾಗಿದ್ದರೂ ಅದರ ವಾಸನೆಯಿಂದ ದ್ವೈತಜ್ಞಾನಾದಿಗಳು ತೋರುತ್ತವೆ. ಕೆಲವು ಕಾಲದ ಮೇಲೆ ಪುನಃ ನಷ್ಟಗಳಾಗಿ ಹೋಗುತ್ತವೆ. ಅಂದರೆ ದ್ವೈತಜ್ಞಾನವೂ ಅವಕ್ಕೆ ಕಾರಣವಾದ ವಾಸ

ನೆಯೂ ಮಿಥ್ಯಾರೂಪವೇ ಆಗಿರುವದರಿಂದ ತತ್ವಜ್ಞಾನದಿಂದಲೇ ನಷ್ಟವಾಗಬೇಕು. ಜ್ಞಾನೋತ್ತರ ಕಾಲದಲ್ಲಿಯೂ ಕೂಡ ಆ ಸಂಸ್ಕಾರವು ಉಳಿದ ಪಕ್ಷದಲ್ಲಿ ಅದಕ್ಕೆ ಮತ್ತೊಂದು ನಾಶಕವನ್ನು ಹೇಳಬೇಕು. ತನ್ನಿಂದ ತಾನೇ ನಷ್ಟವಾಗಲಾರದು. ಇದು ಉಳಿದರೆ ಮುಕ್ತಿಯಂತೂ ದೂರೇ ಉಳಿಯಿತು. ಗಿಡದ ಬೇರನ್ನೇ ಕಿತ್ತುಹಾಕಿಬಿಟ್ಟರೆ ಶಾಖೆಯು ಫಲಪುಷ್ಪಾದಿಗಳನ್ನು ಕೊಡಲಾರದು. ಆದ್ದರಿಂದ ಛಿನ್ನಮೂಲವಾದ ವಾಸನೆಯು ದ್ವೈತಜ್ಞಾನ ಸುಖದುಃಖಾದಿಗಳನ್ನುಂಟುಮಾಡುತ್ತದೆಂಬುವದು ಅಜ್ಞಾನಿಗಳಾದ ಬಾಲಕರ ಮಾತಿಗೆ ಸರಿಹೋಉತ್ತದೆ. ಡಬ್ಬಿಯೊಳಗಿನ ಕರ್ಪೂರಕ್ಕೆ ದೀಪದ ಕಡ್ಡಿಯನ್ನು ಕೆರೆದು ಉರಿಯನ್ನು ಹಚ್ಚಿದರೆ ಮುಂದೆ ಅದರ ವಾಸನೆಯು ಉಳಿಯಲಾರದು. ಬೆಂಕಿಯನ್ನು ಹಚ್ಚದೆ ಕೆಲವುಕಾಲಬಿಟ್ಟರೆ ಕರ್ಪೂರವೆಲ್ಲಾ ಹೋದರೂ ಅದರ ವಾಸನೆಯು ಕಂಡುಬರುವದಲ್ಲ. ಅಂದರೆ ಅಲ್ಲಿ ಕರ್ಪೂರವೆಲ್ಲ ನಷ್ಟವೇ ಆಗಿರುವದಿಲ್ಲ. ಕರ್ಪೂರದ ಅಂಶವು ಇದ್ದೇ ಇರುತ್ತದೆ. ಆ ಅಂಶವಾದರೂ ಕರ್ಪೂರವಾಗಿಯೇ ಇರುವದು. ಹಾಗೆ ಜ್ಞಾನದಿಂದ ಸಂಪೂರ್ಣ ಅಜ್ಞಾನವು ನಷ್ಟವಾಗುವದಿಲ್ಲವೇನು? ಇದಲ್ಲದೆ ಚಕ್ರಭ್ರಮಣಕ್ಕೆ ಉಪಾದಾನಕಾರಣವು ದಂಡವಲ್ಲ. ಆದರೆ ದಂಡವು ನಿಮಿತ್ತಕಾರಣವು. ಹಾಗೆ ನಿಮ್ಮ ಅವಿದ್ಯಾವಾಸನೆಗೆ ಅವಿದ್ಯೆಯು ನಿಮಿತ್ತಕಾರಣವೇನು? ಅಲ್ಲ. ಹಾಗಾದರೆ ಉಪಾದಾನ ಕಾರಣವೊ? ಅಹುದು. ಹಾಗಾದರೆ ಚಕ್ರಭ್ರಮಣಕ್ಕೆ ಉಪಾದಾನಕಾರಣವಾದ ಚಕ್ರವೇ ಸುಟ್ಟುಹೋದ ಮೇಲೆ ಅದರಲ್ಲಿ ಭ್ರಮಣವನ್ನು ನೋಡಿರುವಿಯಾ ? ಇಲ್ಲ. ಹಾಗಾದರೆ ನಿನ್ನ ಅವಿದ್ಯೆಯು ನಷ್ಟವಾದ ಮೇಲೆ ಅದರ ಕಾರ್ಯವು ಹೇಗೆ ಉಳಿಯುವದು ನೀನೇ ಹೇಳು? ಶಿವಾದ್ವೈತಿಯೆ? ಮುಂಡಕೋಪನಿಷತ್ತಿನಲ್ಲಿ "ಭಿದ್ಯತೆ ಹೃದಯಗ್ರಂಥಿಶ್ಛಿದ್ಯಂತೆ ಸರ್ವಸಂಶಯಾಃ ಕ್ಷೀಯಂತೆಚಾಸ್ಯಕರ್ಮಾಣಿತಸ್ಮಿನ್ದೃಷ್ಟೆ ಪರಾವರೆ" ಎಂಬುವ ವಾಕ್ಯದಿಂದ ಜ್ಞಾನದಿಂದಲೇ ಸರ್ವಗ್ರಂಥಿಗಳ ನಾಶವು ಹೇಳಲ್ಪಡುವದು. ಇದಕ್ಕೇನುಗತಿಯು? ಅಂದರೆ ಈ ಶ್ರುತಿಯಲ್ಲಿ ಕೇವಲ ವಾಕ್ಯಜನ್ಯ ಜ್ಞಾನದಿಂದ ಅಜ್ಞಾನಾದಿಗಳ ನಾಶವು ಹೇಳಲ್ಪಡುವದಿಲ್ಲ. ಕಿಂತು ಸ್ವಸ್ವರೂಪ ಪರಮಾತ್ಮಸ್ಮೃತಿ ಸಂತತಿರೂಪವಾದ ಧ್ಯಾನ್ಯದಿಂದ ಸರ್ವಗ್ರಂಥಿಗಳ ನಾಶವು ಉಕ್ತವಾಗಿದೆ ಇಲ್ಲದಿದ್ದರೆ ಛಾಂದೋಗ್ಯೋಪನಿಷತ್ತಿನಲ್ಲಿ "ಸ್ಮೃತಿಲಂಭೆ ಸರ್ವಗ್ರಂಥೀನಾಂ ವಿಪ್ರಮೋಕ್ಷಃ" ಎಂದು ಹೇಳಲ್ಪಟ್ಟ ಅಪವರ್ಗಸಾಧನತ್ವವು ದೃಢಸ್ಮೃತಿಗೆ ಸಂಗತವಾಗಲಾರದು. ಮೇಲಣ ಮುಂಡಕ ಶ್ರುತಿಯೂ ಛಾಂದೋಗ್ಯ

ಶ್ರುತಿಯೂ ಏಕಾರ್ಥಕಗಳಾಗಿರುವವು. ಆದ್ದರಿಂದ ಧ್ಯಾನವೇ ಸ್ಥಿರವಾಗಲು ದರ್ಶನರೂಪವಾಗುತ್ತದೆ ಆದುದರಿಂದ "ತಸ್ಮಿನ್ಸೃಷ್ಟೇ" ಎಂಬುವದರಿಂದ ಧ್ಯಾನವೇ ದರ್ಶನರೂಪವಾಗಲು "ಸಚ್ಚಿದಾನಂದಶಿವೋಽಹಂ" ಎಂಬುವ ಸ್ವರೂಪ ಸಾಕ್ಷಾತ್ಕಾರರೂಪವಾದ ತನ್ನ ಬುದ್ಧಿಶಕ್ತಿಯ ಪ್ರಕಾಶವಾಗಲು ಸರ್ವಗ್ರಂಥಿಗಳು ಲಯವಾಗುತ್ತದೆ. ಆದ್ದರಿಂದಲೆ ಧೃವಾನು ಸ್ಮೃತಿರೂಪವಾದ ಧಾರಣಕ್ಕೆ ಅಪವರ್ಗ ಸಾಧನತ್ವವು ಮುಂಡಕೋಪನಿಷತ್ತಿನಲ್ಲಿ ಹೇಳಲ್ಪಟ್ಟಿದೆ. ಅದೇನಂದರೆ "ನಾಯಮಾತ್ಮಾ ಪ್ರವಚನೇನ ಲಭ್ಯಃ ನಮೇಧಯಾನಬಹುನಾ ಶ್ರುತೇನ | ಯಮೇವೈಷವೃಣುತೇ ತೇನಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂಸ್ವಾಂ" ಎಂಬದಾಗಿರುವದು. ಈ ಧೃವಾನುಸ್ಮೃತಿರೂಪವಾದ ಧ್ಯಾನಧಾರಣಕ್ಕೇನೇ ಭಕ್ತಿಯಂತಲೂ, ಅಗ್ರ್ಯಬುದ್ಧಿಯಂತಲೂ ಹೆಸರು. ಈ ವಿಷಯದಲ್ಲಿ ತದ್ಭಾವಲಕ್ಷಣಾಂಭಕ್ತಿಂ ಸುಸೂಕ್ಷ್ಮಾಂಪರಮಾಮಪಿ| ದರ್ಶಯಾಮಾಸಶಿಷ್ಯಸ್ಯ ದೇಶಿಕಃ ಕರುಣಾನಿಧಿಃ ತಸ್ಮಿನ್ದೃಷ್ಟೇಪರೇ ಲಿಂಗೇ ನಿಷ್ಕಲೇ ನಿರುಪಾಧಿಕೇ ಅಸ್ಯಜೀವಸ್ಯ ಕರ್ಮಾಣಿ ಕ್ಷೀಯಂತೆ ಸಕಲಾನಿಹಿ | ಅವಿದ್ಯಾ ಹೃದಯಗ್ರಂಥಿರ್ಭಿದ್ಯತೆ ತತಥಾಪಿಚ | ಸಂಶಯಾಬಹುಸಂಕಲ್ಪಾಶ್ಛಿದ್ಯಂತೇಚ ಸಹಸ್ರಧಾ | ಇವೇ ಮೊದಲಾದ ಶಿವಯೋಗಶಾಸ್ತ್ರದ ವಾಕ್ಯಗಳೂ "ಪುರುಷಃಸಪರಃ ಪಾರ್ಥ ಭಕ್ತ್ಯಾಲಭ್ಯಸ್ತ್ವನನ್ಯಯಾ | ಇವೇ ಮೊದಲಾದ ಭಗವದ್ಗೀತೆಯ ವಾಕ್ಯಗಳೂ ಸಾಕಲ್ಯಾಪರಮಾಸೂಕ್ಷ್ಮದೃಶ್ಯತೆ ತ್ವಗ್ರ್ಯಯಾಬುಧ್ಯಾ | ಇತ್ಯಾದಿ ವಾಕ್ಯಗಳೂ ಪ್ರಮಾಣವಾಗಿವೆ. ಈ ಸಾಕ್ಷಾತ್ಕಾರರೂಪವಾದ ಬುದ್ಧಿಶಕ್ತಿಯ ಪ್ರಕಾಸದ ಸಲುವಾಗಿ ಅರ್ಚನಾರ್ಪಣಾ ದಾನಾದಿ ಪತಿ ಧರ್ಮಗಳು ಬೇಕು. ಆದ್ದರಿಂದಲೇ ಛಾಂದೋಗ್ಯದಲ್ಲಿ "ಆಹಾರಶುದ್ಧೌ ಸತ್ವಶುದ್ಧಿಃ ಸತ್ವಶುಧ್ಯಾಧೃವಾಸ್ಮೃತಿಃ ಸ್ಮೃತಿಲಂಭೆ ಸರ್ವಗ್ರಂಥೀನಾಂ ವಿಪ್ರಮೋಕ್ಷಃ" ಎಂದು ಹೇಳಲ್ಪಟ್ಟಿದೆ. ಮತ್ತು ಶಿವಜ್ಞಾನಿಗಳಾದರೂ "ಅರ್ಪಣಾದ್ದ್ರವ್ಯಶುದ್ಧಿಃಸ್ಯಾತ್" ಎಂದು ಹೇಳಿದ್ದಾರೆ ಆದ್ದರಿಂದ ಶಿವಯೋಗರೂಪವಾದ ಉಪಾಯದಿಂದ ತನ್ನ ಸ್ವರೂಪ ಸಾಕ್ಷಾತ್ಕಾರರೂಪವಾದ ಆತ್ಮಶಕ್ತಿಯು ಪ್ರಕಾಶವಾಗುತ್ತದೆ. ಆಗ ಇವನ ಚಿತ್ತವು ಚಿಚ್ಛಕ್ತಿರೂಪವೇ ಆಗಿ ಹೋಗುತ್ತದೆ. ಇಂಥ ಯೋಗದಿಂದುಂಟಾದ ಬುದ್ಧಿಶಕ್ತಿರೂಪವಾದ ಬಲವಿಲ್ಲದವನಿಗೆ ಆತ್ಮಲಾಭವು ಎಂದೂ ಆಗದು. ಆದುದರಿಂದಲೇ ಮುಂಡಕ ಶ್ರುತಿಯು "ನಾಯಮಾತ್ಮಾ ಬಲಹೀನೇನಲಭ್ಯಃ" ಎಂದು ಹೇಳುತ್ತದೆ. ಈ ಕಾರಣಗಳಿಂದ ಕೇವಲ ವಾಕ್ಯಜನ್ಯ ಜ್ಞಾನದಿಂದ ಆತ್ಮಸ್ವರೂಪಾ

ವಾತವಾದ ಅಜ್ಞಾನದ ನಾಶವಾಗಲಾರದು. ಅತಏವ ಯದಿವಾಙ್ನಿಕಾದ್ ಜ್ಞಾನಾನ್ಮುಕ್ತಿಃಸ್ಯಾದ್ಭಾವನಾಂ ವಿನಾ | ಶರೀರಮಾನ ಸೈರ್ದುಃಖೈರ್ವರ್ಜ್ಯೇರನ್ ಸರ್ವಜಂತವಃ || ಎಂದು ಸರ್ವಜ್ಞಮುನಿಗಳು ಹೇಳಿರುವರು. ಆದ್ದರಿಂದ ಅವಿದ್ಯೆಯು ಸ್ವರೂಪತಃ ನಾಶವಾಗುವದಿಲ್ಲ. ಇಷ್ಟಕ್ಕೆ ಈ ವಿಚಾರವನ್ನು ನಿಲ್ಲಿಸಿ ಮುಂದಿನ ೧೦ ನೇ ವಿಷಯವನ್ನು ವಿಚಾರಿಸುತ್ತೇನೆ. ವೇದಾಂತಶಾಸ್ತ್ರ ವಿಚಾರಕ್ಕೆ ಅಧಿಕಾರಿಯು ಸಾಧನಚತುಷ್ಟಯ ಸಂಪನ್ನನೇ ಎಂದು ಬ್ರಹ್ಮಾದ್ವೈತಿಗಳು ಹೇಳುತ್ತಾರಷ್ಟೆ ಹೀಗೆ ಹೇಳುವದು ತಪ್ಪು. ತಿಳವಳಿಕೆಯು ಯಾಕಂದರೆ ಸಾಧನಚತುಷ್ಟಯವೆಂದರೆ ನಿತ್ಯಾನಿತ್ಯ ವಸ್ತುವಿವೇಕಃ ಇಹಾಮುತ್ರಾರ್ಥ ಫಲಭೋಗವಿರಾಗಃ ಶಮಾದಿಷಟ್‌ಸಂಪತ್ತಿಃ ಮುಮುಕ್ಷುತ್ವಂ|| ಈ ನಾಲ್ಕು ಸಾಧನಗಳು ಶಾಸ್ತ್ರ ವಿಚಾರವನ್ನು ಮಾಡದಲೇ ಮೊದಲೇ ಲಭಿಸಲಾರವು. ಶಾಸ್ತ್ರ ವಿಚಾರಕ್ಕಿಂತ ಪೂರ್ವದಲ್ಲಿ ಇದು ನಿತ್ಯವು ಇದು ಅನಿತ್ಯವೆಂದು ತಿಳಿಯಲಾರದು. ಮತ್ತು ಶಾಸ್ತ್ರ ವಿಚಾರ ವಿಲ್ಲದೆ ಇಹಪರಗಳ ವಿಷಯಭೋಗದಲ್ಲಿ ಅನುರಾಗವು ತೊಲಗಲಾರದು. ಶಾಸ್ತ್ರವಿಚಾರಪಿಚಾರವಿಲ್ಲದವನಿಗೆ ಶಮದಮರೂಪಗಳಾದ ಅಂತರಿಂದ್ರಿಯ ಬಹಿರಿಂದ್ರಿಗಳ ನಿಗ್ರಹವಾಗಲಾರದು. ಶಾಸ್ತ್ರವಿಚಾರಕ್ಕಿಂತಲೂ ಪೂರ್ವದಲ್ಲಿ ಮುಮುಕ್ಷುವಾಗದೇ ಬುಭುಕ್ಷುವಾಗಲಿಕ್ಕಿಲ್ಲವೆ? ಬ್ರಹ್ಮಾದ್ವೈತಿಯೇ? ಇದೆಂಥ ಕಲ್ಪನೆಯು ಶಾಸ್ತ್ರವಿಚಾರಕ್ಕಿಂತ ಪೂರ್ವದಲ್ಲಿಯೇ ನಿತ್ಯಾನಿತ್ಯ ಜ್ಞಾನಾದಿಗಳಿರಲು ಶಾಸ್ತ್ರಾಭ್ಯಾಸಕ್ಕೆ ಪ್ರಯೋಜನವೇನು? ಶಾಸ್ತ್ರವೂ ಶಾಸ್ತ್ರಾಭ್ಯಾಸವೂ ವ್ಯರ್ಥವು. ನಿತ್ಯ ವಸ್ತುವೆಂದರೆ ಬ್ರಹ್ಮವು ಅನಿತ್ಯ ವಸ್ತುವೆಂದರೆ ಜಗತ್ತು ನಿತ್ಯವು ಸತ್ಯವು ಅನಿತ್ಯವು ಮಿಥ್ಯೆಯು ಇವುಗಳ ಜ್ಞಾನವಾದಮೇಲೆ ಶಾಸ್ತ್ರವಿಚಾರನಂತರದಲ್ಲಿ ನಿಮಗಾವ ಜ್ಞಾನವಾಗುವದು. ಸಾಮಾನ್ಯತಃ ಜ್ಞಾನವಾಗಿದ್ದರೂ ವಿಶೇಷ ಜ್ಞಾನಕ್ಕೋಸ್ಕರ ವೇದಾಂತ ಶಾಸ್ತ್ರ ವಿಚಾರವು ಬೇಕು. ಇಲ್ಲಿ ವಿಚಾರಮಾಡೋಣ ಇದು ನಿತ್ಯವು ಎಂಬುವ ಜ್ಞಾನಕ್ಕೆ ಬ್ರಹ್ಮಜ್ಞಾನವೆನ್ನುವಿರೊ? ಅಥವಾ ಇಲ್ಲವೊ? ಅನ್ನುತ್ತೇವೆ ಬ್ರಹ್ಮವನ್ನು ಹೊರ್ತು ಮತ್ತೊಂದು ನಿತ್ಯವಾಗಿಲ್ಲದಿರುವುದರಿಂದ ಇದು ನಿತ್ಯವೆಂಬುವುದೇ ಬ್ರಹ್ಮಜ್ಞಾನವೆನಿಸುವದು. ಹಾಗಾದರೆ ಸಿದ್ಧಾಂತದಲ್ಲಿ ಯಾವದನ್ನು ಬ್ರಹ್ಮವೆನ್ನುವಿರೊ ಅದರ ಜ್ಞಾನವಾದನಂತರ ಪುನಃ ಶಾಸ್ತ್ರಜಿಜ್ಞಾಸೆಯಿಂದ ಏನು? ಅದು ವ್ಯರ್ಥವಾಗಲಿಲ್ಲವೇ ಜ್ಞಾನದಲ್ಲಿ ಸಾಮಾನ್ಯ ವಿಶೇಷಭಾವವನ್ನು ಕಲ್ಪಿಸುವದು ಜಾಣತನವಲ್ಲವು. ಘಟಗಳು ಅನೇಕಗಳಿರುವದರಿಂದ

ಘಟತ್ವೇನ ಘಟಜ್ಞಾನವು ಸಾಮಾನ್ಯವೆನಿಸುವದು. ತತ್ತದ್ಘಟತ್ವೇನ ಜ್ಞಾನವು ವಿಶೇಷವೆನಿಸುವದು. ಹೀಗೆ ಬ್ರಹ್ಮವು ನಾನಾವಿಧವಾಗಿಲ್ಲದಿರುವದರಿಂದ ಸಾಮಾನ್ಯ ವಿಶೇಷಕಲ್ಪನೆಯು ಯುಕ್ತವಾಗುವದಿಲ್ಲವು. ಸಾಮಾನ್ಯ ಜ್ಞಾನ ವೆಂದರೆ ಪರೋಕ್ಷಜ್ಞಾನವು ಹೀಗೆ ಹೇಳಿದರೂ ಶ್ರವಣವು ವ್ಯರ್ಥವಾಗುವದು. ಆದ್ದರಿಂದ ವೇದಾಂತಶಾಸ್ತ್ರ ವಿಚಾರಾನಂತರದಲ್ಲಿಯೇ ನಿತ್ಯಾನಿತ್ಯ ವಸ್ತು ವಿವೇಕಾದಿಗಳ ಪ್ರಾಪ್ತಿಯು ಹ್ಯಾಗೆಂದರೆ ಆ ಸಾಧನೆಗಳ ಅಭಾವಗಳು ದುಃಖ ಸಾಧನಗಳಾದ್ದರಿಂದ ಅನರ್ಥರೂಪಗಳು, ಇವುಗಳ ನಿವೃತ್ತಿಯು ಮೋಕ್ಷಶರೀರ ಘಟಕವಾಯಿತು. ಇದು ಸಾಧನ ಚತುಷ್ಟಯರೂಪವೇ ಇರುವದು. ಬ್ರಹ್ಮಾ ದ್ವೈತಿಯೇ? ಈಗ ಸ್ವಲ್ಪ ವಿಚಾರಿಸೋಣ ಅನರ್ಥ ನಿವೃತ್ತಿರೂಪವಾದ ಸಾಧ ನಚತುಷ್ಟಯವು ಬ್ರಹ್ಮವಿಚಾರಾನಂತರದಲ್ಲಿ ಆಗುವದಿಲ್ಲವೆ? ಇಲ್ಲವೆಂದರೆ ಅನ ರ್ಥನಿವೃತ್ತಿಯಗೋಸ್ಕರವಾಗಿ ಶಾಸ್ತ್ರವಿಚಾರವೇತಕ್ಕೆ ಬೇಕು? ಶಿವಾದ್ವೈತಿಯೆ? ಆ ಸಾಧನಗಳೆಲ್ಲವೂ ದುಃಖಸಾಧನಗಳಾದರೆ ಮುಕ್ತಿದಶೆಯಲ್ಲಿಯೂ ಆ ಸಾಧನ ಗಳು ಇದ್ದೇ ಇರುವವು. ಆಗ ಪುನಃ ದುಃಖೋದಯವಾಗಬೇಕಾಯಿತು. ಅಂದರೆ ಬೀಜವು ಅಂಕುರೋತ್ಪಾದಕವಾದರೂ ಹುರಿದ ಬೀಜವು ಅಂಕುರಿಸಲಾ ರದು. ಆದ್ದರಿಂದ ಅದರಲ್ಲಿ ಒಂದು ವೈಜಾತ್ಯವನ್ನು ಕಲ್ಪಿಸುವಂತೆ ದುಃಖಸಾಧ ನಗಳಾದ ಆ ಅಸಾಧನಗಳಲ್ಲಿ ಒಂದು ವೈಶೇಷ್ಯವನ್ನು ಹೇಳುವೆನು. ಆದ್ದರಿಂದ ಮುಕ್ತಿದಶೆಯಲ್ಲಿ ಅಂಥ ವಿಶೇಷ ವಿಶಿಷ್ಟವಾದ ದುಃಖಸಾಧನವಿಲ್ಲದ್ದರಿಂದ ದುಃ ಖೋದಯವಾಗಲಾರದು. ಆದ್ದರಿಂದಲೇ ಶ್ರೀಮನ್ನೀಲಕಂಠ ಶಿವಾಚಾರ್ಯರು ಚತುರ್ಣಾಂ ಸಾಧನಾನಾಂತು ಸಂಪತ್ತೇಃ ಸಮನಂತರಂ | ಇತಿಕೇಚಿದ್ವರ್ಣ ಯಂತಿತನ್ನಾತೀವೋಪಯುಜ್ಯತೆ|| ಇವೇ ಮೊದಲಾದ ವಾಕ್ಯಗಳಿಂದ ಖಂಡಿಸಿರು ವರು. ರಾಮಾನುಜಾಚಾರ್ಯರೂ ಕೂಡಾ ನಿತ್ಯಾನಿತ್ಯ ವಿವೇಕಾದಯಶ್ಚ ಮಿಮಾಮಾಂ ಸಾಶ್ರವಣಮಂತರೇಣನ ಸಂಪತ್ಸ್ಯಂತೆ | ಎಂದು ಹೇಳಿರುವರು. ಒಳ್ಳೇದು ಸಾಧನಚತುಷ್ಟಯ ಸಂಪನ್ನನಾಗಿರುವನೇ ಅಧಿಕಾರಿಯಂದರೆವೇದಾಂ ತಶಾಸ್ತ್ರ ವಿಚಾರವು ವ್ಯರ್ಥವೆಂದು ಹೇಳುತ್ತಿರುವಿರಷ್ಟೆ ? ಅದು ವ್ಯರ್ಥವಾಗಲಾ ರದು. ವ್ಯರ್ಥವಾದ ಪಕ್ಷದಲ್ಲಿ "ಆತ್ಮಾವಾರೆ ದೃಷ್ಟವ್ಯಃ ಶ್ರೋತವ್ಯೋ ನಿದಿ ಧ್ಯಾಸಿತವ್ಯಃ" "ವೇದಾಂತಶ್ರವಣಂಕುರ್ಯಾತ್" ಆಸುಪ್ತೇ ರಾಮೃತೇಃಕಾ ಲಂನಯೇದ್ವೇದಾಂತ ಚಿಂತಯಾ | ದದ್ಯಾನ್ನಾವಸರಂಕಿಂಚಿ ತ್ಕಾಮಾದೀನಾಂ ಮನಾಗಪಿ || ಎಂಬುವ ವಾಕ್ಯಗಳು ವೇದಾಂತಶ್ರವಣ ವಿಧಾನವನ್ನು ಮಾಡು

ತ್ತಿರಲಿಲ್ಲವು. ಆದುದರಿಂದ ನೀನಾದರೂ ವೇದಾಂತಶಾಸ್ತ್ರ ವಿಚಾರವು ವ್ಯರ್ಥವೆನ್ನುವದಿಲ್ಲವು. ಆದರೆ ಈ ವಿಚಾರಕ್ಕೆ ನಾನು ಹೇಳಿದ ಅಧಿಕಾರಿಯನ್ನು ಮಾತ್ರ ನೀನು ಸಮ್ಮತಿಸುವದಿಲ್ಲವಂದಮೇಲೆ ವೇದಾಂತಶಾಸ್ತ್ರ ವಿಚಾರಕ್ಕೆ ಯೋಗ್ಯನಾದ ಅಧಿಕಾರಿಯು ಯಾವನೆಂದು ನೀನು ಹೇಳುವಿ? ಅಂದರೆ ಇಷ್ಟಲಿಂಗಧಾರಣಾತ್ಮಕವಾದ ಶಿವದೀಕ್ಷಾಸಂಪನ್ನನೇ ಅಧಿಕಾರಿಯಂದು ಹೇಳುವೆನು. ಈ ದೀಕ್ಷೆಯು ಮೋಕ್ಷಪ್ರಯೋಜಕವಾಗಿರುವದರಿಂದ ದೀಕ್ಷೆ ಇಲ್ಲದೇ ಮಲತ್ರಯಗಳು ನಾಶವಾಗುವದಿಲ್ಲವು. ಮಲಗಳು ನಾಶವಾಗದಿದ್ದರೆ ಚಿತ್ತವು ಶುದ್ಧವಾಗುವದಿಲ್ಲವು. ಅಶುದ್ಧವಾದ ಚಿತ್ತದಲ್ಲಿ ಜ್ಞಾನೋದಯವಾಗಲಾರದು. ಜ್ಞಾನವಿಲ್ಲದಿದ್ದರೆ ಮೋಕ್ಷವು ದೂರೇ ಉಳಿಯುವದು. ಆದ್ದರಿಂದ ಯಾವನು ಮುಮುಕ್ಷುವೋ ಅವನಿಗೆ ಶಿವದೀಕ್ಷೆಯು ಅವಶ್ಯವಾಗಿ ಬೇಕು. ಇಂಥ ಶಿವದೀಕ್ಷೆಯುಳ್ಳವನೇ ಅಧಿಕಾರಿಯೆಂದು ಹೇಳುತ್ತೇನೆ. ಮೋಕ್ಷವನ್ನು ಬಯಿಸುವವನಿಗೆ ಲಿಂಗಧಾರಣವು ಅವಶ್ಯವಾಗಿರಬೇಕೆಂದು ವೇದಾಗಮ ಪುರಾಣೇತಿಹಾಸಾದಿಗಳಲ್ಲಿ ಘಂಟಾಘೋಷವಾಗಿ ಹೇಳಿದ್ದರೂ ಅದನ್ನು ಬಿಟ್ಟು ಮುಕ್ತಿಯನ್ನಿಚ್ಛಿಸುವದು. ಬೀಜವ ಬಿತ್ತದೆ ಹಣ್ಣನ್ನು ಅಪೇಕ್ಷಿಸಿದಂತಾಗುವದು. ಈ ಲಿಂಗಧಾರಣವು ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿರುವುದಾದರೆ ವೈದಿಕರೆಲ್ಲರೂ ಯಾಕೆ ಅಂಗೀಕರಿಸಿಲ್ಲವು? ಅಂದರೆ ಶ್ರೀಮನ್ನೀಲಕಂಠಶಿವಾಚಾರ್ಯರೂ ಮತ್ತು ಶ್ರೀಮನ್ನಂದಿಕೇಶ್ವರ ಪಂಡಿತರೂ ಇದಕ್ಕೆ ಉತ್ತರವನ್ನು ಹೇಳಿರುವರು. ಅದನ್ನೇ ಇಲ್ಲಿ ಹೇಳುವೆನು ಏನೆಂದರೆ ,,ತಥಾಪಿಮಾನವಾಮೂರ್ಖಾಸ್ತ್ಯಜುರ್ಲಿಂಗಧಾರಣಂ ಆಚಾರಾದ್ವಿಪರಿತೂಹಿ ಯುಗಧರ್ಮಾನುಸಾರತಃ || ಹೀಗೆಂಬುವದರಿಂದ ಲಿಂಗಧಾರಣವನ್ನು ಸ್ವೀಕರಿಸದೆ ಇರುವುದಕ್ಕೆ ಕಾರಣವನ್ನು ಹೇಳಿ ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳಿರುವರೇನಂದರೆ ಧನೀಹ್ಯುದರರೋಗಸ್ಥೋನಭುಂಕ್ತೆಹ್ಯನ್ನಮುತ್ತಮಮಂ | ತದ್ವತತ್ತ್ವಿಕಶಾಸ್ತ್ರಾರ್ಥೆ ಮತಿರ್ನೋದೇತಿಕಸ್ಯಚಿತ್ || ಎಂಬದಾಗಿ ಹೇಳಿರುವರು. ಮತ್ತು ಪಂಡಿತರು ವೇದಶಾಸ್ತ್ರಾಣ್ಯನಾಲೋಚ್ಯ ಕೇಚಿತ್ಪಂಡಿತಮಾನಿನಃ ಧಾರಣಂ ಶಿವಲಿಂಗಸ್ಯನಾಂಗೀ ಚಕ್ರುರಮರ್ಷತಃ | ಎಂದು ಹೇಳಿದ್ದಾರೆ. ಲಿಂಗಧಾರಣವು ವೇದಾದಿಗಳಲ್ಲಿ ಪ್ರಸಿದ್ಧವಿರುವುದೆಂಬ ವಿಷಯದಲ್ಲಿ ಕಾಶಿಯಲ್ಲಿ ಪ್ರಸಿದ್ಧಪಂಡಿತರಾದ ಮ.ಹಾ ಮಹೋಪಾಧ್ಯಾಯ ಶ್ರೀ ಶಿವಕುಮಾರ ಮಿಶ್ರರಿಂದ ರಚಿತವಾದ ಶರತ್ ಟೀಕೆಯಿಂದ ಕೂಡಿದ ಲಿಂಗಧಾರಣ ಚಂದ್ರಿಕೆ ಎಂಬ ಗ್ರಂಥವು ಇರುತ್ತದೆ. ಮತ್ತು ಕ್ರಿಯಾಸಾರದಲ್ಲಿ ಇದ

ಕ್ಕಾಗಿ ಒಂದು ಉಪದೇಶವೆ ಇರುವದು. ಇನ್ನೂ ಅನೇಕ ಗ್ರಂಥಗಳು ಈ ವಿಷಯವನ್ನು ವಿಸ್ತರಿಸುತ್ತಿರುವವು. ಆದ್ದರಿಂದ ನಾನು ಈ ವಿಷಯದಲ್ಲಿ ಹೆಚ್ಚಿಗೆ ಹೇಳುವದು ನಿಷ್ಪ್ರಯೋಜಕವು. ಎಲೈ ಶಿವಾದ್ವೈತಿಯೆ? ಲಿಂಗಧಾರಣವು ಸಾಕ್ಷಾನ್ಮೋಕ್ಷಕ್ಕೆ ಕಾರಣವೆಂದು ಹೇಳುತ್ತೀಯಷ್ಟೆ? ಲಿಂಗ ಧ್ಯಾನಧಾರಣಾದಿರೂಪವಾದ ಶಿವಯೋಗವು ಕಾರಣವೆಂದೇ ಹೇಳುವೆನು. ಹಾಗಾದರೆ ಅದರಿಂದಲೇ ಮುಕ್ತಿಯಾಗಲಿ, ವೇದಾಂತಶಾಸ್ತ್ರ ವಿಚಾರ ವೇತಕ್ಕೆ ಬೇಕು? ಅಂದರೆ ಈ ಪ್ರಶ್ನೆಯು ವೀರಶೈವ ಸಿದ್ಧಾಂತವನ್ನು ತಿಳಿಯದವನಿಗೆ ಯೋಗ್ಯವೇಸರಿ. ಕೇಳು ಬ್ರಹ್ಮಾದ್ವೈತಿಯೇ? ಗುರುವು ಶರಣಾಗತನಾದ ಶಿಷ್ಯನ ಮೂರೂ ಶರೀರಗಳಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಧಾರಣೆಯನ್ನು ಮಾಡಿ ಆಮೇಲೆ ಲಿಂಗಪೂಜಾ ಧ್ಯಾನಾದಿಗಳನ್ನು ಮಾಡಿ ಶಿಷ್ಯನು ಕೃತಾರ್ಥನಾಗಲಿ ಎಂಬುವ ಬುದ್ಧಿಯಿಂದ ಲಿಂಗಸ್ವರೂಪ ಜ್ಞಾನಕ್ಕಾಗಿ ಕರುಣಾಳುವಾದ ಗುರುವು ವೇದಾಂತೋಪದೇಶವನ್ನು ಮಾಡುವನು. ಇದಕ್ಕೇನೇ ಶಿವಾಚಾರ್ಯರು ಷಟ್ಸ್ಥಲ ಬ್ರಹ್ಮೋಪದೇಶ ವಿಧಿಯನ್ನುವರು. ಇದೂ ಕೂಡ ದೀಕ್ಷೆಯೊಳಗಿನ ಒಂದು ಅಂಶವೇ ಆಗಿದೆ. ಆದ್ದರಿಂದಲೇ ಯಾವ ಜೀವವಿಯಂದೀಕ್ಷಾ ಪಶುಪಾಶ ವಿನಾಶಿನೀ ಎಂಬುವ ವಾಕ್ಯವು ಸಾರ್ಥಕವಾಗುತ್ತದೆ. ಮತ್ತು ಈ ವೇದಾಂತ ಶಾಸ್ತ್ರ ವಿಚಾರ ಮಾಡುವದಕ್ಕೇನೇ ಶೀಲಸಂಪಾದನ ಸ್ಥಲವೆಂದು ಹೆಸರಿಟ್ಟಿರುವರು. ಆದ್ದರಿಂದ ದೀಕ್ಷಿತರಿಗೆ ತತ್ವಮಸ್ಯಾದಿ ವೇದಾಂತ ವಾಕ್ಯಾರ್ಥ ವಿಚಾರವು ಅವಶ್ಯವಾಗಿರಬೇಕು. ಇಲ್ಲದಿದ್ದರೆ ಲಿಂಗಸ್ವರೂಪ ಜ್ಞಾನವಿಲ್ಲದೇ ಲಿಂಗಾರ್ಚನೆಯನ್ನು ಮಾಡುವದಕ್ಕಾಗಲಾರದು. ಆದ್ದರಿಂದಲೇ ಶ್ರೀಮನ್ನಿಜಗುಣಶಿವಯೋಗಿಗಳು ಅರುವಿಲ್ಲದಾತಂಗೆ ಅರ್ಚನೆ ಘಟಿಸದೆಂದು ಹೇಳಿರುವರು. ಲಿಂಗದ ಅರುವಿಗಾಗಿ ವೇದಾಂತಶಾಸ್ತ್ರ ವಿಚಾರವು. ಆದ್ದರಿಂದ ಕೊಹಮಿತ್ಯಬ್ರವೀದ್ದೇಹೀಗುರುಂ ಪರಮಕಾರಣಂ ಗುರುಸ್ತತ್ತ್ವಮಸೀತ್ಯಾಹ ಸತ್ಯಾರ್ಥಂ ಕರುಣಾನಿಧಿಃ || ಹೀಗಿರುವ ಶಿವಾಗಮ ವಾಕ್ಯವು ದೀಕ್ಷಿತನಿಗೆ ವೇದಾಂತವಿಚಾರವು ಅವಶ್ಯವಾಗಿರಬೇಕೆಂದು ಅಭಿಪ್ರಾಯ ಪಡುತ್ತದೆ. ಆದ್ದರಿಂದ ಮೊದಲು ಗುರುಮುಖದಿಂದ ದೀಕ್ಷಾಕಾಲಕ್ಕೆ ವೇದಾಂತ ವಾಕ್ಯಗಳನ್ನು ಪಂಚಾಕ್ಷರ ಮಂತ್ರಾರ್ಥಕ್ಕೆ ಅನುಕೂಲಿಸುವಂತೆ ವಿಚಾರಿಸುತ್ತಾ ಲಿಂಗಸ್ವರೂಪವನ್ನು ತಿಳಿದುಕೊಂಡು ಆ ಲಿಂಗದ ಧ್ಯಾನಧಾರಣಾದಿ ರೂಪವಾದ ಯೋಗದಿಂದ ಮುಕ್ತರಾಗತಕ್ಕದ್ದು. ಈ ವಿಷಯದಲ್ಲಿ “ಅಧ್ಯಾತ್ಮಯೋಗಾಧಿಗಮೇನ ಮತ್ವಾದೇವಂ

ಧೀರೊಹರ್ಷ ಶೋಕೌಜಹಾತಿ | ಯತೋ ನಿರ್ವಿಷಯಸ್ಯಾಸ್ಯಮನಸೋಮು ಕ್ತಿರಿಷ್ಯತೆ | ಅತೋನಿರ್ವಿಷಯಂ ನಿತ್ಯಂ ಮನಃ ಕಾರ್ಯಂ ಮುಮುಕ್ಷುಣಾ|| ತಾವದೇವನಿರೋದ್ಧವ್ಯಂ ಯಾವ ಧೃದಿಗತಂಕ್ಷಯಂ | ಏತತ್ ಜ್ಞಾನಂಚಧ್ಯಾ ಸಂಚಶೇಷೊನ್ಯೋಗ್ರಂಥವಿಸ್ತರಃ || ಇತ್ಯಾದಿ ಶ್ರುತಿಗಳು (ಮುಕ್ತಿರ್ಯೋಗಾ ತ್ತಥಾಯೋಗಃ ಸಮ್ಯಗ್ ಜ್ಞಾನಾನ್ಮಹೀಯತೆ | ತಪಸ್ವಿಭ್ಯೋಧಿಕೋಯೋ ಗೀಜ್ಞಾನಿಭ್ಯೋಪಿ ಮತೋಧಿಕಃ || ಇತ್ಯಾದಿ ಸ್ಮೃತಿಗಳೂ ಪ್ರಮಾಣಗಳಾಗಿ ವೆ. ಆದ್ದರಿಂದ (ಆಸುಪ್ತೇರಾಮೃತೇಃಕಾಲಂ ನಯೇದ್ವೇದಾಂತಚಿಂತಯಾ | ಎಂದು ಮೇಲೆ ಹೇಳಿದ ವಾಕ್ಯದಂತೆ ಶಿವಲಿಂಗರೂಪವಾದ ಬ್ರಹ್ಮದ ವಿಚಾರ ವನ್ನು ಮಾಡುತ್ತಲೇ ಇರಬೇಕು. ಇಲ್ಲದಿದ್ದರೆ ಗುರುವಿನಿಂದ ಮಾಡಲ್ಪಟ ಶಿವ ತ್ವಸಮಾವೇಶರೂಪವಾದ ಬೀಜವು ಅಂಕುರಿಸಿ ಪಲ್ಲವಿಸಿ ಫಲಿತವಾಗಲಾರದು. ಇದಲ್ಲದೇ ಶ್ರೀಪತಿ ಪಂಡಿತರು ದೀಕ್ಷೆಯಿಂದಲೇ ಮೋಕ್ಷವಾಗುವ ಪಕ್ಷದಲ್ಲಿ ವೇದಾಂತಶಾಸ್ತ್ರ ವಿಚಾರವೇತಕ್ಕೆ? ಎಂಬುವ ಪ್ರಶ್ನಕ್ಕೆ ಸಮಾಧಾನವನ್ನು ಹೇಳಿ ದ್ದಾರೇನಂದರೆ ನಚಲಿಂಗಧಾರಣಮಾತ್ರೇಣ ಮುಕ್ತಿಸಂಭವೆ ತದೇವಾಲಂ ಕಿಮೌಪನಿಷಚ್ಛಾಸ್ತ್ರಪ್ರಯಾಸೇನೇತಿವಾಚ್ಯಂ | ಆತ್ಮಾವಾರೆ ದ್ರಷ್ಟವ್ಯಃ ಶ್ರೋತವ್ಯಃ" "ವೇದಾಂತಶ್ರವಣಂ ಕುರ್ಯಾತ್ | ಯೋಗಂ ಸಮಾರಭೇತ್, ಇತ್ಯಾದಿ ನಾಮಾಯಾಪಾಶ ವಿಮುಕ್ತಾನಾಮಪಿ ಪ್ರಾರಬ್ಧಪ್ರತಿಭಾಸಪರ್ಯಂ ತಂ ಪರಮೇಶ್ವರಾಜ್ಞಾಪಾಲನಸ್ಯಕರ್ತವ್ಯತ್ವ ಶ್ರವಣಾತ್ | ತದಭಾವೇ ಲಿಂ ಗಾಂಗಜ್ಞಾನದೃಢ ಪ್ರತ್ಯಯಾ ಸಂಭವಾತ್ | ಪುನಃ ಕಾಮಕ್ರೋಧಾದೀನಾ ಮಂತಃಕರಣ ಪ್ರವೇಶಾವಕಾಶಹೇತುತ್ವಾಚ್ಚ || ಎಂದು ಹೇಳಿರುವರು. ಆದ್ದರಿಂದ ಶಿವದೀಕ್ಷಾಸಂಪನ್ನನೇ ಅಧಿಕಾರಿಯೆಂಬದು ನಮ್ಮ ಪೂರ್ವಾಚಾರ್ಯ ರಅಭಿಪ್ರಾಯವು.

ಇನ್ನು ೧೧ ನೇ ವಿಚಾರವನ್ನು ಮಾಡುವೆನು. ಬ್ರಹ್ಮವು ನಿರವಯವವು ಆದ್ದರಿಂದ ಅದು ಪರಿಣಮಿಸುವದಿಲ್ಲಾ ಯಾವದಕ್ಕೆ ಅವಯವವಿಲ್ಲವೊ ಅದಕ್ಕ ಪರಿಣಾಮವಿಲ್ಲ. ಆದರೆ ಬ್ರಹ್ಮವು ಸರ್ವಾಧಿಷ್ಠಾನವಿದ್ದು ಜಗದ್ರೂಪವಾಗಿ ಅನ್ಯಥಾ ತೋರುತ್ತದೆ. ಅಧಿಷ್ಠಾನವಸ್ತುವಿನ ಅನ್ಯಥಾ ತೋರಿಕೆಯು ವಿವರ್ತವು ಶಂಕರಾನಂದರು ಭವದ್ಗೀತೆಯ ತಮ್ಮ ವ್ಯಾಖ್ಯಾನದಲ್ಲಿ ಅಧಿಷ್ಠಾನಸ್ಯಾನ್ಯಥಾ ಭಾನಂ ವಿವರ್ತಃ || ಎಂದು ಹೇಳಿರುವರು. ಅವಿದ್ಯೆಯು ಪರಿಣಮಿಸುತ್ತದೆ. ಆದ್ದರಿಂದ ಈ ಜಗತ್ತು ಅವಿದ್ಯೆಯ ಪರಿಣಾಮವು ಬ್ರಹ್ಮದವಿವರ್ತವು. ಪರಿಣಾ

ಮತವಾದಿಯಾದ ಎಲ್ಲಿ ಶಿವಾದ್ವೈತಿಯೇ ? ನೀನು ಅವಿದ್ಯೆಯನ್ನು ಸ್ವೀಕರಿಸುವದಿಲ್ಲವೆಂದರೆ ಬ್ರಹ್ಮವು ಜಗದಾಕಾರವಾಗಿ ಪರಿಣಮಿಸುತ್ತದೆಂದು ಹೇಳುವಿಯೇನು? ಬ್ರಹ್ಮವೇ ಪರಿಣಮಿಸುತ್ತದೆಂದು ಹೇಳುತ್ತೇನೆ. ಹಾಗಾದರೆ ಶಿವಾದ್ವೈತಿಯೇ? ಬ್ರಹ್ಮವು ಸಂಪೂರ್ಣವಾಗಿ ಪರಿಣಮಿಸುವದೊ? ಅಥವಾ ತನ್ನ ಯತ್ಕಿಂಚಿದಂಶದಿಂದ ಪರಿಣಮಿಸುತ್ತದೆಯೊ? ನೀನು ಸಂಪೂರ್ಣ ಬ್ರಹ್ಮವೇ ಜಗತ್ತಾಗಿ ಪರಿಣಮಿಸುತ್ತದೆಂದರೆ ಜಗದತಿರಿಕ್ತವಾಗಿ ಬ್ರಹ್ಮವು ಉಳಿಯಲಿಲ್ಲಾ ಕ್ಷೀರವು ದಧಿರೂಪವಾಗಿ ಪರಿಣತವಾದ ಕಾಲದಲ್ಲಿ ಕ್ಷೀರವಿಲ್ಲವೆನ್ನುವಂತೆ ಬ್ರಹ್ಮವು ಜಗತ್ತಾಗಿ ಪರಿಣತವಾದಕಾಲದಲ್ಲಿ ಬ್ರಹ್ಮವಿಲ್ಲವೆನ್ನಬೇಕಾಗುವದು. ಹೀಗಂದರೆ ಜಗತಿರಿಕ್ತವಾಗಿ ಜಗನ್ನಿಯಾಮಕನಿಲ್ಲದೆ ಹೋದರೆ ಜಗದ್ವ್ಯವಹಾರವು ಅವ್ಯವಸ್ಥಿತವಾದೀತು. ಯಜಮಾನನಿಲ್ಲದ ಮನೆಯ ವ್ಯವಸ್ಥೆಯು ಕೆಡುತ್ತದಷ್ಟೆ? ದೇವರಿಲ್ಲದ ಗುಡಿಯ ವ್ಯವಸ್ಥೆಯೂ, ಚಾಲಕನಿಲ್ಲದ ಹೊಗೆಬಂಡಿಗಳ ವ್ಯವಸ್ಥೆಯೂ ಆಗಲಾರದು. ಈ ಜಗತ್ತೆಂಬ ಕಾರ್ಯವನ್ನು ನೋಡಿದರೆ ಇದಕ್ಕೆ ಒಬ್ಬ ವಿಲಕ್ಷಣನಾದ ಕರ್ತೃ ಇದ್ದಾನೆಂದು ವ್ಯಕ್ತವಾಗುವದು. ಅವನಿಲ್ಲದಿದ್ದರೆ ಸೂರ್ಯ ಚಂದ್ರ ನಕ್ಷತ್ರ ಸಮುದ್ರ ಮೊದಲಾದವುಗಳು ತಮ್ಮತಮ್ಮ ಉದ್ಯೋಗವನ್ನು ನಿಯಮಿತ ತನದಿಂದ ಮಾಡಲಾರವು. ‹‹ಭೀಷಾಸ್ಮಾದ್ವಾತಃ ಪವತೇ›› ಇತ್ಯಾದಿ ಶ್ರುತಿಗಳೂ ಕೂಡ ಜಗತ್ತನ್ನು ನಿಯಮಿಸುವವನೊಬ್ಬನಿದ್ದಾನೆಂದು ಹೇಳುತ್ತವೆ. ರಾಜನಿಲ್ಲದ ರಾಜ್ಯದ ವ್ಯವಹಾರವು ಕೆಟ್ಟುಹೋಗುವಂತೆ ಜಗತ್ತಿಗೆ ಬೇರೆಯಾಗಿ ಒಬ್ಬ ಒಡೆಯನಿಲ್ಲದಿದ್ದರೆ ಜಗದ್ವ್ಯವಹಾರವು ನಿಂತುಹೋಗಬೇಕಷ್ಟೆ? ಆದ್ದರಿಂದ ಬ್ರಹ್ಮವು ಸಂಪೂರ್ಣವಾಗಿ ಪರಿಣಮಿಸಲಾರದು. ಬ್ರಹ್ಮವು ತನ್ನ ಒಂದು ಅಂಶದಿಂದ ಜಗದ್ರೂಪವಾಗಿ ಪರಿಣಮಿಸಿ ಬೇರೆ ಅಂಶದಿಂದ ಜಗದತಿರಿಕ್ತವಾಗಿದ್ದು ಜಗತ್ತಿಗೆ ನಿಯಾಮಕವಾಗುತ್ತದೆ. ಅಂದರೆ ಬ್ರಹ್ಮವು ನಿರವಯವವು ಎಂದು ಹೇಳುವ ಶ್ರುತಿಗಳಿಗೆ ವಿರೋಧವಾಗುತ್ತದೆ. ಆದ್ದರಿಂದ ಬ್ರಹ್ಮವು ವಿವರ್ತಿಸುತ್ತದೆ ಅವಿದ್ಯೆಯು ಪರಿಣಮಿಸುತ್ತದೆಂದು ಹೇಳಬೇಕು. ಅಂದರೆ ಎಲ್ಲಿ ಬ್ರಹ್ಮಾದ್ವೈತಿಯೇ? ಈ ಆಕ್ಷೇಪವನ್ನು ಶ್ರೀ ವ್ಯಾಸರು ‹‹ಶ್ರುತೇಸ್ತು ಶಬ್ದಮೂಲತ್ವಾತ್›› ಎಂಬುವ ಸೂತ್ರದಿಂದ ಪರಿಹರಿಸಿರುವರೇನಂದರೆ ದಧಿಕ್ಷೀರನ್ಯಾಯದಂತೆ ಅನುಮಾನದಿಂದ ಗಮ್ಯವಾದ ಪದಾರ್ಥದಲ್ಲಿ ಮೇಲಿನ ಆಕ್ಷೇಪಕ್ಕೆ ಅವಕಾಶವು ದೊರಕುವದು. ಬ್ರಹ್ಮವು ಅನುಮಾನಗಮ್ಯವಲ್ಲಾ ಶ್ರುತ್ಯೈಕಸಮಧಿಗಮ್ಯವಾದದ್ದು. ಆದ್ದರಿಂದ ಶ್ರುತಿಯಿಂದಲೆ ವಸ್ತುವಿನ ವ್ಯವ

ಸ್ಥೆಯನ್ನು ಮಾಡತಕ್ಕದ್ದು. ಅಲ್ಲಿ ತರ್ಕಕ್ಕೆ ಪ್ರಯೋಜನವಿಲ್ಲದುದರಿಂದ ("ಅಚಿಂತ್ಯಾಃ ಖಲುಯೇ ಭಾವಾನತಾಂಸ್ತರ್ಕೇಣ ಯೋಜಯೇತ್") ಎಂದು ಹೇಳಲ್ಪಡುತ್ತದೆ. ನೀನು ಹೇಳುವ ಪರಿಣಾಮದ ಲಕ್ಷಣವು ಶ್ರುತಿಗೆ ವಿರುದ್ಧ ವಾಗಿರುವದರಿಂದ ಅದನ್ನು ಅಂಗೀಕರಿಸುವದಿಲ್ಲ. (ಪೂರ್ವರೂಪಪರಿತ್ಯಾಗೇನ ರೂಪಾಂತರಾಪತ್ತಿಃ ಪರಿಣಾಮಃ ||) ಎಂಬುವ ಲಕ್ಷಣವು ಯಾವ ಶ್ರುತಿಗೆ ವಿರುದ್ಧವಾಗುವದು. ಹೇಳು ಅಂದರೆ ಅವಯುವವಿಲ್ಲದ ಬ್ರಹ್ಮವು ಪರಿಣಮಿಸು ತ್ತದೆ ಮತ್ತು ಅದು ತನ್ನ ಪೂರ್ವರೂಪವನ್ನು ಬಿಡುವದಿಲ್ಲವೆಂದು ತೇಜೋಬನ್ನ ಗಳ ಸೃಷ್ಟಿಯನ್ನು ಹೇಳಿ ಆಮೇಲೆ "ಸೇಯಂದ್ಯೈವತ್ಯೈಕ್ಷತ ಹಂತಾಹಮಿಮಾಸ್ತಿ ಸ್ರೋದೇವತಾ ಅನೇನ ಜೀವೇನಾತ್ಮ ನಾನು ಪ್ರವಿಶ್ಯನಾಮರೂಪೇ ವ್ಯಾಕರ ವಾಣಿ" ಎಂದು ತೇಜೋಬನ್ನರೂಪಗಳಾದ (ತೇಜಸ್ಸು ಜಲಪೃಥಿವೀರೂಪಗ ಳಾದ) ಪರಿಣಾಮಗಳಿಗಿಂತಲೂ "ಸೇಯಂದ್ಯೈವತ್ಯೈಕ್ಷತ" ಎಂದು ಈಕ್ಷಿಸುವ ಪರಮಾತ್ಮನಿಗೆ ಪೃಥಕ್ಕಾಗಿ ಅವಸ್ಥಾನವು ಹೇಳಲ್ಪಟ್ಟಿರುವದು. ಆದ್ದರಿಂದ ನಿನ್ನ ಲಕ್ಷಣವು ಶ್ರುತ್ಯನುಕೂಲವಲ್ಲ. ಯಾಕಂದರೆ ಪೂರ್ವರೂಪವಂ ಬಿಟ್ಟು ರೂಪಾಂ ತರವನ್ನೇ ಹೊಂದಿದಪಕ್ಷದಲ್ಲಿ ತೇಜೋಬನ್ನರೂಪವಾಗಿ ಪರಿಣಮಿಸಿದನಂತರ ಬ್ರಹ್ಮದೇವತೆಯು ಬೇರೆ ಉಳಿಯಬಾರದು. ಶ್ರುತಿಯಂತೂ ಬ್ರಹ್ಮದೇವತೆಯು ತೇಜೋಬನ್ನರೂಪದಿಂದ ಪರಿಣಮಿಸಿ ಮತ್ತೆ ಅವುಗಳನ್ನು ನೋಡಿತು. ಎಂದು ಹೇಳುತ್ತದೆ. ಅಂದಮೇಲೆ ನಿನ್ನ ಲಕ್ಷಣವು ಶ್ರುತಿವಿರುದ್ಧವು. ಲೋಕದಲ್ಲಿಯಾ ದರೂ ಪೂರ್ವರೂಪವನ್ನು ಬಿಟ್ಟು ಬೇರೆ ರೂಪವನ್ನು ಹೊಂದುವಿಕೆಯು ಪರಿಣಾ ಮವೆನಿಸಲಾರದು. ಪೂರ್ವ ಉಪಾದಾನವಿಲ್ಲದೇ ಉಪಾದೇಯವಾದ ಕಾರ್ಯ ರೂಪವಾದ ಪರಿಣಾಮ ಇರಲಾರದು. ಅದಕ್ಕೊಂದು ಆಶ್ರಯವು ಬೇಕು. ಆದ್ದರಿಂದ ನೀನು ಹೇಳುವ ಪರಿಣಾಮವು ಯುಕ್ತಿಯುಕ್ತವೂ ಅಲ್ಲ. ಹಾಗಾದರೆ ಶಿವಾದ್ವೈತಿಯೇ! ನೀನು ಹೇಳುವ ಪರಿಣಾಮವೆಂಥಾದ್ದು? ಅಂದರೆ ("ಸ್ಥಿತಏ ವೋಪಾದಾನೇ ತದ್ಭಿನ್ನ ವ್ಯವಹಾರಯೋಗ್ಯಕಾರ್ಯೋತ್ಪತ್ತಿರೇವ ಪರಿಣಾಮಃ||) ಎಂದು ಹೇಳುವೆನು. ಈ ನನ್ನ ಮತದಲ್ಲಿ ನಿರಾಶ್ರಯತ್ವಾಪತ್ತಿ ದೋಷವಿಲ್ಲ ಹ್ಯಾಗಂದರೆ ಸ್ವರ್ಣಕುಂಡಲಸ್ಥಲದಲ್ಲಿ ಉಪಾದಾನಕಾರಣದ ನಾಶವಿಲ್ಲದೇ ಅದ ಕ್ಕೆ (ಸುವರ್ಣಕ್ಕೆ) ಭಿನ್ನವಾದ ಕುಂಡಲ ವ್ಯವಹಾರಯೋಗ್ಯವಾದ ಕುಂಡಲೋ ತ್ಪತ್ತಿಯು ಕಂಡುಬರುವದು. ಮತ್ತು ಉಪಾದಾನವಾದ ಶರೀರವಿರುತ್ತಿರಲಿಕ್ಕೆ ತದ್ಭಿನ್ನವಾದ ವ್ಯವಹಾರಯೋಗ್ಯವಾದ ಗಮನಾದಿಗಳ ಉತ್ಪತ್ತಿಯುಂಟು.

ಇದೇ ಅಭಿಪ್ರಾಯವನ್ನೇ («ಆತ್ಮನಿಚೈವಂ ವಿಚಿತ್ರಾಶ್ಚಹಿ») ಎಂಬುವ ಸೂತ್ರ ದಿಂದ ಹೇಳಿರುವರು. ಜೀವಾತ್ಮನಲ್ಲಿ ಜೀವನ ಸ್ವರೂಪವನ್ನು ಕೆಡಸದೆ ವಿಚಿತ್ರಗ ಳಾದ ಬುದ್ಧೀಚ್ಛಾದಿ ಪರಿಣಾಮ ವಿಶೇಷಗಳು ಕಂಡುಬರುವಂತೆ ಶಿವನಲ್ಲಿ ಶಿವ ಸ್ವರೂಪವನ್ನು ಕೆಡಸದೆ ವಿಚಿತ್ರವಾದ ಚೇತನಾ ಚೇತನಾತ್ಮಕವಾದ ಪ್ರಪಂಚ ರೂಪವಾದ ಪರಿಣಾಮವಾಗುತ್ತದೆಂದು ಹೇಳುತ್ತೇನೆ. ಮೃತ್ ತಂತುಗಳಲ್ಲಿಯಾ ದರೂ ಘಟಪಟಾದಿ ಪರಿಣಾಮ ವಿಶೇಷಗಳು ಅವುಗಳ ಸ್ವರೂಪವನ್ನು ನಾಶ ಮಾಡದೇ ಕಂಡುಬರುತ್ತವೆ. ಅಂಕುರಾದಿಗಳಲ್ಲಿ ಬೀಜವು ಕಾರ್ಯಾನ್ವಯಿಯಾ ಗದಿರುವದರಿಂದ ಅದು ಉಪಾದಾನಕಾರಣವಲ್ಲ. ಕಿಂತು ಬೀಜಾಂಕುರಗಳೆರಡ ರಲ್ಲಿ ಅನುಸ್ಯೂತಗಳಾದ ಅವಯವಗಳೇ ಉಪಾದಾನಕಾರಣವು. ಇದೇ ತಾತ್ಪ ರ್ಯವನ್ನೇ («ಏತಸ್ಯವೈ ಸೌಮ್ಯೇಷೋಣಿಮ್ನ ಏವ ಮಹಾನ್ಯ ಗ್ರೋಧಸ್ತಿಷ್ಠತಿ») ಎಂಬುವ ಶ್ರುತಿಯು ಹೇಳುತ್ತದೆ. ಮತ್ತು «ನಾಸತೋದೃಷ್ಟತ್ವಾತ್» ಎಂಬುವ ಸೂತ್ರದಿಂದ ವ್ಯಾಸಮಹರ್ಷಿಗಳು ಕೂಡ ಹೇಳಿರುವರು. ಆದ್ದರಿಂದ ನಿರವಯ ವವಾದ ಬ್ರಹ್ಮದ ಸ್ವರೂಪವನ್ನು ಉಪಮರ್ದನಮಾಡದೇ ಜಗತ್ಪರಿಣಾಮವು ಉಪಪನ್ನವಾಗುವದು. «ಸ್ವಪಕ್ಷದೋಷಾಚ್ಚ» ಎಂಬುವ ಸೂತ್ರದಿಂದ ವಿಪಕ್ಷ ವಾದ ಸಾಂಖ್ಯಮತದಲ್ಲಿ ಪ್ರಧಾನ ಅಥವಾ ಸತ್ವಾದಿ ಗುಣಗಳಿಗೆ ಸಾಕಲ್ಯದಿಂದ ಪರಿಣಾಮವೆಂದರೆ ಸ್ವರೂಪನಾಶವು. ಏಕದೇಶದಿಂದ ಪರಿಣಾಮವೆಂದರೆ ಅವು ಗಳ ನಿರವಯವತ್ವ ಸ್ವೀಕಾರಕ್ಕೆ ವಿರೋಧವಾಗುವದೆಂದು ಹೇಳುವ ಬ್ರಹ್ಮಾ ದ್ವೈತಿಯೇ? ಅವಿದ್ಯೆಯ ಪರಿಣಾಮವೇ ಜಗತ್ತೆಂದು ಹ್ಯಾಗೆ ಹೇಳುವಿ? ಆನಿನ್ನ ಅವಿದ್ಯೆಯಾದರೂ ಪ್ರಧಾನಕ್ಕೆ ತುಲ್ಯವಾಗಿರುವದಷ್ಟೆ? ಅವಿದ್ಯೆಯು ಹಾಗಿದ್ದ ರೂ ಅದರಲ್ಲೊಂದು ವಿಚಿತ್ರ ಶಕ್ತಿ ಯಿರವದರಿಂದ ವಿಚಿತ್ರವಾದ ಜಗದ್ರೂಪ ವಾದ ಪರಿಣಾಮವು ಸಂಭವಿಸುವದು. ಬ್ರಹ್ಮಕ್ಕೆ ಸಂಭವಿಸಲಾರದು. ಅಂದರೆ «ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೆ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ» ಎಂ ಬುವ ಶ್ರುತಿಯಿಂದಲೂ «ಸರ್ವೋಪೇತಾಚತದ್ದರ್ಶನಾತ್» ಎಂಬುವ ಸೂತ್ರ ದಿಂದಲೂ ಬ್ರಹ್ಮಕ್ಕೆ ವಿಚಿತ್ರಶಕ್ತಿ ಯೋಗವೆಂದು ಕಂಡುಬರುತ್ತದಲ್ಲದೆ ಅವಿದ್ಯೆಗೆ ಕಂಡುಬರುವದಿಲ್ಲ. ಅವಿದ್ಯೆಯಲ್ಲಿ ಅಂಥ ಶಕ್ತಿಯು ಇರುವದೆಂಬುವಲ್ಲಿ ಪ್ರಮಾಣ ವಿಲ್ಲ. ಶ್ರುತಿ ಸೂತ್ರಗಳು ಜಗತ್ತು ಬ್ರಹ್ಮದ ಪರಿಣಾಮವೆಂದು ಹೇಳುತ್ತಿರಲಿಕ್ಕೆ ಜಗದಾಕಾರವಾಗಿ ಬ್ರಹ್ಮವು ವಿವರ್ತಿಸುತ್ತದೆ. ಅವಿದ್ಯೆಯು ಪರಿಣಮಿಸುತ್ತ ದೆಂದು ಹೇಳುವದು ತಪ್ಪು. ಮತ್ತು «ನವಿಲಕ್ಷಣತ್ವಾತ್ ವಾತಥಾತ್ವಂಚಶ

ಬ್ದಾತ್'' ಎಂಬುವ ಅಧಿಕರಣವು ಯುಕ್ತವಾಗಲಾರದು. ಯಾಕಂದರೆ ನಿನ್ನ ಅವಿದ್ಯೆಗೂ ಅವಿದ್ಯೆಯ ಪರಿಣಾಮರೂಪವಾದ ಜಗತ್ತಿಗೂ ವೈಲಕ್ಷಣ್ಯವಿಲ್ಲದಿರುವದರಿಂದ ಜಗತ್ತು ಅವಿದ್ಯೆಯ ಪರಿಣಾಮವಲ್ಲ. ಬ್ರಹ್ಮದ ಪರಿಣಾಮವೆಂತಲೆ ಹೇಳಬೇಕು. ಹೀಗೆ ಹೇಳಿದರೆ ಬ್ರಹ್ಮವು ಜಗತ್ತಿಗೆ ವಿಲಕ್ಷಣವಾಗಿರುವದರಿಂದ ಅದು ಜಗತ್ತಿಗೆ ಕಾರಣವಲ್ಲವೆಂಬುವ ಪೂರ್ವಪಕ್ಷವು ಸಂಭವಿಸುವದು. ಆದುದರಿಂದ ಅಧಿಕರಣವು ಉಪಪನ್ನವಾಗುವದು. ಬ್ರಹ್ಮದ ವೈಲಕ್ಷಣ್ಯವು ಜಗತ್ತಿನಲ್ಲಿ ''ವಿಜ್ಞಾನಂಚಾವಿಜ್ಞಾನಂಚ'' ಎಂಬುವ ವಾಕ್ಯದಿಂದ ತಿಳಿದುಬರುತ್ತದೆ. ಆದ್ದರಿಂದ ಜಗತ್ತು ಬ್ರಹ್ಮಕ್ಕೆ ವಿಲಕ್ಷಣವಿರುವದರಿಂದ ಬ್ರಹ್ಮದ ಕಾರ್ಯವಾಗಲಾರದು. ಎಂಬುವ ಆಕ್ಷೇಪವು ಜಗತ್ತು ಬ್ರಹ್ಮದ ಪರಿಣಾಮವು ಎಂಬುವ ಮತದಲ್ಲಿ ಯುಕ್ತವಾಗುವದು. ಜಗತ್ತು ಅವಿದ್ಯೆಯ ಪರಿಣಾಮವೆಂಬುವ ಮತದಲ್ಲಿ ಯುಕ್ತವಾಗುವದಿಲ್ಲ. ''ದೃಶ್ಯತೇತು'' ಎಂಬುವ ಸಿದ್ಧಾಂತ ಸೂತ್ರದಿಂದ ಬ್ರಹ್ಮವು ಜಗತ್ತಿಗಿಂತಲೂ ವಿಲಕ್ಷಣವಾಗಿದ್ದರೂ ಜಗತ್ತು ಬ್ರಹ್ಮದ ಪರಿಣಾಮವಾಗುವದು ಚಿದ್ಬ್ರಹ್ಮದಿಂದ ಅಚಿತ್ಪ್ರಪಂಚವು ಹೇಗೆ ಹುಟ್ಟುವದು? ಅಂದರೆ ಚೇತನ ಪುರುಷನಿಂದ ಅಚೇತನಗಳಾದ ಲೋಮನಖಾದಿಗಳ ಉತ್ಪತ್ತಿಯೂ ಅಚೇತನಗಳಾದ ಗೋಮಯಾದಿಗಳಿಂದ ಚೇತನಗಳಾದ ವೃಶ್ಚಿಕಾದಿಗಳ ಉತ್ಪತ್ತಿಯೂ ಕಂಡುಬರುವದಷ್ಟೆ? ಇದರಂತೆ ಚಿದ್ಬ್ರಹ್ಮದಿಂದ ಅಚಿತ್ಪ್ರಪಂಚವು ಹುಟ್ಟುವದು. ಮತ್ತು ಜಗತ್ತಿಗೆ ಉಪಾದಾನಕಾರಣವಾದ ಅವಿದ್ಯೆಯು ಬ್ರಹ್ಮದ ಕಾರ್ಯವಲ್ಲ. ಆದ್ದರಿಂದ ಆ ಅವಿದ್ಯೆಯು ಬ್ರಹ್ಮಕ್ಕೆ ಭಿನ್ನವಾಯಿತು. ಅಂದಮೇಲೆ ಬ್ರಹ್ಮವು ತಿಳಿಯಲ್ಪಟ್ಟರೂ ಅದು ತಿಳಿಯಲ್ಪಡಲಾರದು. ಆದ್ದರಿಂದ ಏಕವಿಜ್ಞಾನದಿಂದ ಸರ್ವಜ್ಞಾನವಾಗುವದೆಂಬ ಪ್ರತಿಜ್ಞಾ ವಾಕ್ಯವು ಸಂಗತವಾಗಲಾರದು ಸನ್ನ(ಶಿವಾದ್ವೈತಮತದಲ್ಲಿ ಜಗತ್ತು ಬ್ರಹ್ಮದ ಕಾರ್ಯ(ಪರಿಣಾಮ) ವಾದ್ದರಿಂದ ಬ್ರಹ್ಮವು ತಿಳಿಯಲ್ಪಡುತ್ತಿರಲು ಎಲ್ಲಾ ಪ್ರಪಂಚವೂ ತಿಳಿಯಲ್ಪಡುವದು. ಆದಕಾರಣದಿಂದ ಆ ಪ್ರತಿಜ್ಞಾ ವಾಕ್ಯವು ಸಂಗತವಾಗುವದು. ''ಜನ್ಮಾದ್ಯಸ್ಯಯತಃ'' ಎಂಬುವ ಸೂತ್ರದಿಂದ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಾದಿಗಳಿಗೆ ಬ್ರಹ್ಮವು ಕಾರಣವೆಂದು ಹೇಳಲ್ಪಟ್ಟಿತು. ಬ್ರಹ್ಮವು ನಿಮಿತ್ತಕಾರಣವೋ ಉಪದಾನಕಾರಣವೋ ಎಂಬುವ ಜಿಜ್ಞಾಸೆಯುಂಟಾಗಲಾಗಿ (''ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನು) ಪರೋಧಾತ್'' ಎಂಬುವ ಸೂತ್ರದಿಂದ ಬ್ರಹ್ಮವು ನಿಮಿತ್ತಕಾರಣವೂ ಆಗಿರುವದು. ಉಪಾದಾನಕಾರಣವೂ ಆಗಿರುವದೆಂದು ಹೇಳಲ್ಪ

ಟ್ಟಿತು. ಹೇಗೆಂದರೆ ‹‹ಯೇನಾಶ್ರುತಂ ಶ್ರುತಂಭವತಿ ಅಮತಂಮತಂ ಅವಿಜ್ಞಾತಂ ವಿಜ್ಞಾತಂ›› ಎಂಬುವ ಪ್ರತಿಜ್ಞೆಯು ಶಿವನೇ ಸರ್ವಜಗನ್ಮಯನೆಂದು ಅಭಿಪ್ರಾಯ ವನ್ನು ಕೊಡುತ್ತದೆ. ‹‹ಯಥೈಕೇನ ಮೃತ್ಪಿಂಡೇನ ವಿಜ್ಞಾತೇನ ಸರ್ವಮಿದಂ ಮೃಣ್ಮಯಂ ವಿಜ್ಞಾತಂಸ್ಯಾತ್›› ಎಂಬುವ ದೃಷ್ಟಾಂತವಾಕ್ಯದಲ್ಲಿ ಹೇಳಿದ ಉಪಾದಾನಭೂತವಾದ ಮೃತ್ಪಿಂಡದಿಂದಾದ ಸಮಸ್ತ ಮೃಣ್ಮಯಗಳಾದ ಘಟ ಶರಾವಾದಿಗಳು ಹೇಗೆ ಮಣ್ಣಿಗಿಂತಲೂ ಭಿನ್ನವಾಗಿಲ್ಲವೋ? ಹಾಗೆ ಉಪಾದಾನ ಕಾರಣನಾದ ಶಿವನಿಂದ ಉಂಟಾದ ಪ್ರಪಂಚವು ಶಿವನಿಗೆ ಭಿನ್ನವಾಗಿಲ್ಲವಾದ್ದರಿಂದ ಶಿವನ ಜ್ಞಾನವಾಗುತ್ತಿರಲು ಸಮಸ್ತ ಪ್ರಪಂಚದ ಜ್ಞಾನವಾಗುವದು. ಉಪಾ ದಾನಕಾರಣವು. ಅವಿದ್ಯೆಯು ಎಂದು ಹೇಳುವ ಮತದಲ್ಲಿ ಪ್ರತಿಜ್ಞಾವಾಕ್ಯಕ್ಕೆ ವಿರೋಧವು. ಮತ್ತು ಮೇಲೆ ಹೇಳಿದ ಸೂತ್ರಕ್ಕೂ ವಿರುದ್ಧವಾಗುವದು, ಆ ಸೂತ್ರವು ಒಂದೇ ಬ್ರಹ್ಮಕ್ಕೆ ಉಪಾದಾನತ್ವವನ್ನೂ ನಿಮಿತ್ತತ್ವವನ್ನೂ ಹೇಳುತ್ತ ದಷ್ಟೆ. ಘಟವು ಮೃತ್ಪಿಂಡದ ಪರಿಣಾಮವಾದುದರಿಂದ ಘಟಕ್ಕೆ ಉಪಾದಾನಕಾರ ಣವು. ಮೃತ್ಪಿಂಡವಾಗುವಂತೆ ಪಟಕ್ಕೆ ಆಗುವದಿಲ್ಲ. ಇದರಂತೆ ಜಗತ್ತು ಬ್ರಹ್ಮದ ಪರಿಣಾಮವು ಆದ್ದರಿಂದ ಬ್ರಹ್ಮವು ಉಪಾದಾನಕಾರಣವು. ಜಗತ್ತು ಅವಿದ್ಯೆ ಯ ಪರಿಣಾಮವೆಂದರೆ ‹‹ಪ್ರಕೃತಿಶ್ಚ›› ಎಂಬುವ ಸೂತ್ರಕ್ಕೆ ವಿರೋಧವಾಗುವದು. ‹‹ವಿಶ್ವಾಧಿಕೊರುದ್ರೋ›› ಎಂಬುವ ಶ್ರುತಿಯಿಂದ ಬ್ರಹ್ಮವು ಕೇವಲ ನಿಮಿತ್ತಕಾ ರಣವೆಂದು ತಿಳಿದುಬರುವದರಿಂದ ವಿಶ್ವಾಧಿಕನಿಗೆ ವಿಶ್ವರೂಪವನ್ನ ಹೇಳುವದು ಶ್ರುತಿಗೆ ವಿರುದ್ಧವಲ್ಲವೆ? ಮತ್ತು ‹‹ಮಾಯಾಂತುಪ್ರಕೃತಿಂವಿದ್ಯಾತ್ ಮಾಯಿ ನಂತು ಮಹೇಶ್ವರಂ›› ಎಂಬುವ ಶ್ರುತಿಯಿಂದ ಮಾಯಾಶಬ್ದವಾಚ್ಯವಾದ ಅವಿ ದ್ಯೆಯೇ ಉಪಾದಾನಕಾರಣವೆಂದು ತಿಳಿಯುವದರಿಂದ ಬ್ರಹ್ಮವು ಉಪಾದಾನ ಕಾರಣವಲ್ಲ. ಅಂದರೆ ‹‹ವಿಶ್ವಾಧಿಕೊರುದ್ರಃ›› ‹‹ಸರ್ವೋಹ್ಯೇಷರುದ್ರಃ›› ಎಂಬುವ ಶ್ರುತಿಗಳಿಂದ ಬ್ರಹ್ಮವು ಜಗತ್ಸ್ವರೂಪವೂ ಜಗದತಿರಿಕ್ತವೂ ಇರುವದೆಂತ ಲೂ, ಶತರುದ್ರಿಯದಲ್ಲಿ ‹‹ಕುಲುಂಚಾನಾಂಪತಯೇ›› ಎಂಬುವ ವಾಕ್ಯದಿಂದ ಪರ ಶಿವಬ್ರಹ್ಮವು ವಿಶ್ವಾಧಿಪತಿಯಂತಲೂ, ‹‹ನಮಃ ಪರ್ಣ್ಯಾಯಚ ಪರ್ಣಶದ್ಯಾ ಯಚ›› ಎಂಬುವದರಿಂದ ವಿಶ್ವರೂಪನೆಂತಲೂ ಕಂಡುಬರುವದರಿಂದ ಬ್ರಹ್ಮವೇ ನಿಮಿತ್ತೋಪಾದಾನೋಭಯಕಾರಣವೆಂದು ಹೇಳಬೇಕು. ಮತ್ತು ‹‹ತದಾತ್ಮಾ ನಂ ಸ್ವಯಮಕುರುತ›› ಎಂಬುವ ಶ್ರುತಿಯಿಂದ ತಾನೇ ತನ್ನನ್ನು ಜಗತ್ತನ್ನಾಗಿ ಮಾಡಿತೆಂತಲೂ ಗೊತ್ತಾಗುತ್ತದೆ. ಆದಕಾರಣದಿಂದ ಕೇವಲ ಮಾಯೆಯು

ಉಪಾದಾನಕಾರಣವಲ್ಲ. ಕಿಂತು ಮೃತಶರೀರದಿಂದ ಕೇಶ ನಖಾದಿಗಳ ಉತ್ಪತ್ತಿಯಾಗದೆ ಆತ್ಮವಿಶಿಷ್ಟ ಶರೀರದಿಂದಾಗುವಂತೆ ಮಾಯಾವಿಶಿಷ್ಟನಾದ ಶಿವನಿಂದ ಜಗದುತ್ಪತ್ತಿಯಾಗುವದು. ಎಲೈ ಶಿವಾದ್ವೈತಿಯೇ? ನಾನಾದರೂ ನಿನ್ನಂತೆಯೇ ಮಾಯಾವಿಶಿಷ್ಟನಾದ ಈಶ್ವರನಿಂದ ಜಗದುತ್ಪತ್ತಿಯನ್ನು ಹೇಳುತ್ತೇನೆ. ನೀನೇನು ವಿಶೇಷವನ್ನು ಹೇಳಿದಂತಾಯಿತು. ಅಂದರೆ ಬ್ರಹ್ಮಾದ್ವೈತಿಯೇ? ನೀನು ಆ ಮೂಲಭೂತವಾದ ಮಾಯೆಯ ಉತ್ಪತ್ತಿಯನ್ನು ಯಾವದರಿಂದ ಹೇಳುವಿ? ನಾನು ಯಾವದರಿಂದಲೂ ಹೇಳುವದಿಲ್ಲ. ಅದು ಅನಾದಿಸಿದ್ಧವಾದದ್ದು. ಹಾಗಾದರೆ ಅದು ಬ್ರಹ್ಮಕ್ಕೆ ಬೇರೆಯಾಗಿರುವದೇನು? ಬ್ರಹ್ಮಕ್ಕೆ ಭಿನ್ನವಾದದ್ದು. ಹಾಗಾದರೆ ಬ್ರಹ್ಮಜ್ಞಾನದಿಂದ ಎಲ್ಲಾ ಜಗತ್ತಿನ ಜ್ಞಾನವಾಗಲಾರದು. ''ಆತ್ಮಕೃತೇಃ ಪರಿಣಾಮಾತ್'' ಎಂಬುವ ಸೂತ್ರದಿಂದ ಮಹರ್ಷಿಗಳು ಜಗತ್ತು ಬ್ರಹ್ಮ ಪರಿಣಾಮವೆಂದು ಒಪ್ಪಿರುವರು. ನೀನೂ ಬ್ರಹ್ಮದ ಪರಿಣಾಮವನ್ನು ಒಪ್ಪದಿದ್ದರೆ ಈ ಸೂತ್ರಕ್ಕೆ ವಿರುದ್ಧವಾಗಲಿಲ್ಲವೆ? ಎಲೈ ಶಿವಾದ್ವೈತಿಯೇ? ಬ್ರಹ್ಮದ ಪರಿಣಾಮವೇ ಜಗತ್ತೆಂದು ಹೇಳಿದರೆ ಬ್ರಹ್ಮವು ಜಗದಂತರ್ಗತಗಳಾದ ಅನರ್ಥ ಧರ್ಮಗಳಿಂದ ಕೂಡಿಕೊಂಡಂತಾಗಲಿಲ್ಲವೆ? ಅಂದರೆ ಅದು ಬ್ರಹ್ಮದ ಪರಿಣಾಮವಾದರೂ ಬ್ರಹ್ಮಕ್ಕೆ ಪ್ರಪಂಚದ ಅನರ್ಥಭೂತಗಳಾದ ವಿಕಾರಿತ್ವಾದಿ ದೋಷಗಳು ಬರುವದಿಲ್ಲ. ಹೇಗಂದರೆ ''ಯದಾತಮಸ್ತನ್ನದಿವಾನರಾತ್ರಿರ್ನಸನ್ನಚಾಸಚ್ಛಿವ ಏವಕೇವಲಃ ತದಕ್ಷರಂತತ್ಸವಿತುರ್ವರೇಣ್ಯಂ ಪ್ರಜ್ಞಾಚತಸ್ಮಾತ್ಪ್ರಸೃತಾಪುರಾಣೀ'' ಎಂಬುವ ಶ್ರುತ್ಯರ್ಥವನ್ನು ಹೇಳಿದರೆ ಬ್ರಹ್ಮಪರಿಣಾಮವನ್ನು ಒಪ್ಪಿದರೆ ಬ್ರಹ್ಮಕ್ಕೆ ವಿಕಾರಿತ್ವಾದಿ ದೋಷವು ಬರುವದೆಂಬ ನಿನ್ನ ಭೂತಭೀತಿಯು ತೊಲಗಬಹುದು. ಆಮೇಲೆ ನಿನಗೆ ಶುಷ್ಕವಾದವನ್ನು ಮಾಡಲಾಗಲಾರದು. ಯಾವ ಕಾಲದಲ್ಲಿ ಚಂದ್ರ ಸೂರ್ಯಾದಿ ತೇಜಸ್ಸಿಲ್ಲದ್ದಾಗಿಯೂ ದಿವಾರಾತ್ರಿಗಳಿಲ್ಲದೆಯೂ ನಾಮರೂಪಗಳಿಲ್ಲದೆಯೂ ಇದು ಸ್ಥೂಲವು ಸೂಕ್ಷ್ಮವಿದು ಚೇತನವಿದು ಅಚೇತನವಿದು ಇದು ಸತ್ತು ಇದು ಅಸತ್ತು ಎಂಬುವ ವ್ಯವಸ್ಥೆಯಿಲ್ಲದೆಯೂ ಕೇವಲ ತಮೋಮಯವಾಗಿತ್ತೊ ಆ ಕಾಲದಲ್ಲಿ ಕೇವಲ ಸ್ವಪ್ರಕಾಶನೂ ತನ್ನಲ್ಲಿಯೇ ಚಿದಚಿಚ್ಛಕ್ತಿಯುಳ್ಳವನೂ ಆದ ಪರಶಿವನೊಬ್ಬನೇ ಇದ್ದನು. ಆಮೇಲೆ ನಿತ್ಯಸಿದ್ಧವಾದ ಸೂರ್ಯಾಂತರ್ಗತವಾದ ಪರಶಿವವಸ್ತುವಿನಿಂದ ಆಗಿನ ತಮಸ್ಸನ್ನು ನಾಶಮಾಡಲು ಸಮರ್ಥವಾಗಿಯೂ ನಿತ್ಯಸಿದ್ಧವಾದ ಪ್ರಜ್ಞಾ (ಚಿಚ್ಛಕ್ತ್ಯಪರ ಪರ್ಯಾಯವುಳ್ಳ) ಜ್ಞಾನ ಶಕ್ತಿಯು ಆವಿ

ರ್ಘವಿಸಿತು. ಅನಂತರದಲ್ಲಿ ‚‚ಸೊಕಾಮಯತ ಬಹುಸ್ಯಾಂ ಪ್ರಜಾಯೆಯ'' ಎಂದು ಆ ಪರಶಿವಬ್ರಹ್ಮವು ಸಂಕಲ್ಪಮಾಡಿತು. ಆಮೇಲೆ ‚‚ಇದಂಸರ್ವಮಸೃಜತ'' ಈ ಎಲ್ಲಾ ಪ್ರಪಂಚವನ್ನು ಹುಟ್ಟಿಸಿತು. ಅನಂತರದಲ್ಲಿ ‚‚ತತ್ಸೃಷ್ಟ್ವಾ ತದೇವಾನು ಪ್ರಾವಿಶತ್'' ಮಣಿಮಾಲಿಕೆಯಲ್ಲಿ ಸೂತ್ರದಂತೆ ಪ್ರಪಂಚದಲ್ಲಿ ಸೇರಿಕೊಂಡಿತು. ತನ್ನಿಂದಾದ ಪ್ರಪಂಚದಲ್ಲಿ ತಾನೇ ಪ್ರವೇಶಿಸಿ ‚‚ಸಚ್ಚತ್ಯಚ್ಚಾಭವತ್'' ಸದಸತ್ಪ್ರ ಪಂಚರೂಪದಿಂದ ಬಹಳ ಪ್ರಕಾರವಾಗಿ ಪರಿಣತವಾಯಿತು. ಅಂದರೆ ಪರಶಿವ ಬ್ರಹ್ಮದಿಂದ ಮೊದಲು ಶಾಂತ್ಯತೀತೋತ್ತರೆ ಎಂಬ ಯರಡನೇ ಹೆಸರುಳ್ಳ ಚಿಚ್ಛ ಕ್ತಿಯ ವ್ಯಕ್ತಾವಸ್ಥೆಯು ಆಮೇಲೆ ಶಾಂತ್ಯತೀತ ಶಕ್ತಿಯು ಅನಂತರದಲ್ಲಿ ಶಾಂ ತಿಶಕ್ತಿಯು ಆಮೇಲೆ ಇಚ್ಛಾಜ್ಞಾನ ಕ್ರಿಯಾಶಕ್ತಿಗಳು ಅಭಿವ್ಯಕ್ತಗಳಾದವು. ಮೊದಲಿನ ಒಂದು ಶಕ್ತಿಯನ್ನು ಬಿಟ್ಟು ಉಳಿದ ಐದು ಶಕ್ತಿಗಳಿಂದ ಕೂಡಿದ ತತ್ವ ಪಂಚಕಕ್ಕೆ ಶುದ್ಧಾಧ್ವವೆಂದು ಹೆಸರು. ಚತುರ್ಮುಖ ಬ್ರಹ್ಮಾಪರ ಪರ್ಯಾಯ ಶುದ್ಧವಿದ್ಯೆಯಿಂದ ಅಶುದ್ಧವಾದ ಅವಿದ್ಯಾಶಕ್ತಿಯು (ಮಾಯಾಶಕ್ತಿಯು) ಹುಟ್ಟಿತು. ಇದಕ್ಕೆ ‚‚ಅಜ್ಞಾನಂಬಂಧಃ'' ಎಂಬುವ ಶಿವಸೂತ್ರವು ಬಂಧವನ್ನಾಗಿ ಹೇಳುತ್ತದೆ. ಇದರಿಂದ ಮುಂದೆ ಮೂವತ್ತು ತತ್ವಗಳು ಹುಟ್ಟಿದವು. ಇಷ್ಟು ಪ್ರಪಂಚವನ್ನು ಹೊಂದಿದ ಅನರ್ಥ ಧರ್ಮಗಳು ಪರಶಿವಬ್ರಹ್ಮದಲ್ಲಿ ಸಮಾವಿಷ್ಟಗ ಳಾಗುವದಿಲ್ಲ. ಹ್ಯಾಗಂದರೆ ಶಕ್ತಿಯು ಶಿವನ ಶರೀರರೂಪವಾಗಿದೆ. ಜೀವಾತ್ಮನ ಶರೀರಗತಗಳಾದ ಬಾಲ್ಯ ಯೌವ್ವನ ಮೊದಲಾದ ಧರ್ಮಗಳು ಶರೀರಿಯಾದ ಜೀವನಲ್ಲಿಲ್ಲದಿರುನಂತೆ ಶಿವನ ಶರೀರವಾದ ಶಕ್ತಿರೂಪವಾದ ಪ್ರಪಂಚದ ಅನರ್ಥ ಧರ್ಮಗಳು ಶಿವನಲ್ಲಿಲ್ಲವು. ಕಿಂತು ನಿರವದ್ಯತ್ವ ಅವಿಕಾರಿತ್ವ ಸರ್ವಜ್ಞತ್ವ ಸತ್ಯಸಂ ಕಲ್ಪಾದಿ ಧರ್ಮಗಳು ಶಿವನಲ್ಲಿರುವವು. ಶಿವಾದ್ವೈತಿಯೇ? ‚‚ನತಸ್ಯಕಾರ್ಯಂಕ ರಣಂಚವಿದ್ಯತೆ'' ಎಂಬುವ ಶ್ರುತಿಯಿಂದ ಬ್ರಹ್ಮವಸ್ತುವಿನ ಕಾರ್ಯವಿಲ್ಲೆಂದು ತಿಳಿದುಬರುವಕಾರಣ ಬ್ರಹ್ಮವು ಜಗತ್ಕಾರಣವಾಗಲಾರದು. ಅಂದರೆ ಪರಶಿವ ಬ್ರಹ್ಮವು ಕಾರ್ಯರೂಪವೆಂತಲೂ ಕಾರಣರೂಪವೆಂತಲೂ ‚‚ಶ್ರುತೇಸ್ತುಶಬ್ದ ಮೂಲತ್ವಾತ್'' ಎಂಬುವ ಸೂತ್ರದಿಂದ ಹೇಳಲ್ಪಟ್ಟಿದೆ. ಎಂದು ‚‚ವಿಕರಣತ್ವಾ ನ್ನೇತಿಚೇತ್ತದುಕ್ತಂ'' ಎಂಬುವ ಸೂತ್ರದಿಂದ ಗೊತ್ತಾಗುತ್ತದೆ ಸರ್ವಶಕ್ತಿಯುಳ್ಳ ಪರಮಾತ್ಮನು ತನ್ನ ಶಕ್ತಿಯ ಕಿಂಚದಂಶದಿಂದ ಪ್ರಪಂಚಸ್ವರೂಪನಾಗಿಯೂ ಸ್ವತಃ ಪ್ರಪಂಚಾತೀತನಾಗಿಯೂ ಇರುವನಾದುದರಿಂದ ಸ್ವಶಕ್ತಿಯ ಅವಿಭಾಗ ದೃಶೆಯಲ್ಲಿ ಎಲ್ಲಾ ಪ್ರಪಂಚವೂ ಶಕ್ತಿಯಲ್ಲಿ ಅಡಕವಾಗಿ ಆ ಶಕ್ತಿಯು ಶಿವನಲ್ಲಿ

ಕೂಡಿಕೊಂಡು ಹೋಗುವದು. ಆಗ ಬಾಹ್ಯಸ್ಥೂಲಪ್ರಪಂಚವು ಯಾವದೂ ಇಲ್ಲದ್ದರಿಂದ ಅವನ ಕಾರ್ಯವೂ ಇಲ್ಲ. ಕಾರ್ಯವಿಲ್ಲದಿದ್ದಾಗ ಆ ಪರಶಿವಬ್ರಹ್ಮವು ಕಾರಣವೂ ಅಲ್ಲವೆಂಬುವಲ್ಲಿ ಮೇಲಣ ಶ್ರುತಿಯ ತಾತ್ಪರ್ಯವೆಂದು ತಿಳಿಯಬೇಕು. ಇಲ್ಲದಿದ್ದರೆ ‹‹ಯತೋವಾ ಇಮಾನಿಭೂತಾನಿ ಜಾಯಂತೆ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ಬ್ರಹ್ಮ ತದ್ವಿಜಿಜ್ಞಾಸಸ್ವ›› ‹‹ಕಾರಣಂತುಧ್ಯೇಯಃ›› ಎಂಬುವ ಶ್ರುತಿಗಳು ಪ್ರಮಾಣಗಳಾಗಲಾರವು. ಈ ಶ್ರುತಿಯಿಂದ ಬ್ರಹ್ಮವು ನಿಮಿತ್ತಕಾರಣವೆಂತಲೂ ಉಪಾದಾನಕಾರಣವೆಂತಲೂ ಸ್ಪಷ್ಟವಾಗುವದು. ಪುರಾಣವಾದರೂ ಅಧ್ವಾನಪಧ್ವಪತಿಮಧ್ವ ವಿದೊವದಂತಿ| ಎಂದು ಹೇಳುತ್ತದೆ. ಇದರಿಂದಲೂ ಬ್ರಹ್ಮವು ಷಡಧ್ವರೂಪವಾದ ಪ್ರಪಂಚಸ್ವರೂಪವೆಂತಲೂ ಆ ಪ್ರಪಂಚರೂಪವಾದ ಅಧ್ವಕ್ಕೆ ಪತಿ (ನಿಯಾಮಕನು)ಯಂತಲೂ ಸ್ಪಷ್ಟವಾಯಿತು. ಇದಲ್ಲದೇ ‹‹ಜನ್ಮಾದ್ಯಸ್ಯಯತಃ›› ಎಂಬುವ ಸೂತ್ರದಿಂದ ಬ್ರಹ್ಮವು ಜಗತ್ಕಾರಣವೆಂದು ಸ್ಪಷ್ಟವಾಗಿ ತಿಳಿಯುತ್ತಿರಲು ಬ್ರಹ್ಮವು ಯಾವದಕ್ಕೂ ಕಾರಣವಲ್ಲವೆನ್ನುವದು ಶ್ರುತಿ ಸೂತ್ರಗಳಿಗೆ ವಿರುದ್ಧವು ಒಳ್ಳೇದು ಶಿವಾದ್ವೈತಿಯೇ? ಬ್ರಹ್ಮವು ಯಾವ ಪ್ರಯೋಜನದ ಸಲುವಾಗಿ ಜಗತ್ಸೃಷ್ಟಿಯಲ್ಲಿ ಪ್ರವೃತ್ತವಾಯಿತು? ಪ್ರಯೋಜನ ಮನುದ್ದಿಶ್ಯನಮಂದೋಪಿ ಪ್ರವರ್ತತೆ | ಆ ಬ್ರಹ್ಮವು ಅವಾಪ್ತ ಸಕಲಕಾಮುಗಳುಳ್ಳದ್ದಲ್ಲವೆ? ಅದಕ್ಕೆ ಯಾವದೂ ಒಂದು ಬೇಕಿಲ್ಲವೆಂದರೆ ಜಗತ್ಸೃಷ್ಟಿಯಲ್ಲಿ ಪ್ರವೃತ್ತಿಯು ಹೇಗೆ? ಲೋಕದಲ್ಲಿ ಕಂದುಕಖೇಲನ ಮೊದಲಾದ ಆಟಗಳಲ್ಲಿ ಏನೊಂದೂ ಪ್ರಯೋಜನವಿಲ್ಲದಿದ್ದರೂ ಆ ಆಟಗಳಲ್ಲಿ ಪ್ರವೃತ್ತಿಯು ಹೇಗೆ ಆಗುವದೋ ಅದರಂತೆ ಪರಮಾತ್ಮನು ಅವಾಪ್ತ ಸಕಲಕಾಮನಾಗಿದ್ದರೂ ಕೇವಲ ಲೀಲಾರ್ಥವಾಗಿ ಜಗತ್ಸೃಷ್ಟಿಯಲ್ಲಿ ಪ್ರವೃತ್ತನಾಗುವನು. ಇದೇ ತಾತ್ಪರ್ಯವನ್ನೇ ‹‹ಲೋಕವತ್ತು ಲೀಲಾಕೈವಲ್ಯಂ›› ಎಂಬುವ ಸೂತ್ರದಿಂದ ಹೇಳಿರುವರು. ಕೇವಲ ಲೀಲೆಯಿಂದಲೇ ಜಗತ್ತನ್ನು ಮಾಡಿದನೆಂದರೆ ಎಲ್ಲರನ್ನೂ ಸುಖಿಗಳನ್ನಾಗಿ ಏಕೆ ಮಾಡಲಿಲ್ಲ? ಅಂದರೆ ತಂದೆಯು ತನ್ನ ನಾಲ್ಕುಜನ ಮಕ್ಕಳಿಗೆ ತನ್ನ ದ್ರವ್ಯವನ್ನು ಎಲ್ಲರಮೇಲೆ ಸಮಾನವಾದ ಅನುಗ್ರಹದಿಂದಹಂಚಿಕೊಟ್ಟಮೇಲೆ ತಮ್ಮ ತಮ್ಮ ದುಷ್ಕರ್ಮದಿಂದ ಕೆಲವರು ಎಲ್ಲಾ ಹಣವನ್ನು ಕಳೆದುಕೊಂಡು ದುಃಖಿಗಳಾಗುವರು. ಕೆಲವರು ತಮ್ಮ ಸತ್ಕರ್ಮದಿಂದ ಸುಖಿಗಳಾಗುವರು. ಇದರಲ್ಲಿ ತಂದೆಗೇನಾದರೂ ಪಕ್ಷಪಾತಿತ್ವವು ಬರುವದೇನು? ಇಲ್ಲಾ. ಇದರಂತೆ ದೇವರು ಎಲ್ಲರಲ್ಲಿಯೂ ಸಮಾನವಾದ ಅನುಗ್ರಹವುಳ್ಳವ

ಶಾದರೂ ತಮ್ಮ ತಮ್ಮ ಸತ್ಕರ್ಮ ದುಷ್ಕರ್ಮ ಬಲದಿಂದ ಕೆಲವರು ಸುಖಿಗಳೂ ಮತ್ತೆ ಕೆಲವರು ದುಃಖಿಗಳೂ ಆಗುತ್ತಾರೆ. ಇದರಿಂದ ಸರ್ವೇಶ್ವರನಿಗೆ ಪಕ್ಷಪಾತಿ ಎಂದೆನ್ನಲಿಕ್ಕಾಗುವದಿಲ್ಲ. ಆದ್ದರಿಂದ ಅನಾದಿಗಳಾದ ನಾನಾ ಕರ್ಮಗಳ ವಾಸನೆಗಳಿಂದ ಜೀವರು ಅನಂತ ದುಃಖಭಾಗಿಗಳಾಗುತ್ತಾರೆ. ಆ ದುಃಖಗಳನಾಶಕ್ಕೆ ಶ್ರೀ ಶಿವಾನುಗ್ರಹದಿಂದ ಪ್ರಾಪ್ತವಾದ ಶಕ್ತಿ ವಿಶಿಷ್ಟ ಶಿವಾದ್ವೈತ ಜ್ಞಾನವೇ ಕಾರಣವು. ಅಸಂಗೋದಾಸೀನವಾದ ಪರಬ್ರಹ್ಮನಿಗೆ ಚಿದಾದಿ ಶಕ್ತಿಯೋಗವನ್ನು ಹೇಳುವದು ಶ್ರುತಿ ವಿರುದ್ಧವಲ್ಲವೆ? ಅಂದರೆ ಹಿಂದೆ ವೃತ್ತಿನಿತ್ಯತ್ವವಾದದಲ್ಲಿ ಪ್ರಸಂಗವಶದಿಂದ ಶಕ್ತಿ ವೈಶಿಷ್ಟ್ಯವನ್ನು ಸಾಧನಮಾಡಿದ್ದರೂ ಇಲ್ಲಿ ಪುನಃ ಬೇರೆ ಯುಕ್ತಿಗಳಿಂದ ಅದನ್ನೇ ಸ್ಥಾಪನೆಗೊಳಿಸುತ್ತೇನೆ. ಯಾಕಂದರೆ ಜಿಜ್ಞಾಸುಗಳಾದ ಮುಮುಕ್ಷುಗಳಿಗೆ ಪುನಃ ಪುನಃ ಹೇಳುವದರಿಂದ ಜ್ಞಾನದಾರ್ಢ್ಯರೂಪವಾದ ಪ್ರಯೋಜನವುಂಟು, ಶಕ್ತಿಯಿಂದ ಕೂಡಿದ್ದೇ ಬ್ರಹ್ಮವಲ್ಲದೇ ಶಕ್ತಿಯಿಂದ ರಹಿತವಾದದ್ದು, ಕಲ್ಲಿಗೆ ಸಮಾನವು, ಅದರ ಪೂಜಾಧ್ಯಾನ ಜ್ಞಾನಾದಿಗಳಿಂದ ಏನೊಂದೂ ಪ್ರಯೋಜನವಾಗಲಾರದು. ಆದ್ದರಿಂದ ಶಕ್ತಿ ವಿಶಿಷ್ಟವಾದದ್ದೇ ಪರಬ್ರಹ್ಮವು ಎಂದು ಹೇಳಬೇಕು. ಈ ವಿಷಯದಲ್ಲಿ ‹‹ಪರಾಸ್ಯ ಶಕ್ತಿರ್ವಿವಿಧೈವಶ್ರೂಯತೆ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ›› ಇತ್ಯಾದಿ ಶ್ರುತಿಗಳಿರುವವು. ಮತ್ತು ‹‹ನವೇನವಿನಾಶಕ್ತಿರ್ನಶಕ್ತಿರಹಿತಃ ಶಿವಃ | ಪುಷ್ಪಗಂಧವದನ್ಯೋನ್ಯಂ ಮಾರುತಾಂಬರಯೋರಿವ || ಶಿವಃ ಶಕ್ತ್ಯಾಯುಕ್ತೊ ಯದಿಭವತಿ ಶಕ್ತಃ ಪ್ರಭವಿತುಂ || ಎಂಬುವ ಅಭಿಯುಕ್ತೋಕ್ತಿಯೂ ಪ್ರಮಾಣವಾಗಿದೆ. ಶಿವಾದ್ವೈತಿಯೇ? ‹‹ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ›› ಎಂಬುವ ಶ್ವೇತಾಶ್ವತರ ಶ್ರುತಿ ವಾಕ್ಯವು ನಿನ್ನಿಂದ ಅಂಗೀಕರಿಸಲ್ಪಟ್ಟ ಶಕ್ತಿ ವಿಷಯದಲ್ಲಿ ಪ್ರಮಾಣವಾಗುವದಿಲ್ಲ. ಯಾಕಂದರೆ ‹ ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ›› ‹‹ಯದಾತಮಸ್ತನ್ನದಿವಾನರಾತ್ರಿಃ›› ಇತ್ಯಾದಿ ಪೂರ್ವಸಂದರ್ಭದಿಂದಲೂ ‹‹ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ›› ಈ ಪ್ರಕಾರವಾದ ಉತ್ತರಸಂದರ್ಭದಿಂದಲೂ ನಮ್ಮಿಂದ ಸ್ವೀಕೃತವಾದ ಆವರಣ ಸ್ವಭಾವವುಳ್ಳ ಅವಿದ್ಯಾಶಕ್ತಿಯು (ಮಾಯೆಯು) ಸಿದ್ಧಿಸುವದು ಎಂದು ಹೇಳಿದರೆ ತಮಃ ಪ್ರಧಾನ ಶಬ್ದಗಳು ಸಂಗತಗಳಾಗುವವು ಇಲ್ಲದಿದ್ದರೆ ಆ ಶಬ್ದಗಳು ಯುಕ್ತಗಳಾಗಲಾರವು. ಆದ್ದರಿಂದ ಭಾವರೂಪವೂ ಜಡವೂ ಆದ ಅವಿದ್ಯೆಯಲ್ಲಿಯೇ ‹‹ಪರಾಸ್ಯಶಕ್ತಿಃ›› ಎಂಬುವ ಶ್ರುತಿಯ ತಾತ್ಪರ್ಯವು. ಮತ್ತು ಎಲೈ ವೀರಶೈವನೆ ನಿನ್ನಿಂದ ಅಂಗೀಕರಿಸ

ಲ್ಪಟ್ಟ ಶಕ್ತಿಯು ಶಿವನಿಗಿಂತಲೂ ಭಿನ್ನವೊ ಅಭಿನ್ನವೊ? ಭಿನ್ನವೆಂದರೆ ನಿನ್ನ ಶಿವಾದ್ವೈತಕ್ಕೆ ಹಾನಿಯು ಅಭಿನ್ನವೆಂದರೆ ‚‚ತಮಆಸೀತ್'' ‚‚ಆಸೀದಿದಂತಮೋಭೂತಂ'' ಇವೇ ಮೊದಲಾದ ಶ್ರುತಿಗಳಿಂದ ಪ್ರತಿಸಿತ್ಯದಲ್ಲಿ ತೋರುವ ಅಂಧಕಾರದಂತೆ ಆವರಣಸ್ವಭಾವವುಳ್ಳದ್ದು ಶಕ್ತಿಯೆಂದು ತೋರುತ್ತದಂದಮೇಲೆ ಅಸಂಗೋದಾಸೀನರೂಪನೂ ಸ್ವತಃ ಪ್ರಕಾಶವುಳ್ಳವನೂ ಆದ ಶಿವನ ಅದ್ವೈತಸ್ವರೂಪವನ್ನು ಆ ಶಕ್ತಿಗೆ ಹೇಳುವದುಚಿತವಲ್ಲ. ಮತ್ತು ಎಲೈ ಪರಿಣಾಮವಾದಿಯಾದ ವೀರಶೈವನೆ? ನಿನ್ನ ವೀರಶೈವಮತಾನುಸಾರವಾಗಿ ಮೂವತ್ತಾರು ತತ್ವಗಳಲ್ಲಿ ಸಾಂಖ್ಯರು ಸ್ವೀಕರಿಸುವ ಇಪ್ಪತ್ತೈದು ತತ್ವಗಳುಳ್ಳ ಪುರುಷತತ್ವವನ್ನು ಹೇಳಿ ಆ ಪುರುಷತತ್ವಕ್ಕೆ ಕಲಾ ವಿದ್ಯಾ ರಾಗ ಕಾಲ ನಿಯತಿ ಎಂಬ ಪಂಚಕಂಚುಕವುಳ್ಳತನವನ್ನು ಸ್ವೀಕರಿಸಿ ಆಮೇಲೆ ಮಾಯಾ ಶುದ್ಧವಿದ್ಯಾ ಈಶ್ವರ ಸದಾಶಿವ ಶಕ್ತಿ ಶಿವರೂಪಗಳಾದ ಆರು ತತ್ವಗಳನ್ನು ಸ್ವೀಕರಿಸುವ ನೀನೂ ಕೂಡ ಶಕ್ತಿ ತತ್ವಕ್ಕಿಂತಲೂ ವಿಲಕ್ಷಣವಾಗಿ ಜಡವಾದ ಮೂವತ್ತೊಂದನೇ ಮಾಯಾಶಕ್ತಿಯನ್ನು ಸ್ವೀಕರಿಸುತ್ತೀಯಷ್ಟೆ? ಅಂದಮೇಲೆ ಅಂಥ ಜಡವಾದ ಆವರಕವಾದ ಅಜ್ಞಾನರೂಪವಾದ ಮಾಯಾಶಕ್ತಿಗೆ ಅಜಡವಾದ ಪರಶಿವಬ್ರಹ್ಮದ ತಾದಾತ್ಮ್ಯವು ಘಟಿಸುವದಿಲ್ಲವಾದ್ದರಿಂದ ನಿನ್ನ ಶಿವಾದ್ವೈತ ಸಿದ್ಧಾಂತವೇ ವುಳಿಯಲಿಲ್ಲ. ಹಾಗಾದರೆ ಶಿವನಿಗೂ ಶಕ್ತಿಗೂ ಭೇದವನ್ನು ಹೇಳುವ ‚‚ಪರಾಸ್ಯಶಕ್ತಿಃ'' ಎಂಬುವ ಶ್ರುತಿವಾಕ್ಯಕ್ಕೆ ಪ್ರಾಮಾಣವು ಹೇಗೆ? ಅಂದರೆ ಶಕ್ತಿ ಸ್ವಭಾವ ನಿಸರ್ಗಸ್ವರೂಪ ಎಂಬುವ ಪರ್ಯಾಯ ಶಬ್ದಗಳಿಂದ ಶಕ್ತಿಯಂದರೆ ಆ ಬ್ರಹ್ಮದ ಸ್ವರೂಪವೆಂತಲೇ ಹೇಳಬೇಕು. ನನ್ನ ಶಕ್ತಿಯು ಶಿವನ ಶಕ್ತಿಯು ಎಂಬುವ ವ್ಯವಹಾರವು ರಾಹೋಃಶಿರಃ (ರಾಹುವಿನ ತಲೆಯು) ನನ್ನ ಆತ್ಮವು ನನ್ನ ರೂಪವು ಎಂಬುವಲ್ಲಿ ಹ್ಯಾಗೊ ಹಾಗೆ ಅಭೇದದಲ್ಲಿ ತಾತ್ಪರ್ಯವೆಂದು ತಿಳಿಯತಕ್ಕದ್ದು. ಆದ್ದರಿಂದ ‚‚ಪರಾಸ್ಯಶಕ್ತಿಃ'' ಎಂಬುವ ಶ್ರುತಿಯು ಬ್ರಹ್ಮಸಮಾನವಾದ ಸತ್ತುಳ್ಳ ಒಂದು ಶಕ್ತಿ ತತ್ವಾಂತರವನ್ನು ಸಾಧನ ಮಾಡಲು ಸಮರ್ಥವಾಗಲಾರದು. ಶ್ರುತಿ ಸ್ಮೃತಿಗಳಲ್ಲಿ ಶಕ್ತಿ ಶಬ್ದವ್ಯವಹಾರವು ನಮ್ಮಿಂದ ಅಂಗೀಕರಿಸಲ್ಪಟ್ಟ ಮಿಥ್ಯಾಭೂತವಾದ ಮಾಯಾಶಕ್ತಿಯಲ್ಲಿಯೇ ಪರ್ಯವಸನ್ನವಾಗುತ್ತದೆಂದು ತಿಳಿಯಬೇಕು. ಎಲೈ ವಿವರ್ತವಾದಿಯಾದ ಬ್ರಹ್ಮಾದ್ವೈತಿಯೇ? ಈ ನಿನ್ನ ಬಹು ವಿಸ್ತಾರವಾದ ಪೂರ್ವಪಕ್ಷವನ್ನೇ ಮೊದಲು ಖಂಡಿಸಿ ಆಮೇಲೆ ಮೂವತ್ತಾರು ತತ್ವಗಳನ್ನು ನಿರೂಪಿಸು

ವೆಸು. ಆ ನಿರೂಪಣವನ್ನು ಕೇಳಿದೊಡಾದರೂ ಸಂಶಯಾದಿಗಳು ತೊಲಗಿ ಈ ನನ್ನ ಶಿವಾದ್ವೈತಮತವನ್ನು ಅಂಗೀಕರಿಸಬಹುದು. ಆದ್ದರಿಂದ ಸಾವಧಾನ ಚಿತ್ತ ದಿಂದ ಕೇಳು. ಅಧ್ಯಾಸವೆಂತಲೂ ಅವಿದ್ಯೆಯಂತಲೂ ಮಾಯೆಯಂತಲೂ ಅಜ್ಞಾನವೆಂತಲೂ ಹೇಳುವ ಒಂದು ಜಡವಾದ ಪದಾರ್ಥವು ಸಿದ್ಧವಾದರೆ ಜಗತ್ತು ಅದರ ಪರಿಣಾಮವು ಬ್ರಹ್ಮದ ವಿವರ್ತವೆಂದು ಹೇಳಿ ಶ್ರುತಿ ಸ್ಮೃತ್ಯಾದಿಗಳಲ್ಲಿರುವ ಶಕ್ತಿ ಶಬ್ದಕ್ಕೆ ನೀನು ಒಪ್ಪಿಕೊಳ್ಳುವ ಅವಿದ್ಯಾಶಕ್ತಿಯೆಂದು ಅರ್ಥಮಾಡಬಹುದು. ಆದರೆ ಆ ನಿನ್ನ ಅಧ್ಯಾಸಪದಾರ್ಥವೇ ಇಲ್ಲವು. ಅದು ಬ್ರಹ್ಮದಲ್ಲಿ ಇದೆ ಎಂದು ಹೇಳಿದರೆ ಬ್ರಹ್ಮಕ್ಕೂ ಆ ಅವಿದ್ಯಾಶಕ್ತಿಗೂ ಯಾವಸಂಬಂಧವಿಲ್ಲದಿರುವದರಿಂದ ಬ್ರಹ್ಮದಲ್ಲಿ ಅವಿದ್ಯೆಯು ಯಾವುದಾದರೂ ಒಂದು ಸಂಬಂಧವಿಲ್ಲದಿದ್ದರೆ ಇರಲಾರದು. ಬ್ರಹ್ಮಕ್ಕೂ ಅವಿದ್ಯೆಗೂ ಯಾವದಾದರೊಂದು ಸಂಬಂಧವನ್ನು ನೀನು ಒಪ್ಪಿಕೊಳ್ಳುತ್ತಿದ್ದರೆ ಅದು ಯಾವ ಸಂಬಂಧವು? ಸಂಯೋಗವೋ? ಅಥವಾ ಸಮವಾಯವೊ? ಸ್ವರೂಪಸಂಬಂಧವೊ? ಸಂಯೋಗವನ್ನು ನೀನು ಹೇಳಿದರೆ ಅವೆರಡೂ ದ್ರವ್ಯಗಳಾಗಬೇಕು. ದ್ರವ್ಯದ್ರವ್ಯಯೋಃ ಸಂಯೋಗಃ | ಎಂದು ನಿಯಮವಿರುವದು. ಅವೆರಡೂ ದ್ರವ್ಯಗಳೆಂದರೆ ಅವುಗಳಲ್ಲಿ ಗುಣಕ್ರಿಯೆಗಳನ್ನು ಹೇಳಬೇಕಾಗುವದು. ಗುಣಕ್ರಿಯೆಗಳಿಂದ ರಹಿತವಾದದ್ದು ದ್ರವ್ಯಪದಾರ್ಥವಾಗುವದಿಲ್ಲ. ಘಟಪಟಗಳಲ್ಲಿ ಗುಣಕ್ರಿಯೆಗಳು ಕಂಡುಬರುವದರಿಂದ ಅವುಗಳು ದ್ರವ್ಯಗಳಾಗುವವು. ನೀನು ಒಪ್ಪುವ ಬ್ರಹ್ಮವು ಗುಣರಹಿತವಲ್ಲವೆ? ಅದಕ್ಕೆ ದ್ರವ್ಯವೆಂದು ಹೇಗೆ ಹೇಳುವಿ? ಮತ್ತು ಅವಿದ್ಯೆಯು ದ್ರವ್ಯವಲ್ಲವೆಂದು ನೀನೇ ಹೇಳುತ್ತೀಯಷ್ಟೆ? ಆದ್ದರಿಂದ ಅವೆರಡಕ್ಕೆ ಸಂಯೋಗ ಸಂಬಂಧವು ಸಂಭವಿಸುವದಿಲ್ಲ. ಸಮವಾಯವೂ ಕೂಡ ಸಂಭವಿಸುವದಿಲ್ಲ. ಘಟಾದೀನಾಂ ಕಪಾಲಾದೌದ್ರವ್ಯೇಷುಗುಣಕರ್ಮಣೋಃ | ತೇಷುಜಾತೇಶ್ಚಸಂಬಂಧಃ ಸಮವಾಯಃ ಪ್ರಕೀರ್ತಿತಃ|| ಅಂದರೆ ಅವಯವಾವಯವಿಗಳಿಗೂ ದ್ರವ್ಯದಲ್ಲಿ ಗುಣಕರ್ಮಗಳಿಗೂ ದ್ರವ್ಯದಲ್ಲಿ ಜಾತಿಗೂ ಯಾವ ಸಂಬಂಧವೊ? ಅದೇ ಸಮವಾಯ ಸಂಬಂಧವೆಂದು ನಿಯಮವಿರುವದರಿಂದ ಬ್ರಹ್ಮ ಮತ್ತು ಅವಿದ್ಯೆಗಳಿಗೆ ಅವಯವಾವಯವಿಭಾವವನ್ನು ಒಪ್ಪಿಕೊಳ್ಳದ ನಿನಗೆ ಅವುಗಳ ಸಮವಾಯಸಂಬಂಧವನ್ನು ಕೂಡ ಹೇಳುವದು ಯುಕ್ತವಲ್ಲ. ಸ್ವರೂಪ ಸಂಬಂಧದಿಂದ ಬ್ರಹ್ಮದಲ್ಲಿ ಅವಿದ್ಯೆಯು ಇರುತ್ತದೆಂದರೆ ಸ್ವರೂಪ ಸಂಬಂಧವೆಂದಲ್ಲಿ ಸ್ವರೂಪವು ಅನುಯೋಗಿ ಸ್ವರೂಪವೊ? ಪ್ರತಿಯೋಗಿ ಸ್ವರೂಪವೊ? ಅವಿದ್ಯೆಗೆ ಬ್ರಹ್ಮಸಮಾನವಾದ ಸತ್ಯತ್ವವಿಲ್ಲದಿರುವದರಿಂದ ಅನುಯೋಗಿ

ರೂಪ ಬ್ರಹ್ಮದಸ್ವರೂಪವು ಅವಿದ್ಯೆಗೆ ಸಂಭವಿಸುವದಿಲ್ಲ. ಆದ್ದರಿಂದ ಅವಿದ್ಯೆಯು ಬ್ರಹ್ಮದಲ್ಲಿ ಯಾವ ಸಂಬಂಧದಿಂದಿರುವದು ? ಅವೆರಡಕ್ಕೆ ಕಲ್ಪಿತವಾದ ಸಂಬಂಧ ವನ್ನು ಹೇಳುತ್ತೇನೆ. ಅಂದರೆ ಯಾವದರಿಂದ ಕಲ್ಪಿತವಾದ ಸಂಬಂಧವನ್ನು ಹೇಳು ವಿ, ಮೂಲಾವಿದ್ಯೆಯಿಂದ ಕಲ್ಪಿತವಾದ ಸಂಬಂಧವನ್ನು ಹೇಳುವೆನು. ಇದೆಂಥ ಹುಚ್ಚುತನವು ಆ ನಿನ್ನ ಅವಿದ್ಯೆಯು ಇದ್ದರಲ್ಲವೆ ಅದು ಮತ್ತೊಂದನ್ನು ಕಲ್ಪನೆಮಾ ಡುವದು ತಾಯಿಯೇ ಇಲ್ಲವೆನ್ನುವಾಗ ತಾಯಿಯು ಮಗನನ್ನು ಹಡೆದಳೆಂದು ಹೇ ಳುವದು ಹುಚ್ಚುತನವಲ್ಲವೆ? ಅವಿದ್ಯೆಗೆ ಇರಲಿಕ್ಕೆ ಸ್ಥಲವೇ ಇಲ್ಲದಿರುವದರಿಂದಲೂ ನಿನ್ನ ಮತಾನುಸಾರವಾಗಿ ಅದು ಸ್ವತಂತ್ರವಾಗಿರಲಾರದು. ಆದ್ದರಿಂದಲೂ ಅದು ಇಲ್ಲವೇ ಇಲ್ಲವೆಂದು ಹೇಳುವಾಗ ಅದು ಒಂದು ಸಂಬಂಧವನ್ನು ಕಲ್ಪಿಸಿಕೊಂಡು ಆ ಸಂಬಂಧದಿಂದ ಬ್ರಹ್ಮದಲ್ಲಿರುತ್ತದೆಂದು ಹೇಳುವ ನಿನ್ನ ಮಾತಿಗೆ ಯಾರು ಮರು ಳಾಗಬೇಕು? ಮತ್ತು ಬ್ರಹ್ಮವು ಪ್ರಕಾಶರೂಪವಾಗಿರುವದರಿಂದಲೂ ಅವಿದ್ಯೆಯು ತಮೋರೂಪವಾಗಿರುವದರಿಂದಲೂ ಅವೆರಡಕ್ಕೆ ಪರಸ್ಪರ ಸಂಬಂಧವಿರಲಾರದು. ತೇಜಸ್ತಿಮಿರಗಳು ಒಂದು ಕಡೆಯಲ್ಲಿರಲಾರವಷ್ಟೆ? ಅಂದರೆ ಗೂಬೆಯ ನೇತ್ರದಲ್ಲಿ ತೇಜಸ್ಸಿದ್ದರೂ ಅದರೊಡನೆ ಅಂಧಕಾರವು ಕಂಡುಬರುವಂತೆ ಪ್ರಕಾಶರೂಪ ವಾದ ಬ್ರಹ್ಮದೊಡನೆ ತಮೋರೂಪವಾದ ಅವಿದ್ಯೆಯ ಸಂಬಂಧವನ್ನು ಹೇಳು ತ್ತೇನೆಂದರೆ? (ದಿವಾಂಧಾಃ ಪ್ರಾಣಿನಃ ಕೇಚಿದ್ರಾತ್ರಾವಂಧಾಸ್ತಥಾಪರೆ ಕೇಚಿದ್ದಿ ವಾಚರಾತ್ರೌಚಪ್ರಾಣಿಸ್ತುಲ್ಯದೃಷ್ಟಯಃ) ಎಂಬುವ ಸ್ಮೃತಿಯಂತೆ ಗೂಬೆಯು ಅಲ್ಪದೃಷ್ಟಿಯುಳ್ಳದ್ದಾದ್ದರಿಂದ ಹಗಲು ಸೂರ್ಯನ ತೇಜಸ್ಸಿನಿಂದ ದೃಷ್ಟಿಯು ಕಡಿಮೆಯಾಗುವದರಿಂದ ಹಗಲು ಹೊತ್ತಿನಲ್ಲಿ ಅದರ ಕಣ್ಣು ಕಾಣುವದಿಲ್ಲ ವೆಂದು ಹೇಳಬೇಕೇ ಹೊರ್ತು ಅದರ ನೇತ್ರದಲ್ಲಿ ತೇಜಸ್ಸಿನೊಡನೆ ಅಂಧಕಾ ರವಿದ್ದ ಮೂಲಕ ಅದರ ಕಣ್ಣು ಕಾಣಿಸುವದಿಲ್ಲವೆಂದು ಹೇಳಬಾರದು. ಇದೇ ಕಾರಣವನ್ನೇ ಹೇಳಿದರೆ ರಾತ್ರಿಯಲ್ಲಿಯೂ ಕೂಡ ದರ್ಶನವಿಲ್ಲದೇ ಅದು ಯಾವಾಗಲೂ ಅಂಧವಾಗಿರಬೇಕು. ಅದಕ್ಕೆ ದಿವಾಂಧವೆಂಬುವ ಹೆಸರು ವ್ಯರ್ಥ ವಾಗಬೇಕು. ಆದ್ದರಿಂದ ನಿನ್ನ ಅವಿದ್ಯೆಯು ಬ್ರಹ್ಮದಲ್ಲಿ ಯಾವ ಸಂಬಂಧದಿಂದಿ ರುವದು? ಬ್ರಹ್ಮವು ನಿರಂಶವಾಗಿರುವದರಿಂದ ಅದಕ್ಕೆ ಊರ್ಧ್ವಾಧೋಭಾಗಗಳಿ ಲ್ಲಾದ್ದರಿಂದ ಚಂದ್ರನಲ್ಲಿ ಕಲಂಕವಿದ್ದಂತೆ ಬ್ರಹ್ಮದಲ್ಲಿ ಅವಿದ್ಯೆಯು ಇರಲಾರದು. ನೀನು ಬ್ರಹ್ಮಕ್ಕೂ ಅವಿದ್ಯೆಗೂ ಅವಿರೋಧವನ್ನು ಹೇಳುವ ಪಕ್ಷದಲ್ಲಿ ಅವಿರೋ ಧಿತಪೂಕರ್ವನಾವಿನಾಶ್ಯಂ ವಿನಿವರ್ತಯೇತ್ | ಎಂದು ನಿವಾನ್ಯಾಚಾರ್ಯರು

ಹೇಳುವದೇಕೆ? ಅವಿರೋಧಿಯಾದ ಕರ್ಮವು ಅವಿದ್ಯೆಯನ್ನು ನಾಶಮಾಡುವದಿಲ್ಲ ವೆಂದಮೇಲೆ ಅವಿರೋಧಿಯಾದ ಬ್ರಹ್ಮ ಪ್ರಕಾಶವು ಅವಿದ್ಯೆಯನ್ನು ನಾಶಮಾಡು ವದೆಂದು ಹೇಳುವದು ಬಾಲಕರ ಮಾತು. ಇದಲ್ಲದೆ ಅವಿದ್ಯೆಯು ಅನಾದಿಯೆಂದು ಹೇಳುವದು ಯುಕ್ತವಲ್ಲ. ಯಾಕಂದರೆ ಯಾವದು ಅನಾದಿಯೊ? ಅದು ಘಟಾ ದಿಗಳಂತೆ ಅವಯವಸಹಿತವಾಗಿರಲಾರದು. ಆದ್ದರಿಂದ ನೀನು ಅವಿದ್ಯೆಗೆ ಹೇಳುವ ಅನಾದಿತ್ವವೂ ಕೂಡ ಯುಕ್ತವಲ್ಲ. ಅದಕ್ಕೆ ಅನಾದಿತ್ವವನ್ನಂಗೀಕರಿಸಿದರೆ ಅದು ಸ್ವತಃ ಸಿದ್ಧವಾಗಬೇಕು. ಪರತಃ ಸಿದ್ಧವೆಂದರೆ ಅದು ಘಟಾದಿಗಳಂತೆ ಕಾರ್ಯ ವಾದ್ದರಿಂದದಕ್ಕೊಂದು ಕಾರಣಾಂತರವನ್ನು ಕಲ್ಪಿಸಬೇಕು. ಹೀಗೆ ಕಾರಣಾಂತ ರವನ್ನು ಕಲ್ಪಿಸಿದರೆ ಆ ಕಾರಣಕ್ಕೊಂದು ಕಾರಣಾಂತರವನ್ನು ಹೇಳಬೇಕು. ಇದರಂತೆ ಹೇಳುತ್ತ ಹೋದರೆ ಅನವಸ್ಥಾದೋಷವು ಪ್ರಾಪ್ತವಾಗುವದು. ಇದ ಲ್ಲದೇ ಅವಿದ್ಯೆಯು ಸ್ವಸತ್ತೆಯೇ ಇಲ್ಲದಿರುವಾಗ ಜಗದಾಕಾರವಾಗಿ ಪರಿಣಮಿ ಸುವದಂತೂ ದೂರೇ ಉಳಿಯಿತು. ಮತ್ತು ಜಡವಾದ್ದರಿಂದ ಜಗತ್ಪರಿಣಾಮದಲ್ಲಿ ಪ್ರವೃತ್ತಿಯು ಸಂಭವಿಸಲಾರದು. ಬ್ರಹ್ಮವು ಅಸಂಗೋದಾಸೀನವಾದ್ದರಿಂದದಕ್ಕೆ ಪ್ರೇರಕತನವೂ ಸಂಭವಿಸಲಾರದು. ಸೂಜಿಗಲ್ಲಿನ ಸಾನ್ನಿಧ್ಯಮಾತ್ರದಿಂದ ಸೂಜಿ ಯಲ್ಲಿ ಚಲನಕ್ರಿಯೆಯು ಹುಟ್ಟುವಂತೆ ಬ್ರಹ್ಮದ ಸಾನ್ನಿಧ್ಯಮಾತ್ರದಿಂದಲೇ ಅವಿ ದ್ಯೆಗೆ ಜಗತ್ಪರಿಣಮನಕ್ರಿಯೆಯು ಸಂಭವಿಸುತ್ತದೆಂದರೆ ಭಿನ್ನಭಿನ್ನ ದೇಶಗಳಲ್ಲಿದ್ದ ಎರಡು ಪದಾರ್ಥಗಳಿಗೆ ಸಾನ್ನಿಧ್ಯವೆಂದು ನಿಯಮವಿರುವದರಿಂದಲೂ ಬ್ರಹ್ಮಕ್ಕೆ ಬಾಹ್ಯವಾದ ದೇಶವಿಲ್ಲದಿರುವದರಿಂದಲೂ ಬ್ರಹ್ಮದಲ್ಲಿಯೇ ಇರುವ ಅವಿದ್ಯೆಗೆ ಲೋಹಪಿಂಡದಲ್ಲಿ ಜಡಿದ ಸೂಚಿಕೆಯಂತೆ ಯಾವದೊಂದು ಕ್ರಿಯೆಯೂ ಸಂಭವಿ ಸಲಾರದಾದ್ದರಿಂದ ನಿನ್ನ ಅವಿದ್ಯೆಯು ವಿಶ್ವಾಕಾರವಾಗಿ ಪರಿಣಮನಕ್ರಿಯೆಯು ಳ್ಳದ್ದಾಗಲಾರದು. ಜಗದ್ರೂಪವಾಗಿ ಅವಿದ್ಯೆಯು ಪರಿಣಮಿಸುತ್ತದೆ. ಬ್ರಹ್ಮವು ವಿವರ್ತಿಸುತ್ತದೆಂದು ಹೇಳುವದು ತಪ್ಪು. ಆದ್ದರಿಂದ ಬ್ರಹ್ಮಾವಿದ್ಯೆಗಳಿಗೆ ತೇಜ ಸ್ತಿಮಿರಗಳಂತೆ ಆಶ್ರಯಾಶ್ರಯಿಭಾವವು ಸಂಭವಿಸಲಾರದು ಅವುಗಳು ಅವಿರೋ ಧಿಗಳಂದರೆ ಅವುಗಳಿಗೆ ನಿವರ್ತ್ಯನಿವರ್ತಕ ಭಾವವು ಸಂಗತವಾಗಲಾರದು. ಆದ್ದ ರಿಂದ ನಿನ್ನೀ ಅವಿದ್ಯೆಯು ಗಗನಕುಸುಮಾಯಮಾನವೇ ಸರಿ. ಎಲೈ ವೀರಶೈವನೆ? ನಿನ್ನ ಲಿಂಗಾಂಗಸಾಮರಸ್ಯರೂಪವಾದ ಶಿವಾದ್ವೈತಮತವನ್ನು ಎಲ್ಲಾ ದ್ವೈತ ಮತಕ್ಕಿಂತಲೂ ವಿಲಕ್ಷಣವಾಗಿ ಸಾಧನಮಾಡಬೇಕಷ್ಟೆ? ನೀನಂತೂ ವಿವರ್ತ ವಾದಿಯಾದ ನನ್ನಿಂದ ಸ್ವೀಕರಿಸಲ್ಪಡುವ ಅಧ್ಯಾಸವನ್ನು (ಅವಿದ್ಯೆಯನ್ನು)

ಸ್ವೀಕರಿಸಲು ಸಮ್ಮತಿಸುವದೇ ಇಲ್ಲವು. ಅದ್ವೈತಮತವಾದರೂ ಅಧ್ಯಾಸವನ್ನು ಸ್ವೀಕರಿಸದಿದ್ದರೆ ಸಿದ್ಧಿಸಲಾರದು. ಅದ್ವೈತವು ಅಧ್ಯಾಸಾಧೀನವಾಗಿದೆ, ಅಧ್ಯಾಸವಿಲ್ಲದೇ ಅದ್ವೈತವುನಿರ್ವಾಹವಾಗಲಾರದು. ವಿಶ್ವೋಪಾದಾನಕಾರಣವೂ ಮಿಥ್ಯಾ ಪ್ರತ್ಯಯ ರೂಪವೂ ಆದ ಅವಿದ್ಯೆಯನ್ನು ಸ್ವೀಕರಿಸದಮೇಲೆ ನಿನ್ನೀ ಶಿವಾದ್ವೈತ ಮತವನ್ನಾದರೂ ನೀನು ಹೇಗೆ ಉಳಿಸಿಕೊಳ್ಳುವಿ. ಅಂದರೆ ವಿವರ್ತವಾದಿಯೇ ಕೇಳು, ನಿನ್ನ ಪ್ರಚ್ಛನ್ನಬೌದ್ಧಮತವನ್ನು ಬಿಡು? ವೀರಶೈವರು ಸಮ್ಮತಿಸಿದ ಶಿವಾದ್ವೈತ ಸಿದ್ಧಾಂತದಲ್ಲಿ ಅನುಕೂಲವಾದ ಸಾರಸ್ವತ ಸೂತ್ರವು ಹೇಳುವದೇನಂದರೆ ‹‹ಸನ್‌ಹೃದಯಪ್ರಕಾಶೋಭವನಸ್ಯ ಕ್ರಿಯಾಯಾಭವತಿಕರ್ತಾ | ಸ್ವೈವಕ್ರಿಯಾ ವಿಮರ್ಶಃ ಸ್ವಸ್ಥಾಕ್ಷುಭಿತಾಚ ವಿಶ್ವವಿಸ್ತಾರಾ || ಇದರ ಅರ್ಥವೇನಂದರೆ ಹೃದಯದಲ್ಲಿರುವ ಪ್ರಕಾಶರೂಪನಾದ ಪರಮಾತ್ಮನು ಇರುತ್ತಾನೆಂದು ಹೇಳಬೇಕು. ಯಾಕಂದರೆ ಹೃದಯಂತದ್ವಿಜಾನೀಯಾದ್ವಿಶ್ವಸ್ಯಾಯತನಂ ಮಹತ್ | ಎಂದು ಶ್ರುತಿಯಿರುವದಷ್ಟೆ? ಇಲ್ಲಿ ಸನ್ ಮತ್ತು ಹೃದಯಪ್ರಕಾಶ ಎಂಬುವ ಶಬ್ದಗಳಿಂದ ಪರಮೇಶ್ವರನಿಗೆ ಸದ್ರೂಪ ಚಿದ್ರೂಪಗಳು ಹೇಳಲ್ಪಟ್ಟವು. ಆತ್ಮನಿಗೆ ಸದ್ರೂಪವನ್ನು ಒಪ್ಪದಪಕ್ಷದಲ್ಲಿ ಒಪ್ಪದೆ ಇದ್ದವನಿಗೆ ಸ್ವಸತ್ತೆಯೇ ಇಲ್ಲವಾಗಿ ಸರ್ವಾನರ್ಥವು ಪ್ರಾಪ್ತವಾಗುವದು. ತಾನೇ ಬ್ರಹ್ಮಾಭಿನ್ನವಾಗಿದ್ದಾನಷ್ಟೆ ? ಚಿದ್ರೂಪವನ್ನು ಹೇಳದಿದ್ದರೆ ಜಗದಾಂಧ್ಯಪ್ರಸಂಗವು ಬರುವದು ಯಾವ ವಿಷಯದಲ್ಲಾದರೂ ಅರುವಿಲ್ಲದೇ ಹೋಗಬೇಕು. ‹‹ಅಸ್ಯೈವಾನಂದಸ್ಯಾನ್ಯಾನಿಭೂತಾನಿಮಾತ್ರಾ ಮುಪಜೀವಂತಿ›› ಎಂಬುವ ಶ್ರುತಿಯಿಂದ ಆನಂದರೂಪವು ಸಿದ್ಧಿಸುತ್ತದೆ. ಆದ್ದರಿಂದಲೇ ನಂದಾಮಿ ಎಂಬುವ ಅನುಭವವೂ ಕೂಡ ಸರ್ವಲೋಕಪ್ರಸಿದ್ಧವಾಗಿದೆ. ಅಸ್ತಿ ಎಂಬಲ್ಲಿ ಧಾತ್ವರ್ಥವಾದ ಸತ್ತಾ ಆಖ್ಯಾತಾರ್ಥ ಕ್ರಿಯಾಕರ್ತೃಗಳಿಗೆ ಪರಸ್ಪರ ಭೇದವಿರುವದರಿಂದ ಶಿವಾದ್ವೈತವನ್ನು ಸಾಧಿಸುವ ನೀನು ಏನು ಮಾಡಿದಂತಾಯಿತು? ವಿನಾಯಕಂಪ್ರಕುರ್ವಾಣೋರಚಯಾಮಾಸವಾನರಂ | ಎಂಬಂತೆ ಆಗಲಿಲ್ಲವೆ? ಅಂದರೆ ಬೇರೆಕಡೆಯಲ್ಲಿ ‹‹ಪಚತಿ›› ಮುಂತಾದವುಗಳಲ್ಲಿ ಧಾತ್ವರ್ಥ ಆಖ್ಯಾತಾರ್ಥ ಕ್ರಿಯಾಕರ್ತೃಗಳಿಗೆ ಭೇದವಿದ್ದರೂ ‹‹ಅಸ್ತಿ›› ಎಂಬುವಲ್ಲಿ ಅಭೇದವನ್ನೇ ಹೇಳುತ್ತೇನೆ. ಹೀಗೆ ಹೇಳುವಲ್ಲಿ ಬಾಧಕವೂ ಇಲ್ಲಾದ್ದರಿಂದ ಶಿವಾದ್ವೈತಕ್ಕೆ ಹಾನಿಯಿಲ್ಲ. ಆದ್ದರಿಂದ ಕೆಲವು ಕಡೆಯಲ್ಲಿ ಬಾಧಕವಿಲ್ಲದಿದ್ದಾಗ ಪ್ರತ್ಯಯಾರ್ಥಾದಿಗಳು ಬಿಡಲ್ಪಡುವವು. ‹‹ಕೂಲಂ ಪಿಪತಿಷತಿ›› ಎಂಬಲ್ಲಿ ಸನರ್ಥವು ಬಿಡಲ್ಪಡುವದು. ಮತ್ತು ‹‹ಜಾನಾತಿ››

ಎಂಬಲ್ಲಿ ಆಖ್ಯಾತಾರ್ಥವು ಬಿಡಲ್ಪಟ್ಟಿರುತ್ತದೆ. ಆದ್ದರಿಂದ “ಅಸ್ತಿ” ಎಂಬಲ್ಲಿಯೂ ಹರೂ ಭೇದವು ಬಿಡಲ್ಪಡುವದು. ಒಳ್ಳೇದು ನಿನ್ನ ಶಿವಾದ್ವೈತದಲ್ಲಿ ಪ್ರಮಾಣ ವಾವುದು. ಅಂದರೆ ಮೊದಲು ಅಸ್ಮಿ, ನಂದಾಮಿ, ಪ್ರಕಾಶೆ. ಎಂಬುವ ಅನುಭವವೇ ಪ್ರಮಾಣವೆಂದು ಹೇಳುತ್ತೇನೆ. ಒಳ್ಳೇದು, ಘಟವಿಷಯಕ ಜ್ಞಾನದಲ್ಲಿ ವಿಷಯುವಾದ ಘಟಕ್ಕೂ ವಿಷಯಿಯಾದ ಜ್ಞಾನಕ್ಕೂ ಹೇಗೆ ಭೇದವಿದೆಯೋ? ಅದರಂತೆ ಪ್ರಕಾಶ ವಿಷಯಕ ಜ್ಞಾನಕ್ಕೂ ಪ್ರಕಾಶಕ್ಕೂ ಭೇದವು ಸಿದ್ಧಿಸಲು ಪುನಃ ಶಿವಾದ್ವೈತಕ್ಕೆ ಹಾನಿಯು. ಅಂದರೆ ಸ್ವಸ್ಥಾಕ್ಷುಭಿತಾಜ ವಿಶ್ವವಿಸ್ತಾರಾ | ಪರಮಾತ್ಮ ಶಕ್ತಿಯುಸ್ವಾಸ್ಥ್ಯದಶೆಯಲ್ಲಿ ಸಚ್ಚಿದಾನಂದಾತ್ಮ ರೂಪದಿಂದಲೆ ಇರುವಿಕೆಯು ಆ ಕಾಲಕ್ಕೆ ವಿಷಯ ವಿಷಯಿಗಳಿಗೆ ಭೇದವಿಲ್ಲ. ಸೃಷ್ಟ್ಯುನ್ಮುಖಾವಸ್ಥೆಯಲ್ಲಿ ಪರಮಾತ್ಮನಿಗೂ ಪ್ರಪಂಚಕ್ಕೂ ಭೇದವು. ಯಾಕಂದರೆ, ಸದ್ರೂಪನೂ, ಚಿದ್ರೂಪನೂ, ಆನಂದರೂಪನೂ, ಪ್ರಕೃಷ್ಟ ಕ್ರಿಯಾಶಕ್ತಿಯುತನೂ ಆದ ಪರಮಾತ್ಮನ ದೆಶೆಯಿಂದ ಜಡವಾದ ಪ್ರಪಂಚರೂಪವಾದ ಪರಿಣಾಮವುಂಟಾದ್ದರಿಂದ ಆ ಜಡಪ್ರಪಂಚವು ಶಿವಾಭಿನ್ನವಾಗಲಾರದು. ಅಜಡಪರಮಾತ್ಮನಿಂದ ಜಡಪ್ರಪಂಚವೂ ಸದ್ರೂಪಶಿವನಿಂದ ಅಸದ್ರೂಪವೂ ಆನಂದರೂಪಶಿವನಿಂದ ದುಃಖಮಯ ಪ್ರಪಂಚವೂ ಉಂಟಾಗುವ ಪಕ್ಷದಲ್ಲಿ ಮನುಷ್ಯನಲ್ಲದ ಪಶುವಿನಿಂದ ಮನುಷ್ಯನನ್ನೂ ಪಡೆಯಬಹುದಲ್ಲವೆ? ಆದ್ದರಿಂದ ಜಗತ್ತು ಅವಿದ್ಯೆಯ ಪರಿಣಾಮವಲ್ಲದೆ ಪರಶಿವಬ್ರಹ್ಮದ ಪರಿಣಾಮವಲ್ಲ. ಅಂದರೆ ಈಶ್ವರಸ್ಯತುಯಾಮಾಯಾ ತಸ್ಯಾಕೊವೆತ್ತಿಚೇಷ್ಟಿತಂ | ಹರಣೀಗರ್ಭಿಣಿ: ಭೂತ್ವಾಋಷ್ಯಶೃಂಗಮಸೂಯತ | ಎಂಬುವ ವ್ಯಾಸೋಕ್ತಿಯಂತೆ ಮನುಷ್ಯನಾದ ಋಷ್ಯಶೃಂಗನು ಪಶುವಿನಿಂದ ಹುಟ್ಟಲಿಲ್ಲವೆ? ಆ ಪರಶಿವನ ಅಘಟನಘಟನಾ ಸಾಮರ್ಥ್ಯವನ್ನು ತಿಳಿಯಲು ಯಾರು ಸಮರ್ಥರಾಗುವರು. ಆದ್ದರಿಂದ ಅಜಡಚೇತನ ಮನುಷ್ಯನಿಂದ ಲೋಮನಖಾದಿ ಜಡಪದಾರ್ಥಗಳು ಹುಟ್ಟುವಂತೆಯೂ, ಅಗ್ನಿಯಿಂದ ವಿಲಕ್ಷಣವಾದ ಧೂಮವು ಹುಟ್ಟುವಂತೆಯೂ ಅಜಡ ಪರಶಿವನಿಂದ ಜಡವಾದ ಪ್ರಪಂಚರೂಪವಾದ ಪರಿಣಾಮವು ಸಂಭವಿಸುತ್ತದೆ. ಧೂಮವು ಅಗ್ನಿಗೆ ವಿಲಕ್ಷಣವಾಗಿದ್ದರೂ ಅದು ಅಗ್ನಿಯ ಕಾರ್ಯವಲ್ಲವೇನು? ಲೋಮನಖಾದಿಗಳು ಚೇತನವಾದ ಮನುಷ್ಯನಿಗಿಂತಲೂ ವಿಲಕ್ಷಣವಾಗಿದ್ದರೂ ಅವು ಆ ಮನುಷ್ಯನ ಕಾರ್ಯಗಳಲ್ಲವೆ? ಆದ್ದರಿಂದ ಸರ್ವಶಕ್ತಿಯುಳ್ಳ ಶಿವನು ಅಜಡನಾಗಿದ್ದರೂ ಅವನಿಂದ ಜಡವಾದ ಕ್ಷ್ಮಾಯಾದಿ ಪ್ರಪಂಚರೂಪವಾದ ಪರಿಣಾಮವು ಸಂಭವಿಸುತ್ತದೆ. ಆದ್ದರಿಂದಲೇ

ಶಕ್ತಿಃ ಪ್ರಥಮಸಂಭೂತಾ ತಾಂಶ್ಯೇತಪದೋತ್ತರಾ | ತತೊ ಮಾಯಾತ ತೋಽವ್ಯಕ್ತಂ ಶಿವಾಚ್ಛಕ್ತಿಮತಃಪ್ರಭೋಃ || ಎಂದು ಹೇಳಲ್ಪಡುತ್ತದೆ. ಶಿವಾ ದ್ವೈತಿಯೇ? ಶಕ್ತಿಯಂದರೆ ಅಧ್ಯಾಸಾತ್ಮಕವಾದದ್ದೇ ಹೊರ್ತು ಬ್ರಹ್ಮಸ್ವಭಾವ ಭೂತವಲ್ಲವೆಂದು ಮೊದಲೇ ನಾನು ಹೇಳಿದ್ದೇನೆ. ಇಲ್ಲದಿದ್ದರೆ ‹‹ಯದಾತಮಃ›› ‹‹ತಮಆಸೀತ್›› ‹‹ಮಾಯಾಂತುಪ್ರಕೃತಿಂ›› ‹‹ಪ್ರಧಾನಕ್ಷೇತ್ರಜ್ಞಪತಿಃ›› ಇತ್ಯಾದಿ ಶ್ವೇತಾಶ್ವತರಾದಿ ಶ್ರುತಿಗಳಿಗೆ ವಿರುದ್ಧವಾಗುವದೆಂತಲೂ ಹೇಳಿದ್ದೇನೆ. ಅದಕ್ಕೆ ನೀನು ಏನೂ ಹೇಳಿಲ್ಲವು. ಕೇವಲ ಪಾಂಡಿತ್ಯ ಪ್ರೌಢಿಮೆಯಿಂದ ಅಧ್ಯಾ ಸಾತ್ಮಕವಾದ ಅವಿದ್ಯೆಯು ಸಂಭವಿಸುವದಿಲ್ಲವೆಂದು ಯುಕ್ತಿಪ್ರಾಧಾನ್ಯದಿಂದ್ದ ಹೇಳಲು ನಾನು ಒಪ್ಪಲಾರೆನು. ಅಂದರೆ ಬ್ರಹ್ಮಾದ್ವೈತಿಯೇ? ತಮಃಶಬ್ದ ದಿಂದ ನಿನ್ನ ಅಧ್ಯಾಸವು ಸಿದ್ಧಿಸುತ್ತದೆಂದು ತಿಳಿಯಬೇಡ, ಅದರ ಅರ್ಥವೇ ನಿನಗೆ ತಿಳಿದಿರುವದಿಲ್ಲ. ಕೇಳು, ಹಿಂದೊಮ್ಮೆ ಈ ಶ್ರುತ್ಯರ್ಥವನ್ನು ಹೇಳಿದ್ದೇನೆ. ಪುನಃ ಹೇಳುವ ಪ್ರಸಂಗ ಬಂದದ್ದಕ್ಕೆ ಕೇವಲ ತಮಶ್ಶಬ್ದಾರ್ಥವನ್ನೇ ನಿನ್ನ ನೆನಪಿಗೆ ತಂದುಕೊಡುತ್ತೇನೆ. ಸೃಷ್ಟ್ಯಾದಿಯಲ್ಲಿ ಈ ಎಲ್ಲಾ ಜಗತ್ತು ಸದಸದ್ವ್ಯಕ್ತಿ ವ್ಯವ ಸ್ಥೆಯಿಲ್ಲದೆಯೂ ಚಂದ್ರ ಸೂರ್ಯರಿಲ್ಲದೆ ದಿವಾರಾತ್ರಿಗಳಿಲ್ಲದೆಯೂ ಸ್ಥೂಲಸೂ ಕ್ಷ್ಮಗಳೂ ಚರಾಚರಗಳೂ ಇಲ್ಲದೆಯೂ ಶಿವನೊಬ್ಬನಲ್ಲಿ ಈ ಜಗತ್ತು ಸೂಕ್ಷ್ಮ ರೂಪದಿಂದ ಮಯೂರಾಂಡರಸ ನ್ಯಾಯದಿಂದ ಇತ್ತೆಂದು ಹೇಳುವಲ್ಲಿ ತಮಃ ಶಬ್ದವಿರುತ್ತದೆಯೇ ಹೊರ್ತು ನಿನ್ನ ಅವಿದ್ಯೆಯಲ್ಲಿಲ್ಲವು. ‹‹ಮಾಯಾಂತುಪ್ರಕೃ ತಿಂ›› ಎಂಬಲ್ಲಿ ಪ್ರಕೃಷ್ಟವಾದ ಜಗದಾಕಾರವಾದ ಪರಿಣಾಮ ರೂಪವಾದ ಕೃತಿಯುಳ್ಳ (ಕ್ರಿಯೆಯುಳ್ಳ) ಮಾಯಾ ಅಂದರೆ ಮಂ ಶಿವಂ ಅಯತಿ ಗಚ್ಛತ್ಯ ವಿನಾಭಾವ ಸಂಬಂಧೇನವರ್ತತ ಇತಿ ಮಾಯಾ | ಎಂದು ಅರ್ಥವು ಸಂಗತವಾ ಗುತ್ತಿರಲಿಕ್ಕೆ ಶಿವನ ಸ್ವಾಭಾವಿಕೀ ಶಕ್ತಿಯಂತಲೇ ಹೇಳಬೇಕು. ‹‹ಯಾಮಾಸಾ ಮಾಯಾ›› ಎಂದು ಮಿಥ್ಯಾಪ್ರತ್ಯಯರೂಪವಾದ ಅಧ್ಯಾಸವೆಂದು ಹೇಳಬಾ ರದು. ಇನ್ನು ‹‹ಪ್ರಧಾನಕ್ಷೇತ್ರಜ್ಞಪತಿ›› ಎಂಬಲ್ಲಿ ಪ್ರಧಾನಶಬ್ದದಿಂದ ಇಪ್ಪತ್ತು ನಾಲ್ಕನೇ ತತ್ವವನ್ನು (ಪ್ರಕೃತಿತತ್ವವನ್ನು) ಹೇಳುತ್ತೇವಾದ್ದರಿಂದ ಯಾವ ಶ್ರುತಿಗೂ ವಿರೋಧವಿಲ್ಲ. ಆದ್ದರಿಂದ ಜಗತ್ತು ಬ್ರಹ್ಮದ ಪರಿಣಾಮವಲ್ಲದೆ ವಿವ ರ್ತವಲ್ಲ. ಹಾಗಾದರೆ ಬ್ರಹ್ಮಕ್ಕೆ ನಿತ್ಯತ್ವವನ್ನು ಹೇಗೆ ಹೇಳುವಿಯೋ ನೋ ಡೋಣವೆಂದು ಭಾಮತೀಕಾರರು ತಮ್ಮ ಅದ್ಭುತ ಪಾಂಡಿತ್ಯದಿಂದ ಜಗತ್ತು ಬ್ರಹ್ಮದ ಪರಿಣಾಮವೆಂದು ಹೇಳುವ ಪಕ್ಷವನ್ನು ನಿರಾಕರಿಸಿದಂತೆ ಮಾಡಿರು

ಹರು. ಇವರ ಪಾಂಡಿತ್ಯವನ್ನೇ ವಿಚಾರಿಸೋಣ ? ಇವರನ್ನುವದೇನಂದರೆ ಬ್ರಹ್ಮವು ವಿಶ್ವಾಕಾರವಾಗಿ ಪರಿಣತವಾದ ಕಾಲದಲ್ಲಿ ಬ್ರಹ್ಮಕ್ಕೆ ಪ್ರಾಕ್ತನಸ್ವರೂಪವಿಲ್ಲವಾಗಿ ಅದಕ್ಕೆ ಅನಿತ್ಯತ್ವವು ಪ್ರಾಪ್ತವಾಯಿತು. ಬ್ರಹ್ಮವು ತಾನು ಅಂಶಮಾತ್ರದಿಂದ ಪರಿಣಮಿಸಿ ಮತ್ತ ಬೇರೆ ಕೆಲವು ಅಂಶಗಳಿಂದ ಬೇರೆಯಾಗಿರುತ್ತದೆಂದರೆ ಆ ಅಂಶವು ಬ್ರಹ್ಮಕ್ಕೆ ಭಿನ್ನವಾಗಿದೆಯೊ? ಅಥವಾ ಅಭಿನ್ನವಾಗಿದೆಯೊ? ಭಿನ್ನವಾಗಿದ್ದ ಪಕ್ಷದಲ್ಲಿ ಜಗತ್ತು ಬ್ರಹ್ಮದ ಪರಿಣಾಮವೆಂದು ಹೇಗೆ ಹೇಳುತ್ತೀ? ಮಣ್ಣಿಗೆ ಭಿನ್ನವಾದ ಹಾಲು ಪರಿಣಮಿಸಿದರೆ ಮಣ್ಣು ಪರಿಣಮಿಸುತ್ತದೆಂದು ಹೇಳಲಾಗುವದಿಲ್ಲ ಆ ಅಂಶವು ಬ್ರಹ್ಮಕ್ಕೆ ಅಭಿನ್ನವಾಗಿದೆ ಅಂದರೆ ಬ್ರಹ್ಮವೇ ಸಂಪೂರ್ಣವಾಗಿ ಪರಿಣಮಿಸಿದಂತಾಯಿತು. ಆದ್ದರಿಂದ ಮೇಲೆ ಹೇಳಿದಂತೆ ಬ್ರಹ್ಮವು ಅನಿತ್ಯವಾಗಬೇಕು. ಆ ಅಂಶವು ಬ್ರಹ್ಮಕ್ಕೆ ಭಿನ್ನಾಭಿನ್ನವಾಗಿದೆ ಹ್ಯಾಗಂದರೆ ಕಟಕ ಮುಕುಟಾದಿಗಳು ಸುವರ್ಣವೇ ಆಗಿರುವದರಿಂದ ಅವು ಅದಕ್ಕೆ ಅಭಿನ್ನಗಳು. ಕಟಕಾದಿಗಳು ಸುವರ್ಣದ ಕಾರ್ಯಗಳಾದ್ದರಿಂದ ಸುವರ್ಣಕ್ಕೆ ಭಿನ್ನಗಳೂ ಆಗಿರುವವು. ಭೇದಾಭೇದಗಳಿಗೆ ಪರಸ್ಪರ ವಿರೋಧ ವಿದ್ದಮೂಲಕ ಅವೆರಡೂ ಒಂದು ಕಡೆಯಲ್ಲಿರಲಾರವು. ಅಂದರೆ ಈ ವಿರೋಧ ಪರಿಹಾರವನ್ನು ಮೊದಲೇ ಮಾಡಿದ್ದೇನೆ. ಇದಕ್ಕೆ ಇಲ್ಲಿ ಪ್ರಸಂಗವಿಲ್ಲ. ಆದ್ದರಿಂದ ಈ ಕುಂಡಲವು ಸುವರ್ಣವು. ಸುವರ್ಣದ ಕುಂಡಲವು ಎಂಬದಾಗಿ ಸರ್ವಲೋಕ ಪ್ರಸಿದ್ಧವಾದ ವ್ಯವಹಾರವಿರುವದರಿಂದ ಸುವರ್ಣ ಕುಂಡಲಗಳಿಗೆ ಭೇದಾಭೇದಗಳು ಸಿದ್ಧಿಸುವವು. ಸುವರ್ಣ ಕುಂಡಲಗಳಿಗೆ ಘಟಪಟಗಳಂತೆ ಅತ್ಯಂತ ಭೇದವನ್ನು ಹೇಳಿದರೆ ಅವುಗಳಿಗೆ ಕಾರ್ಯಕಾರಣ ಭಾವವು ಸಿದ್ಧಿಸುವದಿಲ್ಲ. ಅತ್ಯಂತ ಅಭೇದವನ್ನು ಹೇಳಿದರೆ ಕುಂಡಲ ಕುಂಡಲ, ಸುವರ್ಣ ಸುವರ್ಣ ವೆಂದು ವ್ಯವಹಾರವಾಗಬೇಕು. ಆದ್ದರಿಂದ ಕಾರ್ಯ ಕಾರಣಗಳಿಗೆ ಭೇದಾಭೇದಗಳನ್ನು ಹೇಳಬೇಕು. ಇದರಂತೆ ಪರಶಿವ ಬ್ರಹ್ಮವು ಸರ್ವಕಾರಣವಾಗಿರುವದರಿಂದ ಕಾರ್ಯಗಳು ಕಾರಣರೂಪವಾದ ಸದ್ರೂಪದಿಂದ ಅಭಿನ್ನಗಳು ಎಲ್ಲಾ ಕಡೆಯಲ್ಲಿಯೂ "ಅಸ್ತಿ" ಘಟಃಸನ್, ಪಟಃಸನ್, ಎಂಬುವ ವ್ಯವಹಾರವು ಕಂಡುಬರುವದಷ್ಟೆ? ಕಾರ್ಯರೂಪದಿಂದ ಭಿನ್ನಗಳಲ್ಲವೆಂದರೆ ಇದು ಕಾರ್ಯವು ಇದು ಕಾರಣವೆಂದು ವ್ಯವಹಾರವಾಗಲಿಕ್ಕಿಲ್ಲಾದ್ದರಿಂದ ಶಿವನ ಪರಿಣಾಮರೂಪವಾದ ಜಗತ್ತು ಕಾರಣರೂಪದಿಂದ ಶಿವನಿಗೆ ಅಭಿನ್ನವಾಗಿಯೂ ಕಾರ್ಯರೂಪದಿಂದ ಭಿನ್ನವಾಗಿಯೂ ಇರುವದು. ಸುವರ್ಣ ಸ್ವರೂಪದಿಂದ ಕಟಕಾದಿಗಳಿಗೆ ಅಭೇದವು ಕಟ

ಕಾದಿ ಸ್ವರೂಪದಿಂದ ಭೇದವೂ ಇರುತ್ತದಷ್ಟೆ? ಅಂದರೆ ಎಲೈ ಶಿವಾದ್ವೈತಿಯೇ ಭಾಮತೀಕಾರರು ಸಾಮಾನ್ಯಪಂಡಿತರಲ್ಲ. ಅವರು ಅಂಗೀಕರಿಸಿದ ವಿವರ್ತ ವಾದವನ್ನು ನೀನೂ ಅಂಗೀಕರಿಸುವದು ಉತ್ತಮವು. ಅದನ್ನು ಬಿಟ್ಟು ಕೇವಲ ಅಭಿಮಾನದಿಂದ ಪರಿಣಾಮವಾದವನ್ನು ಸಾಧಿಸಬೇಡ, ಅವರು ಸಾಂಖ್ಯತತ್ವ ಕೌಮುದಿಯಲ್ಲಿ ‹‹ಸಶಕ್ಯೋಮಿಥ್ಯೇತಿವದಿತುಂ›› ಎಂದು ಹೇಳಿರುವದರಿಂದಲೂ ಷಡಂಗಾಯ ವೇದಾಯಚಭವಾಯಚ | ಎಂದು ಸರ್ವಜ್ಞತ್ವ ತೃಪ್ತಿ ಅನಾದಿ ಬೋಧ ಸ್ವತಂತ್ರತಾ ಅಲುಪ್ತಶಕ್ತಿ ಅನಂತಶಕ್ತಿಗಳೆಂಬ ಅಂಗಗಳಾರನ್ನು ಪರಬ್ರ ಹ್ಮನಿಗೆ ಅದೇ ಭಾಮತಿಯ ಆರಂಭಕ್ಕೆ ಹೇಳಿ ಮಂಗಲವನ್ನು ಮಾಡಿರುವದರಿಂ ದಲೂ ಅವರಿಗೆ ವಿವರ್ತವಾದವು ಅಭಿಪ್ರೇತವೆಂದೆನ್ನುವಲ್ಲಿಯೇ ಸಂಶಯವು. ಪಕ್ಷಾಂತರದಲ್ಲಿ ಅವರಭಿಪ್ರಾಯವು ವಿವರ್ತದಲ್ಲಿದ್ದರೂ ಅಯುಕ್ತವಾದ ಆ ವಿವ ರ್ತವು ತ್ಯಾಜ್ಯವೇಸರಿ, ಯಾಕಂದರೆ ‹‹ಯುಕ್ತಿಯುಕ್ತಂವಚೊಗ್ರಾಹ್ಯಂ ಬಾಲಾ ದಪಿಶುಕಾದಪಿ›› ಎಂದು ನೀತಿ ಇರುವದು ಮತ್ತು ತಂದೆ ತೆಗಿಸಿದ ಭಾವಿ ಎಂದು ಅದರೊಳಗಿನ ಉಪ್ಪುನೀರನ್ನು ಯಾರೂ ಕುಡಿಯಲಾರರು. ಆದ್ದರಿಂದ ಬ್ರಹ್ಮಾ ದ್ವೈತಿಯೇ! ನಿನಗೆ ಯುಕ್ತವಾದ ಮಾರ್ಗವನ್ನು ಅನುಸರಿಸು? ಶಿವಾದ್ವೈತಿ ಯೇ ಕಾರ್ಯಕಾರಣಂಗಳಿಗೆ ಇರುವ ನಿನ್ನ ಭೇದವೆಂಥಾದ್ದು, ಅನ್ಯೋನ್ಯಾಭಾ ವರೂಪವಲ್ಲವೇನು? ಅಹುದು. ಅದನ್ನೇ ಹೇಳುವೆನು, ಅದರಲ್ಲಿ ನಿನ್ನ ಆಕ್ಷೇಪ ವೇನು? ಹೇಳು, ಅಂದರೆ ಭೇದವು ಅದೆಯೊ? ಇಲ್ಲವೊ? ಇರುತ್ತದೆಂದರೆ ಅಭೇ ದವಿಲ್ಲ? ಭೇದವೊಂದೇ ಇದ್ದಂತಾಯಿತು. ಭೇದವಿಲ್ಲವೆಂದರೆ ಅಭೇದವೊಂದೇ ಇದ್ದಂತಾಯಿತು. ಭೇದಾಬೇದಗಳೆರಡೂ ಒಂದು ಸ್ಥಾನದಲ್ಲಿರಲಾರವು. ಭೇದವಿ ದ್ದಲ್ಲಿ ನೀನು ಅಭೇದವನ್ನು ಮಾನಿಸಿದ್ದಾದರೆ ಘಟಪಟಗಳಿಗೆ ಏಕತ್ವವನ್ನು ಹೇಳಬೇಕಾಗುವದು. ಮತ್ತು ಕಟಕಕ್ಕೆ ಸುವರ್ಣದ ಅಭೇದವು ಸುವರ್ಣಸ್ವರೂ ಪದಿಂದಂದಮೇಲೆ ಸುವರ್ಣ ಸ್ವರೂಪದಿಂದ ಕಟಕ ಮುಕುಟ ಕುಂಡಲಾದಿಗಳು ಭಿನ್ನಗಳಲ್ಲವಲ್ಲವೆ? ಕಟಕ ಸ್ವರೂಪದಿಂದಲೂ ಅವು ಭಿನ್ನಗಳಾಗಬಾರದು. ಯಾಕಂದರೆ ಸುವರ್ಣಕ್ಕೂ ಕಟಕಕ್ಕೂ ಅಭಿನ್ನತ್ವ ಇದೆಯಷ್ಟೆ? ಇದ್ದರೂ ಸುವ ರ್ಣದ ಕಾರ್ಯಗಳಾದ ಕಟಕಾದಿಗಳಿಗೆ ಪರಸ್ಪರ ಅಭಿನ್ನತ್ವವಿಲ್ಲ. ಯಾಕಂದರೆ ಸುವರ್ಣದಲ್ಲಿ ಸುವರ್ಣತ್ವವೂ ಕಟಕತ್ವವೂ ಇರುವವು. ಒಂದು ಸಾಮಾನ್ಯ ಧರ್ಮವು ಮತ್ತೊಂದು ವಿಶೇಷ ಧರ್ಮವು ಸುವರ್ಣತ್ವ ಸಾಮಾನ್ಯರೂಪದಿಂದ ಕುಂಡಲಾದಿಗಳು ಕಟಕಕ್ಕೆ ಅಭಿನ್ನಗಳಾಗಲಿ ವ್ಯಾವರ್ತಕವಾದ ಕಟಕತ್ವರೂಪ

ದಿಂದ ಅವು ಕಟಕಕ್ಕೆ ಭಿನ್ನಗಳಾಗುವವು. ಆದ್ದರಿಂದ ಸುವರ್ಣಕ್ಕೆ ಅಭೇದವಿದ್ದಂತೆ ಕಟಕಕ್ಕೂ ಕುಂಡಲಾದಿಗಳಿಗೂ ಇಲ್ಲವು. ಅಂದರೆ ಸುವರ್ಣಕ್ಕಿಂತಲೂ ಅಭಿನ್ನವಾದ ಕಟಕವು ಸುವರ್ಣದಂತೆ ಕುಂಡಲಾದಿಗಳಲ್ಲಿ ಅನುವರ್ತಿಸುವದಿಲ್ಲವೇಕೆ? ಅನುವರ್ತಿಸದೇ ಇದ್ದರೆ ಅದು ಸುವರ್ಣಕ್ಕೆ ಅಭಿನ್ನವೆಂದು ಹೇಗೆ ಹೇಳುವಿ? ಯಾವ ಪದಾರ್ಥಗಳು ಯಾವದು ಅನುವರ್ತಿಸುತ್ತಿರಲಿಕ್ಕೆ ಅನುವರ್ತಿಸುವವುಗಳಾಗುವದಿಲ್ಲವೋ ಆ ಪದಾರ್ಥಗಳು ಆ ವಸ್ತುವಿಗಿಂತಲೂ ಭಿನ್ನಗಳೇ ಆಗಿರುವವು. ಸೂತ್ರವು ಅನುವರ್ತಿಸುತ್ತಿರಲಿಕ್ಕೆ ಕುಸುಮಗಳು ಅನುವರ್ತಿಸುವದಿಲ್ಲವಾದ್ದರಿಂದ ಆ ಕುಸುಮಗಳು ಆ ಸೂತ್ರಕ್ಕಿಂತಲೂ ಭಿನ್ನಗಳಾಗಿರುವವಷ್ಟೆ? ಆದ್ದರಿಂದ ಸುವರ್ಣತನವು ಅನುವರ್ತಿಸುತ್ತಿರಲಿಕ್ಕೆ ಕಟಕ ಮುಕುಟ ಕುಂಡಲಾದಿಗಳು ಅನುವರ್ತಿಸುವದಿಲ್ಲವಾದ್ದರಿಂದ ಆ ಕಟಕಾದಿಗಳು ಆ ಸುವರ್ಣಕ್ಕಿಂತಲೂ ಭಿನ್ನಗಳೆಂದೇ ಹೇಳಬೇಕು. ‹‹ಘಟಸ್ಸನ್ ಪಟಸ್ಸನ್›› ಎಂಬದಾಗಿ ಸತ್ತಾನುವೃತ್ತಿಯಿಂದ ಎಲ್ಲಾ ವಸ್ತುಗಳಿಗೆ ಅಭೇದವನ್ನು ಹೇಳುವಲ್ಲಿ ಈ ಕ್ಷೀರದಲ್ಲಿ ಈ ದಧಿಯು ಈ ತೈಲವಿಲ್ಲಾ ಈ ಪಟವು ಈ ಘಟದಿಂದ ಭಿನ್ನವಾಗಿದೆ ಈ ಘಟವು ಈ ಘಟದಿಂದ ಭಿನ್ನವಾಗಿಲ್ಲವು. ಎಂಬುವೇ ಮೊದಲಾದ ವ್ಯವಹಾರಗಳಿಗೆ ಉಚ್ಛೇದವೇ ಆಗಬೇಕು. ಮತ್ತು ವಸಂತಕಾಲದಲ್ಲಿ ಕೋಗಿಲೆಯ ಧ್ವನಿಯುಂಟು, ಮೇಘಧ್ವನಿಯಿಲ್ಲವು. ಎಂಬ ವ್ಯವಸ್ಥೆಯೂ ಈ ಘಟವು ಈ ಪ್ರಕಾರವಾದ ಆಕಾರವುಳ್ಳದ್ದು. ಈ ಪಟವು ಆ ಆಕಾರವುಳ್ಳದ್ದು ಅಲ್ಲವು. ಅದರ ಆಕಾರವೇ ಬೇರೆ, ಇದರ ಆಕಾರವೇ ಬೇರೆ. ಇತ್ಯಾದಿ ವ್ಯವಹಾರವು ಸಂಗತವಾಗಲಾರದು. ಆದ್ದರಿಂದ ಸುವರ್ಣ ಕುಂಡಲ ನ್ಯಾಯದಿಂದ ಬ್ರಹ್ಮ ಪ್ರಪಂಚಗಳಿಗೆ ಕಾರ್ಯಕಾರಣಭಾವವಿಲ್ಲ. ಪರಿಣಾಮವಾದಿಯಾದ ಎಲೈ ವೀರಶೈವನೆ? ಇದಕ್ಕೇನು ಉತ್ತರಕೊಡುತ್ತೀ ಕೊಡು ನೋಡೋಣವೆಂದರೆ ವಿವರ್ತವಾದಿಯೆ? ಅವಹಿತ ಚಿತ್ತನಾಗಿ ಕೇಳು? ನಿನ್ನ ತರ್ಕಕೌಶಲ್ಯವು ಬಹಳ ಹೊತ್ತಿನವರಿಗೆ ನಿಲ್ಲಲಾರದು. ನಿನ್ನ ಗುರುಗಳಂತಿರುವ ವಾಚಸ್ಪತಿ ಮಿಶ್ರರು ತಮ್ಮ ಭಾಮತಿಯಲ್ಲಿ ಹೇಳಿದ ತಾತ್ಪರ್ಯಕ್ಕನುಸಾರವಾಗಿಯೇ ನನ್ನ ಪರಿಣಾಮವಾದದಲ್ಲಿ ಕೋಟಿಗಳನ್ನು ಮಾಡಿರುವಿಯಲ್ಲವೆ?ಆದಕೆ ಮುಖ್ಯವಾಗಿ ನಿಮ್ಮ ತಾತ್ಪರ್ಯವು ಅನೇಕ ಪುಷ್ಪಗಳಲ್ಲಿ ಸೂತ್ರವು ಅನುವರ್ತಿಸುವಂತೆ ಪುಷ್ಪಗಳು ಅನುವರ್ತಿಸುವದಿಲ್ಲವಾದ್ದರಿಂದ ಆ ಪುಷ್ಪಗಳು ಆ ಸೂತ್ರಕ್ಕೆ ಭಿನ್ನಗಳಾದಂತೆ ಕಟಕ ಮುಕುಟಾದಿಗಳು ಸುವರ್ಣಕ್ಕೆ ಭಿನ್ನಗಳೆಂಬುವದಲ್ಲವೆ? ಇನ್ನು ಕೇಳು ಪೃಥಿವೀ ಸಾಮಾನ್ಯವು ಘಟಪಟಾದಿ ಎಲ್ಲಾ ಪಾರ್ಥಿವಕಾರ್ಯಗ

ಳಲ್ಲಿ ಅನುವರ್ತಿಸಿದರೂ ಘಟಪಟಾದಿಗಳು ಅನುವರ್ತಿಸುವದಿಲ್ಲವಷ್ಟ? ಅಂದ ಮೇಲೆ ಆ ಘಟಪಟಾದಿಗಳು ಪೃಥಿವೀ ಪದಾರ್ಥಕ್ಕೆ ಭಿನ್ನಗಳೆಂದು ನೀನು ಹೇಳುವೆ ಏನು? ಇಲ್ಲವೆಂದರೆ ನಿನ್ನ ಸಾಮಾನ್ಯಮುಖಿವ್ಯಾಪ್ತಿಯು ಅಸಂಗತವಾಯಿತು. ಇದರಂತೆ ಜಲಭಾವವು ಎಲ್ಲಾ ಜಲವಿಕಾರಗಳಾದ ಬುದ್ಬುದಾದಿಗಳಲ್ಲಿ ಅನುವರ್ತಿಸಿದರೂ ಆ ಬುದ್ಬುದಾದಿ ವಿಕಾರಗಳು ಆ ಜಲಕ್ಕಿಂತಲೂ ಭಿನ್ನಗಳಲ್ಲ ಭಿನ್ನಗಳಾಗುವವೆಂದರೆ ಕರಕವು ಜಲವಲ್ಲ, ಬುದ್ಬುದವು ಜಲವಲ್ಲವೆಂದು ವ್ಯವಹಾರವಾಗುವದಿಲ್ಲವೇಕೆ? ಆದ್ದರಿಂದ ನಿಮ್ಮ ಯುಕ್ತಿಯು ಅಯುಕ್ತವೇಸರಿ, ಎಲ್ಲಿ ಉಪಾದಾನೋಪಾದೆಯ ಭಾವವೊ, ಅಲ್ಲಿಯೇ ಕಾರ್ಯಕಾರಣಗಳಿಗೆ ಭೇದಾಭೇದಗಳನ್ನು ಹೇಳುತ್ತೇನಾದ್ದರಿಂದ ಸೂತ್ರಪುಷ್ಪಗಳಿಗೆ ಉಪಾದಾನೋಪಾದೆಯ ಭಾವವಿಲ್ಲದಿರುವದರಿಂದ ಅಲ್ಲಿ ಕೇವಲ ಭೇದವೇ ಇದ್ದುಕೊಳ್ಳಲಿ, ಕಟಕ ಕುಂಡಲಾದಿಗಳಿಗೆ ಉಪಾದಾನೋಪಾದೇಯ ಭಾವವಿಲ್ಲದ್ದರಿಂದ ಅವುಗಳಿಗೆ ಅಭೇದವಿಲ್ಲ. ಕೇವಲ ಭೇದವೇ ಇರುವದು. ಸುವರ್ಣಕಟಕಗಳಿಗೆ ಉಪಾದಾನೋಪಾದೇಯ ಭಾವವಿರುವುದರಿಂದ ಅಲ್ಲಿ ಭೇದಾಭೇದಗಳನ್ನು ಹೇಳುತ್ತೇನೆ. ಎಲ್ಲಾ ಕಡೆಯಲ್ಲಿಯೂ ಭೇದವಿದ್ದಲ್ಲಿ ಅಭೇದವನ್ನೂ ಅಭೇದವಿದ್ದಲ್ಲಿ ಭೇದವನ್ನೂ ಹೇಳುವದಿಲ್ಲ. ಆದರೆ ಯಾವ ಪದಾರ್ಥಗಳಿಗೆ ಉಪಾದಾನೋಪಾದೇಯ ಭಾವವೊ? ಅವುಗಳಿಗೆ ಮಾತ್ರ ಭೇದಾಭೇದಗಳನ್ನು ಹೇಳುತ್ತೇನೆ. ಮತ್ತು ಅಲ್ಲಿಯೇ ಭೇದಾಭೇದಗಳಿಗೆ ವಿರೋಧವಿಲ್ಲೆಂದು ಹೇಳುವೆನು. ಆದ್ದರಿಂದ ಘಟಪಟಗಳಿಗೆ ಏಕತ್ವವು ಸಂಭವಿಸುವದಿಲ್ಲ. ಅವುಗಳಿಗೆ ಉಪಾದಾನೋಪಾದೇಯ ಭಾವವಿಲ್ಲವಷ್ಟೆ? ಎಲೈ ವಿವರ್ತವಾದಿಯೆ? ನಿನ್ನ ಪೂರ್ವಪಕ್ಷಕ್ಕೆ ಸಮಾಧಾನವಾಯಿತೊ ಇಲ್ಲವೊ? ಶಿವಾದ್ವೈತಿಯೇ? ಲೋಕವ್ಯವಹಾರೋಚ್ಛೇದವು ಲೋಕವ್ಯವಸ್ಥಾಹಾನಿಯು ಆಗಬೇಕೆಂಬುವ ಆಪತ್ತಿಗೆ ನೀನು ಏನೂ ಉತ್ತರವನ್ನು ಹೇಳಿಲ್ಲ. ಅಂದರೆ ಅರ್ಥಾತ್ ಇದಕ್ಕೆ ಉತ್ತರವಾಗಿರುವದು. ಅದನ್ನೇ ಪ್ರಕಟಿಸುತ್ತೇನೆ. ಕೇಳು, ಜಗತ್ತು ಸದ್ರೂಪವಾದ ಕಾರಣತನದಿಂದ ಬ್ರಹ್ಮಕ್ಕೆ ಅಭಿನ್ನವಾಗಿದ್ದರೂ ಅನೇಕ ಕಾರ್ಯರೂಪದಿಂದ ಭಿನ್ನ ಭಿನ್ನವಾಗಿರುವದು. ಆದ್ದರಿಂದ ಲೋಕ ವ್ಯವಹಾರಕ್ಕೆ ಬಾಧಕವೇನೂಯಿಲ್ಲ. ಮತ್ತು ಯಾವ ವ್ಯವಸ್ಥೆಗೂ ಹಾನಿಯಿಲ್ಲ. ಎಲೈ ಶಿವಾದ್ವೈತಿಯೇ ಕಾರ್ಯಕಾರಣಗಳಿಗೆ ಪಾರಮಾರ್ಥಿಕಗಳಾದ ಅಭೇದವನ್ನೂ ಭೇದವನ್ನೂ ಹೇಳುವ ನಿನ್ನ ಮತದಲ್ಲಿ ಅವುಗಳಿಗೆ ಪಾರಮಾರ್ಥಿಕವಾದ ಅಭೇದವನ್ನು ಹೇಳಿದಂತಾಯಿತು. ಹೀಗೆ ಹೇಳಿದರೆ ಭಾವುತೀ

ಕಾರರು ಅಪಿಚ ದೂರಾತ್ಕನಕಮಿತ್ಯವಗತೆ ನತಸ್ಯ ಕುಂಡಲಾದಯೋ ವಿಶೇಷಾ ಜಿಜ್ಞಾಸ್ಯೇರನ್ ಕನಕಾಭೇದಾತ್ತೇಷಾಂ ತಸ್ಯಚಜ್ಞಾತತ್ವಾತ್ | ಅಂದರೆ ಕನಕ ಕುಂಡಲಗಳಿಗೆ ವಾಸ್ತವ ಅಭೇದವೆಂದು ಹೇಳಿದರೆ ದೂರದಿಂದ ಕನಕವು ತಿಳಿಯಲ್ಪಡುತ್ತಿರಲಿಕ್ಕೆ ಅದಕ್ಕೆ ಅಭಿನ್ನಗಳಾದ ಕುಂಡಲಾದಿಗಳೂ ತಿಳಿಯಲ್ಪಡಬೇಕು. ಹೀಗಾಗದೆ ಕನಕದ ವಿಶೇಷಗಳಾದ ಕುಂಡಲಾದಿಗಳಲ್ಲಿ ಜಿಜ್ಞಾಸೆ ಹುಟ್ಟಬೇಕೇಕೆ? ಕನಕ ಕುಂಡಲಗಳಿಗೆ ಭೇದವೂ ಕೂಡ ಇರುವದರಿಂದ ಕನಕವು ತಿಳಿಯಲ್ಪಟ್ಟರೂ ಕುಂಡಲಾದಿಗಳು ತಿಳಿಯಲ್ಪಟ್ಟಿಲ್ಲವು. ಆದ್ದರಿಂದ ಜಿಜ್ಞಾಸೆಯು (ಸಂಶಯವು) ಸಂಭವಿಸುವದು. ಅಂದರೆ ಶಿವಾದ್ವೈತಿಯೇ ? ಅವುಗಳಿಗೆ ಅಭೇದವೂ ಕೂಡ ಇರುವದರಿಂದ ಅವು ತಿಳಿಯಲ್ಪಟ್ಟಿವೆ. ಎಂದು ಯಾಕೆ ಹೇಳುವದಿಲ್ಲವೆಂದು ಭಾಮತೀಕಾರರು ಹೇಳಿರುವರು. ಇಲ್ಲಿ ಕಲ್ಪತರುಕಾರರು ಕನಕದ ನಿರ್ಣಯವಾಗುತ್ತಿರಲು ಕಟಕಾದಿಗಳ ನಿರ್ಣಯವಾಗಬೇಕೆಂಬ ವಿಷಯದಲ್ಲಿ ಕಟಕಾದಿಗಳಿಗಿರುವ ಕನಕದ ಅಭೇದವೇ ಕಾರಣವೆಂದು ಹೇಳುತ್ತಾರೆ. ಅಂದರೆ ಕನಕದ ಅಭೇದವು ಕಟಕಾದಿಗಳಿಗಿದ್ದಮೇಲೆ ಅಭೇದದ ಕಾರ್ಯವಾದ ಕಟಕಾದಿಗಳ ನಿರ್ಣಯವಾಗಲೇಬೇಕು. ಕಾರಣವಿದ್ದರೆ ಕಾರ್ಯವಾಗದೆ ಇರುವದುಂಟೆ? ವಾಸ್ತವವಾಗಿ ದೂರತಃ ಕನಕದ ಜ್ಞಾನವಾದರೂ ಕಟಕಾದಿಗಳ ಜ್ಞಾನವಾಗುವದಿಲ್ಲವಾದ್ದರಿಂದ ಕಟಕ ಜ್ಞಾನಕ್ಕೆ ಕಾರಣವಾದ ಕನಕಾಭೇದವೂ ಕೂಡ ಕಟಕದಲ್ಲಿಲ್ಲವೆಂದು ಒಪ್ಪಲೇಬೇಕು. ಆದ್ದರಿಂದ ಯಾವುದು ಗ್ರಹಿಸಲ್ಪಡುತ್ತಿರಲಿಕ್ಕೆ ಯಾವದು ಗ್ರಹಿಸಲ್ಪಡುವದಿಲ್ಲವೊ ಅದು ಅದಕ್ಕಿಂತಲೂ ಭಿನ್ನವು. ಕರಭವು ಗ್ರಹಿಸಲ್ಪಡುತ್ತಿರಲಿಕ್ಕೆ ರಾಸಭವು ಗ್ರಹಿಸಲ್ಪಡುವದಿಲ್ಲವಾದ್ದರಿಂದ ರಾಸಭವು ಕರಭಕ್ಕಿಂತಲೂ ಭಿನ್ನವಾಗಿದೆ. ಹಾಗೆ ದೂರತಃ ಸುವರ್ಣವು ಗ್ರಹಿಸಲ್ಪಡುತ್ತಿರಲಿಕ್ಕೆ ಕುಂಡಲಾದಿಗಳು ಗ್ರಹಿಸಲ್ಪಡುವದಿಲ್ಲವಾದ್ದರಿಂದ ಕುಂಡಲಾದಿಗಳು ಹೇಮಕ್ಕಿಂತಲೂ ಭಿನ್ನಗಳು. ಆದ್ದರಿಂದ ಸುವರ್ಣ ಕುಂಡಲಗಳಿಗೆ ಅಭೇದವಿಲ್ಲ. ಇದರಂತೆ ಬ್ರಹ್ಮಕ್ಕೂ ಪ್ರಪಂಚಕ್ಕೂ ಅಭೇದವಿಲ್ಲವೆಂದು ನಾನು ಹೇಳುತ್ತೇನೆ. ಬ್ರಹ್ಮಾದ್ವೈತಿಯೇ ? ಈ ನಿನ್ನ ಯುಕ್ತಿಯು ನಿನ್ನ ಇಷ್ಟಾರ್ಥಕ್ಕನುಕೂಲವಾಗಲಾರದು. ಯಾಕಂದರೆ ದೂರದಿಂದ ಕನಕದ ನಿರ್ಣಯವೇ ಆಗುವದಿಲ್ಲ. ದೂರದಲ್ಲಿ ಪೀತವರ್ಣದ ಧಾತುವನ್ನು ನೋಡಿದ ಮನುಷ್ಯನಿಗೆ ಸುವರ್ಣವೊ ಹಿತ್ತಾಳೆಯೊ ? ಎಂದು ಸಂಶಯವಾಗುತ್ತದಲ್ಲದೇ ಸುವರ್ಣದ ನಿಶ್ಚಯವಾಗುವದಿಲ್ಲ. ಯದ್ಯಪಿ ಹತ್ತಿರಕ್ಕೆ ಹೋದಮೇಲೆ ಸುವರ್ಣದ ನಿಶ್ಚಯನಾದರೆ ಇದು ಕಟಕ

ರೂಪವಾದ ಸುವರ್ಣವು, ಇದು ಕುಂಡಲರೂಪವಾದ ಸುವರ್ಣವೆಂದು ಕಟಕಾದಿಗಳ ಜ್ಞಾನವೂ ಕೂಡ ಆಗಿಯೇ ಬಿಡುವದು. ಪಕ್ಷಾಂತರದಲ್ಲಿ ದೂರದಿಂದ ಕನಕದ ನಿರ್ಣಯವೇ ಆಗಿ ಕುಂಡಲಾದಿಗಳ ಜ್ಞಾನವಾಗುವದಿಲ್ಲವಾದರೂ ಕನಕ ಕುಂಡಲಗಳ ಅಭೇದಕ್ಕೆ ಬಾಧಕವಿಲ್ಲ. ಅವುಗಳಿಗೆ ಅಭೇದವಿದ್ದರೆ ಕನಕದ ನಿರ್ಣಯವಾದರೆ ಕುಂಡಲಾದಿಗಳ ಜ್ಞಾನವೂ ಕೂಡ ಆಗಬೇಕಲ್ಲವೆ ? ಅಂದರೆ ಬ್ರಹ್ಮಾದ್ವೈತಿಯೇ ? ಕುಂಡಲಾದಿಗಳ ಪ್ರತ್ಯಕ್ಷ ಜ್ಞಾನವಾಗಬೇಕಾದರೆ ಕುಂಡಲಾದಿಗಳೊಡನೆ ಇಂದ್ರಿಯ ಸಂಯೋಗವು ಬೇಕು. ಸುವರ್ಣತ್ವೇನ ಸುವರ್ಣಜ್ಞಾನ ಕಾಲದಲ್ಲಿ ಕಟಕಾದಿಗಳಿಗೆ ಇಂದ್ರಿಯ ಸಂಯೋಗವಿಲ್ಲವಾದ್ದರಿಂದ ಕಟಕಾದಿಗಳ ಜ್ಞಾನವಾಗುವದಿಲ್ಲವೆಂತಲೇ ಹೇಳಬೇಕೇ ಹೊರ್ತು ಅವುಗಳಿಗೆ ಅಭೇದವಿಲ್ಲದ್ದರಿಂದ ಕಟಕಾದಿಗಳ ಜ್ಞಾನವಾಗುವದಿಲ್ಲವೆಂದು ಹೇಳುವದು ತಪ್ಪಾಗುವದು. ವೀರಶೈವನೇ ? ಕಟಕಾದಿಗಳು ಕನಕಕ್ಕೆ ಅಭಿನ್ನಗಳಾದಪಕ್ಷದಲ್ಲಿ ಇಂದ್ರಿಯಸಂಯೋಗವು ಕನಕದಲ್ಲಿದ್ದರೆ ಕಟಕದಲ್ಲಿಯೂ ಇದ್ದಂತಾಗಲಿಲ್ಲವೆ? ಅಂದರೆ ಬ್ರಹ್ಮಾದ್ವೈತಿಯೇ ? ಸೂಕ್ಷ್ಮದೃಷ್ಟಿಯಿಂದ ವಿಚಾರಿಸು. ಕಟಕಾದಿಗಳು ಕನಕದಲ್ಲಿ ಅವ್ಯಕ್ತದಶೆಯಲ್ಲಿದ್ದರೆ ಅವುಗಳೊಡನೆ ಇಂದ್ರಿಯ ಸಂಯೋಗವೆಲ್ಲಿ. ಇಂದ್ರಿಯ ಸಂಯೋಗವಿಲ್ಲದಿದ್ದರೆ ಅವುಗಳ ಜ್ಞಾನವು ಹ್ಯಾಗಾದೀತು. ಅವುಗಳ ಜ್ಞಾನವಾಗದಿದ್ದರೆ ಕನಕ ಕುಂಡಲಾದಿಗಳಿಗೆ ಅಭೇದವಿಲ್ಲೆಂದು ಹೇಳಲಿಕ್ಕಾಗುವದಿಲ್ಲ. ಅಭೇದವಿಲ್ಲದಿದ್ದರೆ ಕುಂಡಲಾರ್ಥಿಗಳಿಗೆ ಕನಕದಲ್ಲಿ ಪ್ರವೃತ್ತಿಯು ಹುಟ್ಟಲಾರದು. ಒಂದರಮೇಲೆ ಅಪೇಕ್ಷೆಯುಳ್ಳ ಮನುಷ್ಯನು ಮತ್ತೊಂದರಲ್ಲಿ ಪ್ರವರ್ತಿಸಲಾರನು ಆದ್ದರಿಂದ ಕನಕ ಸುವರ್ಣಗಳಿಗೆ ಅಭೇದವನ್ನು ಹೇಳಬೇಕು. ಶಿವಾದ್ವೈತಿಯೆ? ಸ್ವರ್ಗಫಲಕಾಮಿಯು ತತ್ಸಾಧನವಾದ ಜ್ಯೋತಿಷ್ಟೋಮಾದಿಯಾಗದಲ್ಲಿ ಪ್ರವರ್ತಿಸುವಂತೆ ಕುಂಡಲಾರ್ಥಿಗೆ ತತ್ಸಾಧನವಾದ ಸುವರ್ಣದಲ್ಲಿ ಪ್ರವೃತ್ತಿಯಾಗುವದು. ಆ ಸ್ಥಲದಲ್ಲಿ ಭೇದವಿದ್ದಂತೆ ಇಲ್ಲಿಯೂ (ಕನಕ ಕುಂಡಲಾದಿಗಳಲ್ಲಿ) ಭೇದವನ್ನು ಹೇಳುವದಿಲ್ಲವೇಕೆ ? ಅಲ್ಲಿ ಸ್ವರ್ಗವೂ ಸುಖರೂಪವು ಅದರ ಸಾಧನವು ಕರ್ಮವು. ಆದ್ದರಿಂದ ಅಲ್ಲಿ ನಿಮಿತ್ತಕಾರಣವಾದ ಕರ್ಮಕ್ಕೂ ಫಲಕ್ಕೂ ಅತ್ಯಂತ ಭೇದವಿರಲಿ. ಇಲ್ಲಿ ಕನಕ ಕುಂಡಲಗಳಿಗೆ ಅತ್ಯಂತ ಭೇದವನ್ನು ಹೇಳುವಪಕ್ಷದಲ್ಲಿ ಘಟಪಟಗಳಿಗೆ ಉಪಾದಾನೋಪಾದೆಯ ಭಾವವಿಲ್ಲದಿರುವಂತೆ ಕನಕ ಕುಂಡಲಗಳಿಗೆ ಉಪಾದಾನೋಪಾದೆಯ ಭಾವವು ಸಂಭವಿಸಲಿಕ್ಕಿಲ್ಲವಾದ್ದರಿಂದ ಕನಕ ಕುಂಡಲಗಳಿಗೆ ಅಭೇದವನ್ನು ಹೇಳಬೇಕು. ಕರಭ ರಾಸಭಗಳಿಗೆ ಉಪಾದಾನೋ

ಪಾದೇಯ ಭಾವವಿಲ್ಲದಿರುವದರಿಂದ ಅವುಗಳಿಗೆ ಅತ್ಯಂತ ಭೇದವನ್ನು ಹೇಳಬೇಕು. ಆದ್ದರಿಂದ ಕರಭವು ತಿಳಿಯಲ್ಪಡುತ್ತಿರಲಿಕ್ಕೆ ರಾಸಭವು ತಿಳಿಯಲ್ಪಡುವದಿಲ್ಲ. ಸುವರ್ಣತ್ವ ಸಾಮಾನ್ಯ ಧರ್ಮದಿಂದ ಎಲ್ಲಾ ಸುವರ್ಣ ವಿಕಾರಗಳು ತಿಳಿಯಲ್ಪಡುತ್ತಿವೆ. ಕಟಕತ್ವ ರೂಪದಿಂದ ಗ್ರಹಿಸಲ್ಪಡುವದಿಲ್ಲ. ಕಟಕತ್ವರೂಪದಿಂದ ಕುಂಡಲಾದಿಗಳು ಗ್ರಹಿಸಲ್ಪಡದಿದ್ದರೆ ಸುವರ್ಣ ಕಟಕಗಳಿಗೆ ಅಭೇದವಿಲ್ಲೆಂದು ಹೇಳುವದು ತಪ್ಪು. ಕಟಕತ್ವಾದಿನಾ ಕಟಕಾದಿಗಳ ಜ್ಞಾನಾಜ್ಞಾನಗಳಲ್ಲಿ ಅವುಗಳ ವ್ಯಕ್ತತ್ವಾವ್ಯಕ್ತತ್ವಗಳೇ ಕಾರಣಗಳೆಂದು ಒಪ್ಪತಕ್ಕದ್ದು. ಆದ್ದರಿಂದ ಕನಕ ಕಟಕಾದಿಗಳಿಗೆ ವಾಸ್ತವ ಅಭೇದವನ್ನೂ ವಾಸ್ತವ ಭೇದವನ್ನೂ ಹೇಳಬೇಕು. ವಾಸ್ತವ ಅಭೇದವನ್ನು ಹೇಳುವಪಕ್ಷದಲ್ಲಿ ‹‹ಯಥೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂಸ್ಯಾತ್›› ಎಂಬುವೇ ಮೊದಲಾದ ಏಕ ವಿಜ್ಞಾನದಿಂದ ಸರ್ವಜ್ಞಾನ ಪ್ರತಿಜ್ಞಾ ಶ್ರುತಿಗಳು ಹೇಗೆ ಪ್ರಮಾಣಗಳಾಗುವವು. ಮತ್ತು ಏಕೋಽಭಾವಸ್ತತ್ವತೋಯೇನದೃಷ್ಟಃ ಸರ್ವೇ ಭಾವಾಸ್ತತ್ವತಸ್ತೇನದೃಷ್ಟಃ ‖ ಇತ್ಯಾದಿ ಪ್ರಾಮಾಣಿಕ ವಾಕ್ಯಗಳಾದರೂ ಸಂಗತಗಳಾಗಲಾರವು. ಮತ್ತು ‹‹ಏತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ಶ್ವೇತಕೇತೊ›› ‹‹ಸರ್ವೋಹ್ಯೇಷರುದ್ರಃ›› ‹‹ಸದೇವಸೌಮ್ಯೇದಮಗ್ರಆಸೀತ್›› ‹‹ಏಕಮೇವಾದ್ವಿತೀಯಂಬ್ರಹ್ಮ›› ‹‹ತದೈಕ್ಷತ ಬಹುಸ್ಯಾಂ ಪ್ರಜಾಯೇಯ›› ಇತ್ಯಾದಿ ಶ್ರುತಿಗಳೂ ಕೂಡ ಸಾರ್ಥಕಗಳಾಗಲಾರವು. ಅಂದರೆ ವೀರಶೈವನೇ ? ಕಾರ್ಯಕಾರಣಗಳಿಗೆ ಅಭೇದವನ್ನು ಹೇಳುತ್ತೀಯಲ್ಲವೆ ? ಹಾಗಾದರೆ ಘಟದಿಂದಾಗತಕ್ಕ ಜಲಾನಯನಾದಿ ಕಾರ್ಯಗಳು ಆ ಘಟಕ್ಕೆ ಅಭಿನ್ನವಾದ ಮಣ್ಣಿನಿಂದ ಯಾಕಾಗಬಾರದು? ಅಂದರೆ ವಿವರ್ತವಾದಿಯೇ ? ಮೃತ್ತಿಕೆಯು ಘಟಕ್ಕೆ ಅಭಿನ್ನವಾದಾಗ ಘಟಕ್ಕೆ ವ್ಯಕ್ತತ್ವವಿಲ್ಲವಾದ್ದರಿಂದ ಅವ್ಯಕ್ತ ಘಟರೂಪವಾದ ಮಣ್ಣಿನಿಂದ ವ್ಯಕ್ತಘಟದ ಕಾರ್ಯವಾಗಲಾರದು.

ಆದ್ದರಿಂದ ತಿಲದಲ್ಲಿ ತೈಲವು ಅಭಿನ್ನವಾಗಿರುವಂತೆ ಮಣ್ಣಿನಲ್ಲಿ ಮಡಿಕೆಗಳು ಸೂಕ್ಷ್ಮರೂಪದಿಂದಿರುವ ಮೂಲಕ ಅಭಿನ್ನಗಳಾಗಿರುವವು. ಘಟದ ಸೂಕ್ಷ್ಮರೂಪಕ್ಕೆ ಅಭಿನ್ನವಾದ ಮೃತ್ತಿಕೆಯೇ ಸ್ಥೂಲ ಘಟಾದಿ ಸ್ವರೂಪವಾಗಿ ಪರಿಣಮಿಸುವದು ಇದರಂತೆ ಶಿವಲಿಂಗದಲ್ಲಿ ಸೂಕ್ಷ್ಮರೂಪದಿಂದಿರುವದರಿಂದ ಶಿವಲಿಂಗಕ್ಕೆ ಅಭಿನ್ನವಾದ ಜಗತ್ತು ಪುನಃ ಶಿವಲಿಂಗದ ಇಚ್ಛೆಯಿಂದ ಸ್ಥೂಲನಾಮರೂಪಾತ್ಮಕವಾಗಿ ಪರಿಣತವಾಗುವದು. ಎಲೈ ಪರಿಣಾಮವಾದಿಯೇ!

ಈ ಜಗತ್ತು ಸೃಷ್ಟಿಗಿಂತ ಪೂರ್ವದಲ್ಲಿದ್ದಿಲ್ಲವೆಂದು ''ಇದಂವಾಗ್ರೆನೈವಕಿಂಚನಾಸೀತ್'' ''ಅಸದೇವಾಗ್ರಮಾಸೀತ್'' ಇತ್ಯಾದಿ ಶ್ರುತಿಗಳಿಂದ ಕಂಡುಬರುತ್ತದೆ. ಆದ್ದರಿಂದ ಆದಿಯಲ್ಲಿಲ್ಲದ್ದು ಅಂತ್ಯದಲ್ಲಿ (ಪ್ರಲಯದಲ್ಲಿ) ಇಲ್ಲವೆಂದಮೇಲೆ ಮಧ್ಯದಲ್ಲಿಯೂ ಇಲ್ಲವೆಂದು ಹೇಳಬೇಕು. ಹೇಳಿದರೆ ಪೂರ್ವದಲ್ಲಿ ಸೂಕ್ಷ್ಮರೂಪದಿಂದ ಶಿವನಿಗಭಿನ್ನವಾದ ಜಗತ್ತು ನಾಮರೂಪಾತ್ಮಕವಾಗಿ ಸ್ಥೂಲವಾಗಿ ಪರಿಣಮಿಸುತ್ತದೆನ್ನುವದು ತಪ್ಪು. ಆದ್ದರಿಂದಲೇ ''ಆದಾವಂತೇಚಯನ್ನಾಸ್ತಿವರ್ತಮಾನೇಪಿ ತತ್ತಥಾ'' ಎಂದು ಗೌಡಪಾದಾಚಾರ್ಯರು ಹೇಳಿದ್ದಾಳಾದ್ದರಿಂದ ಈ ಜಗತ್ತು ಬ್ರಹ್ಮದ ವಿವರ್ತವೆಂದು ಅಂಗೀಕರಿಸು. ವ್ಯರ್ಥವಾಗಿ ಕುತರ್ಕವನ್ನು ಮಾಡಬೇಡ. ಅಂದರೆ ವಿವರ್ತವಾದಿಯೇ ಗೌಡಪಾದಾಚಾರ್ಯರ ಕಾರಿಕಾರ್ಥವೂ ಮತ್ತು ಆ ಕಾರಿಕೆಯ ಭಾಷ್ಯಕಾರರ ಅಭಿಪ್ರಾಯವು ಶ್ರುತ್ಯರ್ಥಕ್ಕನುಕೂಲವಾಗಿಲ್ಲವಾದ್ದರಿಂದ ಜಗತ್ತು ಮೂರುಕಾಲಗಳಲ್ಲಿಯೂ ಇಲ್ಲವೆಂದು ಒಪ್ಪಲಾರೆನು. ಅದೇಕೆ, ''ಇದಂವಾಗ್ರೆ ನೈವಕಿಂಚನಾಸೀತ್'' ಇತ್ಯಾದಿ ಶ್ರುತಿಗಳೂ ಕೂಡ ಅದೇ ಅರ್ಥವನ್ನು ಹೇಳುವದಿಲ್ಲವೆ? ಅಂದರೆ ನಿನಗೆ ಶ್ರುತ್ಯಭಿಪ್ರಾಯವೇ ತಿಳಿದಿಲ್ಲವು. ಸೃಷ್ಟಿ ಪೂರ್ವದಲ್ಲಿ ನಾಮರೂಪದಿಂದ ಈ ಜಗತ್ತು ವ್ಯಕ್ತವಾಗಿದ್ದಿಲ್ಲವೆಂದು ಅದರ ಅರ್ಥವಲ್ಲದೆ ಜಗತ್ತೇ ಇದ್ದಿಲ್ಲವೆಂದು ಅರ್ಥಮಾಡುವದು ತಪ್ಪು. ಯಾಕಂದರೆ ''ತದ್ಧೇದಂತರ್ಹಿ ಅವ್ಯಾಕೃತಮಾಸೀತ್ ತನ್ನಾಮರೂಪಾಭ್ಯಾಂ ವ್ಯಾಕ್ರಿಯತೆ'' ಎಂಬುವೇ ಮೊದಲಾದ ಶ್ರುತಿಗಳಿಗೆ ವಿರೋಧವಾಗುವದಿಲ್ಲವೆ. ಆದ್ದರಿಂದ ಈ ಜಗತ್ತು ಸೂಕ್ಷ್ಮರೂಪದಿಂದ ಮಯೂರಾಂಡರಸನ್ಯಾಯದಿಂದ ಇದ್ದು ಪುನಃ ನಾಮರೂಪಾತ್ಮಕವಾಗಿ ಪರಿಣಮಿಸುತ್ತದೆ. ಆದುದರಿಂದ ಪರಿಣಾಮವಾದವೇ ಯುಕ್ತವು. ಪರಮ ಆಪ್ತರು ''ಚಿದಾತ್ಮೈವಹಿದೇವೋಂತಸ್ಥಿತಮಿಚ್ಛಾವಶಾದ್ಬಹಿಃ| ಯೋಗೀವ ನಿರುಪಾದಾನಮರ್ಥಜಾತಂ ಪ್ರಕಾಶಯೇತ್'' ಎಂದು ಹೇಳುತ್ತಾರೆ. ಒಂದೇ ಪಟವು ಸೂಕ್ಷ್ಮಸಂಕುಚಿತರೂಪದಿಂದ ಕಾರಣವಾಗಿ ಪ್ರಸರಿಸಲ್ಪಟ್ಟು ಕುಟೀಭಾವದಿಂದ ಹೇಗೆ ಕಾರ್ಯವಾಗುತ್ತದೆಯೋ, ಒಂದೇ ಪ್ರಾಣವು ವೃತ್ತಿಭೇದದಿಂದ ಪ್ರಾಣಾಪಾನಾದಿರೂಪವಾಗಿ ಹೇಗೆ ಅನೇಕಪ್ರಕಾರವಾಗಿದೆಯೋ, ಮತ್ತು ಆಯಾಯ ವ್ಯಾಪಾರವಿಲ್ಲದಿರುವಾಗ ಒಂದೇ ಪ್ರಾಣರೂಪವೇ ಆಗುವದೋ ಹಾಗೆ ಪರಶಿವನು ಒಬ್ಬನೇ ಆಗಿದ್ದರೂ ತನ್ನ ಸ್ವಾಭಾವಿಕವಾದ ಶಕ್ತಿ ವ್ಯಾಪಾರಭೇದದಿಂದ ಸದಾಶಿವಾದಿ ಪೃಥಿವ್ಯಂತ ತತ್ವರೂಪದಿಂದ ಅನೇಕ ರೂಪನಾಗುವನು. ಪುನಃ ತನ್ನ ಶಕ್ತಿಯ ಸ್ವಸ್ಥತಾದಶೆಯಲ್ಲಿ

ಒಬ್ಬನೇ ಆಗಿಬಿಡುವನು. ಪರಿಣಾಮವಾದಿಯೇ! ಏಕರೂಪನಾದ ಶಿವನು ಅನೇಕರೂಪನಾಗುವನೆಂಬುವದು ಲೋಕಪ್ರಸಿದ್ಧವಾದ ಮಾತು. ಛಾಯಾತಪಗಳಂತೆ ಏಕತ್ವ ಅನೇಕತ್ವಗಳು ಒಂದರಲ್ಲಿರಲಾರವು. ಆದರೆ? ಇಲ್ಲಿ ಒಂದು ಲೌಕಿಕ ದೃಷ್ಟಾಂತವನ್ನು ಹೇಳುವೆನು ಕೇಳು. ಹ್ಯಾಗಂದರೆ—ಒಂದೇ ಸ್ವಚ್ಛವಾದ ಸ್ಫಟಿಕ ಮಣಿಯು ಶುಕ್ಲಪೀತಾದಿ ನಾನಾ ರೂಪವನ್ನು ಧರಿಸಿದರೂ ಅದರ ಸ್ಫಟಿಕ ರೂಪಕ್ಕೆ ಹಾನಿ ಇಲ್ಲದಿರುವಂತೆ, ಅದ್ವಿತೀಯ ಪರಮಾತ್ಮನು ಸುರ, ಮಾನುಷ, ಪಶು, ಪಕ್ಷಿ, ಪಾದಪ ರೂಪಗಳನ್ನು ತನ್ನ ಸ್ವರೂಪಾಭೇದದಿಂದ ಧರಿಸಿದರೂ ಅವನ ಅದ್ವಿತೀಯತ್ವ ಸ್ವರೂಪಕ್ಕೆ ಹಾನಿಯಿಲ್ಲವು. ಸ್ಫಟಿಕವು ಅನ್ಯಪದಾರ್ಥದಿಂದ ನಿರ್ಮಿತಗಳಾದ ನಾನಾ ರೂಪವನ್ನು ಧರಿಸುತ್ತದೆ. ಪರಶಿವಾತ್ಮನು ತನ್ನಿಂದ ನಿರ್ಮಿತಗಳಾದ ನಾನಾ ರೂಪಗಳನ್ನು ಧರಿಸುತ್ತಾನೆ. ಇಷ್ಟೇ ವೈಲಕ್ಷಣ್ಯವು. ಪರಮಾರ್ಥಸಾರವೆಂಬಗ್ರಂಥಕಾರರಾದ ಅಭಿನವಗುಪ್ತ ಪಾದಾಚಾರ್ಯರೂ ಕೂಡ ಒಂದರಲ್ಲಿ ಏಕತ್ವ ಅನೇಕತ್ವ ಧರ್ಮಗಳನ್ನು ಬಾಲಕರಿಗೂ ಕೂಡ ತಿಳಿಯುವಂತೆ ಹೇಳಿರುವರು. ಅದನ್ನು ಕೇಳಿಯಾದರೂ ನಿನ್ನ ಸಂಶಯವನ್ನು ಕಳೆದುಕೊಳ್ಳುವನಾಗು. ಅವರು ಹೇಳಿರುವದೇನಂದರೆ ದರ್ಪಣಬಿಂಬೇ ಯದ್ವನ್ನಗರ ಗ್ರಾಮಾದಿ ಚಿತ್ರಮವಿಭಾಗಿ | ಭಾತಿವಿಭಾಗೇನೈವಚ ಪರಸ್ಪರಂದರ್ಪಣಾದಪಿಚ || ವಿಮಲತಮ ಪರಮಭೈರವಬೋಧಾತ್ ತದ್ವದ್ವಿಭಾಗಶೂನ್ಯಮಪಿ ಅನ್ಯೋನ್ಯಂಚ ತತೋಪಿಚ ವಿಭಕ್ತಮಾಭಾತಿ ಜಗದೇತತ್ || ಅಂದರೆ ಸ್ವಚ್ಛದರ್ಪಣದಲ್ಲಿ ನಗರ, ಗ್ರಾಮ, ಪ್ರಾಕಾರ, ನದ, ನದೀ, ಅಗ್ನಿ, ವೃಕ್ಷ, ಪರ್ವತ, ಪಶು, ಪಕ್ಷಿ, ಸರ್ಪ ಸ್ತ್ರೀ, ಪುರುಷಾದಿ ಪರಸ್ಪರ ಭಿನ್ನಗಳಾದ ನಾನಾ ಪದಾರ್ಥಗಳು ದರ್ಪಣಕ್ಕೆ ಅಭಿನ್ನವಾಗಿ ತೋರುತ್ತವೆ. ಮತ್ತು ಅವುಗಳು ಪರಸ್ಪರ ಭಿನ್ನಗಳೂ ಆಗಿರುವವು. ಆದರೂ ದರ್ಪಣಕ್ಕೆ ವ್ಯತಿರಿಕ್ತವಾಗಿ ತೋರುವದಿಲ್ಲ. ದರ್ಪಣವು ಆಯಾಯ ಪ್ರತಿಬಿಂಬಸ್ವರೂಪವಾದರೂ ಅವುಗಳಿಂದ ಉತ್ತೀರ್ಣವಾಗಿಯೂ (ಭಿನ್ನವಾಗಿಯೂ) ತೋರುತ್ತದೆ. ಎಲೈ ಪರಿಣಾಮವಾದಿಯೇ! ದರ್ಪಣದಲ್ಲಿ ಆನೆ ಮೊದಲಾದವುಗಳಿಗೆ ಯೋಗ್ಯಸ್ಥಾನವಿಲ್ಲದಿರುವದರಿಂದ ಇಗೋ ದರ್ಪಣದಲ್ಲಿ ಆನೆಯು ಎಂಬುವ ವ್ಯವಹಾರವು ಭ್ರಾಂತಿಸಿದ್ಧವಾದದ್ದು. ಹಾಗೆ ಬ್ರಹ್ಮದಲ್ಲಿ ಈ ಜಗತ್ತು ಭ್ರಾಂತಿಯಿಂದ ಕಲ್ಪಿತವೆಂದು ಹೇಳಿದ ಪಕ್ಷದಲ್ಲಿ ನಿನ್ನ ಪರಿಣಾಮವಾದವೆಲ್ಲಿ ಉಳಿಯಿತು. ವಿವರ್ತವಾದವೇ ಸಿದ್ಧವಾಯಿತಲ್ಲವೇ? ಅಂದರೆ ವಿವರ್ತವಾದಿಯೇ ನನ್ನ ವಿವರ್ತವಾದಕ್ಕೆ ಬಂದನೆಂದು ಸಂತುಷ್ಟನಾಗಬೇಡ. ನಿನ್ನ ಸುಕುಮಾರಮ

ತಿಗೆ ಅಭ್ಯಾಸವಿದ್ದಲ್ಲಿ ದೃಷ್ಟಾಂತವನ್ನು ತೋರಿಸಿದ್ದನ್ನೇ ಹೇಳಬೇಕಾಗಿದೆ. ಈ ದೃಷ್ಟಾಂತದಿಂದ ನಿಸರ್ಗಸಿದ್ಧ ಭೇದಾಭೇದಗಳು ಒಂದರಲ್ಲಿರಲಾರವೆಂಬುವ ಅಜ್ಞಾನವು ದೂರವಾಯಿತಷ್ಟೆ? ಇನ್ನು ದೃಷ್ಟಾಂತದಾರ್ಷ್ಟಾಂತಕ್ಕೂ ವೈಲಕ್ಷಣ್ಯವಿರಲೇಬೇಕು. ಆ ವೈಲಕ್ಷಣ್ಯವಾವುದೆಂದರೆ— ಸ್ವಚ್ಛತಾಯುಕ್ತವಾದ ದರ್ಪಣದಲ್ಲಿ ಅದಕ್ಕೆ ಭಿನ್ನಗಳಾದ ಬಾಹ್ಯನಗರಾದಿಗಳು ಪ್ರತಿಬಿಂಬರೂಪದಿಂದ ತೋರುತ್ತದೆ. ಆದ್ದರಿಂದ ದರ್ಪಣದಲ್ಲಿ ಈ ಆನೆಯು ಎಂಬುವ ವ್ಯವಹಾರವು ಭ್ರಾಂತಿಸಿದ್ಧವು. ಸ್ವಪ್ರಕಾಶರೂಪನಾದ ಶಿವನು ಸ್ವೇಚ್ಛೆಯಿಂದ ಸ್ವಾತ್ಮಭಿತ್ತಿಯಲ್ಲಿ ನಿರ್ಮಿತವಾದ ಪ್ರಪಂಚವನ್ನು ಗ್ರಹಿಸುವವನಾಗಿ ಅಭೇದದಿಂದ ತನ್ನ ಸಂವಿಚ್ಛಕ್ತಿರೂಪ ಉಪಾದಾನಕಾರಣವುಳ್ಳ ಪ್ರಪಂಚವನ್ನು ವಿಸ್ತರಿಸುತ್ತಾನಾದ್ದರಿಂದಲೇ ಜಡವಾದ ದರ್ಪಣ ಪ್ರಕಾಶಕ್ಕೂ ಪರಮಾತ್ಮ ಪ್ರಕಾಶಕ್ಕೂ ವೈಲಕ್ಷಣ್ಯವು. ಇದೇ ತಾತ್ಪರ್ಯವನ್ನೇ ಪರಮಾರ್ಥಸಾರದ ಟೀಕಾಕಾರರಾದ ಯೋಗರಾಜಾಚಾರ್ಯರು ಹೇಳಿರುವರು. ಪರಮಾರ್ಥಸಾರಕಾರರಾದ ಅಭಿನವಗುಪ್ತಪಾದಾಚಾರ್ಯರು ತಮ್ಮ ವಿವೃತಿ ವಿಮರ್ಶಿನಿಯಲ್ಲಿ ಇದೇ ಅಭಿಪ್ರಾಯವನ್ನೇ ಹೇಳಿರುವರು. ಅಂತರ್ವಿಭಾತಿ ಸಕಲಂ ಜಗದಾತ್ಮನೀಹ | ಯದ್ವದ್ವಿಚಿತ್ರರಚನಾಮುಕುರಾಂತರಾತೇ | ಬೋಧಃ ಪುನರ್ನಿಜವಿಮರ್ಶನಸಾರಯುಕ್ತ್ಯಾ ವಿಶ್ವಂ ಪರಾಮೃಶತಿನೋ ಮುಕುರಸ್ತಥಾತು || ಎಂದು ಹೇಳಿದ್ದಾರಾದ್ದರಿಂದ ವಿಶ್ವವು ಭ್ರಾಂತಿಕಲ್ಪಿತವಲ್ಲವು. ಪರಬ್ರಹ್ಮದ ಪರಿಣಾಮವೇ ಜಗತ್ತು. ಮತ್ತು “ಸ್ವೇಚ್ಛಯಾ ಸ್ವಚಿತ್ತೌ ವಿಶ್ವಮುನ್ಮೀಲಯತಿ” ಎಂಬುವ ಶಕ್ತಿಸೂತ್ರವೂ ಕೂಡ ಜಗತ್ತು ಶಿವನ ಪರಿಣಾಮವೆಂತಲೇ ಹೇಳುತ್ತದೆ. ಮತ್ತು “ಪಟವಚ್ಚ” “ಯಥಾಚಪ್ರಾಣಾದಿಃ” ಎಂಬುವ ಬ್ರಹ್ಮಸೂತ್ರಗಳೂ ಕೂಡ ಪರಿಣಾಮವಾದವನ್ನೇ ಸಮರ್ಥನಗೊಳಿಸುತ್ತವೆ. ಇದಲ್ಲದೆ “ಸ್ವಶಕ್ತಿಪ್ರಚಯೋಽಸ್ಯವಿಶ್ವಂ” ಎಂಬುವ ಶಿವಸೂತ್ರವು ಪರಿಣಾಮವಾದವನ್ನೇ ಹೇಳುತ್ತದೆ. ಮತ್ತು “ಶಕ್ತ್ಯಾಪ್ರಪಂಚಸೃಷ್ಟಿಃಸ್ಯಾದ್ಭಕ್ತ್ಯಾ ತತ್ಪ್ರಲಯೋಮತಃ” ಎಂಬುವದರಿಂದ ಅನುಭವಸೂತ್ರವೂಕೂಡ ಪರಿಣಾಮವಾದವನ್ನೇ ಪುಷ್ಟೀಕರಿಸುತ್ತದೆ. ಮತ್ತು ಪತ್ರಶಾಖಾದಿರೂಪೇಣ ಯಥಾತಿಷ್ಠತಿಪಾದಪಃ | ತಥಾಭೂಮ್ಯಾದಿರೂಪೇಣ ಶಿವಏಕೋವಿರಾಜತೇ || ಎಂಬುವ ರೇಣುಕ ಭಗವತ್ಪಾದಾಚಾರ್ಯರ ಸಿದ್ಧಾಂತ ವಚನವು ಪರಿಣಾಮವಾದದಲ್ಲಿ ಪರ್ಯವಸನ್ನವಾಗುತ್ತದೆ. ಎಲೈ ಪರಿಣಾಮವಾದಿಯೆ ನಿಮ್ಮ ಮತೀಯರಲ್ಲಿ ಕೆಲವರು ಸಿದ್ಧಾಂತಶಿಖಾಮಣಿಕಾರರಿಗೆ ಪರಿಣಾಮವಾದದಲ್ಲಿ ತಾತ್ಪರ್ಯವಿಲ್ಲವೆನ್ನುವರಲ್ಲ;

ಅಂದರೆ ತತ್ರಲೀನಮಭೂತ್ಪೂರ್ವಂಚೇತನಾ ಚೇತನಂಜಗತ್ | ಸ್ವಾಂತರ್ಲೀನಂ ಜಗತ್ಕಾರ್ಯಂ ಸ್ವಪ್ರಕಾಶ್ಯಂತದದ್ಭುತಂ || ಎಂಬುವಶ್ಲೋಕದಿಂದ ಅವರಿಗೆ ಪರಿಣಾಮವಾದವೇ ಅಭಿಪ್ರೇತವೆಂದು ತಿಳಿಯಬೇಕು. ಮತ್ತು ಸ್ವಪ್ರಭಾನಂದ ಶಿವಾಚಾರ್ಯರು ತಮ್ಮ ಶಿವಾದ್ವೈತಮಂಜರಿಯಲ್ಲಿ ವಿವರ್ತವಾದದಲ್ಲಿ ಲಿಂಗಾಂಗ ಸಾಮರಸ್ಯವು ಸಂಭವಿಸುವದಿಲ್ಲವಾದ್ದರಿಂದ ಪರಿಣಾಮವಾದವೇ ಪ್ರಾಮಾಣಿಕವೆಂದು ಅಂಗೀಕರಿಸಿರುವರಾದ್ದರಿಂದ ಎಲೈ ವಿವರ್ತವಾದಿಯೇ ? ನಮ್ಮ ಪೂರ್ವಾಚಾರ್ಯರಿಂದ ಅಂಗೀಕೃತವಾದ ಪರಿಣಾಮವಾದವನ್ನೇ ಸಮರ್ಥಿಸುವೆನು. ವೀರಶೈವನೇ? ಶಂಕರಾಚಾರ್ಯರು ಸಾಮಾನ್ಯರಲ್ಲವು. ಅವರು ಈ ವಿವರ್ತವಾದವನ್ನು ಅಂಗೀಕರಿಸಿರುವರು. ಪರಿಣಾಮವಾದವನ್ನು ಸ್ವೀಕರಿಸಿಲ್ಲವು. ಅವರ ಮತವನ್ನು ನೀನು ಒಪ್ಪಿಕೊಳ್ಳಲೇ ಬೇಕಾಗುವದು. ಮಹಾಜನೋಯೇನಗತಃ ಸಪಂಥಾಃ | ಎಂದು ನೀತಿಯಿರುವದು. ಮಹಾಜನಗಳಮಾರ್ಗವನ್ನು ಉಲ್ಲಂಘಿಸುವದು ಸರಿಯಲ್ಲ. ಅಂದರೆ ಎಲೈ ಮಾಯಾವಾದಿಯೇ ? ನಾನು ಮಹಾಜನಮಾರ್ಗವನ್ನು ಬಿಟ್ಟಿಲ್ಲವು. ನಿಮ್ಮಾಚಾರ್ಯರು ಮಾತ್ರ ಮಹಾಜನಮಾರ್ಗವನ್ನು ಬಿಟ್ಟು ಹೊಸದಾಗಿ ಒಂದು ಮಾರ್ಗವನ್ನು ಕಲ್ಪಿಸಿರುವರು. ಅದರಂತೆ ನನ್ನದೊಂದು ಬೇರೆ ಮಾರ್ಗವನ್ನು ಕಲ್ಪಿಸಿಲ್ಲವು. ನಿಮ್ಮ ಆಚಾರ್ಯರಿಗೂ ಕೂಡ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟು ಅನುಗ್ರಹಿಸಿ ಉದ್ಧರಿಸಿದ ಶ್ರೀಮಜ್ಜಗದ್ಗುರು ರೇವಣಸಿದ್ಧ ಭಗವತ್ಪಾದ ಶಿವಾಚಾರ್ಯರು ಮತ್ತು ಇನ್ನೂ ಅನೇಕ ಶಿವಾಚಾರ್ಯರ ಮಾರ್ಗವನ್ನು ಅವಲಂಬಿಸಿದ್ದೇನೆ. "ಶಂಕರಾಚಾರ್ಯಸನ್ನಾಮಯೋಗೀಂದ್ರಾಯ ಮಹೋಜ್ವಲಂ| ಚಂದ್ರಮೌಳೀಶ್ವರಂಲಿಂಗಂ ದತ್ತವಾನಿತಿವಿಶ್ರುತಃ | ಶ್ರೀ ರೇಣುಕಗಣೇಶಾಖ್ಯಂ ರೇವಣಸಿದ್ಧದೇಶಿಕಂ | ವೀರಶೈವಮತಾಚಾರ್ಯಂ ವಂದೇಹಂ ತಂ ಜಗದ್ಗುರುಂ || ಎಂಬುವ ಶ್ಲೋಕದ ಅರ್ಥವನ್ನು ಚನ್ನಾಗಿ ವಿಚಾರಿಸು. ಒಳ್ಳೇದು, ವೀರಶೈವನೇ ? ಈ ಪ್ರಮಾಣಶ್ಲೋಕಗಳು ಯಾವ ಗ್ರಂಥದಲ್ಲಿ ಅವೆ ? ಅಂದರೆ ವಿವರ್ತವಾದಿಯೇ ? ಶ್ರೀಮನ್ನೀಲಕಂಠ ಶಿವಾಚಾರ್ಯರನ್ನು ಶಂಕರಾಚಾರ್ಯರು ಜಯಿಸಿದರು. ಮತ್ತು ಶಾಂಕರಮತವನ್ನು ಸಮ್ಮತಿಸಿದರೆಂದು ಯಾವ ಗ್ರಂಥದಲ್ಲಿ ಹೇಳುತ್ತದೆ. ಶಂಕರದಿಗ್ವಿಜಯದಲ್ಲಿ ಹೇಳುತ್ತದೆಂದರೆ ಶಂಕರ ದಿಗ್ವಿಜಯದಂತೆ ಇರುವ ಗ್ರಂಥದಲ್ಲಿಯೇ ಲಿಂಗವನ್ನು ಕೊಟ್ಟರೆನ್ನುವದಕ್ಕೆ ಪ್ರಮಾಣವಿದೆ. ಅಲ್ಲದೇ ಲೋಕಪ್ರಸಿದ್ಧಿಯೂ ಕೂಡ ಇರುವದು. ಇದಲ್ಲದೆ ನಿನ್ನ ಪರಿಣಾಮವಾದದಲ್ಲಿ ನಿಮ್ಮ ಆಚಾರ್ಯ

ರೆಲ್ಲರ ಸಮ್ಮತಿ ಇರುವದೊ? ಅವಶ್ಯವಾಗಿರಲಿಕ್ಕೇಬೇಕು. ಎಲ್ಲರೂ ಲಿಂಗಾಂಗ ಸಾಮರಸ್ಯವನ್ನು ಒಪ್ಪಿಕೊಳ್ಳತಕ್ಕವರಾಗಿದ್ದಾರೆ. ಒಳ್ಳೇದು ನಿಮ್ಮಲ್ಲಿ ಮರಿತೋಂಟದಾರ್ಯನೆಂಬ ಪ್ರಸಿದ್ಧ ಪಂಡಿತನು ಕೆಳದಿಯಲ್ಲಿ ಅರಸರಿದ್ದ ಕಾಲದಲ್ಲಿ ಇದ್ದನಷ್ಟೆ, ಅವನ ಅಭಿಪ್ರಾಯವು ನಿನ್ನ ಪರಿಣಾಮವಾದದಲ್ಲಿದ್ದರೆ ಹೇಳು ಅಂದರೆ— ವಿರೋಧಪರಿಹಾರೇಣ ತಾವತ್ಪ್ರಮಾಣೈಕವಾಕ್ಯತಾ ಸಂಪತ್ತಿ ಸಂಪಾದಕ ಬ್ರಹ್ಮಮೀಮಾಂಸಾ ಶಾಸ್ತ್ರಪ್ರಣೇತೃ ಭಗವದ್ಬಾದರಾಯಣಮುನಿ ತಾತ್ಪರ್ಯಾನುಕೂಲ ವೀರಶೈವಸಂಪ್ರದಾಯ ಸಾರತರ ಪರಿಣಾಮವಾದ ವಿಶಿಷ್ಟಾದ್ವೈತ ಪ್ರಕ್ರಿಯಾವಿಶೇಷ ಷಟ್‌ಸ್ಥಲತತ್ವಾನುಬದ್ಧ ಶ್ರದ್ಧಾನುಪಿಪಾಸಿತ ಸಿದ್ಧಾಂತಸುಧಾಪಾಗ್ವೀರಶೈವ ವಿಬುಧಾನ್ || ಎಂದು ಅವರೇ ತಮ್ಮ ವೀರಶೈವಾನಂದ ಚಂದ್ರಿಕೆಯೆಂಬ ಗ್ರಂಥದಲ್ಲಿ ಹೇಳಿದ್ದಾರೆ. ಇನ್ನು ಮೇಲೆ ಷಟ್‌ತ್ರಿಂಶತ್ತತ್ವಗಳ ನಿರೂಪಣವನ್ನು ಮಾಡುವೆನು. ಇದರಿಂದ ನಿನಗಿರುವ ಪರಿಣಾಮವಾದ ವಿಷಯಕವಾದ ವಿಪ್ರತಿಪತ್ತಿಯು ದೂರವಾಗದೇ ಇರಲಾರದು. ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ, ಬುದ್ಧಿ, ಅಹಂಕಾರ, ಮನಃ, ಶ್ರೋತ್ರ, ತ್ವಕ್, ಚಕ್ಷು, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ತೇಜಸ್ಸು, ಜಲ, ಪೃಥಿವೀ ಎಂದು ಮುವ್ವತ್ತಾರು ತತ್ವಗಳು. ಇವುಗಳ ಲಕ್ಷಣವನ್ನು ಯಥಾಕ್ರಮವಾಗಿ ಮಾಡುತ್ತೇನೆ. ಚಿತ್ತವಿಟ್ಟು ಗ್ರಹಿಸು.

ಒಳ್ಳೇದು ವೀರಶೈವನೆ! ಈ ಮೂವತ್ತಾರು ತತ್ವಗಳ ವಿಷಯದಲ್ಲಿ ಪ್ರಮಾಣವಿದ್ದರೆ ಅದನ್ನು ಮೊದಲು ಹೇಳು. ಆಗಲಿ, ಲಕ್ಷಣಪ್ರಮಾಣಗಳಿಂದಲೇ ತತ್ವಗಳ ಸಿದ್ಧಿಯು. ಆದ್ದರಿಂದ ಪ್ರಮಾಣವನ್ನು ಹೇಳುವೆನು. ವೃದ್ಧಜಾಬಾಲೋಪನಿಷತ್ತಿನಲ್ಲಿ ಈ ಮೂವತ್ತಾರು ತತ್ವಗಳ ವರ್ಣನೆಯು ವಿಸ್ತೃತವಾಗಿರುವದು. ಪುನಃ ತಂ ಹೋವಾಚಕಾನಿಷಟ್ ತ್ರಿಂಶತ್ತತ್ವಾನೀತಿ ಸತಾಸ್ಮಾಆಹ ಶಿವಶಕ್ತಿ ಸದಾಶಿವ ಈಶ್ವರ ಶುದ್ಧವಿದ್ಯಾ ಏತಾನಿ ಶುದ್ಧಾನಿ ಪಂಚತತ್ವಾನಿ ಮಾಯಾ ಕಾಲೋ ನಿಯತಿಃ ಕಲಾ ವಿದ್ಯಾರಾಗಃ ಪುರುಷಃ ಇತಿ ಶುದ್ಧಾಶುದ್ಧಾನಿ ಸಪ್ತತತ್ವಾನಿ ಇತ್ಯಾದಿ ಮೇಲೆ ಹೇಳಿದ ಮೂವತ್ತಾರು ತತ್ವಗಳು ಹೇಳಲ್ಪಟ್ಟವೆ. ಮತ್ತು ಕಾಲಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಂ || ಎಂದು ಶ್ವೇತಾಶ್ವತರದಲ್ಲಿಯೂ ವ್ಯಕ್ತರೂಪದಿಂದ ಹೇಳಲ್ಪಟ್ಟಿದೆ. ಮತ್ತು ನಾರಾಯಣೋಪನಿಷತ್ತಿನಲ್ಲಿಯೂ. ಪ್ರಾಣಾಪಾನ ವ್ಯಾನೋದಾನ ಸಮಾನಾ ಮೇ...

ಧ್ಯಂತಾಂ ಇಲ್ಲಿಂದ ಮೊದಲು ಪರಮಾತ್ಮಾ ವಿಶುಧ್ಯತಾಂ ಎಂಬುವವರಿಗೂ ಮೂವತ್ತಾರು ತತ್ವಗಳು ಹೇಳಲ್ಪಟ್ಟಿರುವವು. ಮತ್ತು ಅದೇ ನಾರಾಯಣೋಪನಿಷತ್ತಿನ ಪಂಚಬ್ರಹ್ಮ ಮಂತ್ರಗಳಿಂದ ಈ ಮೂವತ್ತಾರು ತತ್ವಗಳು ಹೇಳಲ್ಪಡುತ್ತವೆ. ಈ ವಿಷಯದಲ್ಲಿ ಉಪಬೃಂಹಣಶ್ಲೋಕಗಳಿರುವವು. ಷಟ್ತ್ರಿಂಶತ್ತತ್ವರೂಪತ್ವಂ ತಲ್ಲಿಂಗಸ್ಯೈವಸರ್ವದಾ ಪಂಚಬ್ರಹ್ಮಾಭಿಧೈರ್ಮಂತ್ರೈಃ ಪ್ರೋಚ್ಯತೆ ಪರಮಾರ್ಥತಃ| ಸದ್ಯೋಜಾತ ಸ್ವರೂಪಾಯ ಭೂತತತ್ವಾಯ ನಮೋಸ್ತುತೆ || ಎಂಬುವದರಿಂದ ಶಿವತತ್ವಾತ್ಮನೇ ತುಭ್ಯಮೋಂಕಾರಾಯ ನಮೋನಮಃ|| ಎಂಬುವವರಿಗೂ ಮೂವತ್ತಾರು ತತ್ವಗಳು ಹೇಳಲ್ಪಟ್ಟಿವೆ. ಮತ್ತು "ನಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ" ಎಂಬುವ ಬ್ರಹ್ಮಸೂತ್ರವೂ ಕೂಡ ಪ್ರಮಾಣವಾಗಿದೆ. ಯಾವದರಲ್ಲಿ "ಪಂಚಪಂಚಜನಾಃ" ಎಂಬುವ ಶ್ರುತಿಯಲ್ಲಿ ಇಪ್ಪತ್ತೈದು ತತ್ವಗಳು [illegible] ಪ್ಪಿವೆಯಲ್ಲಾ? ಎಂದು ಸಾಂಖ್ಯರು ಕೇಳುತ್ತಿರಲಿಕ್ಕೆ ವ್ಯಾಸರು ಅದಕ್ಕೆ ನ (ಅಲ್ಲವು). "ನಾನಾತ್ವಾತ್ ಅತಿರೇಕಾಚ್ಚ" ಎಂದು ಉತ್ತರ ಕೊಟ್ಟಿರುವದು ಇದರಮೇಲೆ ಮೂವತ್ತಾರು ತತ್ವಗಳು ಬ್ರಹ್ಮಸೂತ್ರಸಿದ್ಧಗಳೆಂತಲೂ ಸ್ಪಷ್ಟವಾಗುತ್ತದೆ. ಇನ್ನು ಶಿವಾಗಮಗಳು ಶಿವಸೂತ್ರ ಅನುಭವಸೂತ್ರ ಸಿದ್ಧಾಂತಶಿಖಾಮಣಿ ಪರಮಾರ್ಥಸಾರ ಇವೇ ಮೊದಲಾದ ವೀರಶೈವ ಗ್ರಂಥಗಳಲ್ಲಿ ಸ್ಪಷ್ಟವಾಗಿ ಮೂವತ್ತಾರು ತತ್ವಗಳು ಹೇಳಲ್ಪಟ್ಟಿರುವವು. ಆದ್ದರಿಂದ ವೇದಾನುಕೂಲ ಸಿದ್ಧಾಂತಾದ್ಯಾಗಮಗಳಿಂದಲೂ, ವೃದ್ಧಜಾಬಾಲಾದಿ ಸಾಕ್ಷಾತ್ ಶ್ರುತಿಗಳಿಂದಲೂ, ಮೂವತ್ತಾರು ತತ್ವಗಳು ಹೇಳಲ್ಪಡುವಕಾರಣ ಮೂವತ್ತಾರು ತತ್ವಗಳು ವೈದಿಕಗಳೆಂಬುವದು ಘಂಟಾಘೋಷವು. ಶ್ರೀಮದ್ರೇಣುಕ ಭಗವತ್ಪಾದಾಚಾರ್ಯರಿಂದ ಯಸ್ಯೋರ್ಮಿಬುದ್ಬುದಾಭಾಸಃ ಷಟ್ತ್ರಿಂಶತ್ತತ್ವಸಂಚಯಃ || ಮತ್ತು ಅಭಿಯುಕ್ತರಾದ ಮಗ್ಗೆಮಾಯಿದೇವರಿಂದ ಸ್ವಲೀನಷಟ್ತ್ರಿಂಶದಖಂಡಧಾಮ್ನೆ || ಮತ್ತು ಶ್ರೀ ಮಹಾಮಾಹೇಶ್ವರ ಅಭಿನವಾಚಾರ್ಯರಿಂದಲೂ, ಯತ್ಪರತತ್ವಂ ತಸ್ಮಿನ್ವಿಭಾತಿ ಷಟ್ತ್ರಿಂಶದಾತ್ಮಜಗತ್ || ಇಂತೆಂದು ಮೂವತ್ತಾರು ತತ್ವಗಳು ಅಂಗೀಕರಿಸಲ್ಪಟ್ಟವೆಯಲ್ಲದೆ ಇನ್ನೂ ಅನೇಕರಿಂದಲೂ ಸ್ವೀಕೃತಗಳಾಗಿವೆ. ಗ್ರಂಥವಿಸ್ತರಭಯದಿಂದ ಅವರೆಲ್ಲರ ಉಕ್ತಿಗಳನ್ನು ಇಲ್ಲಿ ಹೇಳಲಾಗುವದಿಲ್ಲ. ಪರಶಿವಬ್ರಹ್ಮವು ಸೃಷ್ಟಿಗುನ್ಮುಖವಾಗಲು "ಬಹುಸ್ಯಾಂ" ಬಹುರೂಪನಾಗುವೆನು ಎಂಬುವ ಇಚ್ಛಾಶಕ್ತಿಯು ಆವಿರ್ಭವಿಸುವದು. ಈ ಇಚ್ಛಾಶಕ್ತಿಯು ಜ್ಞಾನಕ್ರಿಯಾಶಕ್ತಿಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡಿದೆ. ಈ ಜ್ಞಾನ ಕ್ರಿಯೆಗಳಲ್ಲಿ ಜ್ಞಾನಶಕ್ತಿಯು

ಇಚ್ಛಾಶಕ್ತಿಗೆ ಅಂತರಂಗವು. ಕ್ರಿಯಾಶಕ್ತಿಯು ಅದಕ್ಕಿಂತಲೂ ಸ್ವಲ್ಪ ಬಹಿರಂಗವಾಗಿದೆ. ಈ ಅಂತರಂಗವಾದ ಜ್ಞಾನಶಕ್ತಿಯಲ್ಲಿ ಮಹೇಶ್ವರನು ಬೆರೆಯಲು ನಾನು ಸರ್ವಜ್ಞನು ಎಂದು ಅಭಿಮಾನವುಂಟಾಗಿ ಆ ಮಹೇಶ್ವರನೇ ಶಿವತತ್ತ್ವವೆನಿಸುವನು. ಮತ್ತು ಈ ಶಿವತತ್ತ್ವವೇ ಭಾವಿ ಚರಾಚರ ಪ್ರಪಂಚಕ್ಕೆ ಕುಂಭಕ್ಕೆ ಕುಲಾಲನಂತೆ ನಿಮಿತ್ತಕಾರಣವಾಗುವದು. ಇಚ್ಛಾಶಕ್ತಿಗೆ ಬಹಿರಂಗವಾದ ಕ್ರಿಯಾಶಕ್ತಿಯಲ್ಲಿ ಪ್ರವೇಶಿಸಿ ನಾನು ಸರ್ವಕರ್ತೃವು ಎಂದು ಅಭಿಮಾನಿಸಿಕೊಂಡಾಗ ಮಹೇಶ್ವರನೇ ಶಕ್ತಿತತ್ತ್ವದಶೆಯನ್ನು ಹೊಂದುವನು. ಈ ಶಕ್ತಿತತ್ತ್ವವೇ ಘಟಕ್ಕೆ ಮಣ್ಣಿನಂತೆ ಭಾವಿಪ್ರಪಂಚಕ್ಕೆ ಉಪಾದಾನಕಾರಣವಾಗುವದು. ಈ ಶಕ್ತಿತತ್ತ್ವವೇ ಸ್ವಲೀಲೆಯಿಂದ ಪುಂಭಾವವನ್ನು ಹೊಂದಲು ನಾರಾಯಣನೆನಿಸಿಕೊಳ್ಳುತ್ತದೆ. ಆದ್ದರಿಂದಲೇ ಕೃಷ್ಣಗೀತೆಯಲ್ಲಿ "ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ||" ಎಂದು ತನ್ನ ನಿಜಸ್ಥಿತಿಯನ್ನು ಹೇಳಿಕೊಂಡಿರುವನು. ಅಂದರೆ ಯಾವಾಗಲೂ ಚಂದ್ರನನ್ನೇ ಆಶ್ರಯಿಸಿಕೊಂಡ ಚಂದ್ರಿಕೆಯಂತೆಯೂ, ಪ್ರಭಾಕರನನ್ನೇ ಆಶ್ರಯಿಸಿಕೊಂಡ ಪ್ರಭೆಯಂತೆಯೂ, ಜಲವನ್ನೇ ಆಶ್ರಯಿಸಿಕೊಂಡಿರುವ ಮಧುರ ರಸದಂತೆಯೂ, ಶಿವತತ್ತ್ವವನ್ನೇ ಆಶ್ರಯಿಸಿಕೊಂಡಿರುವೆನೆಂದು ಅವನೇ ಹೇಳಿರುವನು. ಇರಲಿ, ಈಬಗ್ಗೆ ಇನ್ನೂ ವಿಸ್ತೃತವಾಗಿ ಬರೆಯಬೇಕಾಗಿದ್ದರೂ ಬ್ರಹ್ಮಾದ್ವೈತಿಯು ಮುಖ್ಯವಾಗಿ ತತ್ತ್ವನಿರೂಪಣದಲ್ಲಿ ಪ್ರವೃತ್ತನಾದ ನನಗೆ ವೈಷ್ಣವಮತ ವಿಚಾರ ವಿಷಯವು ಅಸಮಂಜಸವಾದರೂ ಪ್ರಾಸಂಗಿಕವಾಗಿ ಶಕ್ತಿತತ್ತ್ವದ ಪುಂಭಾವವೇ ನಾರಾಯಣನೆಂದು ಹೇಳಬೇಕಾಯಿತು. ಇನ್ನು ತನ್ನ ಇಚ್ಛಾಶಕ್ತಿಗೆ ಅಂತರಂಗವಾದ ಜ್ಞಾನಶಕ್ತಿಯು ಉದ್ರೇಕಾವಸ್ಥೆಯಲ್ಲಿ ಪ್ರವಿಷ್ಟವಾಗಿ ಸ್ವಲ್ಪಹೊತ್ತಿನಲ್ಲಿಯೇ ಅಂಕುರಿಸುವ ಉಪ್ಪಿದ ಕಡಲೆಯಂತೆ ಇರಲು ಇದನ್ನು ಗರ್ಭಾವೇಷ್ಟನ ಪೂರ್ಣಪುಟಕದಂತೆ ಆವರಿಸಿ "ಅಹಮಿದಂ" ನಾನೇ ಈ ಪ್ರಪಂಚವು ಎಂದು ಅಭಿಮಾನಿಸುವದೆ ಸದಾಶಿವತತ್ತ್ವವು (ರುದ್ರತತ್ತ್ವವು). ಹಿಂದೆ ಹೇಳಿದ ಶಕ್ತಿತತ್ತ್ವವು ಉದ್ರಿಕ್ತವಾಗಲು ಅಲ್ಲಿ ಪ್ರವಿಷ್ಟವಾದ ಶಿವತತ್ತ್ವವು ಅಂಕುರಿಸಲ್ಪಟ್ಟ ಪ್ರಪಂಚವನ್ನು "ಅಹಮಿದಂ" ಎಂದ. ತನ್ನ ಅಹಂತಾವೃತ್ತಿಯಿಂದ ಆಚ್ಛಾದಿಸಿಕೊಂಡಿರತಕ್ಕದ್ದಾಗಲು ಈಶ್ವರತತ್ತ್ವವೆನಿಸುವದು. ಇನ್ನು ಸಾಗರತರಂಗಗಳಂತೆ "ಅಹಮಿದಂ" ಎಂದು ಅಹಂಕಾರಕ್ಕೂ ಇದಂಕಾರಕ್ಕೂ ಐಕ್ಯಜ್ಞಾನವೇ ಪ್ರತ್ಯಾಪರಪರ್ಯಾಯ ಶುದ್ಧವಿದ್ಯಾತತ್ತ್ವವು ಇದಕ್ಕೇನೇ ಗುರುಶಾಸ್ತ್ರಜನ್ಯ ತತ್ತ್ವಜ್ಞಾನವೆನ್ನುವರು. ಈ ಶುದ್ಧವಿದ್ಯಾತತ್ತ್ವವೇ ತನ್ನಲ್ಲಿ ಅಂಡಕಸನ್ಯಾಯದಿಂದ ಲೀ

ಸಗಳಾದ ಭಾವಪದಾರ್ಥಗಳು ಆವಿರ್ಭಾವೋನ್ಮುಖಗಳಾಗಲು ಆ ವಿಭಕ್ತಗ ಳಾದ ಇಚ್ಛಾಜ್ಞಾನಕ್ರಿಯಾಶಕ್ತಿಗಳು ಅನ್ಯೋನ್ಯಾಭಾವರೂಪಭೇದವುಳ್ಳವುಗ ಳಾಗಲು ಆ ಭೇದಬುದ್ಧಿಯೇ ಪ್ರಧಾನವಾಗಿವುಳ್ಳ ಮಾಯಾತತ್ವವಾಗುವದು. ಕಾಷ್ಟಯೋಗದಿಂದ ಅಗ್ನಿಕಣಗಳ ಆವಿರ್ಭಾವದಂತೆ ಸ್ವೇಚ್ಛೆಯಿಂದ ವಿಭಕ್ತವಾದ ಶಿವಚೈತನ್ಯವೇ ಆ ಮಾಯಾಶಕ್ತಿಯಲ್ಲಿ ಪ್ರವೇಶಿಸಿ ಪುರುಷತತ್ವವೆನಿಸುವದು. ಈ ಪುರುಷತತ್ವವು ಮಾಯೆಯಿಂದ ಕೂಡಿದ್ದರಿಂದ ನಾನು ಶಿವನಲ್ಲವೆಂದು ಅಜ್ಞಾ ನಾವರಣವೂ. ಮತ್ತು ಅನಾತ್ಮಗಳಾದ ದೇಹಾದಿಗಳಲ್ಲಿ ಆತ್ಮತಾಜ್ಞಪ್ತಿಯೂ ಆವಿ ರ್ಭವಿಸುವದು. ಇವೆರಡಕ್ಕೂ ಆಣವಮಲವೆನ್ನುವರು. ಶುಭಾಶುಭ ಕರ್ಮವಾಸ ನೆಯಿಂದ ಪ್ರಾಪ್ತವಾದ ಕಾರ್ಮಮಲವು ಮೇಲೆ ಹೇಳಿದ ದ್ವೈತಬುದ್ಧಿರೂಪ ವಾದ ಮಾಯಿಕ ಮಲವು ಆವಿರ್ಭವಿಸಿ ಪುರುಷನಿಗೆ ಸಂಸಾರವನ್ನುಂಟುಮಾಡು ವವು. ಹೀಗೆ ಅಣುವಾದ ಜೀವನಿಗೆ ಕಿಂಚಿತ್ಕರ್ತೃತ್ವಶಕ್ತಿಯೇ ಕಲಾತತ್ವವು. ಕಿಂಚಿಜ್ಞತಾಶಕ್ತಿಯೇ ವಿದ್ಯಾತತ್ವವು. ವಿಷಯಾನುರಾಗವೇ ರಾಗತತ್ವವು. ಈಗ ಘಟವು ಆಗ ಪಟವು ಎಂಬುವ ಜ್ಞಾನಕ್ಕೆ ವಿಷಯವಾದದ್ದೇ ಕಾಲತತ್ವವು. ಈ ಕಾರಣದಿಂದ ಈ ಕಾರ್ಯವೇ ಹುಟ್ಟುತ್ತದೆ ಮತ್ತೊಂದಾಗ ವಲ್ಲವೆಂಬುವ ನಿಯಮಕ್ಕೆ ಕಾರಣವಾದದ್ದೇ ನಿಯತಿತತ್ವವು.

ಹ್ಯಾಗೆಂದರೆ ಅಶ್ವಮೇಧದಿಂದಲೇ ಸ್ವರ್ಗವು ಶಿವಪೂಜೆಯಿಂದಲೇ ಮೋ ಕ್ಷವು. ಕ್ಷುದ್ರದೇವತೆಗಳ ಪೂಜೆಯಿಂದಿಲ್ಲವು. ಎಂಬುವ ನಿಯಮಕ್ಕೆ ಕಾರಣವಾ ದದ್ದೇ ನಿಯತಿತತ್ವವು. ರಾಜನು ಒಬ್ಬನ ಐಶ್ವರ್ಯವೆಲ್ಲವನ್ನು ಅಪಹರಿಸಿಕೊಂ ಡು ಅವನ ಜೀವನಕ್ಕೆ ಸ್ವಲ್ಪ ಭಾಗವನ್ನು ಕೊಡುವಂತೆ ಪರಪ್ರಕಾಶವು ವಿಭಕ್ತ ವಾಗಲು ಮಾಯೆಯಿಂದ ಅಪಹರಿಸಲ್ಪಟ್ಟ ಸರ್ವೈಶ್ವರ್ಯವುಳ್ಳದ್ದಾಯಿತು ಅಂ ದರೆ ಸರ್ವಕರ್ತೃತ್ವ ಸರ್ವಜ್ಞತ್ವ ಪೂರ್ಣತ್ವ ನಿತ್ಯತ್ವ ವ್ಯಾಪಕತ್ವಗಳಾದ ಅಸಂ ಕುಚಿತ ಶಕ್ತಿಗಳು ಸಂಕುಚಿತಗಳಾಗಿ ಕಲಾ ವಿದ್ಯಾ ರಾಗ ಕಾಲ ನಿಯತಿ ರೂಪ ಗಳಾಗಲು ಇವುಗಳಿಂದ ಕೂಡಿದ ಪುರುಷನು ಬದ್ಧನೆನಿಸಿದನು. ಆ ವಿಮರ್ಶ ರೂಪವಾದ ಶಿವನ ಇಚ್ಛಾಶಕ್ತಿಯು ನಾನು ಶಿವನಲ್ಲ. ಶಿವನಿಗಿಂತ ಭಿನ್ನನು. ಎಂಬುವ ಬುದ್ಧಿರೂಪವಾದ ಮೂಲಮಾಯೆಯಲ್ಲಿ ಪ್ರತಿಸ್ಫುರಣವಾಡಲು ತನ್ನ ಲ್ಲಿದ್ದ ಜ್ಞಾನಕ್ರಿಯೆಗಳನ್ನೊಳಕೊಂಡು ಸತ್ವರಜಸ್ತಮೋಗುಣಗಳ ಸಾಮ್ಯಾವ ಸ್ಥಾರೂಪವಾದ ಅಹಂಕಾರಾದಿ ಪೃಥಿವ್ಯಂತ ತತ್ವಗಳ ಮೂಲಕಾರಣರೂಪ ಪ್ರಕೃತಿ ತತ್ವವೆನಿಸುವದು. ಇನ್ನು ಮುಂದಣ ತತ್ವಗಳನ್ನು ಸಾಂಖ್ಯೋಕ್ತ ತತ್ವ

ಗಳಂತೆ ತಿಳಿಯತಕ್ಕದ್ದು. ಇನ್ನು ಇಲ್ಲಿ ಕೆಲವು ಪ್ರಾಮಾಣಿಕರ ಉಕ್ತಿಗಳನ್ನು ಹೇಳುವೆನು. ಇದರಿಂದಲೂ ಮೂವತ್ತಾರು ತತ್ವಗಳು ಸ್ಪಷ್ಟವಾಗುವವು. "ಶಿವ ಶಕ್ತಿ ಸದಾಶಿವತಾಮೀಶ್ವರ ವಿದ್ಯಾಮಯಿಂಚ ತತ್ವದಶಾಂ | ಶಕ್ತೀನಾಂಪಂಚಾನಾಂ ವಿಭಕ್ತಭಾವೇನಭಾಸಯತಿ || ಪರಮಂ ಯತ್ಸ್ವಾತಂತ್ರ್ಯಂ ದುರ್ಘಟಸಂಪಾದನಂ ಮಹೇಶಸ್ಯದೇವೀಮಾಯಾಶಕ್ತಿಃ ಸ್ವಾತ್ಮಾವರಣಂ ಶಿವಸ್ಯೈತತ್ || ಮಾಯಾಪರಿಗ್ರಹವಶಾತ್ ಬೋಧೋಮಲಿನಃ ಪುಮಾನ್ ಪಶುರ್ಭವತಿ ಕಾಲಕಲಾನಿಯತಿವಶಾತ್ ರಾಗಾವಿದ್ಯಾವಶೇನಸಂಬದ್ಧಃ || ಅಧುನೈವ ಕಿಂಚಿದೇವೇದಮೇವಸರ್ವಾತ್ಮನೈವಜಾನಾಮಿ ಮಾಯಾಸಹಿತಂ ಕಂಚುಕಷಟ್ಕಮಣೋರಂತರಂಗಮಿದಮುಕ್ತಂ || ಇಚ್ಛಾಶಕ್ತಿ ಪ್ರಧಾನವಾದದ್ದು ಅಂತಃಕರಣವೆನಿಸುವದು ಜ್ಞಾನಶಕ್ತಿಯೇ ಮುಖ್ಯವಾದದ್ದು. ಜ್ಞಾನೇಂದ್ರಿಯಪಂಚಕವು ಕ್ರಿಯಾಶಕ್ತಿ ಪ್ರಧಾನವಾದದ್ದು. ಪ್ರಾಣಪಂಚಕವು ಕರ್ಮೇಂದ್ರಿಯಪಂಚಕವು ಸೂಕ್ಷ್ಮಸ್ಥೂಲಭೂತಗಳು ತಾಮಸಕ್ರಿಯಾಶಕ್ತಿ ಪ್ರಧಾನವಾದವುಗಳು. ಎಲೈ ಶಿವಾದ್ವೈತಿಯೇ ? ಲೋಕದಲ್ಲಿ ಕುಲಾಲ ಕುವಿಂದ ಮೊದಲಾದವರು ಘಟಪಟಾದಿ ಕಾರ್ಯಗಳನ್ನು ಮಾಡಬೇಕಾದರೆ ಅನೇಕ ಸಾಮಗ್ರಿಗಳಿಂದ ಮಾಡುತ್ತಾರೆ. ಕುಲಾಲನಂತೆ ನಿಮಿತ್ತಕಾರಣವಾದ ಶಿವತತ್ವವು ಯಾವದೂ ಒಂದನ್ನು ಅಪೇಕ್ಷಿಸದೇ ಜಗತ್ಕಾರ್ಯವನ್ನು ಮಾಡುವ ಬಗೆ ಹೇಗೆ ? ಅಂದರೆ ವಸ್ತುತಃ ತನಗಭಿನ್ನವಾದ ಶಕ್ತಿಯೆಂಬ ಉಪಾದಾನಕಾರಣವನ್ನು ತೆಗೆದುಕೊಂಡು ಮಾಯಾಂಡವೆಂಬ ಚಕ್ರಭ್ರಮಣದಿಂದಲೂ ಪ್ರಕೃತ್ಯಂಡವೆಂಬ ದಂಡದಿಂದಲೂ ಬ್ರಹ್ಮಾಂಡಭಾಂಡವನ್ನು ಶಿವನೆಂಬ ಕುಲಾಲನು ಮಾಡುವನೆಂದು ತಿಳಿ. ಶಿವಾದ್ವೈತಿಯೇ ? ಈಗ ಏಕವಿಜ್ಞಾನದಿಂದ ಸರ್ವ ವಿಜ್ಞಾನ ಪ್ರತಿಜ್ಞಾವಾಕ್ಯವು ಹೇಗೆ ಸಂಗತವಾಗುವದು ? ನಿಮಿತ್ತಕಾರಣವೊಂದು ಬೇರೆ ಉಪಾದಾನಕಾರಣವೊಂದು ಬೇರೆಯಾಗಲಿಲ್ಲವೆ ? ಕುಲಾಲನ ಜ್ಞಾನವಾಗಿದ್ದರೂ ಘಟದ ಜ್ಞಾನವಾಗದಿರುವಂತೆ ನಿನ್ನ ಶಿವತತ್ವಜ್ಞಾನವುಂಟಾದರೂ ಜಗತ್ತಿನ ಜ್ಞಾನವಾಗಲಾರದು. ಅಹುದು, ಬ್ರಹ್ಮಾದ್ವೈತಿಯೇ ? ಈ ಮಾತು ನಿನ್ನ ವಿವರ್ತವಾದದಲ್ಲಿ ಚನ್ನಾಗಿ ಹತ್ತುವದು. ಯಾಕಂದರೆ ನೀನು ಅವಿದ್ಯಾಶಕ್ತಿಯು ಬ್ರಹ್ಮವ್ಯತಿರಿಕ್ತವೆಂದು ಅಂಗೀಕರಿಸುತ್ತೀಯಷ್ಟೆ ? ನಾನು ಆ ಶಕ್ತಿಯು ಬ್ರಹ್ಮಕ್ಕೆ ಭಿನ್ನವಾದದ್ದಲ್ಲವೆಂದು ಒಪ್ಪುತ್ತೇನಾದ್ದರಿಂದ ನನ್ನ ಮತದಲ್ಲಿ ಆ ಪ್ರತಿಜ್ಞಾವಾಕ್ಯವು ಅಸಂಗತವಾಗಲಾರದು. ಹಾಗಾದರೆ ಕುಲಾಲನ ದೃಷ್ಟಾಂತವು ವಿಷಮವಾಗಲಿಲ್ಲವೆ ? ಅಂದರೆ

ದೃಷ್ಟಾಂತದಾಷ್ಟಾರ್ಷ್ಟಾಂತಗಳಿಗೆ ಅತ್ಯಂತ ಭೇದವೇ ಇರಲಾರದಷ್ಟೆ? ಅಭಿಯುಕ್ತರೂ ಕೂಡ ನಿನ್ನಂಥವರಿಗೆ ಬೋಧಿಸುವದಕ್ಕಾಗಿಯೇ? ಶಕ್ತ್ಯಂಡ ಮೃತ್ಪಿಂಡಮುಪಾದದಾನೋಮಾಯಾಂಡಚಕ್ರಭ್ರಮಣಕ್ರಮೇಣ। ಮೂಲಾಂಡದಂಡೇನಮುಹುರ್ವಿಧತ್ತೆ ಬ್ರಹ್ಮಾಂಡಭಾಂಡಂ ಭಗವಾನ್ ಕುಲಾಲಃ॥ ಎಂದು ನಿರೂಪಿಸಿರುವರು. "ಯಥೋರ್ಣನಾಭಿಃ ಸೃಜತೆಗೃಹ್ಣತೇ" ಇತ್ಯಾದಿ ಶ್ರುತಿಗಳಿಂದ ಜೇಡರಹುಳವು ತನ್ನ ಶರೀರದಲ್ಲಿದ್ದ ಸಂಕುಚಿತಗಳಾದ ತಂತುಗಳನ್ನು ಬಾಹ್ಯದಲ್ಲಿ ಜಾಲಾಕಾರವಾಗಿ ರಚಿಸುವಂತೆ ಶಿವನು ತನ್ನ ಶಕ್ತಿ ಶರೀರದಲ್ಲಿದ್ದ ಅವ್ಯಕ್ತ ಜಗತ್ತನ್ನೇ ಬಾಹ್ಯದಲ್ಲಿ ಕಾರ್ಯರೂಪವನ್ನಾಗಿ ಮಾಡುವನು. ಚಿದಾತ್ಮೈವಹಿದೇವೋಂತಃ ಸ್ಥಿತಮಿಚ್ಛಾವಶಾದ್ಬಹಿಃ॥ ಯೋಗೀವ ನಿರುಪಾದಾನಮರ್ಥಜಾತಂ ಪ್ರಕಾಶಯೇತ್॥ ಇಲ್ಲಿ ನಿರುಪಾದಾನವೆಂದರೆ ತನ್ನ ಸ್ವಭಾವಭೂತವಾದ ಶಕ್ತಿ ನಿಂತ ಬೇರೆಯಾದದ್ದನ್ನು ಉಪಾದಾನಮಾಡಿಕೊಳ್ಳದೇ ಪ್ರಪಂಚವನ್ನು ಪ್ರಕಾಶಗೊಳಿಸುತ್ತಾನೆಂದು ತಿಳಿಯತಕ್ಕದ್ದು. ಇದೇ ಅರ್ಥವನ್ನು ಶ್ರೀಕಂಠಾಚಾರ್ಯರೂ ಕೂಡ ತಮ್ಮ ಭಾಷ್ಯದಲ್ಲಿ ಬರದಿದ್ದಾರೆ. ಆದ್ದರಿಂದ ತನ್ನ ಆತ್ಮಭೂತವಾದ ಶಕ್ತಿಯು ಜಗತ್ತಿಗೆ ಉಪಾದಾನಕಾರಣವು. ತಾನೇ ನಿಮಿತ್ತಕಾರಣನಾದ್ದರಿಂದ ವಿಶ್ವಾತ್ಮಕಶಿವೋಹಮಿತಿ ಶುದ್ಧವಿದ್ಯಾರೂಪವಾದ ಏಕವಿಜ್ಞಾನದಿಂದ ಸರ್ವವಿಜ್ಞಾನ ಪ್ರತಿಜ್ಞಾ ವಾಕ್ಯಕ್ಕೆ ಅಪ್ರಾಮಾಣ್ಯವಿಲ್ಲ. ಎಲೈ ಪರಿಣಾಮವಾದಿಯೆ, ವಿಶ್ವಪರಿಣಾಮಿ ಬ್ರಹ್ಮಜ್ಞಾನದಿಂದ ವಿಶ್ವಪರಿಣಾಮಿತ್ವವೇ ಫಲವಾಗಬೇಕಷ್ಟೆ? "ತಂಯಥಾಯಥೋಪಾಸ್ತೆ ತದೇವಭವತಿ" ಎಂದು ಶ್ರುತಿಯಿರುವದು. ಮತ್ತು ಆಚಾರ್ಯರು ನಹಿಪರಿಣಾಮವತ್ವಜ್ಞಾನಾತ್ಪರಿಣಾಮವತ್ವಮಾತ್ಮನಃ ಫಲಂಸ್ಯಾದಿತಿಪಕ್ತುಂ ಯುಕ್ತಂ ಕೂಟಸ್ಥನಿತ್ಯತ್ವಾನ್ಮೋಕ್ಷಸ್ಯ॥ ಎಂದು ಹೇಳಿರುವರು. ಆಚಾರ್ಯರಮೇಲೆ ನಿನಗೆ ಬಹಳ ವಿಶ್ವಾಸವಿದ್ದಂತೆ ಕಾಣುತ್ತದೆ. ಅವರು ಪೂರ್ವಕ್ಕೆ ಪಶ್ಚಿಮವೆಂದರೂ ಪಿತ್ತಾದಿ ದೋಷದಿಂದ ಶಂಖಕ್ಕೆ ಪೀತವೆಂದರೂ ನೀನು ಅದನ್ನೇ ನಂಬುತ್ತೀಯೇನು ಇಲ್ಲ ಹಾಗೆ ಅವರು ಹೇಳತಕ್ಕವರೂ ಅಲ್ಲ. ಅವರು ಯಥಾರ್ಥಜ್ಞಾನಿಗಳು. ಬ್ರಹ್ಮಾದ್ವೈತಿಯೇ? ಅವರು ಬರೆದಿರುವ ಅಪಶೂದ್ರಾಧಿಕಾರಣದ ಭಾಷ್ಯವನ್ನು ನೋಡು ಅದರಿಂದ ವರ ನಿಷ್ಪಕ್ಷಪಾತಿತ್ವವು ಎಷ್ಟಿರುವದೆಂದು ಗೊತ್ತಾಗುತ್ತದೆ. ಶಿವಾದ್ವೈತಿಯೇ ಆ ಅಧಿಕರಣ ಭಾಷ್ಯವನ್ನು ನಾನು ನೋಡಿದ್ದೇನೆ. ಅದರಲ್ಲಿ ಅವರ ಪಕ್ಷಪಾತವೇನು? ಒಳ್ಳೇದು ಅವರು ಅಲ್ಲಿ ಮಾಡಿರುವ ಪಕ್ಷಪಾತವನ್ನು ಆಮೇಲೆ ತೋರಿ

ಸುವೆನು. ಈಗ ನೀನು ಮೇಲೆ ಕೇಳಿದ ಪ್ರಶ್ನೆಕ್ಕೆ ಉತ್ತರವನ್ನು ತಿಳಿದಿಕೊ? ವಿಶ್ವಾತ್ಮಕಶಿವನೇ ನಾನೆಂಬುವ ವೃತ್ತಿಯೇ ಮೋಕ್ಷಕ್ಕೆ ಕಾರಣವಾದಪಕ್ಷದಲ್ಲಿ ವಿಶ್ವಪರಿಣಾಮಿಶಿವತ್ವಾಪತ್ತಿಯು ಪ್ರಾಪ್ತವಾದರೆ ನಿತ್ಯಮೋಕ್ಷವು ಲಭಿಸದಂತಾಗಲಿಲ್ಲವೆ? ಕೇಳು ವಿವರ್ತವಾದಿಯೆ? ಶಿವನು ನಿಮ್ಮಾಚಾರ್ಯರು ಹೇಳುವಂತೆ ಯಾವದೊಂದು ವೃತ್ತಿಯಿಂದ ರಹಿತನೆಂದು ಶಿವಾಚಾರ್ಯರು ಹೇಳುವದಿಲ್ಲ. ನಾನು ಸರ್ವಾತ್ಮಕನು 'ನಾನು ಸರ್ವಜ್ಞನು' ನಾನು ಸಚ್ಚಿದಾನಂದಸ್ವರೂಪನು ಎಂದು ತನ್ನ ಸ್ವರೂಪಾನಂದಾದಿಗಳನು ಅನುಭವಿಸುವವನೇ ಶಿವನೆಂದು ಹೇಳುತ್ತಾರಂದಮೇಲೆ ಆ ಶಿವತ್ವ ಪ್ರಾಪ್ತಿರೂಪ ಮೋಕ್ಷವನ್ನು ಹೊಂದಿದಮೇಲೆ "ಸರ್ವಾತ್ಮಕಃಶಿವೊಹಂ" ಎಂದು ಶಿವನಂತೆ ಮುಕ್ತನಿಗೂ ವೃತ್ತಿಯು ಆವಿರ್ಭವಿಸುವದು. ಈ ವಿಷಯವನ್ನು ವೃತ್ತಿನಿತ್ಯತ್ವವಾದದಲ್ಲಿ ವಿಸ್ತಾರವಾಗಿ ಹೇಳಿದ್ದೇನೆ. ನೆನಪಿಗೆ ತಂದುಕೊ? ನಿಮ್ಮಾಚಾರ್ಯರು ಹೇಳುವ ಮುಕ್ತಿಯು ನಿರರ್ಥಕವಾದದ್ದೆಂದು ಅಲ್ಲಿ ಸ್ಪಷ್ಟವಾಗಿದೆ. ಪರಿಣಾಮವಾದಿಯೆ? ಸರ್ವಜ್ಞತ್ವ ಸರ್ವಕರ್ತೃತ್ವಾದಿ ಸ್ವಶಕ್ತಿ ವಿಕಾಸವೇ ಮೋಕ್ಷವೆನ್ನುತ್ತೀಯಷ್ಟೆ! ಅಹುದು. ಸರ್ವಜ್ಞತ್ವವು ಸರ್ವ ಪ್ರಪಂಚದ ಆವಿರ್ಭಾವಕಾಲದಲ್ಲಿರತಕ್ಕದ್ದು. ಪದಾರ್ಥಗಳಿಲ್ಲದ್ದರೆ ಅವುಗಳ ಜ್ಞಾನವು ಹೇಗೆ? ಆದ್ದರಿಂದಲೇ ಆಚಾರ್ಯರು ಅವಿದ್ಯಾತ್ಮಕ ನಾಮರೂಪ ಬೀಜವ್ಯಾಕರಣಾಪೇಕ್ಷತ್ವಾತ್ ಸರ್ವಜ್ಞತ್ವಸ್ಯ | ಎಂದು ಹೇಳಿದ್ದಾರೆ. ಬ್ರಹ್ಮಾದ್ವೈತಿಯೇ? ಪದಾರ್ಥಗಳ ಜ್ಞಾನವು ಪದಾರ್ಥಗಳ ವ್ಯಕ್ತಸ್ಥಿತಿಯಲ್ಲಿಯೇ ಎಂದು ಯಾವ ಬಾಲಕನೂ ತಿಳಿಯಲಾರನು. ಕುಲಾಲನು ಮನಸ್ಸಿನಲ್ಲಿ ಘಟವನ್ನು ತಿಳಿದಮೇಲೆ ಘಟವನ್ನು ಮಾಡುವನಷ್ಟೆ? ಘಟದ ಜ್ಞಾನಕ್ಕೆ ಮುಂದಾಗುವ ಘಟದ ಬಾಹ್ಯವ್ಯಕ್ತತ್ವವು ಬೇಕಿಲ್ಲ. ಈ ವಿಚಾರವು ಹಿಂದೆಯೇ ಆಗಿದೆ. ಆದ್ದರಿಂದ ಈಶ್ವರತ್ವಂ ಸರ್ವಜ್ಞತ್ವಂ ಸರ್ವಶಕ್ತಿತ್ವಂಚ ನ ಪರಮಾರ್ಥತಃ || ಎಂದು ಹೇಳುವ ನಿಮ್ಮ ಆಚಾರ್ಯರ ಮಾತು ನಿನಗೆ ಮಾನ್ಯವಾದೀತು. ಇನ್ನು ಅಪಶೂದ್ರಾಧಿಕರಣವೆಂದು ಹೆಸರಿಟ್ಟುಕೊಂಡು ಅಹಿಂಸಾಪಾಲನಶೀಲರಿಗೆ ಕ್ರೂರವಿರುವ ಅನೇಕ ಮಾತುಗಳನ್ನು ಬರೆದಿದ್ದಾರೆ ಅವರು ಯಾವ ಸೂತ್ರಗಳಲ್ಲಿ ಶೂದ್ರರಿಗೆ ಅಧಿಕಾರವಿಲ್ಲೆಂದು ಬರೆದಿರುವರೋ ಅವೇ ಸೂತ್ರಗಳಿಂದ ಅಧಿಕಾರವನ್ನು ನಿಷ್ಪಕ್ಷಪಾತಿಗಳಿಗೆ ಆನಂದವಾಗುವಂತೆ ಬ್ರಹ್ಮಸೂತ್ರ ಶಾಂಕರೀ ವೃತ್ತಿಯಲ್ಲಿ ನಿರೂಪಿಸಿದ್ದೇನೆ. ಅದನ್ನು ನೀನು ಚನ್ನಾಗಿ ನೋಡಿದರೆ ನಿಮ್ಮಾಚಾರ್ಯರ ಅಭಿಮಾನವನ್ನೇ ಬಿಟ್ಟು ಲಿಂಗಧಾರಿಯಾಗದೆ ಇರಲಿಕ್ಕಿಲ್ಲ. ಇರಲಿ ಪ್ರಕೃತದ

ಸ್ನು ಅನುಸರಿಸುವೆನು. ಹಿಂದೆ ಹೇಳಿದ ಮೂವತ್ತಾರು ತತ್ವಗಳಲ್ಲಿ ನಾಲ್ಕು ವಿಭಾಗಗಳನ್ನು ಮಾಡುತ್ತಾರೆ. ಹೇಗಂದರೆ ಶಕ್ತಿಕೋಶ, ಮಾಯಾಕೋಶ, ಪ್ರಕೃತಿಕೋಶ, ಪೃಥಿವೀಕೋಶಗಳು ಈ ಶಕ್ತಿತತ್ವವು ಸದಾಶಿವೇಶ್ವರ ಶುದ್ಧವಿದ್ಯಾಪರ್ಯಂತ ದಳಗಳುಳ್ಳದ್ದಾಗಿ ಮುಂದಿನ ಮೂರು ಕೋಶಗಳನ್ನು ಕೋಶದಂತೆ ಆಚ್ಛಾದಿಸಿರುವದರಿಂದ ಶಕ್ತಿ ಕೋಶವೆಂತಲೂ ಮಾಯಾತತ್ವವು ಪುರುಷತತ್ವದವರಿವಿಗೆ ತನ್ನ ದಳಗಳುಳ್ಳದ್ದಾಗಿ ಮುಂದಿನ ಕೋಶಗಳನ್ನು ಆಚ್ಛಾದನ ಮಾಡಿರುವದರಿಂದ ಅದಕ್ಕೆ ಮಾಯಾ ಕೋಶವೆಂತಲೂ ಪ್ರಕೃತಿ ತತ್ವವು ಕಾರಣ ಕಾರ್ಯರೂಪವಾಗಿ ಮುಂದಿನ ಪೃಥಿವ್ಯಂಡವನ್ನು ಮುಚ್ಚಿಕೊಂಡಿರುವದರಿಂದ ಪ್ರಕೃತಿಕೋಶವೆಂತಲೂ ಪೃಥಿವ್ಯಂಡವು ಮನುಷ್ಯಾದಿ ಸರ್ವ ಪ್ರಮಾತೃಗಳಿಗೆ ಸ್ಥೂಲ ಕಂಚುಕರೂಪವಾಗಿ ಅಪರ ಬಂಧನಕ್ಕೆ ಕಾರಣವಾದ್ದರಿಂದ ಪೃಥಿವೀ ಕೋಶವೆಂತಲೂ ಶಿವಾದ್ವೈತಿಗಳು ಹೇಳುತ್ತಾರೆ. ಮತ್ತು ಆ ನಾಲ್ಕಕ್ಕೆ ಅಂಡಗಳೆಂತಲೂ ಹೇಳುತ್ತಾರೆ. ಅನೇಕ ಪದಾರ್ಥಗಳ ಸಮಷ್ಟಿರೂಪವೇ ಅಂಡವು. ವಸ್ತು ಪಿಂಡಾಂಡಮುಚ್ಯತೆ | ಎಂಬುವದರಿಂದ ವಸ್ತುಗಳು ಪಿಂಡರೂಪವೇ ಅಂಡವು. ನಾಲ್ಕು ಅಂಡಗಳಲ್ಲಿ ವಿಚಿತ್ರಗಳಾದ ಶರೀರಗಳೂ ವಿಚಿತ್ರಗಳಾದ ಕರಣಗಳೂ ಭುವನಗಳೂ ಇರುತ್ತವೆ, ಮತ್ತು ರುದ್ರ ಕ್ಷೇತ್ರಜ್ಞಾದಿ ಶರೀರಗಳ ಅವಯವ ಜೋಡಣೆಯು ಆಶ್ಚರ್ಯಕರವಾದದ್ದಲ್ಲವೆ? ಇನ್ನು ಕರಣವೈಚಿತ್ರ್ಯವನ್ನು ನೋಡು ರುದ್ರರ ಕರಣಗಳು ಸರ್ವಜ್ಞತ್ವಾದಿಗಳಿಂದ ಕೂಡಿರುವವು. ಜೀವರುಗಳ ಕರಣಗಳು ಕಿಂಚಿಜ್ಞತ್ವಾದಿಗಳುಳ್ಳವುಗಳು ಈ ಜೀವರುಗಳಲ್ಲಿಯೂ ಯೋಗಿಗಳ ಯೋಗಧರ್ಮದಿಂದ ಕೂಡಿದ ಕರಣಗಳು ದೂರ ವ್ಯವಹಿತ ವಿಪ್ರಕೃಷ್ಟಾದಿ ಪದಾರ್ಥಗಳ ಜ್ಞಾನವುಳ್ಳವುಗಳು. ಇದರಂತೆ ತಿರ್ಯಗಾದಿ ಜಂತುಗಳಲ್ಲಿಯೂ ಕರಣವೈಚಿತ್ರ್ಯವು ಕಂಡುಬರುತ್ತದೆ. ಗೋವುಗಳು ತಮ್ಮ ಮನೆಯು ವ್ಯವಹಿತವಾಗಿದ್ದರೂ ಅದನ್ನು ನೋಡುತ್ತವೆ. ಕುದುರೆಗಳು ಗಾಢಾಂಧಕಾರದಲ್ಲಿಯಾದರೂ ಮಾರ್ಗವನ್ನು ಚನ್ನಾಗಿ ನೋಡಿ ಗುರ್ತನ್ನು ಹಿಡಿಯುತ್ತವೆ ಹದ್ದುಗಳು ನೂರುಯೋಜನ ದೂರದಲ್ಲಿದ್ದರೂ ತಾವು ತಿನ್ನುವುದಕ್ಕೆ ಯೋಗ್ಯವಾದ ಮಾಂಸವನ್ನು ಪ್ರತ್ಯಕ್ಷವಾಗಿ ನೋಡುತ್ತವೆ. ಪಕ್ಷಿಗಳು ಆಕಾಶದಲ್ಲಿ ಸಂಚರಿಸುವದೂ ಸರ್ಪಗಳು ಎದೆಯಿಂದ ಮಾರ್ಗದಲ್ಲಿ ನಡೆಯುವದೂ ಮತ್ತು ಕಣ್ಣಿನಿಂದ ಶಬ್ದವನ್ನು ಕೇಳುವದೂ ಮಂಟೆಗಳು ಬಿಲದೊಳಗೆ ಅತಿ ದೂರದಲ್ಲಿರುವ ಸರ್ಪವನ್ನು ತನ್ನ ಶ್ವಾಸನಾಳದಿಂದ ಹೊರಗೆ ಬರುವಂತೆ ಆಕರ್ಷಿಸುವದೂ ಕರಣ ವೈಚಿತ್ರ್ಯವ

ಲ್ಲವೆ ? ಯೋಗಸಿದ್ಧರಂತೂ ಸರ್ವನಿಯಂತೃವಾದ ಶಿವನ ನಿಯತಿ ಶಕ್ತಿಯನ್ನು ಮೀರಿದವರಾದ್ದರಿಂದ ಅವರ ಕರಣಗಳಲ್ಲಿ ಅದ್ಭುತಸಾಮರ್ಥ್ಯವಿರುವದೇನಾಶ್ಚರ್ಯವು. ಆದರೆ ತಿರ್ಯಗ್ಜಂತುಗಳು ನಿಯತಿ ಶಕ್ತಿಯಿಂದ ಸಂಕುಚಿತಗಳಾಗಿದ್ದರೂ ಅವುಗಳ ಕರಣಗಳಲ್ಲಿ ಅದ್ಭುತ ಸಾಮರ್ಥ್ಯವಿರುವದನ್ನು ನೋಡಿದರೆ ಈಶ್ವರ ಮಾಯಾಮಹಿಮೆಯು ಅಗಾಧವಾದದ್ದು. ಎಂದು ಸ್ಪಷ್ಟವಾಗುತ್ತದೆ. ಎದೆಯಿಂದ ದಾರಿಯನ್ನು ನಡೆಯುವದೂ ಕಣ್ಣಿನಿಂದ ಕೇಳುವದೂ ಸೃಷ್ಟಿನಿಯಮಕ್ಕೆ ವಿರುದ್ಧವಾಗುವದೆಂದು ಸೃಷ್ಟಿನಿಯಮ ಸೃಷ್ಟಿನಿಯಮವೆಂದು ಬಡಬಡಿಸುವ ಪಾಶ್ಚಿಮಾತ್ಯ ವಿದ್ಯಾವಿಚಕ್ಷಣರು ಹಾವಿಗೆ ಕಾಲನ್ನು ಕಟ್ಟಿ ನಡೆಯಿಸಲಿ. ಮತ್ತೊಂದು ಹೊಸಕಿವಿಯನ್ನು ಹಚ್ಚುವರೇನು ? ಆದ್ದರಿಂದ ವೈದಿಕಶಾಸ್ತ್ರ ಗಂಧವಿಲ್ಲದ ಅಂಥವರ ಮಾತಿಗೆ ಮರುಳಾಗಿ ಅವರು ವಾಲ್ಮೀಕಿಯು ಹುತ್ತದಲ್ಲಿ ಹುಟ್ಟಿದ್ದು ಸುಳ್ಳು. ಮೃಗಿಯಲ್ಲಿ ಋಷ್ಯಶೃಂಗನು ಹುಟ್ಟಿದ್ದು ಸುಳ್ಳು. ಹನುಮಂತನು ಸಮುದ್ರವನ್ನು ಹಾರಿದ್ದು ಸುಳ್ಳು. ಎಂದು ಹೇಳಿದರೆ ಅದಕ್ಕೆ ನಂಬುವಿಯೇನು ? ಇಲ್ಲ ಅಂದಮೇಲೆ ನಿಮ್ಮ ಆಚಾರ್ಯರು ಭೇದ ಶ್ರುತಿಗಳಿಗೆ ಅಪಾರ್ಥಗಳನ್ನು ಕಲ್ಪಿಸಿಯೂ ಈಶ್ವರೇಚ್ಛೆಗೆ ವಿರುದ್ಧವಾಗಿ "ಶೂದ್ರಸ್ಯಸಮತಿಂದದ್ಯಾತ್" ಇತ್ಯಾದಿ ಮಾತುಗಳನ್ನು ಬರೆದಿರುವದನ್ನು ಹೇಗೆ ನಂಬಬೇಕು. ಇನ್ನೂ ಅತಿ ಕಠಿಣಶಾಸನಗಳನ್ನು ಬರೆದಿರುವರು. ಅದನ್ನು ಒಪ್ಪುವದು ಹೇಗೆ? ನೀನೇ ಹೇಳು. ಇರಲಿ ಪ್ರಕೃತವನ್ನು ಅನುಸರಿಸುವಾ? ನಿಜಶಕ್ತಿ ವೈಭವದಿಂದ ಆ ಪರಶಿವನೇ ಷಟ್‌ತ್ರಿಂಶತ್ ಜಗತ್ಸ್ವರೂಪನಾಗಿರುವನು. ಆದ್ದರಿಂದ ಪರಮಾರ್ಥಸಾರದಲ್ಲಿಯೂ ಸಿದ್ಧಾಂತಶಿಖಾಮಣಿಯಲ್ಲಿಯೂ ನಿಜ ಶಕ್ತಿ ವೈಭವ ಭರಾದಂಡ ಚತುಷ್ಟಯಮಿದಂವಿಭಾಗೇನ | ಶಕ್ತಿರ್ಮಾಯಾಪ್ರಕೃತಿ ಪೃಥಿವೀಚೇತಿ ಪ್ರಭಾವಿತಂ ಪ್ರಭುಣಾ || ಆತ್ಮ ಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾಸ್ಥಿತಃ | ಕುಟೀ ಭಾವಾದ್ಯಥಾಭಾತಿಪಟಃ ಸ್ವಸ್ಯಪ್ರಸಾರಣಾತ್ || ಆದ್ದರಿಂದ ಬ್ರಹ್ಮಾದ್ವೈತಿಯೇ ? ಮಣ್ಣಿನಿಂದಾಹ ಮಡಿಕೆಗಳು ಮಣ್ಣಿನ ಪರಿಣಾಮವಾಗಿರುವಂತೆಯೂ ತಂತುಗಳಿಂದ ಹುಟ್ಟಿದ ಪಟವು ತಂತುಗಳ ಪರಿಣಾಮವಾಗಿರುವಂತೆಯೂ ಸುವರ್ಣದಿಂದಾದ ಆಭರಣಗಳು ಸುವರ್ಣದ ಪರಿಣಾಮವಾಗಿರುವಂತೆಯೂ ಶಿವನಿಂದಾದ ಜಗತ್ತು ಶಿವಪರಿಣಾಮವಾಗಿರುವದು. ಎಂದು ತಿಳಿ. ಬ್ರಹ್ಮಾದ್ವೈತಿಯೇ ? ಬ್ರಹ್ಮವೇ ಜಗದಾಕಾರವಾಗಿ ಪರಿಣಮಿಸುವದೆಂದರೆ ಬ್ರಹ್ಮಕ್ಕೆ ಜಡತ್ವಾದಿ ದೋಷಗಳು ಬರುವವೆಂಬ ಭೀತಿಯಿಂದಲ್ಲವೇ ನಿಮ್ಮ ಆಚಾರ್ಯರು ಬ್ರಹ್ಮಕ್ಕೆ ಸ್ವತಃ

ಕ್ಷವಾದ ಮಾಯೆಯೇ ಜಗದಾಕಾರವಾಗಿ ಪರಿಣಮಿಸುತ್ತದೆಂದು ಹೇಳುವರು. (ಮಾಯಾಪ್ರಕೃತಿರಿತಿ) ಒಳ್ಳೇದು ಮಾಯೆಗೂ ಬ್ರಹ್ಮಕ್ಕೂ ಅತ್ಯಂತ ಭೇದವನ್ನು ಯಾವುದರಿಂದ ತಿಳಿಯುವಿ? ‹‹ಮಾಯಾಂತುಪ್ರಕೃತಿಂ ವಿದ್ಯಾತ್›› ಎಂಬುವ ಶ್ರುತಿಯಿಂದ ತಿಳಿಯುತ್ತೇವೆಂದರೆ ಮುಂದಿನ ‹‹ಮಾಯಿನಂತು ಮಹೇಶ್ವರಂ›› ಎಂಬುವದಕ್ಕೆ ‹‹ಪ್ರಭಾವಾನ್‌ಸೂರ್ಯಃ›› ಎಂಬಂತೆ ಅಭೇದವೂ ಕಂಡುಬರುವದಲ್ಲ? ಅದು ಹ್ಯಾಗೆ? ಪ್ರಭೆಯುಳ್ಳವನು ಸೂರ್ಯನೆಂಬುವದರಿಂದ ಭೇದವೇ ಕಂಡುಬರುವದಿಲ್ಲವೆ? ಅಾದರೆ ಪ್ರಭಾಪುಂಜಃ ಸೂರ್ಯಃ | ಪ್ರಕೃಷ್ಣಃ ಪ್ರಕಾಶಃ ಸೂರ್ಯಃ | ಎಂಬುವಲ್ಲಿ ಅಭೇದವು ಕಂಡುಬರುವದಿಲ್ಲವೇನು? ಅಹುದು ಹಾಗಾದರೆ ‹‹ಮಾಯಿನಂತು›› ಎಂಬಲ್ಲಿಯೂ ಅಭೇದವನ್ನು ಹೇಳು? ಅದು ಹೇಗೆ? ಮಾಯಾವಿಯಾದ ಗಾರುಡಿಗನಿಗೂ ಮಾಯೆಗೂ ಮಾಯಿಕ ಪದಾರ್ಥಗಳಿಗೂ ಅತ್ಯಂತ ಭೇದವಿಲ್ಲವೆ' ಅಂದರೆ ಈಗ ಮಾಯಾವಿಯಾದಗಾರುಡಿಗನ ಜ್ಞಾನವಾದರೂ ಆ ಮಾಯಿಕ ಪದಾರ್ಥಗಳ ಜ್ಞಾನವಾಗದಿರುವಂತೆ ಏಕವಿಜ್ಞಾನದಿಂದ ಸರ್ವ ವಿಜ್ಞಾನವಾಗಲಾರದಲ್ಲವೆ? ಶಿವಾದ್ವೈತಿಯೇ? ಇದೇನು ಈ ಶ್ರುತಿಯು ವ್ಯಾವಹಾರಿಕವು ಉಪಾದಾನಕಾರಣವಾದ ಮಾಯೋಪಹಿತ ಈಶ್ವರಜ್ಞಾನವಾಗುತ್ತಿರಲಿಕ್ಕೆ ಸರ್ವ ವಿಜ್ಞಾನವಾಗುವದಿಲ್ಲವೇಕೆ? ಅಂದರೆ ಈ ಶ್ರುತಿಯು ವ್ಯಾವಹಾರಿಕವೆಂದು ಹೇಳುವ ನೀನು ಜಗತ್ಕಾರಣನಾದೀಶ್ವರನಿಗೆ ಸತ್ಯತ್ವವನ್ನು ಹೇಳುವದಿಲ್ಲವೇನು? ಇಲ್ಲ ಅಂದರೆ ನಿನಗಿಂತಲೂ ಬೇರೆ ನಾಸ್ತಿಕನಾವನಿರುವನು? ಶಿವಾದ್ವೈತಿಯೇ? ಹಾಗೆನ್ನಬಾರದು. ವ್ಯಾವಹಾರಿಕೇಶ್ವರನನ್ನು ಮಾನಿಸುತ್ತೇನಲ್ಲವೆ? ಅಂದರೇನು ಪರಮಾರ್ಥತಃ ಈಶ್ವರನಿಲ್ಲವು. ಎಂಬರ್ಥವು. ಇನ್ನಷ್ಟು ಇದರ ಅರ್ಥವನ್ನು ಸ್ಪಷ್ಟಮಾಡು. ಸತ್ಯವಾಗಿಯೂ ಈಶ್ವರನಿಲ್ಲವೆಂಬರ್ಥವು. ಅಯ್ಯೋ ನಾಸ್ತಿಕಶಿರೋಮಣಿಯೆ? ‹‹ಧ್ಯಾತ್ವಾಮುನಿರ್ಗಚ್ಛತಿ ಭೂತಯೋನಿಂ›› ‹‹ಜ್ಞಾತ್ವಾಶಿವಂ ಶಾಂತಿಮತ್ಯಂತಮೇತಿ›› ‹ ಈಶಂಜ್ಞಾತ್ವಾ ಅಮೃತಾಭವಂತಿ›› ಇತ್ಯಾದಿ ಶ್ರುತಿಗಳರ್ಥವನ್ನು ಸ್ವಲ್ಪ ವಿಚಾರಿಸು. ಇದಲ್ಲದೆ ‹‹ಈಶಾವಾಸ್ಯಮಿದಂ ಸರ್ವಂ›› ಎಂಬ ಉಪಕ್ರಮವಾಕ್ಯದಲ್ಲಿರುವ ಈಶಪದಾರ್ಥವು ನಿನಗೆ ಕಲ್ಪಿತವಾಗಿ (ಮಿಥ್ಯೆಯಾಗಿ) ತೋರಿತೆ? ಮತ್ತು ದೃಷ್ಟಾಂತವಾಕ್ಯದಲ್ಲಿ ‹‹ಮೃತ್ತಿಕೇತ್ಯೇವಸತ್ಯಂ›› ಎಂದು ಕಾರಣಕ್ಕೆ ಸತ್ಯತ್ವವನ್ನು ಹೇಳಿದ್ದೂ ‹‹ಭೂತಯೋನಿಂ›› ಎಂದು ಈಶ್ವರನಿಗೆ ಕಾರಣತನವನ್ನು ಹೇಳಿದ್ದೂ ನಿನ್ನ ಸುಕುಮಾರಬುದ್ಧಿಯಲ್ಲಿ ಹೊಳೆಯದೇ ಹೋಯಿತೆ? ಮತ್ತು ಆರಂಭಣಾಧಿಕರ

ಣದಲ್ಲಿ ಕಾರ್ಯಕಾರಣಗಳಿಗೆ ಅನನ್ಯತ್ವವನ್ನು ಹೇಳಿದ್ದು ಸತ್ಯ ಮಿಥ್ಯಾಪದಾರ್ಥಗಳಿಗೆ ಸಿದ್ಧಿಸುವದುಂಟೆ? ಅದೇಕೆ? ಶಿವಾದ್ವೈತಿಯೇ? ಇದೇ ಅಧಿಕರಣವನ್ನೇ ಆಚಾರ್ಯರು ಜಗತ್ತು ಮಿಥ್ಯಾ ಎಂಬುವ ವಿಷಯದಲ್ಲಿ ಪ್ರಮಾಣವನ್ನಾಗಿಟ್ಟುಕೊಂಡಿದ್ದಾರೆ. ಅದು ಹೇಗೆ? ನೋಡು. ಕಾರಣವ್ಯತಿರೇಕೇಣಕಾರ್ಯಸ್ಯಾಭಾವಃ | ಅನನ್ಯತ್ವಂ || ಎಂದು ಅರ್ಥಮಾಡಿ ಕರಣಕ್ಕೆ ಭಿನ್ನವಾಗಿ ಕಾರ್ಯವು ಇಲ್ಲವೇ ಇಲ್ಲವೆಂದು ನಾನಾರೂಪವಾದ ಕಾರ್ಯಕ್ಕೆ ಮಿಥ್ಯಾತ್ವವನ್ನೇ ಹೇಳಿರುವರು. ಹ್ಯಾಗಂದರೆ ಮರುಭೂಮಿಯಲ್ಲಿ ಅದಕ್ಕೆ ಭಿನ್ನವಾಗಿ ತೋರುವ ಜಲವು ಮತ್ತು ಜಲವ್ಯವಹಾರವು ಅಸತ್ಯವಾಗಿರುವಂತೆಯೂ ಶುಕ್ತಿಯಲ್ಲಿ ಶುಕ್ತಿಗೆ ಭಿನ್ನವಾಗಿ ರಜತವಿಲ್ಲದಿರುವಂತೆಯೂ ಅಧಿಷ್ಠಾನರೂಪವಾದ ಬ್ರಹ್ಮದಲ್ಲಿ ಬ್ರಹ್ಮಕ್ಕೆ ಭಿನ್ನವಾಗಿ ಜಗತ್ತಿಲ್ಲಾ! ಅಂದರೆ ಮರುಭೂಮಿಯಲ್ಲಿ ಅದಕ್ಕೆ ಭಿನ್ನವಾಗಿ ತೋರುವ ಜಲವು. ಮತ್ತು ಅದರ ವ್ಯವಹಾರವು. ಅಸತ್ಯವಾಗಿರುವಂತೆ ಬ್ರಹ್ಮದಲ್ಲಿ ತೋರುವ ದ್ವೈತಪ್ರಪಂಚವು ಮತ್ತು ಅದರ ವ್ಯವಹಾರವು ಮಿಥ್ಯೆಯೆಂದು ಸ್ಪಷ್ಟವಾಗಿ ಅರ್ಥಮಾಡಿದ್ದಾರೆ. ಒಳ್ಳೇದು, ಬ್ರಹ್ಮಾದ್ವೈತಿಯೇ? ನಿಮ್ಮ ಆಚಾರ್ಯರ ಪಕ್ಷವನ್ನು ನೀನು ಸಮರ್ಥಮಾಡುವಿಯಷ್ಟೆ?

ಮರುಭೂಮಿಯಲ್ಲಿಯೇ ಜಲವು ತೋರುವದು. ಮತ್ತೊಂದು ಕಡೆಯಲ್ಲಿ ಜಲದ ಅಧ್ಯಾಸವಾಗುವದಿಲ್ಲವೇಕೆ? ಶುಕ್ತಿಯಲ್ಲಿಯೇ ರಜತವು ತೋರುವದೇಕೆ? ಮತ್ತು ರಜ್ಜುವಿನಲ್ಲಿಯೇ ಸರ್ಪದ ಅಧ್ಯಾಸವಾಗುವದಲ್ಲದೆ ಮತ್ತೊಂದು ಕಡೆಯಲ್ಲಿ ಅದರ ಅಧ್ಯಾಸವಿಲ್ಲವೇಕೆ? ಎಂಬುವ ಪ್ರಶ್ನಕ್ಕೆ ನಿನ್ನ ಉತ್ತರವೇನು? ಅಂದರೆ ಮರುಭೂಮಿಯಲ್ಲಿ ಜಲಸಾದೃಶ್ಯಜ್ಞಾನವಿರುವದರಿಂದಲೂ, ಮತ್ತೊಂದುಕಡೆಯಲ್ಲಿ ಈ ಸಾದೃಶ್ಯಜ್ಞಾನವಿಲ್ಲದಿರುವದರಿಂದಲೂ, ಮತ್ತೊಂದು ಕಡೆಯಲ್ಲಿ ಜಲದ ಅಧ್ಯಾಸವಾಗುವದಿಲ್ಲ. ಶುಕ್ತಿಯಲ್ಲಿ ರಜತಸಾದೃಶ್ಯಜ್ಞಾನವಿರುವದರಿಂದ ಅಲ್ಲಿಯೇ ರಜತಾಧ್ಯಾಸವಾಗುತ್ತದಲ್ಲದೆ ಮತ್ತೊಂದು ಕಡೆಯಲ್ಲಿ ಆಗುವದಿಲ್ಲ. ರಜ್ಜುವಿನಲ್ಲಿ ಸಾದೃಶ್ಯಜ್ಞಾನವಿರುವದರಿಂದ ಅಲ್ಲಿಯೇ ಸರ್ಪಾಧ್ಯಾಸವಾಗುವದಲ್ಲದೆ ಮತ್ತೊಂದು ಕಡೆಯಲ್ಲಿ ಆಗುವದಿಲ್ಲ. ಹಾಗಾದರೆ ಸಾದೃಶ್ಯವೆಂದರೇನು? "ತದ್ಭಿನ್ನತ್ವೇಸತಿ ತದ್ಗತಭೂಯೋ ಧರ್ಮವತ್ವಂ" ಎಂದು ಹೇಳುತ್ತೇವೆ. ಒಳ್ಳೇದು ಈ ಸಾದೃಶ್ಯವನ್ನು ಪುರೋವರ್ತಿ ಪದಾರ್ಥಕ್ಕೂ, ಅಲ್ಲಿ ತೋರಿದ ರಜತಕ್ಕೂ ಹೇಳುವಿಯೊ? ಮತ್ತೊಂದು ಕಡೆಯಲ್ಲಿದ್ದ ರಜತಕ್ಕೆ ಹೇಳುವಿಯೊ? ಅಲ್ಲಿ ತೋರತಕ್ಕ ರಜತವು ಕಾರಣಕಾಲದಲ್ಲಿ ಇಲ್ಲದ್ದರಿಂದ ಅದರ

ಸಾದೃಶ್ಯವನ್ನು ಹೇಳುವದು ಹೇಗೆ. ಮತ್ತೊಂದು ಕಡೆಯಲ್ಲಿದ್ದ ರಜತವು ಪುರೋವರ್ತಿ ಅಧಿಷ್ಠಾನದ ಕಾರ್ಯವೇ ಅಲ್ಲ. ಅದಕ್ಕೆ ಅನನ್ಯತ್ವವನ್ನು ಹೇಳುವದು ಹೇಗೆ. ಮತ್ತು ನಿಮ್ಮ ಆಚಾರ್ಯರು ‹‹ಯಥಾಚವ್ಯಗಶೃಷ್ಣಿಕೋದಕಾನಾಮೂಷರಾದಿಭ್ಯೋ ಅನನ್ಯತ್ವಂ›› ಎಂದು ಅಧಿಷ್ಠಾನಕ್ಕೂ ಅಲ್ಲಿ ತೋರುವ ರಜತಕ್ಕೂ ಕಾರ್ಯಕಾರಣಭಾವವನ್ನು ಸ್ವೀಕರಿಸಿದ್ದಾರಲ್ಲವೆ? ಅಂದಮೇಲೆ ಅಲ್ಲಿ ತೋರುವ ರಜತಕಾರ್ಯಕ್ಷಣಕ್ಕಿಂತಲೂ ಪೂರ್ವಕ್ಷಣದಲ್ಲಿ ಅಲ್ಲಿ ತೋರುವ ರಜತಸಾದೃಶ್ಯಜ್ಞಾನವಿರಬೇಕಷ್ಟೆ? ಅದು ಅದಕ್ಕೆ ಕಾರಣವೆಂದು ಹೇಳುತ್ತೀಯಷ್ಟೆ? ನಿನ್ನ ಮತದ ಆ ಪ್ರಾತಿಭಾಸಿಕವಾದ ರಜತವೇ ಹುಟ್ಟದಿದ್ದಾಗ ಅದರ ಸಾದೃಶ್ಯಜ್ಞಾನವು ಹ್ಯಾಗಾಗಬೇಕು. ಅನೇಕೆ ತತ್ಪೂರ್ವದಲ್ಲಿದ್ದ ಸಾದೃಶ್ಯಜ್ಞಾನವು ಕಾರಣವೆಂದು ಹೇಳುತ್ತೇನೆ. ಹೀಗಾದರೆ ತತ್ಪೂರ್ವದಲ್ಲಿ ತತ್ಪೂರ್ವದಲ್ಲಿ ಎಂದು ಅನವಸ್ಥಾದೋಷ ಬರುವದು. ಬರಲಿ, ಭ್ರಾಂತಿವ್ಯವಹಾರವೇ ಅನಾದಿಯಾದದ್ದು. ಹಾಗಾದರೆ ಪೂರ್ವದಲ್ಲಿ ಆದ ಸಾದೃಶ್ಯಜ್ಞಾನವು ಈಗಾಗುವ ಸಾದೃಶ್ಯಜ್ಞಾನಕಾಲದಲ್ಲಿಲ್ಲವಲ್ಲಾ? ವಿರೋಧಿವೃತ್ತಿಯಿಂದ ನಾಶವಾಗಲಿಲ್ಲವೆ? ಆದರೂ ಸಂಸ್ಕಾರದಿಂದ ಸಂಭವಿಸುತ್ತದೆ. ಈ ವೃತ್ತ್ಯನಿತ್ಯವಾದವನ್ನು ಸಂಸ್ಕಾರದಿಂದ ಸ್ಮೃತಿಯು ಸಂಭವಿಸುತ್ತದೆಂಬುವ ಮಾತನ್ನು ಪೂರ್ವವಿಚಾರದಲ್ಲಿ ನಿರಸನಗೊಳಿಸಿದ್ದಾಗಿದೆ ಅದ್ದರಿಂದ ಅದನ್ನು ಬಿಟ್ಟು ಬಿಡು. ಸಾದೃಶ್ಯವೆಂದರೆ ಭೇದಘಟಿತ ಪದಾರ್ಥವಲ್ಲವೇ? ಆದ ಮೇಲೆ ಅಲ್ಲಿ ತೋರುವ ರಜತ ಸಾದೃಶ್ಯವನ್ನು ಅಧಿಷ್ಠಾನ ಶುಕ್ತಿಗೆ ಹೇಳುವಿಯಾದರೆ ಅಧಿಷ್ಠಾನದಲ್ಲಿ ಆ ನಿನ್ನ ಮಿಥ್ಯಾರಜತಗತ ಮಿಥ್ಯಾತ್ವಾದಿ ಧರ್ಮಗಳನ್ನು ಹೇಳಬೇಕು. ಅಧಿಷ್ಠಾನಭೂತವಾದ ಶುಕ್ತಿಸಾದೃಶ್ಯವನ್ನು ಹೇಳುವುದಾದರೆ ಅಧಿಷ್ಠಾನ ಕಾರಣ ಭಿನ್ನತ್ವವನ್ನು ರಜತ ಕಾರ್ಯದಲ್ಲಿ ಹೇಳಬೇಕು. ಹೇಳಿದರೆ ಕಾರಣಕ್ಕೆ ಭಿನ್ನವಾಗಿ ಕಾರ್ಯವಿಲ್ಲವೆಂಬುವದು ಹೇಗೆ ಸಂಗತವು? ಶಿವಾದ್ವೈತಿಯೇ ಸಾದೃಶ್ಯವು ಭೇದಘಟಿತವಲ್ಲ ರಾಮು ರಾವಣಯೋರ್ಯುದ್ಧಂ ರಾಮು ರಾವಣಯೋರಿವ| ಎಂಬಂತೆ ಸಾದೃಶ್ಯವು ಅಭೇದರೂಪವಾದದ್ದೇ ಎಂದು ಹೇಳುತ್ತೇನೆ. ಅಂದರೆ ಬ್ರಹ್ಮಾದ್ವೈತಿಯೇ? ಈಗ ನೋಡು ಶುಕ್ತಿರಜತಗಳಿಗೆ ಪರಸ್ಪರ ಅಭೇದವು ಸಿದ್ಧವಾಯಿತಲ್ಲವೆ? ಒಂದೇ ವ್ಯಕ್ತಿಯಾದ ರಾಮನಲ್ಲಿ ಸತ್ಯತ್ವ ಮಿಥ್ಯಾತ್ವಗಳಿಲ್ಲದಿರುವಂತೆಯೂ ಸತ್ಯತ್ವವೇ ಇರುವಂತೆಯೂ ಶುಕ್ತಿ ರಜತಗಳಿಗೆ ಏಕೆ ಹೇಳಬಾರದು. ಆದ್ದರಿಂದ ಶಿವನೊಬ್ಬನೇ ತನ ಶಕ್ತ್ಯಂಶದ ತರತಮಭಾವದಿಂದ ಪ್ರಾತೀತಿಕ ವ್ಯಾವಹಾರಿಕ ನಾನಾ ಪ್ರಪಂಚ

ರೂಪನಾಗಿ ಪರಿಣಮಿಸುತ್ತಾನೆಂದು ಹೇಳುವದು ಯುಕ್ತವಲ್ಲವೆ? ಶಿವಾದ್ವೈತಿ ಯೇ! ಶುಕ್ತ್ಯವಚ್ಛಿನ್ನಚೈತನ್ಯಾವರಕವಾದ ಅಜ್ಞಾನವು ರಜತಾಕಾರವಾಗಿ ಪರಿಣಮಿಸುತ್ತದೆ. ಮತ್ತು ತದವಚ್ಛಿನ್ನಚೈತನ್ಯವು ರಜತಾಕಾರವಾಗಿ ವಿವರ್ತಿ ಸುತ್ತದೆ. ಆದ್ದರಿಂದ ಬ್ರಹ್ಮದ ವಿವರ್ತವಾದ ಜಗತ್ತಿಗೆ ಸ್ವಸತ್ಯತ್ವವು ಸಿದ್ಧಿಸುವ ದಿಲ್ಲ. ಪುರೋವರ್ತಿ ಅಧಿಷ್ಠಾನಚೈತನ್ಯಕ್ಕಿಂತಲೂ ರಜತಕ್ಕೆ ಸತ್ಯತ್ವವು ಸಿದ್ಧಿಸು ವದಿಲ್ಲವಷ್ಟೆ? ರಜತಜ್ಞಾನಕ್ಕೆ ಯಾವದಾದರೊಂದು ಕಾರಣವಿದೆಯೊ ಇಲ್ಲವೊ? ಅಜ್ಞಾನಾದಿ ಕಾರಣಗಳಿರುವವು. ಶುಕ್ತ್ಯವಚ್ಛಿನ್ನಚೈತನ್ಯಾವರಕ ಅಜ್ಞಾನವು ಉಪಾದಾನಕಾರಣವು. ಅದೂಕೂಡ ಮಿಥ್ಯಾಭೂತವಾದದ್ದೇ ಇರುವದು. ನಿಮಿತ್ತವಾದ ಸಾದೃಶ್ಯಜ್ಞಾನವೊ? ಅದಕ್ಕೆ ವ್ಯಾವಹಾರಿಕ ಸತ್ಯತ್ವವನ್ನು ಹೇ ಳುತ್ತೇನೆ. ಹಾಗಾದರೆ ಸತ್ಯವಾದ ನಿಮಿತ್ತದಿಂದ ಅಸತ್ಯವಾದ ರಜತವು ಹುಟ್ಟ ಲಾರದು. ‹‹ನಾಭಾವೊವಿದ್ಯತೆಸತಃ›› ಎಂದು ಪ್ರಮಾಣವಿಲ್ಲವೆ? ಆದ್ದರಿಂದ ಧಾವಳ್ಯಾದಿ ಸಾದೃಶ್ಯಶಕ್ತಿಯಿಂದ ತೋರುವ ರಜತವು ಸತ್ಯವಾದದ್ದು. ಬ್ರ ಹ್ಮಾದ್ವೈತಿಯೇ! ನಿನಗೆ ಇಷ್ಟೊಂದು ವಿವರ್ತದ ಅಭಿಮಾನವೇಕೆ? ನೀನು ‹‹ನಿಷ್ಕ್ರಿಯಂನಿಷ್ಕಲಂಶಾಂತಂ ನಿರವದ್ಯಂ ನಿರಂಜನಂ›› ಇತ್ಯಾದಿ ಶ್ರುತಿಗಳಿಂದ ಪ್ರತಿಪಾದ್ಯವಾದ ನಿರವಯವ ಬ್ರಹ್ಮವು ಸಿದ್ಧಿಸುವದಿಲ್ಲವಾದ್ದರಿಂದ ವಿವರ್ತವಾ ದವನ್ನೇ ಅಂಗೀಕರಿಸುತ್ತೇನೆಂದು ಹೇಳುವೆಯಲ್ಲವೆ? ಇದಕ್ಕೆ ಇಷ್ಟೊಂದು ಕಷ್ಟಪಡುವದೇಕೆ? ಬ್ರಹ್ಮದ ಶುದ್ಧವಿದ್ಯಾಶಕ್ತಿಯಿಂದ ಸಾವಯವವಾದ ಮಾ ಯಾಶಕ್ತಿಯ ಉದಯವೆಂದು ನಾನು ಒಪ್ಪುತ್ತೇನೆ. ಇದರಿಂದ ಪರಿಣಾಮ ವಾದಪರಗಳಾದ ಎಲ್ಲಾ ವೇದಾಂತವಾಕ್ಯಗಳಿಗೂ ವ್ಯವಸ್ಥೆಯಾಗುವದಲ್ಲದೇ ಅವು ವ್ಯವಹಾರಪರಗಳು ಪರಮಾರ್ಥಪರಗಳಲ್ಲನೆಂದು ಶ್ರುತಿಸೂತ್ರಗಳಿಗೆ ವಿರು ದ್ಧವಾಗುವಂತೆ ಹೇಳುವದೂ ಆವಶ್ಯಕವಿಲ್ಲವು. ಒಳ್ಳೇದು ಶಿವಾದ್ವೈತಿಯೆ? ನಿನ್ನ ಶುದ್ಧ ವಿದ್ಯಾಂತ ತತ್ವಗಳು ಪರಶಿವನಿಗೆ ಅಭಿನ್ನಗಳಾಗಿವೆಯಲ್ಲವೆ? ಅವು ಗಳೆಲ್ಲಕ್ಕೂ ನೀನು ಶುದ್ಧಗಳೆನ್ನುವಿ. ಐದು ತತ್ವಗಳು ಶುದ್ಧಗಳು ಎಂದನ್ನು ತ್ತೇವೆ. ಮತ್ತು ಅವು ಪರಶಿವನ ಚಿದಾನಂದೇಚ್ಛಾ ಜ್ಞಾನಕ್ರಿಯಾಶಕ್ತಿಸ್ವರೂಪ ಗಳೇ ವಿಭಾಗ ಪರಾಮರ್ಶಕಾಲದಲ್ಲಿ ಪರಮಾತ್ಮನು ಸ್ವೇಚ್ಛೆಯಿಂದ ಅವುಗಳ ನ್ನು ವಿಭಕ್ತಗಳನ್ನಾಗಿ ಮಾಡುವನು. ಆಗ ಐದುತತ್ವಗಳು ಪಂಚಬ್ರಹ್ಮ ಸ್ವರೂ ಪಗಳಾಗುವವು. ಪರಶಿವ ಮಹಾಲಿಂಗವೆಂದದನ್ನು ಸೇರಿಸಿಕೊಂಡು ಷಟ್‌ಸ್ಥಲ ರೂಪಗಳೂ ಆಗುವವು. ಒಳ್ಳೇದು ಶುದ್ಧತತ್ವದಿಂದ ಅಶುದ್ಧ ಮಾಯಾತತ್ವವು

ಪರಿಣಮಿಸಲಾರದು. ಬ್ರಹ್ಮಾದ್ವೈತಿಯೇ ? ಇದೇ ಭೀತಿಯಿಂದ ನಿನ್ನ ಮೂಲ ಪುರುಷರು ವಿವರ್ತವಾದವನ್ನು ಸ್ವೀಕರಿಸಿದಂತೆ ತೋರುತ್ತದಲ್ಲವೆ? ಅಹುದು ಬ್ರಹ್ಮದ ಪರಿಣಾಮವೇ ಜಗತ್ತು ಅಂದರೆ ಬ್ರಹ್ಮಕ್ಕೆ ಅಶುದ್ಧತ್ವ ಜಡತ್ವಾದಿ ಅನರ್ಥ ಧರ್ಮಗಳೂ ಕೂಡ ಸಂಭವಿಸುವವು. ಆದ್ದರಿಂದಲೇ ನಾನೂ ವಿವರ್ತವಾದವನ್ನೇ ಅಂಗೀಕರಿಸುತ್ತೇನೆ. ಇದಕ್ಕೆ ಹಿಂದೆ ಉತ್ತರವನ್ನು ಹೇಳಿದ್ದೇನೆ. ಮತ್ತು ಕೇಳು. ಯೋಗಿಯ ಇಚ್ಛಾಶಕ್ತಿಯಿಂದ ಜಡವಾದ ಬಾಹ್ಯಪದಾರ್ಥಗಳು ಹುಟ್ಟುತ್ತವೆಯಲ್ಲವೆ. ,,ಯೋಗೀವನಿರುಪಾದಾನಮರ್ಥಜಾತಂ ಪ್ರಕಾಶಯೇತ್,, ಎಂಬುವ ಪ್ರಮಾಣದಿಂದ ಯೋಗಸಿದ್ಧಿಗಳನ್ನು ಒಪ್ಪಲೇಬೇಕು. ಮತ್ತು ಶ್ರುತೀತಿಹಾಸ ಪುರಾಣಪ್ರಾಮಾಣ್ಯಾತ್ | ಎಂದು ನಿಮ್ಮ ಆಚಾರ್ಯರ ಭಾಷ್ಯಪಂಕ್ತಿಯಾದರೂ ಇರುವದು. ಅಂದಮೇಲೆ ಪುರಾಣಕ್ಕೆ ಪ್ರಾಮಾಣ್ಯವನ್ನು ಒಪ್ಪುವ ಎಲ್ಲರೂ ಯೋಗಸಿದ್ಧ ಪದಾರ್ಥಗಳನ್ನು ಒಪ್ಪಲೇಬೇಕು. ಅಂದಮೇಲೆ ತನ್ನ ಇಚ್ಛಾಶಕ್ತಿಯಿಂದ ಹುಟ್ಟಿದ ಜಡವಾದ ಬಾಹ್ಯಪದಾರ್ಥವು ಆ ಯೋಗಿಗೆ ಜಾಡ್ಯವನ್ನುಂಟುಮಾಡುವದೇನು ?

ಆ ಪದಾರ್ಥದ ಸಂಬಂಧದಿಂದ ಅವನಿಗೆ ಏನಾದರೂ ಕಲಂಕವುಂಟೆ? ಇಲ್ಲವೆಂದಮೇಲೆ ಪರಶಿವನ ಇಚ್ಛಾಶಕ್ತಿಯಿಂಧ ಭಿನ್ನವಾಗಿಯೂ ಜಡವಾಗಿಯೂ ಜನಿಸಿದ ಅಶುದ್ಧಮಾಯೆಯ ಸಂಬಂಧ ವಿಶೇಷವು ಆ ಪರಶಿವನಿಗಿಲ್ಲದಿರುವದರಿಂದ ಅವನಿಗೆ ಕಲಂಕನಾವುದೂ ಇಲ್ಲ. ಅವನ ಶಕ್ತಿಯೇ ಅದ್ಭುತವಾದದ್ದು ಆ ಮಾಯೆಯು ಪರಶಿವೇಚ್ಛೆಯಿಂದ ಹುಟ್ಟಿದರೂ ಅದು ಬಾಹ್ಯವಾದಾಗ ಅಪವಿತ್ರ (ಅಶುದ್ಧ)ವಾಯಿತು. ಆದ್ದರಿಂದ ಶುದ್ಧ ವೀರಶೈವ ದಂಪತಿಗಳು ತಮ್ಮ ಮನೆಯಲ್ಲಿ ಹೊರಗಿನ ಕೆಲಸಕ್ಕಿಟ್ಟುಕೊಂಡ ಅದೀಕ್ಷಿತಗಳಾದ ತೊತ್ತನ್ನು ಮುಟ್ಟದಿರುವಂತೆಯೂ ಮನುಷ್ಯನು ತನ್ನ ಶರೀರವನ್ನು ಬಿಟ್ಟು ಕಡೆಗಾದಾಗ ತನ್ನ ಲೋಮನಖಾದಿಗಳನ್ನು ಮನಸಾ ಮುಟ್ಟದಿರುವಂತೆಯೂ ಅಗ್ನಿಯು ತನ್ನನ್ನು ಬಿಟ್ಟು ದೂರಹೋದ ಧೂಮವನ್ನು ಸ್ಪರ್ಶಮಾಡದಂತೆಯೂ ಶಿವಶಕ್ತಿಯರು ಆ ಮಾಯಾಚೇಟಿಯನ್ನು ಸ್ಪರ್ಶನಮಾಡುವದೇ ಇಲ್ಲವು. ಅಂದಮೇಲೆ ಪರಶಿವನು ಶುದ್ಧತ್ವ ನಿರವಯವತ್ವ ನಿತ್ಯತ್ವಾದಿ ಧರ್ಮಗಳುಳ್ಳವನೇ ಹೊರ್ತು ಅಶುದ್ಧತ್ವಾದಿ ಅನರ್ಥಮಾಯಿಕ ಧರ್ಮಗಳುಳ್ಳವನಲ್ಲ. ವೀರಶೈವ ದಂಪತಿಗಳು ಆ ತಮ್ಮ ಚೇಟಿಯು ವೀರಶೈವದೀಕ್ಷೆಯಿಂದ ಪರಿಶುದ್ಧಳಾಗಲು ಅವಳನ್ನು ತಮ್ಮೊಳಗೆ ಸೇರಿಸಿಕೊಳ್ಳುವಂತೆ ಆ ತ್ರಿಮಲಾತ್ಮಕವಾದ ಮಾಯೆಯು ದೀಕ್ಷಾ

ತ್ರಯದಿಂದ ಶುದ್ಧವಾಗಲು ಅದನ್ನು ಶಿವಶಕ್ತಿಯರು ತಮ್ಮೊಳಗೆ ಸೇರಿಸಿಕೊಂಡು ಬಿಡುವರು. (ಆ ಮಾಯೆಯು ಕಾರಣಾವಸ್ಥೆಯನ್ನು ಹೊಂದುವದು.) ಈ ಸ್ಥೂಲ ಜಗತ್ತಿಗೆ ಉಪಾದಾನಕಾರಣವಾದ ಮಾಯಾಚೇಟಿಯ ಗತಿಯೇ ಹೀಗಾದ ಮೇಲೆ ಅದರಿಂದಾದ ಮುಂದಿನ ಅಶುದ್ಧತತ್ವಗಳ ಸಂಬಂಧವು ಶಿವಶಕ್ತಿಯರಿಗೆ ಹ್ಯಾಗಾದೀತು? ಅವುಗಳ ಸಂಬಂಧದಿಂದ ಶಿವನಿಗೆ ಅಶುದ್ಧತ್ವಾದಿಗಳು ಬರುವ ಬಗೆ ಹೇಗೆ ಆ ತತ್ವಗಳೂ ಕೂಡ ಶುದ್ಧಗಳಾಗಲು ಅವುಗಳನ್ನೂ ಕೂಡ ತಮ್ಮೊಳಗೆ ಸೇರಿಸಿಕೊಳ್ಳುವರು. ಬ್ರಹ್ಮಾದ್ವೈತಿಯೆ! ಈ ರೀತಿಯಾಗಿ ಉತ್ತಮ ವ್ಯವಸ್ಥೆಯಾಗುತ್ತಿರಲಿಕ್ಕೆ ಬ್ರಹ್ಮಕ್ಕೆ ಅಶುದ್ಧತ್ವಾದಿಗಳು ಬರುವವೆಂಬ ಭಯದಿಂದ ಪರಿಣಾಮವಾದವನ್ನು ಸಮರ್ಥನಮಾಡುವ ವೇದಾಂತ ವಾಕ್ಯಗಳಿಗೆ ಉಪಾಸನಕ್ಕೆ ಉಪಯುಕ್ತಗಳು. ಮೋಕ್ಷಕ್ಕಲ್ಲವೆಂದು "ಸ್ಯಾಲ್ಲೋಕವತ್" (ಈ ಸೂತ್ರಭಾಷ್ಯವನ್ನು ನೋಡು.) ಏಕೆ ಹೇಳಿರಬಹುದು. ಅನಂತ ಶ್ರುತಿಗಳು ಸೂತ್ರಗಳೂ ಪರಿಣಾಮವಾದವನ್ನು ಹೇಳುವದು. ಉಪಾಸನೋಪಯೋಗಕ್ಕಾಗಿಯೇ ಎಂದು ಹೇಳುವಲ್ಲಿ ಕಾರಣವೇನಿರಬಹುದು. ನನಗಂತೂ ಲಿಂಗವನ್ನು ಪಡೆದುಕೊಳ್ಳುವದಕ್ಕಿಂತ ಪೂರ್ವದಲ್ಲಿಯೇ ಈ ರೀತಿಯಾದ ಭಾಷ್ಯವನ್ನು ಬರೆದಿರಬಹುದೆಂದು ಸ್ಫುರಿಸುತ್ತದೆ. ಯಾಕಂದರೆ ಶಕ್ತಿಪಾತ ಪವಿತ್ರಿತ ಹೃದಯರ ಶೈಲಿಯನ್ನು ಸ್ಪಂದಪ್ರದೀಪಿಕೆಯಲ್ಲಿ "ಜ್ವಲನಾದೂರ್ಧ್ವಮೋದ್ಗತಿರಿವ ವಿವಿಧಾಕೃತಿರಂಬರೆಗತಾಭಾತಿ| ತದ್ವಚ್ಛಂಭೋಃ ಸೃಷ್ಟಿಃ ಸ್ವಭಾವಜಾದ್ವೈತರೂಪೆಯಂ" ಎಂದು ಯೋಗಿನಾಥರು ಪರಿಣಾಮವಾದಕ್ಕನುಕೂಲವಾಗಿ ಹೇಳಿರುವರು. ಮತ್ತು "ಪ್ರಾಲ್ಯಾನಶ್ಚಿದ್ರಸಸ್ಯಾಘಃ ಸಾಕಾರತ್ವಮುಪಾಗತಃ | ಅವಸ್ಯಾಯಃ ಪ್ರಬೋಧಾರ್ಕೆತೂದಿತೆ ಸ್ವಸ್ವಭಾವಭಾಕ್" ಎಂದು ಜಲಕರಕನ್ಯಾಯದಂತೆ ಪರಿಣಾಮವಾದವನ್ನೇ ಸಮರ್ಥನಗೊಳಿಸುವರು. ಹ್ಯಾಗಂದರೆ ಅಗ್ನಿಯಿಂದುಂಟಾದ ಧೂಮವು ಆಕಾಶದಲ್ಲಿ ವಿವಿಧಾಕಾರವುಳ್ಳದ್ದಾಗಿರುವಂತೆ ಶಂಭುವಿನ ಸ್ವಭಾವಭೂತವಾದ ಶಕ್ತಿಯಿಂದುಂಟಾದ ಜಗತ್ತಿನ ದ್ವೈತರೂಪವಾದಸೃಷ್ಟಿಯು ನಾನಾವಿಧವಾಗಿದೆ. ಮತ್ತು ಚಿದ್ರಸವೆಂಬ ಹಿಮವು ಘಟ್ಟಿಗೊಂಡು ಸಾಕಾರವಾದ ಪ್ರಪಂಚರೂಪವಾದ ಆಲೇಕಲ್ಲಾಗಿರುವದು. ಮತ್ತೆ ಪ್ರಬೋಧಸೂರ್ಯನು ಉದಯಿಸಲು ಅದು ಮೊದಲಿನ ಸ್ವಭಾವವನ್ನು ಹೊಂದುವದು. ವಿವರ್ತವಾದಿಯೇ! ನಿನ್ನ ಮಿಥ್ಯಾಭೂತವಾದ ಪ್ರಪಂಚದಲ್ಲಿ ಸಚ್ಚಿದಾನಂದರೂಪವಾದ ಬ್ರಹ್ಮವು ಅನುಸ್ಯೂತವಾಗಿದೆಯೊ ಇಲ್ಲವೊ? ಆಗಿದ್ದರೆ ಘಟಾದಿಗಳಲ್ಲಿ ಸದ್ರೂಪವು ಹ್ಯಾಗೆ

ತೋರೀತು? ಆಗಿದ್ದರೆ ಅದರ ಸಂಬಂಧದಿಂದ ಬ್ರಹ್ಮಕ್ಕೆ ಅದರ ಜಡತ್ವಾದಿ ಗುಣಗಳು ಬರುವದಿಲ್ಲವೇನು? ಇಲ್ಲ. ಅನೇಕ ತರದ ಪುಷ್ಪಗಳಲ್ಲಿ ಸೂತ್ರವು ಅನುಸ್ಯೂತವಾಗಿದ್ದರೂ ಅದು ಭಿನ್ನವಾಗಿರುವದಷ್ಟೆ? ಮತ್ತು ಆಕಾಶವು ಎಲ್ಲಾ ಕಡೆಯಲ್ಲಿ ಅನುಸ್ಯೂತವಾಗಿದ್ದರೂ ಅದು ಭಿನ್ನವಾಗಿರುವದಷ್ಟೆ? ಮತ್ತು ಆಕಾಶವು ಎಲ್ಲಾ ಕಡೆಯಲ್ಲ ಅನುಸ್ಯೂತವಾಗಿದ್ದರೂ ಅದಕ್ಕೆ ಆ ಪದಾರ್ಥಗಳ ಸಂಬಂಧವಿಲ್ಲವಷ್ಟೆ? ಹಾಗೆ ಬ್ರಹ್ಮವು ಸರ್ವತ್ರ ವ್ಯಾಪಿಸಿಕೊಂಡಿದ್ದರೂ ಅದು ಪ್ರಪಂಚಕ್ಕೆ ಭಿನ್ನವಾಗಿರುವದು. ಬ್ರಹ್ಮಾದ್ವೈತಿಯೇ ಸುಗಂಧ ಪುಷ್ಪಗಳ ಸಂಬಂಧದಿಂದ ಸೂತ್ರದಲ್ಲಿ ಸುವಾಸನೆಯು ಕಂಡುಬರುವದಿಲ್ಲವೆ? ಹಾಗೆ ಬ್ರಹ್ಮದಲ್ಲಿ ಪ್ರಪಂಚಸಂಬಂಧದಿಂದ ಪ್ರಪಂಚದ ದುಃಖಾದಿ ಗುಣಗಳ ಲೇಪನವಾಗಬಾರದೇಕೆ. ಶಿವಾದ್ವೈತಿಯೇ ಆಕಾಶದಂತೆ ಬ್ರಹ್ಮವು ಅಸಂಗವು. ಅದಕ್ಕೆ ಪುಷ್ಕರ ಪಲಾಶದ ಮೇಲಿನ ಜಲ ಬಿಂದುವಿನಂತೆ ಪ್ರಪಂಚದ ಗುಣಲೇಪವಾಗಲಾರದು. ಆದ್ದರಿಂದ ಜ್ಞಾನಿಯಾದ ಮುಕ್ತಾತ್ಮನು ಸಾಂಸಾರಿಕ ಕರ್ಮಲೇಪವಿಲ್ಲದವನಾದ್ದರಿಂದ ಅವನು ವಸ್ತುತಃ ಅಸಂಗ ಬ್ರಹ್ಮರೂಪನಾದುದರಿಂದ ಅವನು ಯಾವಾಗಲೂ ನಿರ್ಲಿಪ್ತನೇ ಇದ್ದಾನೆ. ಪ್ರಾರಬ್ಧಕರ್ಮವಶಾತ್ ಜೀವನ್ಮುಕ್ತನು ಪ್ರಾಣಧಾರಣಕ್ಕಾಗಿ ಕಿಂಚಿತ್ ಕರ್ಮವನ್ನು ಮಾಡಿದರೂ ಅದರ ಲೇಪವಿಲ್ಲದವನೇ ಆಗಿರುವನು. ಈ ವಿಷಯದಲ್ಲಿ ಮೇಲೆ ಹೇಳಿದ ಕಮಲಜಲ ಬಿಂದು ದೃಷ್ಟಾಂತವೇ ಸರಿ. ಆದ್ದರಿಂದ ಬ್ರಹ್ಮವು ಪ್ರಪಂಚದಲ್ಲಿ ಅನುಸ್ಯೂತವಾಗಿ ಶರೀರಾದಿಗಳಲ್ಲಿ ಕಲ್ಪಿತಸಂಬಂಧದಿಂದ ಇದ್ದರೂ ಭಿನ್ನವಾಗಿಯೆ ಇರುವದು. ಆ ಪ್ರಪಂಚಗುಣದ ಲೇಪವಿಲ್ಲ. ಬ್ರಹ್ಮಾದ್ವೈತಿಯೇ! ಕಮಲಪತ್ರ ಜಲಬಿಂದು ಇವೆರಡರ ಆಕಾರವು ಸ್ಪಷ್ಟವಾಗಿಲ್ಲವೆ? ಇದ್ದರೇನಾಯಿತು. ನಿನ್ನ ಬ್ರಹ್ಮಭೂತನಾದ ಆತ್ಮನು ಶರೀರಾದಿಗಳಿಂದ ಮಾಡಿದ ಕರ್ಮವು ಆಕಾರತಃ ಉಳಿಯಿತು. ಉಳಿಯಲಿ ಅದರಿಂದೇನು ಕ್ಷತಿಯು? ಅದರ ಲೇಪವಿಲ್ಲದಿದ್ದರೆ ಸಾಕು. ಬ್ರಹ್ಮಭೂತಾತ್ಮನಿಗೆ ಅಶುದ್ಧತ್ವಾದಿಗಳು ತಟ್ಟುವದಿಲ್ಲ. ಬ್ರಹ್ಮಾದ್ವೈತಿಯೆ! ಪಾರಮಾರ್ಥಿಕ ದಶೆಯಲ್ಲಿ ಕೇವಲಾದ್ವೈತವೇ ಸಿದ್ಧಿಸುತ್ತದೆಂಬ ಮಾತು ಎಲ್ಲಿ ಉಳಿಯಿತು, ದ್ವೈತವಾಗಲಿಲ್ಲವೆ? ಜ್ಞಾನವಾದಮೇಲೆ ಶರೀರಪಾತವಾಗುವವರಿವಿಗೂ ಕರ್ಮಗಳಿದ್ದು ಆಮೇಲೆ ನಷ್ಟಗಳೇ ಆಗುತ್ತವೆಯಂದಮೇಲೆ ದ್ವೈತವು ಉಳಿಯಲಿಲ್ಲ. ಹಾಗಾದರೆ ಜ್ಞಾನದಿಂದ ಎಲ್ಲಾ ಕರ್ಮಗಳು ನಾಶವಾದಂತಾಗಲಿಲ್ಲವಲ್ಲಾ? ಪ್ರಾರಬ್ಧೇತರ ಕರ್ಮಗಳ ನಾಶವನ್ನು ಹೇಳುವೆವು. “ಜ್ಞಾನಾಗ್ನಿಃ

ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ | "ಕ್ಷೀಯಂತೇ ಚಾಸ್ಯಕರ್ಮಾಣಿ" ಇತ್ಯಾದಿ ವಾಕ್ಯಗಳಿಗೆ ಅರ್ಥಸಂಕೋಚಮಾಡುವೆವು. ಬ್ರಹ್ಮಾದ್ವೈತಿಯೇ! ಇದೇನು ನಿನ್ನ ಹೊಯಿದಾಟವು? ಹುಡಗರು ಮಾತಾಡಿದಂತೆ ಮಾಡುವಿಯಲ್ಲಾ. ಒಮ್ಮೆ ಶರೀರಪಾತಾನಂತರದಲ್ಲಿ ಪ್ರಾರಬ್ಧಕರ್ಮದ ನಾಶವೆನ್ನುವಿ. ಮತ್ತು ಶ್ರುತಿಗೆ ಸಂಕೋಚಮಾಡುವಿ. ನೋಡು ನಿನ್ನ ಬ್ರಹ್ಮಾಕಾರವೃತ್ತಿರೂಪವಾದ ವಿದ್ಯೆಯು ಎಲ್ಲಿ ಅದೆ. ಅದೇ ಅಲ್ಲವೇ ಎಲ್ಲಾ ಸಾಂಸಾರಿಕ ಕರ್ಮಗಳನ್ನು ನಾಶಮಾಡುವದು. ಅದು ಅಜ್ಞಾನ ನಾಶೋತ್ತರಕ್ಷಣದಲ್ಲಿ ನಾಶವಾಗಿಲ್ಲವೆ? ಜನಕಾದಿಗಳು ಮುಕ್ತರಾಗಿ ಎಷ್ಟೋದಿವಸವಿರಲಿಲ್ಲವೆ? ಶಿವಾದ್ವೈತಿಯೇ! ಕರ್ಮನಾಶವೆಂದರೆ ಅದರ ಅಭಿಮಾನನಾಶವು. ಹಾಗಾದರೆ ಜ್ಞಾನದಿಂದ ದ್ವೈತಪ್ರಪಂಚಾಭಿಮಾನ ನಾಶವೆಂತಲೂ ಹೇಳಬೇಕಾಗುವದು. ಹೇಳಿದರೆ ಹಾನಿಯೇನು? "ತಂತುನಾಶೆ ಪಟನಾಶವತ್ ದ್ವೈತಾಜ್ಞಾನನಾಶೆ ದ್ವೈತಪ್ರಪಂಚನಾಶಃ" ಎಂದು ಬಡಬಡಿಸುವದೇಕೆ? ಬಾಧ್ಯಬಾಧಕಭಾವದಲ್ಲಿ ಅಷ್ಟೊಂದು ಪಟಾಟೋಪವೇಕೆ? ಆದ್ದರಿಂದ ಸ್ವರೂಪತಃ ಜಗತ್ತಿನ ನಾಶವೆಂಬ ನಿನ್ನ ದುರ್ವಾದವನ್ನು ಬಿಟ್ಟು ("ಜ್ಞಾನಾದ್ವಿಕಲ್ಪಬುದ್ಧಿಸ್ತು ಲೀಯತೆ ನಸ್ವರೂಪತಃ") ಎಂದು ಹಿಂದೆ ಹೇಳಿದ ಪ್ರಮಾಣದಂತೆ ನಿರ್ದುಷ್ಟರಾದ ಪರಮಾಪ್ತರಿಂದ ಅಂಗೀಕೃತವಾದ ಪರಿಣಾಮವಾದವನ್ನವಲಂಬಿಸಿ ಧನ್ಯಜೀವಿಯಾಗಬಾರದೆ? ದುರಭಿಮಾನ ಮಾಡುವದು ಯೋಗ್ಯವಲ್ಲಾದ್ದರಿಂದ ಪರಮೇಶ್ವರನ ಶಕ್ತಿಯಿಂದ ಜಡವಾದ ಮಾಯಾಶಕ್ತಿಯು ಹುಟ್ಟಿತು. ಅದರಿಂದ ಮಿಶ್ರಾಧ್ವ ತತ್ವಗಳೂ, ಅಲ್ಲಿಂದ ಅಶುದ್ಧಾಧ್ವತತ್ವಗಳೂ ಹುಟ್ಟಿದವು. ಗುರುಮುಖದಿಂದ ಸಾಧಕನು ಇವುಗಳನ್ನು ಶುದ್ಧಗೊಳಿಸುತ್ತ ಮಿಶ್ರಾಧ್ವ ತತ್ವಗಳನ್ನು ಶುದ್ಧಗೊಳಿಸಲು ಆ ಜಡವಾದ ಮಾಯೆಯು ತನಗೆ ಕಾರಣವಾದ ಶುದ್ಧವಿದ್ಯಾಸ್ವರೂಪವಾಗುವದು. ಅದು ಕ್ರಮದಿಂದ ಶಿವಶಕ್ತಿಯ ಸ್ವರೂಪವಾಗಲು ಸಾಧಕನು ಶಕ್ತಬ್ರಹ್ಮಸ್ವರೂಪನೇ ಆಗಿಬಿಡುವನು. ಇಂಥ ಜೀವನ್ಮುಕ್ತನಲ್ಲಿ ಕೆಲವು ಅಲೌಕಿಕ ಗುಣಗಳು ಕಾಣುತ್ತಿರುತ್ತವೆ. ಶರೀರಪಾತಾನಂತರದಲ್ಲಿ ಸರ್ವಜ್ಞತ್ವಾದಿ ತನ್ನ ಶಕ್ತಿಯ ವಿಕಾಸವಾಗುತ್ತದೆ. ಈ ಶಕ್ತಿವಿಕಾಸವೇ ಮುಕ್ತಿಯು. ಆದರೆ ಹಿಂದೆ ಹೇಳಿದ ಷಡಾಧ್ವದ ಶುದ್ಧಿಕ್ರಮವು ಹೇಗೆಂಬುವ ವಿಷಯಕ್ಕೆ ಮುಂದೆ ಒಂದು ಮೋಕ್ಷಕಾಂಡವನ್ನೇ ಬರೆಯುತ್ತೇನೆ. ಅದನ್ನು ತಿಳಿದುಕೊಂಡು ಅದರಂತೆ ಆಚರಿಸಿ ಮುಕ್ತನಾಗಬೇಕಲ್ಲದೇ ಸುಮ್ಮನೇ ನಮ್ಮ ಷ್ಟನು ಕಟ್ಟಿಸಿದ ಭಾವಿ ಎಂಬ ಅಭಿಮಾನದಿಂದ ಆ ನವಳನೀರನ್ನೇ ಕುಡಿಯು

ತ್ತೇನೆ ಅಂದರೆ ಹುಡುಗರೂ ಕೂಡ ನಗಲಿಕ್ಕಿಲ್ಲವೆ? ವೀರಶೈವನೆ! ನೀನು ಹೇಳುವದೆಲ್ಲಾ ಸರಿಯೇ? ಆದರೆ ಸಚ್ಚಿದಾನಂದರೂಪನಾದ ಶಿವನು ಅಸತ್ತು ಜಡ ದುಃಖರೂಪಮಾಯಾ ಪ್ರಪಂಚಸ್ವರೂಪನಾಗಿ ಪರಿಣಮಿಸುತ್ತಾನೆಂಬುವದೇ ನನ್ನ ಅನುಭವಕ್ಕೆ ಬರಲೊಲ್ಲದು. ಆದರೆ ಸತ್ತಿನಿಂದ ಅಸತ್ತು ಹುಟ್ಟಲಾರದಷ್ಟೆ? ಚಿದ್ರೂಪದಿಂದ ಅತಿ ಜಡವೂ ಆನಂದದಿಂದ ದುಃಖವೂ ಹುಟ್ಟುವದು ಹೇಗೆ? ಬ್ರಹ್ಮಾದ್ವೈತಿಯೇ ಈ ಆಶಂಕೆಗೆ ಮೊದಲು ಎಷ್ಟೋ ದೃಷ್ಟಾಂತಗಳಿಂದ ಉತ್ತರವು ಹೇಳಲ್ಪಟ್ಟಿರುವದಾದರೂ ಇನ್ನೂ ಹೇಳುವೆನು ಮನಸ್ಸುಗೊಟ್ಟು ಕೇಳು. ಆದರೆ ಮೊದಲು ನಿನ್ನನ್ನು ಸ್ವಲ್ಪ ಕೇಳತಕ್ಕದ್ದಿರುವದೇನಂದರೆ—ಸತ್ತಿನಿಂದ ಅಸತ್ತು ಹುಟ್ಟಲಾರದೆನ್ನುವಂತೆ ಅಸತ್ತಿನಿಂದಾದರೂ ಸತ್ತು ಹುಟ್ಟಲಾರದಷ್ಟೆ! ಹುಟ್ಟಲಾರದೆಂದರೆ ಅಸತ್ಯಗಳಾದ ವೇದಾಂತಾದಿ ಪ್ರಮಾಣಗಳಿಂದ ಸತ್ಯವಾದ ಮೋಕ್ಷವೆಂಬುವ ನಿಮ್ಮಾಚಾರ್ಯರ ಮಾತಿಗೆ ನೀನೇನು ಮರ್ಯಾದೆಯನ್ನು ಕೊಟ್ಟಂತಾಯಿತು? ಓಹೋ ನೆನಪಾಯಿತು. ಮೋಕ್ಷವು ಸತ್ಯವು. ಅದು ಯಾವಾಗಲೂ ಇದ್ದದ್ದೇ. ಅದಕ್ಕೆ ಆವರಕವಾದ ಅಜ್ಞಾನದ ನಾಶಕ್ಕಾಗಿಯೇ ವೇದಾಂತಾದಿ ಪ್ರಮಾಣಗಳು ಬೇಕಾಗುವವು. ಆದ್ದರಿಂದ ಅಸತ್ಯ ವೇದಾಂತದಿಂದ ಸತ್ಯಮೋಕ್ಷವು ಹುಟ್ಟುವದಿಲ್ಲ. ಅಜ್ಞಾನ ನಾಶಕ್ಕಾಗಿ ವೇದಾಂತಗಳು ಬೇಕೆಂದಮೇಲೆ ಅಜ್ಞಾನನಾಶವನ್ನು ಕುರಿತು ವೇದಾಂತಗಳು ಕಾರಣಗಳೆಂದು ಹೇಳಿದಂತಾಯಿತು. ಆದರೆ ಅಜ್ಞಾನನಾಶವು ಬ್ರಹ್ಮಭಿನ್ನವದೆಯೇನು? ಇಲ್ಲಾ. ಅದು ಅಧಿಷ್ಠಾನಸ್ವರೂಪವು. ಸರ್ವಾಧಿಷ್ಠಾನವೆಂದರೆ ಬ್ರಹ್ಮವೇ ಆಗುವದು. ಬ್ರಹ್ಮವೇ ಮೋಕ್ಷಸ್ವರೂಪವು. ಮೋಕ್ಷವೆಂದರೆ ಬ್ರಹ್ಮಕ್ಕೆ ಭಿನ್ನವಲ್ಲ. ಈಗ ನೀನೇ ವಿಚಾರಿಸು. ಅಸತ್ಯವೇದಾಂತದಿಂದ ಸತ್ಯಮೋಕ್ಷವನ್ನು ಹೇಳಿದಂತಾಗಲಿಲ್ಲವೆ? ಮತ್ತು ನಿಮ್ಮ ಆಚಾರ್ಯರು ಈ ಮಾತಿನ ಸಿದ್ಧಿಯ ಸಲುವಾಗಿ ಮಿಥ್ಯಾಭೂತಸರ್ಪದಿಂದ ಸತ್ಯಗಳಾದ ಭಯಕಂಪಾದಿಗಳೂ, ರೇಖಾನ್ಯಸ್ತಾಕ್ಷರದಿಂದ ಸತ್ಯವರ್ಣೋತ್ಪತ್ತಿಯೂ ಆಗುವಂತೆ ಎಂದು ಅನೇಕ ದೃಷ್ಟಾಂತಗಳ ಮೂಲಕ ಅಸತ್ಯವಾದ ವೇದಾಂತದಿಂದ ಸತ್ಯವಾದಮೋಕ್ಷವನ್ನು ಮಾನಿಸಿಲ್ಲವೆ? ಅವರು ಮಾನಿಸಿರುವರು. ನಾನಾದರೂ ಮಾನಿಸುವೆನು ಅಂದಮೇಲೆ ಅಸತ್ಯದಿಂದ ಸತ್ಯವನ್ನು ಹೇಳುವ ನೀನು ಸತ್ಯದಿಂದ ಅಸತ್ಯವಾದ ಮಾಯೆಯು ಹುಟ್ಟಿರುವದೆಂದು ನಾನು ಹೇಳಿದರೆ ನಿನ್ನನುಭವಕ್ಕೆ ಬರಲಾರದೇಕೆ? ನೀನೇ ವಿಚಾರಿಸಿ ನೋಡು. ಒಳ್ಳೇದು ಶಿವಾದ್ವೈತಿಯೇ! ನಿನ್ನ ಮತದಲ್ಲಿ ಕಾರ್ಯವೂ ಕೂಡ ಸತ್ಯವಾಗಿದೆಯಲ್ಲವೆ? ಅಹುದು

ಸತ್ಯವಾಗಿರುವದು. ಹಾಗಾದರೆ ಶಕ್ತಿಯ ಕಾರ್ಯವಾದ ಮಾಯೆಗೆ ಅಸತ್ಯತ್ವ ವನ್ನು ಹೇಗೆ ಹೇಳುವಿ. ಅಯ್ಯೋ ಶಿವಾದ್ವೈತಮತ ತತ್ವದ ಜ್ಞಾನವಿಲ್ಲದಿರುವ್ದರಿಂದ ನೀನು ಹೀಗೆ ಪ್ರಶ್ನೆಮಾಡುವದು ಯುಕ್ತವೇ ಆಗಿದೆ. ಕೇಳು ನನ್ನ ಮತದಲ್ಲಿ ಅಸತ್ಯವೆಂದರೆ ಕಾರಣವಾದ ಮಣ್ಣುಕಾರ್ಯವಾದ ಘಟದ ಪೂರ್ವೋತ್ತರ ಕಾಲ ಗಳಲ್ಲಿ ವ್ಯಕ್ತವಾಗಿ ಇಲ್ಲದಿರುವಿಕೆಯು. ಕಾರಣವಾದ ಮೃತ್ತಿಕೆಯ ಸ್ವರೂಪದಿಂದ ಘಟಕಾರ್ಯವು ತ್ರೈಕಾಲಿಕ ಸತ್ಯವೇ ಇರುವಂತೆ ಮಾಯೆಯಾದರೂ ತನಗೆ ಕಾರಣವಾದ ವಿದ್ಯಾಶಕ್ತಿರೂಪದಿಂದ ಸತ್ಯವೇ ಆಗಿರುವದು. ಎಲೈ ಶಿವಾದ್ವೈತಿಯೆ! ಜಡವಾದ ಮಾಯೆಯು ಅಜಡವಾದ ವಿದ್ಯಾಶಕ್ತಿಸ್ವರೂಪವಾಗುವದುಂಟೆ? ಬ್ರಹ್ಮಾದ್ವೈತಿಯೇ ನಿನ್ನ ಬುದ್ಧಿಯು ಬಲು ಸೂಕ್ಷ್ಮವಿದ್ದಂತೆ ತೋರುತ್ತದೆ. ಯಾಕಂದರೆ ಜಡವಾದ ಮಾಯೆಯು ವಿದ್ಯಾಸ್ವರೂಪವಲ್ಲ. ಅದನ್ನು ಸಾಧಕನು ಶಿವದೀಕ್ಷಾಸಂಪನ್ನನಾಗಿ ಗುರುವಿನಿಂದ ಹೇಳಲ್ಪಟ್ಟ ಉಪಾಯದಿಂದ ಅದನ್ನು ಶುದ್ಧಿಗೊಳಿಸಲು, ಆಗ ಅದರ ಜಡತ್ವವು ಕಳೆದು ತಾನು ಊರ್ಧ್ವವಾದ ವಿದ್ಯಾಸ್ಥಾನವನ್ನೈದುವದು. ಜಡವಾದ ಜಲವು ಅಗ್ನಿಸಂಸ್ಕಾರದಿಂದ ಶುದ್ಧವಾಗಲು ಹೊಗೆಯಂತಿರುವ ಸೂಕ್ಷ್ಮಕಣಗಳು ಊರ್ಧ್ವಸ್ಥಾನಕ್ಕೆ ಹೋಗಿಬಿಡುವಂತೆ ಜಡವಾದ ಮಾಯೆಯು ಶಿವದೀಕ್ಷಾಸಂಸ್ಕಾರದಿಂದ ಶುದ್ಧವಾಗಲು (ಅಜಡವಾಗಲು) ಊರ್ಧ್ವಸ್ಥಾನಕ್ಕೆ ಹೋಗುವಲ್ಲಿ ಯಾವ ಅಭ್ಯಂತರವೂ ಇಲ್ಲ. ಜಲವು ಜಡವಿದ್ದಾಗ ಊರ್ಧ್ವದೇಶಕ್ಕೆ ಹೋಗದಿರುವಂತೆ ಮಾಯೆಯು ಜಡವಿದ್ದಾಗ ಊರ್ಧ್ವ ತತ್ವದಲ್ಲಿ ಸಮರಸವಾಗಲಾರದು. ಅದೇ ಜಲವು ಅಗ್ನಿಯಿಂದ ಶುದ್ಧವಾಗಲು ಸೂಕ್ಷ್ಮರೂಪದಿಂದ ಆಕಾಶಗತವಾದ ತನ್ನ ಕಾರಣ ಜಲದಲ್ಲಿ ಸಮರಸವಾಗಿ ಬಿಡುವದು. ಕರ್ಪೂರವು ಜಡವಿದ್ದಾಗ ಆಕಾಶಗತವಾದ ತನ್ನ ಕಾರಣತತ್ವದಲ್ಲಿ ಸೇರುವದಿಲ್ಲ. ಅದಕ್ಕೆ ಅಗ್ನಿಸಂಯೋಗವಾಗುತ್ತಲೇ ಧಗಧಗೆಂದು ಉರಿದು ಶುದ್ಧವಾಗಿ (ಲಯವಾಗಿ) ಆದರ ನಾಮಮಾತ್ರವೂ ಉಳಿಯದಂತೆ ತನ್ನ ಕಾರಣ ತತ್ವದಲ್ಲಿ ಬೆರೆತು ಹೋಗುತ್ತದಲ್ಲವೆ? ಇದರಂತೆ ಮಾಯೆಯೂ ಕೂಡ ಶುದ್ಧವಾಗಿ ತನಗೆ ಕಾರಣವಾದ ತತ್ವದಲ್ಲಿ ಸಮರಸವಾಗಿ ಹೋಗುತ್ತದಾದ್ದರಿಂದ ಅದಕ್ಕೆ ಸ್ವರೂಪತಃ ನಾಶವನ್ನು ಹೇಳಕೂಡದು. ಹೇಳಿದರೆ ,,ನಾಸತೋವಿದ್ಯತೇ ಭಾವೋ ನಾಭಾವೋ ವಿದ್ಯತೆಸತಃ,, ಇತ್ಯಾದಿ ಉಕ್ತಿಗಳೂ, ,,ಸದೇವ ಸೋಮ್ಯೇದಮಗ್ರ ಆಸೀತ್ ,, ,,ಅಸದೇವಸೌಮ್ಯೇದಮಗ್ರ ಆಸೀತ್ ,, ಇತ್ಯಾದಿ ಶ್ರುತಿಗಳೂ, ಪರಮ ಶಿವಸಮುದ್ರೇಹಂ ಹರಿಃ ಸರ್ವದೇವಾ | ಮನುಜಪಮಿನ್ಯ

ಗಾದ್ಯಾಃ ಶೀಕರಾ ಏವಸತ್ಯಂ | ವಿಮಲಮತಿಭಿರೇವಂ ವೇದವೇದಾಂತನಿಷ್ಠೈಃ | ಹೃದಯಕುವರಸಿಷ್ಠಂ ವೇದಿತುಂ ಶಕ್ಯತೇಹಿ || ಹೀಗೆಂಬುವ ಬ್ರಹ್ಮಗೀತಾಶ್ಲೋಕವು. ಯಥಾಹೇಮ್ನೋರೂಪಕೇಷು ವೈಚಿತ್ರ್ಯಂ ಸ್ಯಾನ್ನರಿಷ್ಯತೆ | ಅಥ ನಿತ್ಯಸ್ವರೂಪಸ್ಯ ತಥಾ ತೇವಿಶ್ವರೂಪತಾ || ಯಥಾಗಲಿತರೂಪಸ್ಯ ಹೇಮ್ನಃ ಪಿಂಡಾತ್ಮನಾಸ್ಥಿತಿಃ | ತಥಾಗಲಿತವೇದ್ಯಸ್ಯ ತವಶುದ್ಧಚಿದಾತ್ಮತಾ || ಎಂದು ಸ್ಪಂದಪ್ರದೀಪಿಕಾಕಾರರಿಂದ ಹೇಳಲ್ಪಟ್ಟ ಪ್ರಮಾಣ ವಾಕ್ಯಗಳೂ ಹೇಗೆ ಸಂಗತಗಳಾಗುವವು, ವೀರಶೈವನಾದ ಶಿವಾದ್ವೈತಿಯೆ! ಒಬ್ಬನೇ ಶಿವನು ಅನೇಕ ಪ್ರಪಂಚಸ್ವರೂಪನಾಗಿ ಪರಿಣತನಾಗುವನೆಂಬುವದೇ ನನ್ನ ಅನುಭವಕ್ಕೆ ಬರಲೊಲ್ಲದು. ಒಳ್ಳೇದು ಇದಕ್ಕೂ ಹಿಂದೆ ಉತ್ತರವನ್ನು ಹೇಳಿದ್ದೇನೆ ಮತ್ತೆ ಕೇಳು. ಪುರಾಣಾದಿಗಳನ್ನು ಮಾನಿಸುವ ನೀನು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳನ್ನು ಮಾನಿಸುತ್ತೀಯಲ್ಲವೆ? ಮತ್ತು ಯೋಗಸಿದ್ಧರ ಮಹಿಮೆಗಳನ್ನು ಮಾನಿಸಬೇಕಾಗುವದು. ಅದಮೇಲೆ ಒಂದೊಂದು ಚಿಂತಾಮಣಿಯು ಅಭಿಮತಗಳಾದ ಅನೇಕ ಪದಾರ್ಥಗಳನ್ನು ಕೊಡುತ್ತದಷ್ಟೆ? ಆದ್ದರಿಂದ ಅದರಲ್ಲಿ ಅಂಥದೊಂದು ಶಕ್ತಿಯುಂಟೆಂದು ಒಪ್ಪಿಕೊಳ್ಳಬೇಕು. ಆ ಒಂದು ಮಣಿಯ ಒಂದು ಶಕ್ತಿಯ ಪರಿಣಾಮರೂಪಗಳಲ್ಲವೆ? ಅನೇಕ ಪದಾರ್ಥಗಳು ಆ ಶಕ್ತಿಯು ಚಿಂತಾಮಣಿರೂಪವು. ಇದರಂತೆ ಶಿವಶಕ್ತಿಯು ಶಿವರೂಪವು. ಆದರೂ ಆ ಸ್ಥೂಲಪದಾರ್ಥಗಳು ಆ ಚಿಂತಾಮಣಿಯಿಂದ ಹೊರಟ ಕಾಲಕ್ಕೆ ಚಿಂತಾಮಣಿಗೆ ಏನೊಂದೂ ಹಾನಿಯಿಲ್ಲದೇ ಅದು ಇದ್ದಕ್ಕಿದ್ದಹಾಗೆಯೇ ಇರುವದಲ್ಲವೆ?

ಮತ್ತು ಆ ಸ್ಥೂಲ ಪದಾರ್ಥಗಳ ಯಾವಧರ್ಮಗಳೂ ಆ ಚಿಂತಾಮಣಿಗೆ ತಟ್ಟುವದಿಲ್ಲ. ಅದರಂತೆ ಶಿವನು ತನ್ನ ಶಕ್ತಿಯಿಂದ ಅನೇಕ ಸ್ಥೂಲ ಸೂಕ್ಷ್ಮ ಪ್ರಪಂಚಸ್ವರೂಪನಾಗಿ ಪರಿಣಮಿಸಿದರೂ ಅವನು ಆ ಪ್ರಪಂಚದ ಯಾವ ಧರ್ಮಗಳನ್ನೂ ಹೊಂದುವದಿಲ್ಲ. ಇದ್ದಕಿದ್ದಹಾಗೆಯೇ ಇರುತ್ತಾನೆ. ಆದ್ದರಿಂದಲೇ ಜ್ಞಾನಸಂಬೋಧದಲ್ಲಿ ಸ್ವಭಾವಾದೇಕರೂಪೋಽಪಿ ನಾನಾತ್ವಂ ಪ್ರತಿಪದ್ಯತೆ ಜ್ಞಾನಸ್ಯಶಕ್ತಿಃ ಸಂಕಲ್ಪೈರ್ಲಕ್ಷ್ಮೀಶ್ಚಿಂತಾಮಣೇರಿವ || ಎಂದು ಹೇಳಲ್ಪಟ್ಟಿರುವದು. ಎಲೈ ಪರಿಣಾಮವಾದಿಯೇ? “ಕೃತ್ಸ್ನಪ್ರಸಕ್ತಿರ್ನಿರವಯವತ್ವ ಶಬ್ದಕೋಪೋವಾ” ಎಂಬುವ ಸೂತ್ರದಿಂದ ಪರಿಣಾಮವಾದವನ್ನು ಖಂಡಿಸಮಾಡಿಲ್ಲವೆ! ಇದು ಪೂರ್ವಪಕ್ಷ ಸೂತ್ರವು ಆದ್ದರಿಂದಲೇ ಮುಂದಿನ “ಶ್ರುತಿಸ್ತು ಶಬ್ದಮೂಲತ್ವಾತ್” “ಆತ್ಮನಿಚೈವಂ ವಿಚಿತ್ರಾಶ್ಚಹಿ” ಎಂಬುವ ಸೂತ್ರಗಳಿಂದ ಪರಿ

ಣಾಮವಾದವನ್ನು ಒಪ್ಪಿಕೊಂಡಿರುತ್ತಾರೆ. ಆದ್ದರಿಂದ ನಿಮ್ಮ ಆಚಾರ್ಯರು ‟ಶ್ರುತಿಸ್ತು ಶಬ್ದಮೂಲತ್ವಾತ್” ಎಂಬುವ ಸೂತ್ರಭಾಷ್ಯದಲ್ಲಿ ತಸ್ಮಾದ್ದುರ್ಘಟ ಮೇತತ್ | ಎಂದು ಪರಿಣಾಮವಾದದಮೇಲೆ ಶಂಕಿಸಿ ಬ್ರಹ್ಮದಲ್ಲಿ ಅವಿದ್ಯಾಕ ಲ್ಪಿತರೂಪಭೇದವನ್ನು ಸ್ವೀಕರಿಸಿ ಬ್ರಹ್ಮಕ್ಕೆ ಸಾವಯವತ್ವವನ್ನು ವಪ್ಪಿರುವದು ಸೂತ್ರಕಾರರ ಅಭಿಪ್ರಾಯಕ್ಕೆ ವಿರುದ್ಧವು. ಮತ್ತು ಆಚಾರ್ಯರು ವಾಚಾರಂಭ ಣಶ್ರುತಿಯು ಪರಿಣಾಮ ಪ್ರತಿಪಾದನಾರ್ಥವಲ್ಲವೆಂದು ನಚೇಯಂ ಪರಿಣಾಮ ಶ್ರುತಿಃ ಪರಿಣಾಮ ಪ್ರತಿಪಾದನಾರ್ಥಾ ತತ್ಪ್ರತಿಪತ್ತೌ ಫಲಾನವಗಮಾತ್ | ಎಂದು ಹೇಳಿದ್ದಾರಲ್ಲವೆ? ಇದನ್ನು ಸ್ವಲ್ಪ ಸೂಕ್ಷ್ಮದೃಷ್ಟಿಯಿಂದ ವಿಚಾರಿಸು. ‟ಮೃತ್ತಿಕೇತ್ಯೆವಸತ್ಯಂ” ಎಂಬುವದರಿಂದ ಕೇವಲ ಕಾರಣಕ್ಕೇನೇ ಸತ್ಯತ್ವವಲ್ಲದೆ ಕಾರ್ಯವಾದ ಘಟಕ್ಕೆ ಸತ್ಯತ್ವವಿಲ್ಲದಿರುವಂತೆ ಕಾರಣಬ್ರಹ್ಮಕ್ಕೆ ಸತ್ಯತ್ವವಲ್ಲದೆ ಕಾರ್ಯಪ್ರಪಂಚಕ್ಕೆ ಸತ್ಯತ್ವವಿಲ್ಲವು. ಮಿಥ್ಯಾತ್ವವೇ ಇರುವುದು. ಮತ್ತು ಬ್ರಹ್ಮವು ಪರಿಣಾಮವುಳ್ಳದ್ದು ಎಂಬುವ ಜ್ಞಾನದಿಂದ ಆತ್ಮನಿಗೆ ಪರಿಣಾಮಿತ್ವವೇ ಫಲವಾ ದೀತು. ಅದು ಫಲವೆಂದು ವೇದಾಂತವಿಚಾರದಿಂದ ಕಂಡುಬರುವದಿಲ್ಲ. ಆದ್ದರಿಂದ ನಮ್ಮ ವಿವರ್ತವಾದ ಪಕ್ಷವೇ ಸಮಾಚೀನವಾದದ್ದೆಂದು ಅಭಿಪ್ರಾಯಪಟ್ಟಿರುತ್ತಾ ರಲ್ಲವೆ ಇನ್ನು ನೋಡು ಏವಕಾರವು ಅಪ್ಯರ್ಥದಲ್ಲಿಯೂ ಇರುವದರಿಂದ ‛ಮೃತ್ತಿ ಕೇತ್ಯೇವಸತ್ಯಂ” ಎಂಬುವದರಿಂದ ‟ಮೃತ್ತಿಕೇತ್ಯಪಿಸತ್ಯಂ” ಕಾರ್ಯಕಾಲದಲ್ಲಿ ಕಾರಣವೂ ಕೂಡ ಅನುಸ್ಯೂತವಾಗಿ ಸತ್ಯವಾಗಿಯೇ ಇರುವದು. ಮತ್ತು ಕಾ ರ್ಯವೂ ಸತ್ಯವಾಗಿಯೇ ಇರುವದು ಎಂದು ಅದರ ಅರ್ಥವು. ಅತ್ರದೇವದತ್ತ ಏಕಏವಾಸ್ತಿ| ಎಂದು ಹೇಳುತ್ತಿರಲಿಕ್ಕೆ ತದ್ಗತ ತತ್ಕಾರ್ಯಗಳಾದ ಲೋಮನಖಾ ದಿಗಳೂ ಇಲ್ಲವೆಂದರ್ಥವಾಗುವದಿಲ್ಲ. (ಮಿಥ್ಯೆಗಳೆಂದು ಹೇಳಲಿಕ್ಕೆ ಆಗುವದಿಲ್ಲ) ಅದರಂತೆ ‟ಮೃತ್ತಿಕೆತ್ಯೇವಸತ್ಯಂ” ಎಂಬುವದರಿಂದ ಮೃತ್ತಿಕೆಯು ಕಾರ್ಯವು ಅಸತ್ಯವೆಂದು ತಿಳಿಯುವದು. ಅಯುಕ್ತವು ಇನ್ನು ಬ್ರಹ್ಮದ ಪರಿಣಾಮವೇ ಜಗ ತ್ತು ಎಂಬುವ ಜ್ಞಾನದಿಂದ ಪರಿಣಾಮಿತ್ವಪ್ರಾಪ್ತಿ ಫಲವೇ ಆದೀತೆಂದು ಹೇಳುವ ಆಚಾರ್ಯರು ಬ್ರಹ್ಮಸತ್ಯಂ ಜಗನ್ಮಿಥ್ಯಾ ಎಂದು ಹೇಳುತ್ತಾರಲ್ಲವೆ? ಅಂದ ಮೇಲೆ ಜಗತ್ತು ಮಿಥ್ಯೆಯೆಂಬುವ ಜ್ಞಾನದಿಂದ ಆತ್ಮನಿಗೆ ಮಿಥ್ಯಾತ್ವಫಲಪ್ರಾಪ್ತಿ ಯಾದೀತೆಂದು ಪರಿಣಾಮವಾದಿಯು ಮುಖಬಂಧನ ಮಾಡಬಹುದೆಂದು ಯಾಕೆ ತಿಳದಿರಲಿಕ್ಕಿಲ್ಲವು. ಆದ್ದರಿಂದ ಪರಿಣಾಮವಾದದ ಸಿದ್ಧಾಂತಸೂತ್ರಗಳಲ್ಲಿ ನಮ್ಮ ವಿವರ್ತವಾದವನ್ನು ಸಾಧಿಸಿರುವದು ಅಸುಚಿತವು. ವೀರಶೈವನೆ! ಮುಮುಕ್ಷುಗ

ಳಾದ ನಮ್ಮಂಥವರಿಗೆ ಯಥಾರ್ಥ ತತ್ವವನ್ನು ಉಪದೇಶ ಮಾಡಿದರೆ ಸಾಕು. ಪರಪಕ್ಷ ನಿರಾಕರಣದಿಂದೇನುಪ್ರಯೋಜನವು? ಅದರಿಂದ ಅವರಿಗೆ ದ್ವೇಷವನ್ನು ಮಾಡಿದಂತಾಗುವದಿಲ್ಲವೆ? ಒಳ್ಳೇದು ನೀನು ಹೇಳಿದ ಮಾತು ಒಪ್ಪತಕ್ಕದ್ದಾಗಿದೆ. ಆದರೂ ನಿಮ್ಮ ಆಚಾರ್ಯರು ಅಪರೋಕ್ಷಾಧ್ಯಾಯದ ದ್ವಿತೀಯಪಾದದಲ್ಲಿ ಪ್ರಥಮಸೂತ್ರದ ವ್ಯಾಖ್ಯಾನಾರಂಭಕಾಲಕ್ಕೆ ಬರೆದಿರುವದನ್ನು ನೋಡು. ಕಿಂ ಪರಪಕ್ಷನಿರಾಕರಣೇನ ಪರದ್ವೇಷಾಕರೇಣ | ಎಂದು ಆಕ್ಷೇಪಿಸಿಕೊಂಡು, ತಥಾಪಿ ಎಂದು ಹ್ಯಾಗೆ ಉತ್ತರಕೊಟ್ಟಿರುತ್ತಾರೆಯೋ ಹಾಗೆ ಉತ್ತರ ಕೊಡುವೆನು ನೀನಾದರೂ ಆಚಾರ್ಯರು ಸರ್ವಜ್ಞರೆಂದು ತಿಳಿದಿರುವಿ. ಆದ್ದರಿಂದ ಅವರು ಹೇಳುವ ಮಾತಿಗೆ ಮರುಳಾಗಿ ಅವರ ಮತವನ್ನು ಅಂಗೀಕರಿಸಿ ಮೋಕ್ಷಮಾರ್ಗದಿಂದ ಚ್ಯುತನಾಗುವಿ ಎಂಬುವ ಉದ್ದೇಶದಿಂದಲೂ ನಿನಗೆ ಬೋಧಿಸುವ ನೆಪದಿಂದ ನಮ್ಮ ಮತೀಯರಾದ ಕೆಲವು ತಿಳಿಗೇಡಿಗಳು ವಿವರ್ತವಾದದಲ್ಲಿರುವ ತಮ್ಮ ನಂಬುಗೆಯನ್ನು ಬಿಟ್ಟು ನಿಷ್ಪಕ್ಷಪಾತ ವಿಚಾರದಿಂದ ಶಿವಾದ್ವೈತ ಸಿದ್ಧಾಂತವನ್ನು ಅನುಸರಿಸಿ ಮುಕ್ತರಾಗಲಿ ಎಂಬುವ ಉದ್ದೇಶದಿಂದಲೂ ಪರಪಕ್ಷದ ಗೋಜಿಗೆ ಹೋಗಬೇಕಾಗಿದೆಯೇ ಹೊರ್ತು ಯಾರಿಗೇನೂ ನಿಂದಿಸಬೇಕೆಂಬ ಬುದ್ಧಿಯಿದ್ದಲ್ಲವು. ಒಳ್ಳೇದು ವೀರಶೈವಾ! ಮಾಯಾಶಕ್ತಿಯು ಬ್ರಹ್ಮಕ್ಕೆ ಅತ್ಯಂತ ಭಿನ್ನವಾಗಿಲ್ಲವು. ಬ್ರಹ್ಮಶಕ್ತಿಯ ವಿಲಕ್ಷಣ ಪರಿಣಾಮವೇ ಎಂದು ಯಾವ ನಿಮ್ಮ ಆಚಾರ್ಯರು ಹೇಳಿದ್ದಾರೆ? ಕೇಳು ಗುಣಕ್ರಿಯಾತ್ಮಿಕಾಶಕ್ತಿರ್ಬ್ರಹ್ಮನಿಷ್ಠಾ ಸನಾತನೀ | ತದ್ವೈಷಮ್ಯಾತ್ಸಮುತ್ಪನ್ನಾ ತಸ್ಮಿನ್ವಸ್ತುತ್ರಯಾಭಿದಾ|| ಈ ರೇಣುಕ ಭಗವತ್ಪಾದಾಚಾರ್ಯರ ಅಭಿಪ್ರಾಯವು. ಸ್ವಾಭಾವಿಕವಾದ ಪಾರಮೇಶ್ವರ ವಿಮರ್ಶಶಕ್ತಿಯ ಪರಿಣಾಮವೆ ವಿಲಕ್ಷಣ ಜಡವಾದ ಮಾಯೆಯು ಎಂಬುವದರಲ್ಲಿರುವದು, ಮತ್ತು ಇನ್ನು ಎಲ್ಲಾ ವೀರಶೈವಾಚಾರ್ಯರ ಅಭಿಪ್ರಾಯವು ಈ ಪರಿಣಾಮವಾದದಲ್ಲಿರುವದು. ಇನ್ನು ಪಾರಮಾರ್ಥಸಾರಕಾರರ ಅಭಿಪ್ರಾಯವು. ಇದರಲ್ಲಿಯೇ ಇರುವದು. ಆದ್ದರಿಂದ ಅವರೆಲ್ಲರ ಅಭಿಪ್ರಾಯವು ಶ್ರುತ್ಯಾದಿ ಸಮ್ಮತವೂ ಯುಕ್ತವೂ ಆದುದರಿಂದ ಅವರು ಕಟ್ಟಿಸಿದ ಗ್ರಂಥವೆಂಬ ಭಾವಿಗಳಲ್ಲಿರುವ ಸಿದ್ಧಾಂತ ಜ್ಞಾನವೆಂಬ ಅಮೃತೋದಕವನ್ನು ನೀರಡಿಸಿದವನಾಗಿರುವ ನಿನಗೇನಾದರೂ ಜಿಹ್ವಾದೋಷದಿಂದ ಆ ನೀರು ಕಹಿಯಾಗಿ ಕಾಣುವವೋ ಏನೋ? ಎಂಬುವ ಸಂಶಯಬರಲು ಉತ್ತಮ ವೈದ್ಯನ ಚಿಕಿತ್ಸೆಯಿಂದ ಪರೀಕ್ಷಿಸಿ ನೋಡಲು ಸಂಶಯವು ನಿವೃತ್ತವಾಗಿ ನೀನು ಸ್ವೀಕ

ರಿಸಿದ ನೀರು ಉತ್ತಮ ನೀನೀರೆಂದು ತಿಳಿದಿರುವುದರಿಂದ ನೀನು ಈ ನೀರನ್ನು ಸ್ವೀಕರಿಸು ಎಂದು ಹೇಳುತ್ತೇನೆ. ನೀನು ಸ್ವೀಕರಿಸದಿದ್ದರೆ ತಾತಸ್ಯಕೂಪೋಯಮಿತಿಬ್ರುವಾಣಾಕ್ಷಾರಂಜಲಂಕೆ ಪುರುಷಾಃಪಿಬಂತಿ || ಎಂಬ ಭೋಜ ಪ್ರಬಂಧದಲ್ಲಿ ಕಾಳಿದಾಸನು ಹೇಳಿರುವ ಮಹಾ ಮೂರ್ಖನಾಗುವಿ. ಇರಲಿ ಇನ್ನು ಪರಮಾರ್ಥಸಾರಕಾರರು ಮಾಯಾಲಕ್ಷಣವನ್ನು ಹೇಳಿರುವದೇನಂದರೆ ಪರಮಂಯತ್ಸ್ವಾತಂತ್ರ್ಯಂ ದುರ್ಘಟಸಂಪಾದನಂ ಮಹೇಶಸ್ಯ| ದೇವೀ ಮಾಯಾಶಕ್ತಿಃಸ್ವಾತ್ಮಾವರಣಂ ಶಿವಸ್ಯೈತತ್ || ಇಲ್ಲಿ ದೇವೀ ಎಂಬುವ ಪದದಿಂದ ಕ್ರೀಡಾಶೀಲನಾದ ಶಕ್ತನಾದ ಶಿವನ ಪರಿಣಾಮರೂಪವೇ ಮಾಯಾಶಕ್ತಿಯೆಂದು ಹೇಳಲ್ಪಟ್ಟಿದೆ. ಮತ್ತು ಇದರ ವಿವೃತಿಕಾರರಾದ ಯೋಗರಾಜಾನಕಾಚಾರ್ಯರು ಏಷಾದೇವಸ್ಯಕ್ರೀಡಾ ಶೀಲಸ್ಯ ಸಂಬಂಧಿನೀತಿಕೃತ್ವಾದೇವೀ | ನಪುನಬ್ರಹ್ಮವಾದಿನಾಮಿವವ್ಯತಿರಿಕ್ತಾಕಾಚಿತ್ ಮಾಯಾ ಉಪಪದ್ಯತೆ || ಎಂದು ಹೇಳಿದ್ದಾರೆ. ಆದ್ದರಿಂದಲೇ ಈ ಮಿಥ್ಯಾ ಮಾಯಾವಾದಿಗಳ ಮತವು. ‹‹ದ್ವೈತೇನುವಿಶ್ವಾಮ್ಯತಿ›› ಎಂದು ಸ್ವಪ್ರಭಾನಂದ ಶಿವಾಚಾರ್ಯರು ಹೇಳಿದ್ದಾರೆ.

ಬ್ರಹ್ಮವ್ಯತಿರಿಕ್ತಂ ಮಿಥ್ಯಾ ಎಂದು ನಮ್ಮ ಆಚಾರ್ಯರು ಹೇಳುತ್ತಾರಂದಮೇಲೆ ಬ್ರಹ್ಮಾತಿರಿಕ್ತಮಾಯೆಯಿಂದ ಅದ್ವೈತವು ಹೇಗೆ? ಎಲೈ ವಿವರ್ತವಾದಿಯೇ ? ಬ್ರಹ್ಮಾತಿರಿಕ್ತವಾಗಿ ಮಾಯೆಯು ಇಲ್ಲವೆಂದಮೇಲೆ ಬಂಧವೂ ಇಲ್ಲಾದ್ದರಿಂದ ಶಾಸ್ತ್ರವಿಚಾರವು ವ್ಯರ್ಥವು. ಪರಮಾರ್ಥದಶೆಯಲ್ಲಿ ಮಾಯೆಯು ಬಾಧಿಸಲ್ಪಡುವ ಕಾರಣ ಅದ್ವೈತಕ್ಕೆ ಹಾನಿಯಿಲ್ಲವು. ಒಳ್ಳೇದು ಬ್ರಹ್ಮಾದ್ವೈತಿಯೇ ? ಜಗತ್ತು ಬ್ರಹ್ಮದ ವಿವರ್ತವೆಂದು ಹೇಳಿದರೆ ಆ ವಿವರ್ತಕ್ಕೆ ಉಪಾದಾನ ಕಾರಣವಾವದು ? ಬ್ರಹ್ಮವೇ ಉಪಾದಾನಕಾರಣವಾದರೆ ಬ್ರಹ್ಮವು ತಾನು ಬೇರೆ ಪ್ರಕಾರ ತೋರುವದರಲ್ಲಿ ಏನುಕಾರಣವು ? ಅಧ್ಯಾಸವೇ ಕಾರಣವು. ನಿನ್ನ ಅಧ್ಯಾಸವು ಪ್ರಪಂಚದಲ್ಲಿ ಬಂದಿಲ್ಲವೇನು ? ಇಲ್ಲಾ ಅದು ಅದಕ್ಕೆ ಕಾರಣವಾಗಿದೆ. ಹಾಗಾದರೆ ಕಾರ್ಯ ಕಾರಣಗಳಿಗೆ ಅತ್ಯಂತ ಭೇದವನ್ನು ಹೇಳುವಿಯೊ ? ಇಲ್ಲ. ಅಂದರೆ ಅದೂ ಕೂಡ ಪ್ರಪಂಚಾಂತರ್ಗತವಾಯಿತು. ಆದರೇನಾಯಿತು? ಅಂದರೆ ಬ್ರಹ್ಮವು ವಿವರ್ತಿಸುವ ವಿಷಯದಲ್ಲಿ ಕಾರಣವನ್ನು ಕೇಳುತ್ತೇನೆ ಕೇಳು. ಶುಕ್ತಿಯು ಸ್ವಾವರಕಾಜ್ಞಾನದಿಂದ ವಿವರ್ತಿಸುವಂತೆ ಬ್ರಹ್ಮವು ಸ್ವಾವರಕಾಜ್ಞಾನದಿಂದ ವಿವರ್ತಿಸುತ್ತದೆಂದು ಹೇಳುವೆನು. ಬ್ರಹ್ಮಾದ್ವೈತಿಯೇ ? ಆ ನಿನ್ನ ಮೂಲಾಜ್ಞಾನವು ಬ್ರಹ್ಮದ ವಿವರ್ತವಲ್ಲವೇನು ? ವಿವರ್ತವಾದರೆ ಬ್ರಹ್ಮದಲ್ಲಿ

ಅಂಥದೊಂದು ವಿಶೇಷವೇನು? ಯಾವದರಿಂದ ಬ್ರಹ್ಮವು ಮೂಲಾಜ್ಞಾನರೂಪ ವಾಗಿ ವಿವರ್ತಿಸುವದು. ಶಿವಾದ್ವೈತಿಯೇ ? ಮೂಲಾಜ್ಞಾನವು ಅನಾದಿಯು ಅದು ವಿವರ್ತವಲ್ಲ. ಹಾಗಾದರೆ ಮತ್ತೇನು? ಅದು ಹೇಳುವುದಕ್ಕೆ ಬರುವಂಥಾದ್ದಲ್ಲ. ಇದೇನು ? ಹುಚ್ಚುತನವು. ಯಾವ ಅಜ್ಞಾನದಿಂದ ಬ್ರಹ್ಮವು ವಿವರ್ತಿಸುತ್ತದಯೊ? ಅದನ್ನು ಹೇಳುವುದಕ್ಕೆ ಬರುವದಿಲ್ಲವಂತೆ. ಬ್ರಹ್ಮಾದ್ವೈತಿಯೇ ? ಹೀಗೇಕೆ ಉನ್ಮತ್ತನಂತೆ ಮಾತನಾಡುವೆ? ಅದರಿಂದಾದ ಜಗತ್ತನ್ನು ನೀನು ಹೇಳಬಹುದೇನು? ಅದೂ ಆಗುವದಿಲ್ಲ. ಹಾಗಾದರೆ ಅದರ ಅತ್ಯಂತ ನಾಶವನ್ನು ಮಾತ್ರ ಹೇಳುವುದಕ್ಕೆ ಬರುತ್ತದಲ್ಲವೆ? ಶ್ರುತಿಯಿಂದ ಹೇಳುತ್ತೇನೆ. ಶ್ರುತಿಯಿಂದಲೇ ಅದನ್ನೂ ಕೂಡ ಹೇಳು. ಶ್ರುತಿಯಿಂದ ಅದು ತುಚ್ಛವು. ಗಗನಪುಷ್ಪದಂತೆ ತುಚ್ಛವೆಂದು ಹೇಳುವೆನು. ಇಂಥ ತುಚ್ಛವಾದ ಮಾಯೆಯಿಂದ ವ್ಯಾವಹಾರಿಕ ಜಗತ್ತುಂಟಾಗಲಾರದು. ಆದ್ದರಿಂದದಕ್ಕೆ ಅನಿರ್ವಚನೀಯವೆಂದು ಹೇಳುವೆನು. ಅನಿರ್ವಚನೀಯವೆಂದಾದರೂ ಹೇಳುತ್ತಿಯಷ್ಟೆ? ಅಹುದು. ಹೇಳುತ್ತೇನೆ. ಹಾಗಾದರೆ ಹೇಳಲಿಕ್ಕೆ ಆಗುವದಿಲ್ಲವೆನ್ನುವದೇಕೆ? ಇಂಥ ನಿನ್ನ ಮಾಯೆಯಿಂದ ಬ್ರಹ್ಮವು ವಿವರ್ತಿಸುತ್ತದೆಂಬುವದರಲ್ಲಿ ಬೀಜವೇನು? ಶುಕ್ತಿಯಲ್ಲಿ ರಜತಾಕಾರ ವಿವರ್ತಕ್ಕೆ ತದ್ಗತ ಶಕ್ತಿಯೇ ಕಾರಣವಲ್ಲವೆ? ಅದೇಕೆ ಶುಕ್ತಿಚೈತನ್ಯಾವರಕಾಜ್ಞಾನವೇ ಕಾರಣವೆಂದು ಹೇಳುತ್ತೇನೆ. ಒಳ್ಳೇದು. ರಜತಾಧ್ಯಾಸ ಪೂರ್ವಕ್ಷಣದಲ್ಲಿ ಶುಕ್ತ್ಯಜ್ಞಾನವಿರುವಂತೆ ಲೋಷ್ಟಾದ್ಯಜ್ಞಾನವಾದರೂ ಇರುವದು. ಅಂದಮೇಲೆ ಲೋಷ್ಟಾದಿಗಳಲ್ಲಿ ರಜತಾಧ್ಯಾಸವಾಗುವದಿಲ್ಲವೇಕೆ? ಅಂದರೆ ನೀನೇನು ಉತ್ತರಕೊಡುವಿ? ರಜತವಿವರ್ತಕ್ಕೆ ಅಧಿಷ್ಠಾನವಾದ ಪುರೋವರ್ತಿ ಪದಾರ್ಥದಲ್ಲಿ ಒಂದು ಧಾವಲ್ಯಾದಿ ಶಕ್ತಿಯನ್ನು ಮಾನಿಸುತ್ತೇನೆ. ಲೋಷ್ಟಾದಿಗಳಲ್ಲಿ ಧಾವಲ್ಯಾದಿ ಶಕ್ತಿಯಿಲ್ಲದಿರುವದರಿಂದ ಅಲ್ಲಿ ರಜತಾಧ್ಯಾಸವಾಗುವದಿಲ್ಲ. ಒಳ್ಳೇದು ಶುಕ್ತ್ಯಜ್ಞಾನದಿಂದಲೇ ರಜತಾಧ್ಯಾಸವು ಸಂಭವಿಸಲಾರದು. ಆದರೆ ಪುರೋವರ್ತಿ ವಿಷಯದ ಅನ್ಯಥಾ ತೋರಿಕೆರೂಪವಾದ ವಿವರ್ತಕ್ಕೆ ಅಧಿಷ್ಠಾನದಲ್ಲೊಂದು ಶಕ್ತಿಯನ್ನು ಮಾನಿಸಬೇಕಾಯಿತಲ್ಲವೆ? ಮಾನಿಸಿದರೆ ಕ್ಷತಿ ಏನು? ಕೇವಲ ನಿರ್ವಿಶೇಷ ಬ್ರಹ್ಮವು ತನಗಿತರವಾದ ಅಜ್ಞಾನದಿಂದ ವಿವರ್ತಿಸಲಾರದು. ಆದ್ದರಿಂದ ಅದರಲ್ಲಿ ಒಂದು ವಿಶೇಷವನ್ನು ಹೇಳಬೇಕು. ಹೇಳಿದಕೆ ಶಿವಾದ್ವೈತಕ್ಕೆ ನೀನು ಪ್ರವೇಶಮಾಡಿದಂತಾಗುವದು. ಅದೇಕೆ? ಶುಕ್ತಿ ರಜತಾದಿಸ್ಥಲದಲ್ಲಿ ಆ ಪ್ರಕಾರವಾಗಿ ಅಜ್ಞಾನಕ್ಕಿಂತಲೂ ಒಂದು ಅತಿರಿಕ್ತ ವಿಶೇಷ

ವನ್ನು ಅಧಿಷ್ಠಾನದಲ್ಲಿ ವೂನಿಸಿದರೂ ಬ್ರಹ್ಮದಲ್ಲಿ ಹೇಳುವದಿಲ್ಲ. ಅಂದರೆ ವಿಷಮ ದೃಷ್ಟಾಂತವಾಯಿತು. ದೃಷ್ಟಾಂತ ದಾರ್ಷ್ಟಾಂತ ಸಾಕಲ್ಯೇನ ಎಲ್ಲಾ ಗುಣ ಗಳೂ ಎರಡರಲ್ಲಿ ಇರುವದಿಲ್ಲ. ಅಂದರೆ ಕೇಳು. ಬ್ರಹ್ಮವು ತಾನೇ ಅಜ್ಞಾನ ದಿಂದ ವಿವರ್ತಿಸುತ್ತದೆ. ಅಜ್ಞಾನವು ಪರಿಣಮಿಸುತ್ತದೆ. ಎಂಬುವಲ್ಲಿ ವಿನಿಗಮ ನವೇನು. ಅಜ್ಞಾನವೇ ಜಗದಾಕಾರವಾಗಿ ವಿವರ್ತಿಸಲಿ. ಬ್ರಹ್ಮವೇ ಜಗದಾಕಾ ರವಾಗಿ ಪರಿಣಮಿಸಲಿ. ಬಾಧಕವೇನೂ ಇಲ್ಲವಷ್ಟೆ? ಬ್ರಹ್ಮವು ಪರಿಣಮಿಸಿದರೆ ಅದಕ್ಕೆ ಜಡತ್ವವು ಬಂದೀತು, ಇದೇ ಬಾಧಕವು. ಬ್ರಹ್ಮಾದ್ವೈತಿಯೇ? ಇದ ಕ್ಕೆ ಹಿಂದೆ ಸಮಾಧಾನವನ್ನು ಹೇಳಿದ್ದೇನೆ. ಪುನಃ ಕೇಳು, ಅದು ತನ್ನ ಶಕ್ತಿ ಯಿಂದ ತನಗೆ ಭಿನ್ನವಾದ ಜಡವಾದ ಮಾಯಾಶಕ್ತಿಯನ್ನು ಹುಟ್ಟಿಸುತ್ತದೆ. ಮತ್ತು ಆ ಮಾಯೆಯು ಪರ್ಯವಸಾನದಲ್ಲಿ (ಶುದ್ಧದಶೆಯಲ್ಲಿ) ತನಗೆ ಅಭಿನ್ನವೂ ಆಗುವದೆಂದು ಹೇಳಿಲ್ಲವೆ? ಈಗ ನೋಡು ಇದಂ ಪದಾರ್ಥದಲ್ಲಿ ಧಾವಳ್ಯಾ ದಿ ಶಕ್ತಿಯಿಂದ ಇದಂ ಪದಾರ್ಥ, ಮತ್ತು ರಜತ, ಇವುಗಳ ಅಭೇದ ಜ್ಞಾನವು ಹುಟ್ಟಿದಂತೆ ಶಿವಶಕ್ತಿಯಿಂದ ಜಡವಾದ ಮಾಯಾಶಕ್ತಿಯು ಹುಟ್ಟುತ್ತದೆ. ಆ ಅಭೇದ ಜ್ಞಾನವು ರಜತಾಕಾರವಾಗಿ ಪರಿಣಮಿಸುತ್ತದೆ. ಅಂದರೆ ಮೊದಲು ಇದಂ ಪದಾರ್ಥದಲ್ಲಿರುವ ಶಕ್ತಿಯು ತನಗೆ ಭಿನ್ನವಾದ ತಾದಾತ್ಮ್ಯಾಧ್ಯಾಸರೂ ಪವಾಗಿ ಪರಿಣಮಿಸುತ್ತದೆ. ಆ ತಾದಾತ್ಮ್ಯಾಧ್ಯಾಸವು ಅಧಿಷ್ಠಾನ ಶಕ್ತಿಯ ಅನ್ಯ ಥಾರೂಪವಾಗಿ ಪರಿಣಮಿಸುವದಲ್ಲದೆ ಭಾಸಮಾನವೂ ಆಗುತ್ತದೆ. ಇದರಂತೆ ಮೊದಲು ಶಿವಶಕ್ತಿಯು ತನಗೆ ಭಿನ್ನವಾದ ಮಾಯಾಶಕ್ತಿರೂಪವಾಗಿ ಪರಿಣಮಿ ಸುತ್ತದೆ. ಆ ಮಾಯಾ ಶಕ್ತಿಯು ಕಾಲಕಲಾದಿ ಪೃಥಿವ್ಯಂತ ತತ್ವರೂಪವಾಗಿ ಪರಿಣಮಿಸುತ್ತದೆ. ಶಿವಾದ್ವೈತಿಯೇ? ನಿನ್ನ ಮತದಲ್ಲಿ ಉಪಾಧಿಗಳು ಸತ್ಯಗಳೆಂ ದಮೇಲೆ ಸಚ್ಚಿದಾನಂದರೂಪನಾದ ಶಿವನು ಅಂತಃಕರಣಾದಿ ಶಕ್ತಿಗಳಿಂದ ಕೂಡಲು ಅವನಿಗೆ ವಾಸ್ತವ ಪರಿಚ್ಛೇದವನ್ನು ಒಪ್ಪುತ್ತೀಯೇನು? ಒಪ್ಪಿದರೆ ಪರಿಚ್ಛಿನ್ನತ್ವಾ ಪರಿಚ್ಛಿನ್ನತ್ವಗಳಿಗೂ ಸಾವಯವತ್ವ ನಿರವಯವತ್ವಾದಿಗಳಿಗೂ ವಿರೋಧವಿಲ್ಲವೇನು? ಇಲ್ಲ. ಅದು ಹೇಗೆ? ಶತಶಃ ಶ್ರುತಿಗಳು ನೀನು ವಿರುದ್ಧ ಗಳೆಂದು ತಿಳಿದ ಧರ್ಮಗಳನ್ನು ಶಿವನಲ್ಲಿ ಹೇಳುತ್ತವೆಂದಮೇಲೆ ಅವೂ ಕೂಡ ಪರಿ ಚ್ಛಿನ್ನತ್ವಾ ಪರಿಚ್ಛಿನ್ನತ್ವ ಧರ್ಮಗಳಿಗೆ ವಿರೋಧವನ್ನು ಮಾನಿಸಿಲ್ಲವು ಆದ್ದರಿಂದ ನಾವು ಕೇವಲ ಶ್ರುತ್ಯೈಕಶರಣರಾದ್ದರಿಂದ ಶ್ರುತಿಗಳ ಅಭಿಪ್ರಾಯದಂತೆ ಹೋ ಗಬೇಕಾಗಿದೆ. ನಿಮ್ಮ ಪರಂತೆ "ಶ್ರುತೇಸ್ತು ಶಬ್ದಮೂಲತ್ವಾತ್" ಎಂಬ ನ

ಸೂತ್ರಕ್ಕೆ ಭಾಷ್ಯ ಬರೆಯುವ ಸಂದರ್ಭದಲ್ಲಿ ಪರಿಣಾಮ ಶ್ರುತಿಗಳಿಗೆ ವಿರುದ್ಧಾರ್ಥವನ್ನು ಮಾಡುವದಿಲ್ಲ. ನೋಡು. ಸೂತ್ರಾರ್ಥವು ಒಂದಾದರೆ ಅವರು ಬರೆದಿರುವದು ಒಂದಾಗಿದೆ. ಬ್ರಹ್ಮವು ಪರಿಣಮಿಸುವದೆಂಬಲ್ಲಿ ‹‹ಶ್ರುತೇಃ›› ಶ್ರುತಿಯು ಇರುವದರಿಂದ, ಮತ್ತು ಅತೀಂದ್ರಿಯಾರ್ಥದ ನಿರ್ಣಯವು ‹‹ಶಬ್ದಮೂಲತ್ವಾತ್›› ಶಬ್ದವೇ ಪ್ರಮಾಣ ವುಳ್ಳದ್ದಾದ್ದರಿಂದ ಅಂದರೆ ‹‹ಸೇಯಂದೇವತೈಷತ್›› ಎಂಬುವ ಶ್ರುತಿಯು ಬ್ರಹ್ಮದೇವತೆಯು ಜಗದ್ರೂಪಪವಾಗಿಯೂ ಜಗದತಿರಿಕ್ತವಾಗಿಯೂ ಇರುವದು. ಎಂದು ಹೇಳುವದರಿಂದ ಬ್ರಹ್ಮವು ಕಿಂಚಿದಂಶದಿಂದ ಪರಿಣಮಿಸಿ ಕಿಂಚಿದಂಶದಿಂದ ಬೇರೆಯಾಗಿರುತ್ತದೆಂದು ತಿಳಿಯಬರುತ್ತದೆ. ಅಂಶವನ್ನು ಬ್ರಹ್ಮದಲ್ಲಿ ಒಪ್ಪಿದರೆ ಬ್ರಹ್ಮವು ನಿರವಯುವವು ಎಂದು ಹೇಳುವ ಶ್ರುತಿಗೆ ವಿರುದ್ಧವಾಗುವದಾದ್ದರಿಂದ ‹‹ನನು ಶಬ್ದೇನಾಪಿ ನಶಕ್ಯತೆ ವಿರುದ್ಧಾರ್ಥಂ ಪ್ರತ್ಯಾಯಯಿತುಂ | ಎಂದು ಶ್ರುತಿಗಳ ಮೇಲೆ ತಮ್ಮ ಪಾಂಡಿತ್ಯದಿಂದ ಆಕ್ಷೇಪಿಸಿ ಕಡೆಗೆ ಮಿಥ್ಯಾಭೂತ ಮಾಯಾಕಲ್ಪಿತರೂಪ ಭೇದವನ್ನು ಬ್ರಹ್ಮದಲ್ಲಿ ಕಲ್ಪಿಸಿ ಇಂತಹ ರೂಪಭೇದದಿಂದ ಬ್ರಹ್ಮದ ನಿರವಯುವತ್ವಕ್ಕೆ ಭಂಗವಿಲ್ಲೆಂದು ಘಂಟಾಘೋಷವಾಗಿ ಹೇಳಿರುವರು. ಇದರಮೇಲಿಂದ ಶ್ರುತ್ಯರ್ಥವನ್ನು ಕ್ಲಿಷ್ಟ ಕಲ್ಪನೆಯಿಂದ ತಮ್ಮ ಮಿಥ್ಯಾಮತಕ್ಕೆ ಅನ್ವಯಿಸಿರುವರೆಂದು ಸ್ಪಷ್ಟವಾಗುವದಿಲ್ಲವೆ? ಅವರ ವಾಕ್ಯದಿಂದಲೇ ಎಲ್ಲರಿಗೂ ಒಡೆದು ಕಾಣುವಂತಿದೆ ಬ್ರಹ್ಮ ಪರಿಣಾಮವೇ ಜಗತ್ತು ಎಂದು ಹೇಳುವ ಅನೇಕ ಶ್ರುತಿಗಳಿಗೆ ಅಪಲಾಪ ಮಾಡಲಿಲ್ಲವೆ? ಮತ್ತು ಸೂತ್ರದಲ್ಲಿ ಜಗತ್ತು ಬ್ರಹ್ಮದ ಪರಿಣಾಮವೆಂಬುವಲ್ಲಿ ಕೇವಲ ‹‹ಶಬ್ದಮೂಲತ್ವಾತ್›› ಎಂದು ಕಾರಣವು ತೋರಿಸಲ್ಪಟ್ಟಿರುವದು. ಬ್ರಹ್ಮದಲ್ಲಿ ಮಿಥ್ಯಾ ಅವಿದ್ಯಾಕಲ್ಪಿತರೂಪವೇ ಪರಿಣಮಿಸುತ್ತದೆಂದು ಸೂತ್ರಕಾರರ ಅಭಿಪ್ರಾಯ ವಿದ್ದರೆ ‹‹ಅಧ್ಯಾಸಕಲ್ಪಿತರೂಪಭೇದಾತ್›› ಎಂದು ಹೇಳುತ್ತಿದ್ದರು. ಅವರು ಶ್ರುತ್ಯರ್ಥವನ್ನು ಬೋಧಿಸತಕ್ಕವರಾದ್ದರಿಂದ ಶ್ರುತಿಗಳೊಳೆಲ್ಲೆಲ್ಲಿಯೂ ಇಲ್ಲದ ಮಿಥ್ಯಾಭೂತವಾದ ಅವಿದ್ಯೆಯನ್ನೂ ಅದರಿಂದ ಕಲ್ಪಿತವಾದ ರೂಪಭೇದವನ್ನೂ ಹೇಳಿರುವದಿಲ್ಲ. ಪರಿಣಾಮವಾದಿಯೇ ಆಚಾರ್ಯರು ಹೇಳದ್ದಾರಾದ್ದರಿಂದಲೇ ಅವರ ಮತವನ್ನು ನಂಬತಕ್ಕದ್ದೆಂದು ಅಂದರೆ ‹‹ಅವಿದ್ಯಾಲಕ್ಷಣೋಪಾಧಿಕೃತಾ ಮಿಥ್ಯಾಭಿದಾ ಇತಿ | ಯದುಕ್ತಂ ತದವಿದ್ಯಾಯಾ ಮಿಥ್ಯಾಯಾಶ್ಚೈವಕುತ್ರಚಿತ್ || ಅವಿದ್ಯೋಪಾಧಿಕಾಯಾ ಶ್ಚೈತ್ಯಯುಕ್ತಂ ಪ್ರತಿಭಾತಿತತ್ || ಎಂದು ಹೇಳಿದ ನೀಲಕಂಠಾಚಾರ್ಯರ ಮತವನ್ನು ಯಾಕೆ ನಂಬಬಾರದು. ಇವರು

ನಿಮ್ಮ ಆಚಾರ್ಯರಿಂದ ಸ್ವೀಕೃತವಾದ ಮಿಥ್ಯಾಭೂತನಾದ ಅವಿದ್ಯೆಯು ಯುಕ್ತಿಸಿದ್ಧವಾಗುವದಿಲ್ಲವೆಂದು ಹೇಳಿ ಶ್ರುತೇಸ್ತು ಶಬ್ದಮೂಲತ್ವಾತ್ ಬ್ರಹ್ಮ ಣೊ ಜಗದಾತ್ಮನಃ ಪರಿಣಾಮೋಽಜಡಂ ಬ್ರಹ್ಮ ಪ್ರಥಗೇವೇತಿಗೀಯತೆ | ಶ್ರುತೇ ಸ್ತು ಶಬ್ದಮೂಲತ್ವಾತ್ ದೇವಾದಿವದಪೇಕ್ಷ್ಯತೆ | ಆತ್ಮಕೃತೇಸ್ತು ಸೂತ್ರೇಣಪರಿ ಣಾಮೋಽ ತ್ರನಿಶ್ಚಿತಃ || ಏವಂ ಸ್ವಪಕ್ಷದೋಷಾಚ್ಚ ಸಏವಹಿದ್ಧ್ರಥೀಕೃತಃ|| ಎಂಬ ದಾಗಿ ಬ್ರಹ್ಮದ ಪರಿಣಾಮವೇ ಜಗತ್ತು ಎಂದು ಹೇಳಿದ್ದಾರೆ. ಆದ್ದರಿಂದ ಇವ ರಶ್ರುತ್ಯನುಕೂಲವಾದ ಮತವನ್ನು ವಪ್ಪಬೇಕಲ್ಲವೆ? ಪರಿಣಾಮವಾದಿಯೇ? ಶಂಕರಾಚಾರ್ಯರು ಕೇವಲ ಶಿವಾವತಾರಿಗಳು ಅವರ ಮತವನ್ನು ಅಲ್ಲಗಳೆಯು ವದು ಹೇಗೆ? ಬ್ರಹ್ಮಾದ್ವೈತಿಯೇ! ನೀಲಕಂಠ ಶಿವಾಚಾರ್ಯರೂ ಕೂಡ ಶಿವಾವತಾರಿಗಳೇ ಇರುವರು. ಇವರ ಮತವನ್ನು ಹೇಗೆ ಅಲ್ಲಗಳೆಯಬೇಕು. ನೋಡು? ವ್ಯಾಸಮಹರ್ಷಿಗಳು ಪ್ರಾರ್ಥಿಸಿರುವದನ್ನು ‹‹ಮತಾನಿವಿವಿಧಾನ್ಯೇವ ಸಮುತ್ಪನ್ನಾನಿ ಶಂಕರ | ಮತ್ಕೃತಾನಾಂಚ ಸೂತ್ರಾಣಾಮಯಥಾನಮಸಂ ಕೃತಂ | ಏವ ಮೇವೇತಿನಿಶ್ಚಿತ್ಯ ಕುರ್ವಂತಿಕಲಹಂ ಮಿಥಃ | ತ್ವತ್ಪ್ರಸಾದೈಕಲ ಬ್ಧಸ್ಯ ಸೂತ್ರ ಜಾಲಸ್ಯ ಶಂಕರ || ಯಥಾ ಪೂರ್ವಂತ್ವಯಾಕಾರ್ಯಂ ಮತ್ಸೂ ತ್ರಾರ್ಥವಿವೇಚನಂ | ಇತಿ ತೇನ ಪ್ರಾರ್ಥಿತಸ್ಸನ್‌ದಯಾಳುಃ ಪಾರ್ವತೀಪತಿಃ | ನೀಲಕಂಠ ಶಿವಾಚಾರ್ಯ ನಾಮ್ನಾಭಾಷ್ಯಮಚೀಕರತ್ || ಎಂದು ಕಾರಿಕಾ ಕಾರರು ವ್ಯಾಸರ ಪ್ರಾರ್ಥನಾ ವಾಕ್ಯಗಳನ್ನು ಬರೆದು ತೋರಿಸಿರುವರು. ಒಳ್ಳೇ ದು ಪರಿಣಾಮವಾದಿಯೇ? ಆ ಆಚಾರ್ಯರಿಬ್ಬರ ಮಾತು ಒತ್ತಟ್ಟಿಗಿರಲಿ, ಬ್ರಹ್ಮ ವು ಒಂದಂಶದಿಂದ ಪರಿಣಮಿಸಿದಮೇಲೆ ಅದು ಸಾವಯವವಾಗುವದಿಲ್ಲವೆ? ಆದರೇನು ಹಾನಿಯು, ಅಂದರೆ ‹‹ನಿಷ್ಕಲಂ ನಿಷ್ಕ್ರಿಯಂ ಶಾಂತಂ›› ಎಂಬುವ ನಿರವಯುವತ್ವ ಶ್ರುತಿಗೆ ವ್ಯಾಕೋಪವಾಗುವದು. ವಿವರ್ತವಾದಿಯೇ? ಈ ಶ್ರುತ್ಯರ್ಥವನ್ನು ಮೊದಲೇ ಹೇಳಿದ್ದೇನೆ. ಇರಲಿ ಈ ಶ್ರುತಿಯು ಹೇಯಗಳಾದ ಅವಯುವಗಳನ್ನು ನಿಷೇಧಿಸುತ್ತದಲ್ಲದೇ ಸರ್ವಜ್ಞತ್ವಾದಿ ಶಕ್ತ್ಯಂಶಗಳನ್ನು ನಿಷೇ ಧಿಸುವದಿಲ್ಲವೆಂದು ತಿಳಿ. ಪರಿಣಾಮವಾದಿಯೇ? ನೀನಾದರೂ ಶ್ರುತ್ಯರ್ಥ ವನ್ನು ಸಂಕೋಚಗೊಳಿಸಿದಂತಾಗಲಿಲ್ಲವೆ? ವಿವರ್ತವಾದಿಯೇ ‹‹ಪಾದೋಽಸ್ಯೆ ಹಾಭವತ್ಪುನಃ ಪಾದೋಽಸ್ಯಸರ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ›› ಇನ್ನೂ ಅನೇಕ ಸೃಷ್ಟಿ ಪ್ರತಿಪಾದಕ ಶ್ರುತಿಗಳಿಗೂ ಮತ್ತು ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತಂ ಜಗತ್ | ಎಂಬುವ ಕೃಷ್ಣಗೀತಾ ವಾಕ್ಯಕ್ಕೂ

ಅಪಲಾಪ ಮಾಡುವದಕ್ಕಿಂತಲೂ ನಿಷ್ಕಲಮಿತ್ಯಾದಿ ಶ್ರುತಿಗೆ ಅರ್ಥ ಸಂಕೋಚ ಮಾಡುವದು ಯುಕ್ತವು. ಮಹಾ ವಾಕ್ಯ ರತ್ನಾವಲೀಕಾರರೂ ಕೂಡ ಫಲ ವಾಕ್ಯಗಳ ಮಧ್ಯದಲ್ಲಿ "ವ್ಯಪಗತಕಲನಾಕಲಂಕಶುದ್ಧಿ ಸ್ವಮಮಲಾತ್ಮನಿ ಪಾವನೇ ಪದೇsಸೌ | ಸಲಿಲಕಣ ಇವಾಂಬುಧೌ ಮಹಾತ್ಮಾ ವಿಗಲಿತವಾಸನ ಮೇಕತಾಂ ಜಗಾಮ | ಎಂದು ಹೇಳಿದ ವಾಕ್ಯಗಳಿಗೂ ಮತ್ತು ವಿಶ್ವೋತ್ತ ರೋತ್ತರ ವಿಚಿತ್ರಮನೋರಥಸ್ಯ ಯಸ್ಯೈಕ ಶಕ್ತಿ ಶಕಲೆ ಸಕಲಃ ಸಮಾಪ್ತಃ | ಅಧ್ವಾನಮಧ್ವ ಪತಿಮಧ್ವ ವಿದೊಮದಂತಿ ತಸ್ಮೈ ನಮಃ ಸಕಲ ಲೋಕ ವಿಲಕ್ಷ ಣಾಯ || ಎಂಬುವೇ ಮೊದಲಾದ ಶೈವಪುರಾಣ ವಾಕ್ಯಗಳಿಗೂ ವಿವರ್ತವಾ ದಲ್ಲಿ ಸಾಂಗತ್ಯವಿಲ್ಲದನುೂಲಕ ಪರಿಣಾಮವಾದವೇ ಯುಕ್ತವಾಗುವದು. ಆದ್ದ ರಿಂದ ಪರಶಿವ ಬ್ರಹ್ಮವು ಸ್ವಶಕ್ತ್ಯಂಶದಿಂದ ಜಗದಾಕಾರವಾಗಿ ಪರಿಣಮಿಸುವ ದೆಂತಲೂ ಸ್ವತಃ ಜಗದತಿರಿಕ್ತವಾಗಿರುವದೆಂತಲೂ ಸ್ಪಷ್ಟವಾಗುತ್ತದಾದ್ದರಿಂದ ಪರಿಣಾಮವಾದವೇ ಸಿದ್ಧಾಂತವು. ಒಳ್ಳೇದು ಶಿವಾದ್ವೈತಿಯೇ? ನೀನೂ ಕೂಡ ಮಾಯಾಶಕ್ತಿಯನ್ನು ಒಪ್ಪುತ್ತೀ ಆದರೆ ಅದಕ್ಕೆ ಅಸತ್ಯವೆನ್ನುವದಿಲ್ಲ ಹಾಗಾದರೆ ಶಿವಾದ್ವೈತವೇ ಸಿದ್ಧವಾಗುತ್ತದಲ್ಲದೇ ಶಿವಾದ್ವೈತವಾದರೂ ಸಿದ್ಧವಾಗಲಿಲ್ಲವು. ಅಂದರೆ ಬ್ರಹ್ಮಾದ್ವೈತಿಯೇ? ನೀನು ಹೇಳುವ ಮಾಯೆ ಯು ಬ್ರಹ್ಮ ಪ್ರಕಾಶಸ್ವರೂಪವಲ್ಲ. ಮತ್ತು ಅದರಿಂದುಂಟಾದ ಪ್ರಪಂಚವೂ ಬ್ರಹ್ಮಪ್ರಕಾಶಕ್ಕೆ ಬಾಹ್ಯವೆಂದಮೇಲೆ ಅದರ ತೋರಿಕೆಯು ನಾನು ತಿಳಿಯುವ ದಿಲ್ಲವೆಂಬುವ ಜ್ಞಾನವೂ ಘಟಪಟಾದಿಗಳನ್ನು ತಿಳಿಯುತ್ತೇನೆಂಬುವ ಜ್ಞಾನವೂ ಸಂಭವಿಸುವದಿಲ್ಲ. ಯಾಕಂದರೆ "ನಾಪ್ರಕಾಶಃ ಪ್ರಕಾಶತೆ" ಎಂದು ನಿಯಮ ವಿದೆಯಾದ್ದರಿಂದ ಪ್ರಕಾಶ ಬಾಹ್ಯಪದಾರ್ಥಗಳ ಪ್ರಕಾಶವಾಗಲಾರದು. ಆದ್ದ ರಿಂದ ನೀನು ಹೇಳುವ ಅವಿದ್ಯಾರೂಪವಾದ ಮಾಯೆಯೂ ಅದರಿಂದುಂಟಾದ ಪ್ರಪಂಚವೂ ಪ್ರಕಾಶಾಂತರ್ಗತಗಳೆಂದು ತಿಳಿಯಬೇಕು.

ಅಂದಮೇಲೆ ಸತ್ಯಪ್ರಕಾಶದಲ್ಲಿ ಅಸತ್ಯಪ್ರಪಂಚವೂ ತತ್ಕಾರಣವೂ ಅಂತ ರ್ಗತಗಳಾಗಲಾರವು. ಸತ್ಯ ಸೂರ್ಯಾದಿ ಪ್ರಕಾಶದಲ್ಲಿ ಅಸತ್ಯ ಗಗನಪುಷ್ಪಗಳು ಪ್ರಕಾಶಿಸಲಾರವು. ಅಲ್ಲದೆ ಸೂರ್ಯಪ್ರಕಾಶಾಂತರ್ಗತಗಳಾಗಿ ಯಾರಿಗೂ ತೋ ರಲಾರವು. ಶಿವಾದ್ವೈತಿಯೇ ! ಅವಿದ್ಯೆಯು ಅನಿರ್ವಚನೀಯವು. ಅದು ಕೇವಲ ಅಸತ್ಯವೇ ಅಲ್ಲ. ಆಗಲಿ ಅದರ ಪ್ರತೀತಿಯನ್ನೂ ಅದರಿಂದುಂಟಾದ ಪ್ರಪಂಚಪ್ರ ತೀತಿಯನ್ನೂ ಒಪ್ಪುತ್ತೀಯಲ್ಲವೆ? ಒಪ್ಪಿದರೆ ಅದೂಕೂಡ ಪ್ರಕಾಶಾಂತರ್ಗತವೇ

ಎಂದು ಹೇಳಬೇಕು. ಹೇಳಿದರೆ ಅದು ಬ್ರಹ್ಮಬಾಹ್ಯವಲ್ಲವೆಂದು ಹೇಳಬೇಕು. ಅಲ್ಲದೆ ಸತ್ಯವೆಂತಲೂ ಹೇಳಬೇಕು. ಒಳ್ಳೇದು ಶಿವಾದ್ವೈತಿಯೇ! ಅದು ಸತ್ಯವಾದರೆ ಅದ್ವೈತವು ಹೇಗೆ. ಕೇಳು ಸುವರ್ಣದ ಕಟಕ, ಕುಂಡಲ, ರಸನಾ, ಮೊದಲಾದ ಅಲಂಕಾರಗಳು ಸುವರ್ಣಾರ್ಥಿಗೆ ಕೇವಲ ಸುವರ್ಣವಾಗಿಯೇ ತೋರುತ್ತವೆ. ಕುಂಡಲಾದ್ಯರ್ಥಿಗೆ ಅವು ಪರಸ್ಪರ ಭಿನ್ನಗಳಾಗಿಯೇ ತೋರುತ್ತವೆ. ಅದರಂತೆ ಕೇವಲ ಮುಮುಕ್ಷುವಾಗಿ ಗುರುಶಾಸ್ತ್ರಾದಿಗಳಿಂದ ಶಿವನೊಬ್ಬನನ್ನೇ ಹುಡುಕುವ ಶಿವಯೋಗಿ ಸಾಧಕನಿಗೆ ಅವನ ಅಭ್ಯಾಸದಾರ್ಢ್ಯತೆಯಿಂದ ಎಲ್ಲವೂ ಶಿವರೂಪವಾಗಿ ಬಿಡುವದು. ಅಂದರೆ ಭೇದಬುದ್ಧಿಯು ಲೀನವಾಗಿ ಎಲ್ಲಾಕಡೆಯಲ್ಲಿಯೂ ಅಭಿನ್ನ ಪರಶಿವನೇ ಸ್ಫುರಿಸುವನು ಎಂಬುವದು ಶಿವಜ್ಞಾನಿಗಳ ಅನುಭವಸಿದ್ಧವು. ಆದ್ದರಿಂದಲೇ (ರಸನಾಕುಂಡಲಕಟಕಂ ಭೇದತ್ಯಾಗೇನ ದೃಶ್ಯತೆ ಯಥಾ ಹೇಮ | ತದ್ವದ್ಭೇದತ್ಯಾಗೆ ಸನ್ಮಾತ್ರಂ ಸರ್ವಮಾಭಾತಿ || ಎಂದು ಪರಮಾರ್ಥಸಾರಕಾರರು ಹೇಳಿದ್ದಾರೆ. ಆದಕಾರಣ ಮಾಯೆಯು ಸತ್ಯವು. ತತ್ಕೃತ ವಿಕಾರಗಳೂ ಕೂಡ ಸತ್ಯಗಳಾಗಿಯೇ ಇರುವವು. ಆದರೂ ಅವುಗಳಲ್ಲಿ ಅನುಸ್ಯೂತನಾದ ಪರಮಾತ್ಮನು ಅವುಗಳ ಮಾಲಿನ್ಯದಿಂದ ಮಲಿನನಾಗುವದಿಲ್ಲ. ಆಕಾಶಗತಗಳಾದ ಮೇಘಧೂಮಧೂಳಿಗಳಿಂದ ಆಕಾಶವು ಮಲಿನವಾಗದಿರುವಂತೆ ಶಿವನು ಸ್ವಗತಗಳಾದರೂ ಜಡಮಾಯಾವಿಕಾರಗಳಾದ ಜನ್ಮಜರಾಮರಣಾದಿಗಳಿಂದ ದೂಷಿತನಾಗುವದಿಲ್ಲ. ಮತ್ತು ಒಂದು ಘಟಾಕಾಶವು ಧೂಳಿಯಿಂದ ವ್ಯಾಪ್ತವಾಗಲು ಎಲ್ಲಾ ಘಟಾಕಾಶಗಳು ಆಗುವದಿಲ್ಲ. ಮತ್ತು ಕಸ್ತೂರ್ಯಾದಿ ಸುಗಂಧ ವಾಸನೆಗಳಿಂದ ಕೂಡಿದ ಕೆಲವು ಘಟಾಕಾಶಗಳಿರುತ್ತವೆ. ಮತ್ತೆ ಕೆಲವು ದುರ್ವಾಸನೆಯಿಂದ ಕೂಡಿದವುಗಳಾಗಿರುತ್ತವೆ. ಅವು ಪರಸ್ಪರ ಭಿನ್ನಗಳಾಗಿರುವದರಿಂದ ಅವುಗಳಲ್ಲಿಯ ವಾಸನೆಯು ಪರಸ್ಪರಗಳಲ್ಲಿ ಬರುವದಿಲ್ಲ. ಆಕಾಶವು ಒಂದೇಯಾಗಿದ್ದರೂ ಘಟಾದಿ ಸಂಕೋಚಗಳಿಂದ ಆಕಾಶವು ಸಂಕುಚಿತವಾಗಿ ವಾಸ್ತವ ಭೇದವನ್ನು ಹೊಂದಿತು. ಆದ್ದರಿಂದ ತನಗೆ ಭಿನ್ನಗಳಾದ ಘಟಾಕಾಶಾದಿಗಳ ಸುಗಂಧಾದಿ ವಾಸನೆಯುಳ್ಳದ್ದಾಗುವದಿಲ್ಲ. ಇದರಂತೆ (ಶಿವಪ್ರಕಾಶವು ಒಂದೇಯಾಗಿದ್ದರೂ ಸ್ವಶಕ್ತ್ಯಂಶಕೃತ ಮಾಯಾ ಸಂಕೋಚಗಳಿಂದ ಸಂಕುಚಿತವಾಗಲು ಅನೇಕ ಪ್ರಕಾರ ಜೀವರುಗಳಾದರು ಇವರು ಪರಸ್ಪರ ಭಿನ್ನರಿರುವದರಿಂದ ಒಬ್ಬನ ಸುಖದುಃಖಗಳು ಮತ್ತೊಬ್ಬನಿಗೆ ಬರುವದಿಲ್ಲ. ಮಹಾಕಾಶದಂತಿರುವ ಶಿವನಿಗಂತೂ ಜೀವಧರ್ಮ

ಗಳಿಂದೂ ತಟ್ಟುವದಿಲ್ಲ. ಮತ್ತು ಜೀವರುಗಳಿಗೆ ಉಪಾಧಿಯಾಗಿರುವ ಆಣವಾದಿ ಮೂರು ಮಲಗಳು ದೀಕ್ಷಾತ್ರಯಾಗ್ನಿಯಿಂದ ಶುದ್ಧಗಳಾಗಲು ಅವುಗಳಿಗೆ ಆಧಾರಗಳಾದ ಸ್ಥೂಲಸೂಕ್ಷ್ಮ ಅತಿಸೂಕ್ಷ್ಮ ಶರೀರಗಳಿರುವವರಿಗೂ ಜೀವರುಗಳು ಶುದ್ಧರಾಗಿದ್ದು (ಜೀವನ್ಮುಕ್ತರಾಗಿದ್ದು) ಶರೀರಪಾತಾನಂತರದಲ್ಲಿ ಪರಶಿವ ಮಹಾಲಿಂಗದಲ್ಲಿ ಸಮರಸರಾಗಿ ಬಿಡುವರು. ಹೇಗಂದರೆ ಸುಗಂಧ ದುರ್ಗಂಧಗಳಿಂದ ಕೂಡಿದ ಸ್ಥೂಲಸೂಕ್ಷ್ಮ ಅತಿಸೂಕ್ಷ್ಮ ಘಟಾಕಾಶಗಳ ಗಂಧವನ್ನು ಅಗ್ನಿಸಂಯೋಗದಿಂದ ತೆಗೆಯಲು, ಆ ಶುದ್ಧಗಳಾದ ಘಟಾಕಾಶಗಳು ಘಟಗಳಿರುವವರಿಗೂ ಬೇರೆಬೇರೆಯಾಗಿದ್ದು ಘಟಗಳ ನಾಶಾನಂತರದಲ್ಲಿ ಅವು ಮಹಾಕಾಶದಲ್ಲಿ ಸಮರಸವಾಗಿ ಬಿಡುತ್ತವೆ. ಇದರಂತೆ ಜೀವರುಗಳ ಉಪಾಧಿಗಳಲ್ಲಿರುವ ಆಣವಾದಿ ಮಲಗಳು ದೀಕ್ಷಾಗ್ನಿಯಿಂದ ಕಳೆಯಲ್ಪಡಲು ಜೀವರು ಉಪಾಧಿಗಳಿರುವವರಿಗೂ ಶುದ್ಧರಾಗಿದ್ದು ಉಪಾಧಿಗಳು ನಷ್ಟಗಳಾಗಲು ಮಹಾ ಲಿಂಗದಲ್ಲಿ ಸಮರಸರಾಗಿ ಬಿಡುವರು. ಘಟಾದಿ ಉಪಾಧಿಗಳಿರುವವರಿಗೂ ಘಟಾಕಾಶಗಳು ಮಹಾಕಾಶದ ಶುದ್ಧಾಂಶಗಳಾಗಿದ್ದು ಉಪಾಧಿಗಳು ನಷ್ಟಗಳಾಗಲು ಮಹಾಕಾಶದಲ್ಲಿ ಕೂಡುವಂತೆ ಮಲಗಳು ನಷ್ಟಗಳಾಗಲು ಶುದ್ಧಾತ್ಮರುಗಳು ಸಚ್ಚಿದಾನಂದ ಪರಶಿವ ಮಹಾಲಿಂಗದ ಅಂಶಗಳಾಗಿದ್ದು, ಉಪಾಧಿಗಳಾದ ಶರೀರಗಳ ಪಾತಾನಂತರದಲ್ಲಿ ಸಮರಸರಾಗುವರು. ಆದ್ದರಿಂದಲೇ ||ಇತ್ಥಂ ದ್ವೈತವಿಕಲ್ಪೇ ಗಲಿತೇ ಪ್ರವಿಲಂಘ್ಯ ಮೋಹಿನೀಂ ಮಾಯಾಂ | ಸಲಿಲೇ ಸಲಿಲಂ ಕ್ಷೀರೇ ಕ್ಷೀರಮಿವಬ್ರಹ್ಮಣಿಲಯೀಸ್ಯಾತ್ || ಅಂದರೆ ದ್ವೈತವಿಕಲ್ಪವು ಗಲಿತವಾಗಲು ಶಿವಜ್ಞಾನಿಯು ಇದಕ್ಕೆ ಕಾರಣವಾದ ಮತ್ತು ತನ್ನ ಸ್ವರೂಪದಲ್ಲಿ ಮರವೆಯನ್ನುಂಟುಮಾಡಿದ ಜಡವಾದ ಮಾಯಾಶಕ್ತಿಯನ್ನೂ ಕೂಡ ದಾಟಿ ನೀರಿನಲ್ಲಿ ನೀರೂ ಹಾಲಿನಲ್ಲಿ ಹಾಲೂ ಬೆರತುಹೋಗುವಂತೆ ಪರಶಿವಬ್ರಹ್ಮದಲ್ಲಿ ಲಯವನ್ನು (ಸಾಮರಸ್ಯವನ್ನು) ಹೊಂದಿಬಿಡುವನು. ಎಂದು ಹೇಳಿರುವದಲ್ಲದೆ, ಮಹಾ ವಾಕ್ಯರತ್ನಾವಲೀಕಾರರು ಜೀವ ಬ್ರಹ್ಮೈಕ್ಯವಾಕ್ಯಗಳ ಮಧ್ಯದಲ್ಲಿ |ಕ್ಷೀರೇ ಕ್ಷೀರಂ ಯಥಾಕ್ಷಿಪ್ತಂ ತೈಲಂತೈಲೇ ಜಲಂಜಲೇ | ಸಂಯುಕ್ತಮೇಕತಾಮೇತಿ ತಥಾತ್ಮನ್ಯಾತ್ಮವಿನ್ಮುನಿಃ || ಅಂದರೆ ಹಾಲಿನಲ್ಲಿ ಹಾಲೂ, ತೈಲದಲ್ಲಿ ತೈಲವೂ, ಜಲದಲ್ಲಿ ಜಲವೂ ಕೂಡಿ ಒಂದಾಗುವಂತೆ ಪರಮಾತ್ಮಜ್ಞಾನಿಯಾದ ಮುನಿಯು ಪರಮಾತ್ಮನಲ್ಲಿ ಕೂಡಿ ಐಕ್ಯವನ್ನು ಹೊಂದಿಬಿಡುವನೆಂದು ಹೇಳಿದ್ದಾರೆ. ನೋಡು ಬ್ರಹ್ಮಾದ್ವೈತಿಯೇ! ನಿನ್ನ ಮತದಂತೆ ಜೀವನು ಮಿಥ್ಯಾ ಅಧ್ಯಾಸಕಲ್ಪಿತನೆಂದರೆ ಈ

ಮೇಲೆ ಹೇಳಿದ ವಾಕ್ಯಗಳೂ “ಯಥಾನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃಪರಾತ್ಪರಂ ಪುರುಷಮುಪೈತಿ ದಿವ್ಯಂ” ಇತ್ಯಾದಿ ಶ್ರುತಿವಾಕ್ಯಗಳೂ ಹೇಗೆ ಸಂಗತಗಳಾಗುವವು ಈ ವಾಕ್ಯಗಳಿಂದ ಕ್ಷೀರಕ್ಷೀರಗಳ ಸಾಮರಸ್ಯದಂತೆ ಶಿವಜೀವರುಗಳ ಸಾಮರಸ್ಯವು ಉಕ್ತವಾಯಿತು ಅಂದಮೇಲೆ ಮಿಥ್ಯಾಕಲ್ಪಿತವಾದ ಜೀವನ ಸಾಮರಸ್ಯವನ್ನು ಸತ್ಯವಾದ ಬ್ರಹ್ಮದಲ್ಲಿ ಹೇಗೆ ಹೇಳುವಿ. ಹೇಳಲಾಗುವದಿಲ್ಲ. ಆದ್ದರಿಂದಲೇ ವಿವರ್ತವಾದದಲ್ಲಿ ಸಾಮರಸ್ಯವು ಸಂಭವಿಸುವದಿಲ್ಲವೆಂದು ಸ್ವಪ್ರಭಾನಂದರು ಸ್ಪಷ್ಟವಾಗಿ ಹೇಳಿದ್ದಾರೆ. ಎಲ್ಲಾ ವೇದಾಂತಗಳು ಲಿಂಗಾಂಗ ಸಾಮರಸ್ಯ ಬೋಧಕಗಳಾಗಿರುವದರಿಂದ ವಿವರ್ತವಾದವು ವೇದಬಾಹ್ಯವೆಂದು ಹೇಳಬೇಕಾಗುವದಲ್ಲವೆ? ಶಿವಾದ್ವೈತಿಯೇ! ಜಗತ್ತು ಬ್ರಹ್ಮದ ವಿವರ್ತವು ಎಂಬುವಲ್ಲಿ ಸ್ವಾನುಭವವೇ ಪ್ರಮಾಣವು. ನೋಡು ಶುಕ್ತ್ಯಧಿಷ್ಠಾನದ ಜ್ಞಾನವಾಗುತ್ತಿರಲಿಕ್ಕೆ ಅದರ ವಿವರ್ತವಾದ ರಜತವು ಮಿಥ್ಯೆಯಾಗಿ ಕಂಡುಬರುವದು. ಅದರಂತೆ ಬ್ರಹ್ಮಜ್ಞಾನವಾಗುತ್ತಿರಲಿಕ್ಕೆ ಜಗತ್ತು ಮಿಥ್ಯೆಯೆಂದು ಅನುಭವದಲ್ಲಿ ಬರುತ್ತದಾದ್ದರಿಂದ ಮಿಥ್ಯಾಭೂತವಾದ ಜಗತ್ತು ಶಿವಪರಿಣಾಮವಾಗಲಾರದು. ಬ್ರಹ್ಮಾದ್ವೈತಿಯೆ! ಮಿಥ್ಯಾಜ್ಞಾನಸ್ಯಮಿಥ್ಯಾತ್ವಂ ಬ್ರೂಹಿವಾಕಿಂ ನಿಬಂಧನಂ | ಕ್ಷಣಾಂತರೆ ಶುಕ್ತಿಕಾಯಾಂ ರಜತಂ ಕೇನವಾರ್ಯತೆ || ಅಂದರೆ ಶುಕ್ತಿರಜತಸ್ಥಲದಲ್ಲಿ “ಇದಂ ರಜತಂ” ಎಂಬುವ ಜ್ಞಾನವು ಮಿಥ್ಯಾ ಎಂದು ಅನ್ನುತ್ತೀಯಲ್ಲವೆ? ಹಾಗಾದರೆ ಅದರ ಮಿಥ್ಯಾತ್ವವನ್ನು ಯಾವದರಿಂದ ಹೇಳುವಿ. ಅದು ಉತ್ತರಶುಕ್ತಿಜ್ಞಾನದಿಂದ ನಷ್ಟವಾಗುತ್ತದೆ. ಆದ್ದರಿಂದಲೇ ಹೇಳುತ್ತೇನೆ. ಹಾಗಾದರೆ ಶುಕ್ತಿಜ್ಞಾನದಿಂದ ರಜತವೂ ರಜತಜ್ಞಾನವೂ ನಷ್ಟವಾದರೆ ಮತ್ತೊಂದು ಕ್ಷಣದಲ್ಲಿ ರಜತದ ತೋರಿಕೆಯಾಗಬಾರದು. ಆ ನಿನ್ನ ಪ್ರಾತಿಭಾಸಿಕ ರಜತವು ನಷ್ಟವಾಗಿಲ್ಲವೆ? ನಷ್ಟವಾಗಿದ್ದರೆ ಮೃತನಾದ ಮನುಷ್ಯನು ಮತ್ತೆ ಮೊದಲಿನಂತೆ ತೋರದಿರುವಂತೆ ಅದು ಮತ್ತೆ ತೋರಬಾರದು. ಅಲ್ಲಿ ರಜತವು ನಷ್ಟವಾಗಿಲ್ಲ. ಅದರ ಜ್ಞಾನವು ನಷ್ಟವಾಯಿತು. ಪುನಃ ಅದನ್ನು ನೋಡಿದಕೂಡಲೇ ಅದರ ಜ್ಞಾನಾಂತರವು ಹುಟ್ಟಿತು. ಅಂದರೆ ಬ್ರಹ್ಮಜ್ಞಾನದಿಂದ ದ್ವೈತಜ್ಞಾನವು ನಷ್ಟವಾಯಿತು. ದ್ವೈತಪ್ರಪಂಚವು ಉಳಿಯುವದೆಂದು ಹೇಳಬೇಕಾಗುವದು. ಹೇಳಿದರೆ ಮಿಥ್ಯಾತ್ವವು ಅಸಿದ್ಧವಾಗುವದು. ಆದ್ದರಿಂದಲೇ ತಸ್ಮಾದ್ಭಾವಾಃ ಸ್ಥಿರಾಃ ಸರ್ವೇಸತ್ಯವಂತೆ ಸ್ವರೂಪತಃ || ಎಂದು ಹೇಳಿದ್ದಾರೆ.

ಒಳ್ಳೇದು ಶಿವಾದ್ವೈತವೇ ಶಿವಪರಿಣಾಮವೇ ಜಗತ್ತು ಎಂದು ನೀನು ಹೇಳಿದರೆ ಶಿವನು ಸರ್ವಾತ್ಮಕನಾಗುವನು. ಸರ್ವಾತಿರಿಕ್ತನಾಗಿರಲಾರನು. ಸರ್ವಾತ್ಮಕನೇ ಯಂದರೆ ಬ್ರಹ್ಮೋಚ್ಛೇದವೇ ಆಗುವದು. ಸರ್ವಾತಿರಿಕ್ತನೆಂದರೆ ಜಗತ್ತು ಅವನ ಪರಿಣಾಮವಾಗಲಾರದು ಎಂಬುವ ಕಾರಣದಿಂದಲೇ ಆಚಾರ್ಯರು ಅಧ್ಯಾಸವ ನ್ನು ಸ್ವೀಕರಿಸಿದ್ದಾರೆ. ನೀನಂತೂ ಅದನ್ನು ಒಪ್ಪುವದಿಲ್ಲವೆಂದಮೇಲೆ ಸರ್ವಾತ್ಮ ಕತ್ವ ಸರ್ವಾಧಿಪತಿತ್ವಾದಿ ವಿರುದ್ಧ ಧರ್ಮಗಳನ್ನು ಹೇಗೆ ಹೇಳುವಿ. ಮಿಥ್ಯಾವಾ ದಿಯೇ! ಈ ವಿರೋಧವನ್ನು ಹಿಂದೆ ಎಷ್ಟೋಸಾರಿ ಪರಿಹರಿಸಿರುವೆನು. ಪರಮಾ ತ್ಮನಲ್ಲಿ ವಿಚಿತ್ರವಾದ ಅಂಥದೊಂದು ಶಕ್ತಿಯಿರುವದರಿಂದ ಅವನಲ್ಲಿ ಎಲ್ಲವೂ ಸಂಭ ವಿಸುತ್ತದೆ. ಪರಿಚ್ಛಿನ್ನತ್ವಾ ಪರಿಚ್ಛಿನ್ನತ್ವಗಳೂ ಸಾವಯವತ್ವ ನಿರವಯವತ್ವಗ ಳೂ ವಿಶ್ವಾತ್ಮಕತ್ವ ವಿಶ್ವಾಧಿಪತಿತ್ವಗಳೂ ಅವನಲ್ಲಿ ಅವಿರುದ್ಧಗಳಾಗಿರುತ್ತವೆ. ಈ ವಿಷಯದಲ್ಲಿ ಅನೇಕ ಶ್ರುತಿಗಳಿವೆ. ಅದನ್ನು ಹಿಂದೆ ಹೇಳಿರುವೆನು. ಈಗ ಕೆಲ ವು ಅಭಿಯುಕ್ತರ ವೇದಾನುಕೂಲಗಳಾದ ವಚನಗಳನ್ನು ಹೇಳುವೆನು ಕೇಳು. ಮಹಿಮ್ನಸ್ತವದಲ್ಲಿ ‹‹ನವಿದ್ಮಸ್ತತ್ತ್ವಂವಯಮಿಹತು ಯತ್ತ್ವಂ ನಭವಸಿ | ಅಂದರೆ ಪರಶಿವನೆ? ನೀನು ಯಾವ ಪದಾರ್ಥ ಸ್ವರೂಪನಾಗುವದಿಲ್ಲ. ಎಲ್ಲಾ ಪದಾರ್ಥ ಸ್ವರೂಪನೇ ಆಗಿರುವಿ, ನಿನ್ನ ಸ್ವರೂಪವಾಗದಿರುವ ಯಾವ ಪದಾರ್ಥವೋ ? ಅದನ್ನು ನಾವರಿಯೆವು. ಎಂದು ಹೇಳಲ್ಪಟ್ಟಿರುವದು. ಇದರಿಂದ ಸರ್ವಾತ್ಮಕ ತ್ವವೂ ನಮೋನೇದಿಷ್ಠಾಯ ಪ್ರಿಯದವದವಿಷ್ಠಾಯಚನಮೊ ನಮಃ | ಕ್ಷೋ ದಿಷ್ಠಾಯ ಸ್ಮರಹರಮಹಿಷ್ಠಾಯಚನಮೊನಮೊ ವರ್ಷಿಷ್ಠಾಯ ತ್ರೀಣಯುನಯ ವಿಷ್ಠಾಯಚ ನಮೊ ನಮಃ ಸರ್ವಸ್ಮೈ ತೇತದಿದಮತಿ ಸರ್ವಾಯಚನಮಃ || ಇದ ರಿಂದಲೂ ಕೂಡ ಆಸನ್ನತ್ವ, ದೂರತ್ವ, ವೃದ್ಧತ್ವ, ಯೂನತ್ವ, ವಿಶ್ವಾಕಾರತ್ವ, ವಿಶ್ವೋತ್ತೀರ್ಣತ್ವ ಧರ್ಮಗಳು ಹೇಳಲ್ಪಡುತ್ತವೆಯಾದ್ದರಿಂದ ಈ ಧರ್ಮಗಳ ವಿರೋಧವು ಶಿವ ವಿಷಯಕವಾದದ್ದಲ್ಲವು. ಆದ್ದರಿಂದಲೇ ಶಿವಾದ್ವೈತ ತತ್ವಜ್ಞ ರಾದ ವಿಶ್ವಾರಾಧ್ಯರೂ ಕೂಡ ತ್ವಯಿಕು ಅಣಿಮಾದಿ ಗುಣಮುಕ್ತೆ ಅತರ್ಕ್ಯೈರ್ಶ್ವರ್ಯೆ ಸಹಜಾಗುಣಾ ಇತಿ ಸರ್ವಂ ನವಿರುಧ್ಯತೆ | ಎಂದು ಹೇಳಿದ್ದಾರೆ. ನೋಡು ಬ್ರಹ್ಮಾದ್ವೈತಿಯ? ನಿಮ್ಮವರಂತೆ ಸ್ತೋತ್ರಕಾರರೂ ಮತ್ತು ಮಹಿ ಮ್ನಸ್ತೋತ್ರದ ಟೀಕಾಕಾರರೂ ಸರ್ವಾತ್ಮಕತ್ವ ಸರ್ವನಿಯಾಮಕತ್ವಾದಿಗುಣ ಗಳು ಅಜ್ಞಾನಕಲ್ಪಿತಗಳೆಂದು ಹೇಳಲಿಲ್ಲ. ಸಹಜ ಗುಣಗಳೆಂದು ಸ್ಪಷ್ಟವಾಗಿ ಹೇಳಿದ್ದಾರಾದ್ದರಿಂದ ನನ್ನ ಅಭಿಪ್ರಾಯದಂತೆ ಎಷ್ಟೋ ಮಹನೀಯರ ಅಭಿಪ್ರಾ

ಯುವಿರುವದು. ಅದನ್ನು ತಿಳಿದಮೇಲಾದರೂ ನಿನ್ನ ವಿಪರೀತಗ್ರಹಿಕೆಯು ದೂರವಾಗಬಹುದಲ್ಲವೆ ? ಶಿವಾದ್ವೈತಿಯೇ ? ಸರ್ವಸ್ವರೂಪನಾದ ಶಿವನು ಸರ್ವನಿಯಾಮಕನಾಗುವನೆಂಬುವದು ಹೇಗೆ ಘಟಾತ್ಮಕವಾದ ಮೃತ್ತಿಕೆಯು ಘಟನಿಯಾಮಕವಾಗುವದಿಲ್ಲವಷ್ಟೆ ? ಅದೇಕೆ ? ವಿವರ್ತವಾದಿಯೇ ? ಜೇಡಹುಳವು ತನ್ನ ಶರೀರಾಂಶ ಪರಿಣಾಮರೂಪವಾದ ಜಾಲಕ್ಕೆ ನಿಯಾಮಕವಾಗುತ್ತದಷ್ಟೆ ? ವಿಚಿತ್ರ ಶಕ್ತಿಯುಳ್ಳ ಪರಮೇಶ್ವರನಲ್ಲಿ ಸಂಭವಿಸುತ್ತದೆಂದು ಹೇಳಿಲ್ಲವೆ ? ನೋಡು. ಬ್ರಹ್ಮಾದ್ವೈತಿಯೇ ? ನಿಮ್ಮ ಆಚಾರ್ಯರು ಪರಮೇಶ್ವರನಲ್ಲಿ ಉದಾಸೀನತ್ವವನ್ನೂ ಪ್ರವರ್ತಕತ್ವವನ್ನೂ ಒಪ್ಪಿರುವರು. ಇದು ವಿರೋಧ ಬುದ್ಧಿಯುಳ್ಳ ನಿನಗೆ ಹೇಗೆ ಸೇರುತ್ತದೆ. ಅದೆಲ್ಲಿ ಅವರು ಹೇಳಿದ್ದಾರೆ, ನೋಡು ? ಅವರ ಭಾಷ್ಯಪಂಕ್ತಿಯನ್ನೇ ಹೇಳುತ್ತೇನೆ. ಪರಮಾತ್ಮನಸ್ತು ಸ್ವರೂಪ ವ್ಯಪಾಶ್ರಯಮೌದಾಸೀನ್ಯಂ ಮಾಯಾವ್ಯಪಾಶ್ರಯಂಚ ಪ್ರವರ್ತಕತ್ವಮಸ್ತ್ಯತಿಶಯಃ | ಎಂದು ಅ ||೨|| ಪಾ ||೨|| ಸೂ ||೭|| ಹೇಳಿರುವರು. ಶಿವಾದ್ವೈತಿಯೇ ? ಅವರು ಹೇಳಿದ ಮಾತು ಸರಿಯಾಗಿರುವದು. ಯಾಕಂದರೆ ಬ್ರಹ್ಮದಲ್ಲಿ ಅಸಂಗತ್ವ ಉದಾಸೀನತ್ವಗಳು ಸ್ವತಃ ಇರುವವು. ಪ್ರವರ್ತಕತ್ವಾದಿಗಳು ಮಾಯಾಶಕ್ತಿಯಿಂದ ಇರುವವೆಂದು ಅವರು ಒಪ್ಪಿರುವರು. ಇದರಿಂದೇನಾಯಿತು ? ಸುಕುಮಾರಮತಿಯೇ ಅವಕ್ಕೆ ವಿರೋಧವಾಗಲಿಲ್ಲವೆ ? ಇಲ್ಲ. ಹಾಗಾದರೆ ಪರಶಿವಬ್ರಹ್ಮದಲ್ಲಿ ಪರಿಣಾಮಿತ್ವ ನಿರವಯವತ್ವ ಸರ್ವಾತ್ಮಕತ್ವ ಸರ್ವಾಧಿ ಪತಿತ್ವಗಳನ್ನು ಹೇಳಿದರೆ ವಿರೋಧವಿಲ್ಲವೆಂದು ನೀನು ಯಾಕೆ ತಿಳಿಯಬಾರದು. ಅದು ಆಚಾರ್ಯರ ಮಾತೆಂದು ನಂಬುವೆ ಏನು ? ನಾನಾದರೂ ಸ್ವಶಕ್ತ್ಯಂಶರೂಪವಾದ ಮಾಯಾಶಕ್ತಿಯಿಂದ ಸರ್ವಾತ್ಮಕನಾಗಿಯೂ ಸ್ವತಃ ಸರ್ವಕ್ಕೂ ನಿಯಾಮಕನಾಗಿಯೂ ಇರುವನೆಂದು ಹೇಳುವೆನು. ಈ ನನ್ನ ಮಾತನ್ನು ಯಾಕೆ ನಂಬಬಾರದು. ಶಿವಾದ್ವೈತಿಯೇ ? ಆಚಾರ್ಯರ ಮತದಲ್ಲಿ ಅಸಂಗತ್ವೌದಾಸೀನ್ಯಗಳು ಕಲ್ಪಿತಗಳಲ್ಲ. ಪ್ರವರ್ತಕತ್ವಾದಿಗಳು ಕಲ್ಪಿತಗಳು. ಆದ್ದರಿಂದ ಬ್ರಹ್ಮದಲ್ಲಿ ಕಲ್ಪಿತಾಕಲ್ಪಿತ ಧರ್ಮಗಳಿಗೆ ವಿರೋಧವನ್ನು ಸ್ವೀಕರಿಸುವದಿಲ್ಲ. ಅದು ಹೇಗೆ ? ಶುಕ್ತಿಯಲ್ಲಿ ಪರತಃಕಲ್ಪಿತತ್ವ, ಸ್ವತಃ ಅಕಲ್ಪಿತತ್ವಗಳು ಇರುತ್ತವಷ್ಟೆ ? ಹಾಗೆ ಬ್ರಹ್ಮದಲ್ಲಿ ಕಲ್ಪಿತತ್ವಾ ಕಲ್ಪಿತತ್ವಗಳು ಇರುವದಕ್ಕೆ ಅಡ್ಡಿಯೇನು ? ನಿನ್ನ ಮತದಲ್ಲಿ ಎಲ್ಲಾ ಧರ್ಮಗಳೂ ಸತ್ಯಗಳಾದ್ದರಿಂದ ವಿರೋಧ ಪರಿಹಾರವಾಗಲಾರದು. ವಿವರ್ತವಾದಿಯೇ ? ನಿನ್ನ ಮತದಲ್ಲಿ ಮಿಥ್ಯಾಭೂತ ಕಲ್ಪಿತತ್ವ? ಸತ್ಯವಾದ ಅಕ

ಲ್ಪಿತತ್ವಗಳಿಗೆ ಹೇಗೆ ವಿರೋಧವಿಲ್ಲವೊ? ಹಾಗೇನೇ ನಾನು ಹೇಳಿದ ಧರ್ಮಗಳಾ ದರೂ ವಿರೋಧವುಳ್ಳವುಗಳಲ್ಲವೆಂದು ನೀನು ಯಾಕೆ ತಿಳಿಯಬಾರದು? ಸತ್ಯಾ ಸತ್ಯ ಧರ್ಮಗಳಿಗೇನೇ ವಿರೋಧವೆಂದಮೇಲೆ ಪರಿಚ್ಛಿನ್ನತ್ವಾ ಪರಿಚ್ಛಿನ್ನತ್ವ ಧರ್ಮ ಗಳಿಗೆ ವಿರೋಧವಿಲ್ಲವೆಂದು ನೀನು ತಿಳಿಯದೆ ಇರುವಲ್ಲಿ ಕಾರಣವೇನು? ಆಚಾ ರ್ಯರ ಮತದಲ್ಲಿ ಕಾಲಭೇದದಿಂದ ವಿರೋಧವಿಲ್ಲವೆಂದರೆ ನಾನೂ ಕಾಲಭೇದ ದಿಂದ ವಿರೋಧವಿಲ್ಲವೆಂದು ಹೇಳುತ್ತೇನೆ. ನೀನು ಮಾಯೆಯಿಂದ ವಿರೋಧವಿ ಲ್ಲವೆಂದು ಅಂದರೆ ನಾನೂ ಹಾಗೆಯೇ ಹೇಳುತ್ತೇನೆ. ಶಿವಾದ್ವೈತಿಯೇ? ಹಾಗಾದರೆ ಆಚಾರ್ಯರು ಹೇಳಿದಂತೆಯೇ ನೀನು ಮಿಥ್ಯೆಯಾದ ಅವಿದ್ಯೆಯ ನ್ನು ಒಪ್ಪುತ್ತೀಯೇನು? ಬ್ರಹ್ಮಾದ್ವೈತಿಯೇ? ನಿನ್ನ ಸಂಶಯವನ್ನು ಕಳೆ ಯುವ ಉದ್ದೇಶದಿಂದ ನಿಮ್ಮ ಆಚಾರ್ಯರ ಮಾತಿನ ದೃಷ್ಟಾಂತವನ್ನು ಕೊಟ್ಟೆ ನು. ನೋಡು? ಸತ್ಯ ಮಿಥ್ಯಾ ಧರ್ಮಗಳಿಗೆ ವಿರೋಧವಿಲ್ಲವೆಂದು ಯಾವ ಮಹಾ ಮೂರ್ಖನೂ ತಿಳಿಯಲಾರನು. ಅವಿರೋಧವನ್ನು ಹೇಳಿದರೆ ಮುಮುಕ್ಷುವಿಗೆ ಶೂನ್ಯತ್ವದ ಫಲಪ್ರಾಪ್ತಿಯಾದೀತು. ಅಸತ್ತು ಎಂದು ತಿಳಿದರೆ „ಅಸನ್ನೇವಸಭ ವತಿ" ಅಸತ್ಪುರುಷಾರ್ಥವನ್ನು ಹೊಂದುತ್ತಾನೆಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಬ್ರಹ್ಮದಲ್ಲಿ ಕಲ್ಪಿತತ್ವಾ ಕಲ್ಪಿತತ್ವಗಳಿಗೆ ವಿರೋಧವಿಲ್ಲವೆಂದು ಭಾಷ್ಯದ ಅಭಿಪ್ರಾಯದಂತೆ ರತ್ನ ಪ್ರಭಾಕಾರರು ಹೇಳಿದ್ದು, ಅಸಂಗತವು.

ಹೀಗೆ ಪ್ರಮಾಣ ಯುಕ್ತಿ ಅನುಭವಗಳಿಂದ ಪರಿಣಾಮವಾದವು ಸಿದ್ಧವಾ ದುದರಿಂದ ಪರಿಣಾಮವಾದವೇ ಮುಮುಕ್ಷುಗ್ರಾಹ್ಯವು

ಇನ್ನುಮೇಲೆ ಮುಂದಿನ ಹನ್ನೆರಡನೇ ವಿಚಾರವನ್ನು ಮಾಡುವೆನು.

ಅವಿದ್ಯಾ ವ್ಯಷ್ಟಿಯಲ್ಲಿ (ಅಂತಃಕರಣದಲ್ಲಿ) ಆ ಶುದ್ಧಬ್ರಹ್ಮದ ಪ್ರತಿಬಿಂ ಬವೇ ಜೀವನು. ಅವಿದ್ಯಾ ಸಮಷ್ಟಿಯಲ್ಲಿ (ಮಾಯೆಯಲ್ಲಿ) ಬ್ರಹ್ಮದ ಪ್ರತಿಬಿಂ ಬವೇ ಈಶ್ವರನು. ಅರ್ಥಾತ್ ಘಟದೊಳಗಿನ ಜಲಕ್ಕೂ ಆ ಜಲದಮೇಲಣ ಆಕಾಶ ಪ್ರತಿಬಿಂಬಕ್ಕೂ ಆಧಾರವಾಗಿರುವ ಘಟಾಕಾಶದಂತೆ ಬ್ರಹ್ಮಪ್ರತಿಬಿಂ ಬವೂ ಅಂತಃಕರಣವೂ ಅಧಿಷ್ಠಾನವೂ ಕೂಡಿ ಜೀವನೆನಿಸುವನೆಂದು ಕೆಲವು ಕಡೆ ಯಲ್ಲಿ ಹೇಳಿದ್ದಾರೆ. ಜಲದಂತಿರುವ ಅಂತಃಕರಣಕ್ಕೂ ಆ ಅಂತಃಕರಣದಲ್ಲಿರುವ ಪ್ರತಿಬಿಂಬಕ್ಕೂ ಅಧಿಷ್ಠಾನವು ಕೂಟಸ್ಥನು. ಅಂತು ಜೀವನೆಂದರೆ ಬ್ರಹ್ಮದ ಪ್ರತಿಬಿಂಬವೆಂದು ಹೇಳಿದಂತಾಯಿತು. ಈ ಪ್ರತಿಬಿಂಬವಾದವನ್ನು ಒಪ್ಪುವವರೆ ಬ್ರಹ್ಮಾದ್ವೈತಿಗಳು. ಶಿವಾದ್ವೈತಿಗಳಾದ ವೀರಶೈವರು ಈ ವಾದವನ್ನು ಒಪ್ಪ

ವದಿಲ್ಲ. ವೀರಶೈವರು ಚಿಚ್ಛಕ್ತಿ ಸಂಕೋಚರೂಪವಾದ ಚಿತ್ತವಿಶಿಷ್ಟನೇ ಜೀವನೆಂತಲೂ ಚಿಚ್ಛಕ್ತಿ ವಿಶಿಷ್ಟನೇ ಈಶ್ವರನೆಂತಲೂ ಹೇಳುತ್ತಾರೆ. ಮತ್ತು ವೇದಾದಿಗಳಲ್ಲಿ ಜೀವನಿಗೆ ಪರಲೋಕಗಮನಾಗಮನಗಳು ಹೇಳಲ್ಪಟ್ಟಿರುವದರಿಂದ ಜೀವಾತ್ಮನ ಉಪಾಧಿಯು ಸ್ಥೂಲವಾದದ್ದೆಂದು ಹೇಳಲಾಗುವದಿಲ್ಲ. ಆದರೆ ಸೂಕ್ಷ್ಮವಾದದ್ದು. ಅಂದರೆ ಮೂಲಮಾಯೆಯ ಕಾರ್ಯವಾದ ಅಂತಃಕರಣವು ‹‹ಕಾರ್ಯೋಪಾಧಿರಯಂಜೀವಃ ಕಾರಣೋಪಾಧಿರೀಶ್ವರಃ›› ಈ ಅಂತಃಕರಣವೆಂಬ ಸೂಕ್ಷ್ಮೋಪಾಧಿಯುಳ್ಳವನಾದ್ದರಿಂದಲೇ ಜೀವನಿಗೆ ಶರೀರಪ್ರವೇಶನಿರ್ಗಮಾದಿಗಳು ಸಂಭವಿಸುತ್ತವೆ. ಆದ್ದರಿಂದ ಬ್ರಹ್ಮವು ವ್ಯಾಪಕವಾಗಿದ್ದರೂ ಆ ಬ್ರಹ್ಮ ಪ್ರತಿಬಿಂಬದಿಂದ ಕೂಡಿದ ಅಂತಃಕರಣಕ್ಕೆ ಪರಲೋಕ ಗಮನಾಗಮನಗಳು ಸಂಗತಗಳಾಗುವವು. ಈ ವಿಷಯದಲ್ಲಿ ‹‹ಯತ್ತೇಯಮಂ ವೈವಸ್ವತಂಮನೋಜಗಾಮದೂರಕಂ । ತತ್ತೇ ಆವರ್ತಯಾಮಸೀಹಕ್ಷಯಾಯ ಜೀವಸೇ›› ಇಂತೆಂಬ ಋಕ್ ಶಾಖೀಯ ಶ್ರುತಿಯು ಪ್ರಮಾಣವಾಗಿದೆ. ಅಂದರೆ ಪೂರ್ವದಲ್ಲಿ ಸನಾತಿಯೆಂಬ ರಾಜನ ಮನೆಯಲ್ಲಿ ಬಂಧು, ಸುಬಂಧು, ಶ್ರುತಬಂಧು, ವಿಪ್ರಬಂಧು, ಎಂಬುವ ನಾಲ್ಕುಜನ ಪುರೋಹಿತರಾದ ಸಹೋದರರಿದ್ದರು. ಇವರ ಪೈಕಿ ಸುಬಂಧು ಎಂಬುವವನು ಸುಪ್ರಸಿದ್ಧನಿದ್ದನು. ಆದ್ದರಿಂದ ಈ ಸುಬಂಧು ಎಂಬುವ ಪುರೋಹಿತನನ್ನು ಅಸೂಯಾಳುಗಳಾದ ಬೇರೆ ಇಬ್ಬರು ಪುರೋಹಿತರು ಕೊಲ್ಲಬೇಕೆಂಬುದ್ದೇಶದಿಂದ ಅಭಿಚಾರ ಕರ್ಮವನ್ನಾಚರಿಸಿ ಆ ಸುಬಂಧು ಎಂಬ ಬ್ರಾಹ್ಮಣನನ್ನು ಕೊಂದುಬಿಟ್ಟರು. ಆಗ ‹‹ಯತ್ತೇಯಮಂ›› ಎಂಬುವದರಿಂದ ಮಿಕ್ಕ ಮೂರುಜನ ಸಹೋದರರು ಆ ಸುಬಂಧುವಿನನ್ನು ಬದುಕಿಸಿದರು. ಎಂಬುವ ಆಖ್ಯಾಯಿಕೆಯಿಂದ ಆತ್ಮಪ್ರತಿಬಿಂಬದಿಂದ ಕೂಡಿದ ಮನಸ್ಸು ಯಮಲೋಕ ಚಂದ್ರಲೋಕ ಸೂರ್ಯಲೋಕಾದಿಗಳಿಗೆ ಗಮಿಸುತ್ತದಲ್ಲದೆ ಶುದ್ಧಾಂತರಾತ್ಮನು ಗಮಿಸುವದಿಲ್ಲವೆಂದು ಸ್ಪಷ್ಟವಾಗುತ್ತದಾದ್ದರಿಂದ ಜೀವನೆಂದರೆ ಬ್ರಹ್ಮರೂಪವಾದ ಆತ್ಮನ ಪ್ರತಿಬಿಂಬವೆಂದು ಹೇಳಬೇಕು. ಚಿಚ್ಛಕ್ತಿ ಸಂಕೋಚಚಿತ್ತವು ಅತ್ಯಲ್ಪವಿರುವದರಿಂದ ಅದರಲ್ಲಿ ಬೃಹದ್ರೂಪವಾದ ಪರಶಿವ ಬ್ರಹ್ಮವು ಸೇರಲಾರದು. ಆದ್ದರಿಂದ ದೂರದಲ್ಲಿರುವ ಯಮಲೋಕಕ್ಕೆ ಮನಸ್ಸು ಗಮಿಸಿತು. ಎಂಬುವ ಶ್ರುತಿಯು ನಿನ್ನ ಮತದಲ್ಲಿ ಸಮಂಜಸವಾಗುವದಿಲ್ಲ. ಹಾಗಾದರೆ ಎಲೈ ಪ್ರತಿಬಿಂಬವಾದಿಯೇ ? ನಿನ್ನ ಮತದಲ್ಲಿ ಹೇಗೆ ಸಂಗತವಾಗುತ್ತದೆ ಹೇಳು? ಶಕ್ತಿ ವಿಶಿಷ್ಟವಾದಿಯಾದ ಎಲೈ ವೀರಶೈವನೇ ? ಬ್ರಹ್ಮವು ಬೃಹದ್ರೂ

ಪವಾಗಿದ್ದರೂ ಅದರ ಪ್ರತಿಬಿಂಬವು ಸೂಕ್ಷ್ಮವಾದ ಚಿತ್ತವೆಂಬ ಉಪಾಧಿಯಲ್ಲಿ ಸೇರುತ್ತದೆ. ಸೂರ್ಯನು ಅತಿ ವಿಶಾಲನಾಗಿದ್ದರೂ ಚಿಕ್ಕದಾದ ಸ್ವಚ್ಛಮಡುವಿನಲ್ಲಿ ಅವನ ಪ್ರತಿಬಿಂಬವು ಕಾಣುವದು. ಗಜವು ದೊಡ್ಡದಾಗಿದ್ದರೂ ಅದರ ಪ್ರತಿಬಿಂಬವು ಸಣ್ಣದಾದ ಕನ್ನಡಿಯಲ್ಲಿ ಕಂಡುಬರುವದು. ಇದರಂತೆ ಬ್ರಹ್ಮವು ಸರ್ವತ್ರಪೂರ್ಣವಾಗಿದ್ದರೂ ಅದರ ಪ್ರತಿಬಿಂಬವು ಚಿಕ್ಕದಾದ ಮನಸ್ಸಿನಲ್ಲಿ ಇರಬಹುದಲ್ಲವೆ? ಪೂರ್ಣವಾದ ಬ್ರಹ್ಮಕ್ಕೆ ನೀನೇ ಪ್ರತಿಬಿಂಬವನ್ನು ಮಾನಿಸದಿದ್ದರೆ ಜೀವನಿಂದ ಕೂಡಿದ ಮನಸ್ಸು ಯಮಲೋಕಕ್ಕೆ ಗಮಿಸುವದೆಂದು ಮೇಲೆ ಉದಾಹರಿಸಿದ ಶ್ರುತಿಗೆ ಗತಿಯೇನು? ಅಂದರೆ ಎಲೈ ಪ್ರತಿಬಿಂಬವಾದಿಯೇ! ಹಿಂದೆ ಪರಶಿವನು ತನ್ನ ವಿಚಿತ್ರಶಕ್ತಿಯಿಂದ ಅನೇಕರೂಪನಾಗುವನೆಂದು ಹೇಳಿದ್ದೇನೆ. ಪರಶಿವ ಬ್ರಹ್ಮವು ವಿಚಿತ್ರಶಕ್ತಿಯುಳ್ಳದ್ದಾದ್ದರಿಂದ ತನ್ನ ಶಕ್ತಿಯ ಮಹಿಮಾತಿಶಯದಿಂದ ಅಣುರೂಪ ಜೀವನೆನಿಸಿ ಅಣುರೂಪ ಚಿತ್ತದಲ್ಲಿ ಶೇರುವನು. "ಅಣೋರಣೀಯಾನ್ ಮಹತೋಮಹೀಯಾನ್" ಎಂಬುವ ಶ್ರುತಿಯಿರುವದು. ಆದ್ದರಿಂದ ಮೇಲೆ ಹೇಳಿದ ಯುಕ್ತಿಗೆ ವಿರೋಧವಾಗುವದಿಲ್ಲ. ಎಲೈ ಪ್ರತಿಬಿಂಬವಾದಿಯೇ? ಲೋಕದಲ್ಲಿ ರೂಪವುಳ್ಳ ಪದಾರ್ಥದ ಪ್ರತಿಬಿಂಬವು ಸಂಭವಿಸುತ್ತದೆ. ರೂಪವಿಲ್ಲದ ಪದಾರ್ಥವು ಪ್ರತಿಬಿಂಬಿಸಲಾರದು. ಕನ್ನಡಿಯಲ್ಲಿ ರೂಪವುಳ್ಳ ಮುಖದ ಪ್ರತಿಬಿಂಬವು ಕಂಡುಬರುವಂತೆ ರೂಪವಿಲ್ಲದ ವಾಯು ಮೊದಲಾದವುಗಳ ಪ್ರತಿಬಿಂಬವು ಕಾಡುಬರುವದಿಲ್ಲ. ಆದ್ದರಿಂದ ರೂಪವಿಲ್ಲದ ಬ್ರಹ್ಮದ ಪ್ರತಿಬಿಂಬವು ಅಂತಃಕರಣದಲ್ಲಿ ಸಂಗತವಾಗಲಾರದು. ಎಲೈ ಶಕ್ತಿ ವಿಶಿಷ್ಟಾದ್ವೈತವಾದಿಯೆ ರೂಪವಿಲ್ಲದ ಆಕಾಶವು ಸ್ವಚ್ಛಮಡುವಿನಲ್ಲಿ ಪ್ರತಿಬಿಂಬಿಸುವಂತೆ ರೂಪವಿಲ್ಲದ ಬ್ರಹ್ಮವು ಅಂತಃಕರಣದಲ್ಲಿ ಪ್ರತಿಬಿಂಬಸಬಹುದಲ್ಲವೆ? ಪ್ರತಿಬಿಂಬವಾದಿಯೆ "ದೃಷ್ಟಾನುಸಾರೇಣಕಲ್ಪನಾ" ಎಂಬದಾಗಿ ನ್ಯಾಯವಿರುವದರಿಂದ ರೂಪವಿಲ್ಲದ ಆಕಾಶವು ಪ್ರತಿಬಿಂಬಿಸುವದೆಂಬುವದೇ ಅಯುಕ್ತವು. ಅಂದಮೇಲೆ ರೂಪವಿಲ್ಲದ ಆಕಾಶದಂತೆ ಬ್ರಹ್ಮವು ಪ್ರತಿಬಿಂಬಿಸುವದೆಂಬ ಮಾತು ಅತ್ಯಯುಕ್ತವೇಸರಿ. ಜಲದಲ್ಲಿ ಆಕಾಶ ಪ್ರತಿಬಿಂಬದ ಪ್ರತೀತಿಯು ಭ್ರಾಂತಿರೂಪವೆಂದು ಹೇಳಬೇಕೆ ಹೊರತು ಯಥಾರ್ಥವೆಂದು ಹೇಳಲಾಗದು. ಜಲದಲ್ಲಿ ರೂಪಸಹಿತನೂ, ಮೂರ್ತಸ್ವರೂಪನೂ ಆದ ಸೂರ್ಯನ ಪ್ರಕಾಶದ ಪ್ರತಿಬಿಂಬವೆಂದು ಹೇಳತಕ್ಕದ್ದು ಯೋಗ್ಯವಾಗಿದೆಯಲ್ಲದೆ ಆಕಾಶದ ಪ್ರತಿಬಿಂಬವೆಂದು ಹೇಳುವದು ಯೋಗ್ಯವಲ್ಲ. ರೂಪವಿಲ್ಲದ ಆಕಾಶವೇ ಪ್ರತಿಬಿಂಬಿಸುವದೆಂದು ನೀನು ಹಟವಾತವಾಗಿ

ಹೇಳುವಪಕ್ಷದಲ್ಲಿ ಜಲದಲ್ಲಿ ರೂಪವಿಲ್ಲದ ವಾಯುವಿನ ಪ್ರತಿಬಿಂಬವನ್ನಾದರೂ ಅಂಗೀಕರಿಸಬೇಕಾದೀತು. ಇದಲ್ಲದೆ ಮಾಯೆಯಲ್ಲಿ ಬ್ರಹ್ಮದ ಪ್ರತಿಬಿಂಬವೇ ಈಶ್ವರನೆಂದು ಹೇಳುವದು ಕೂಡಾ ಯುಕ್ತವಲ್ಲ ? ಹೇಗಂದರೆ ಯಾವದರಲ್ಲಿ ಯಾವದದೆಯೋ ಅದರಲ್ಲಿ ಅದರ ಪ್ರತಿಬಿಂಬವು ಇಲ್ಲವೆಂದು ನಿಯಮ ಉಂಟು. ದರ್ಪಣದಲ್ಲಿ ದರ್ಪಣದ ರೇಖೆ ಇರುವದರಿಂದ ಆ ದರ್ಪಣದಲ್ಲಿ ಆ ರೇಖೆಯ ಪ್ರತಿಬಿಂಬವಿಲ್ಲವಷ್ಟೆ ? ಸಂಪೂರ್ಣವಾಗಿ ಜಲದಲ್ಲಿ ಮುಳುಗಿರುವ ಮುಖದ ಪ್ರತಿ ಬಿಂಬವು ಆ ಜಲದಲ್ಲಿ ಕಂಡುಬರುವದಿಲ್ಲವಷ್ಟೆ ? ಇದರಂತೆ ಸರ್ವಗತವಾದ ಬ್ರಹ್ಮದ ಪ್ರತಿಬಿಂಬವು ಸರ್ವಗತವಾದ ಮಾಯೆಯಲ್ಲಿ ಹೇಳುವದು ಅನುಭವ ವಿರುದ್ಧವು. ಮಾಯೆಗೂ ಬ್ರಹ್ಮಕ್ಕೂ ಸರ್ವದಾ ದರ್ಪಣರೇಖೆಗಳಂತೆಯೂ, ಜಲಕ್ಕೂ ಜಲದಲ್ಲಿ ಪ್ರವಿಷ್ಟವಾದ ಮುಖದಂತೆಯೂ, ಸಂಬಂಧವಿರುವದರಿಂದ ಮಾಯೆಯಲ್ಲಿ ಬ್ರಹ್ಮವು ಪ್ರತಿಬಿಂಬಿಸಲಾರದು. ಇದಲ್ಲದೆ "ಗುಹಾಪ್ರವಿಷ್ಟಾ ಪರಮೇಪರಾರ್ಧೇ" ಎಂಬುವ ಶ್ರುತಿಯಿಂದಲೂ "ಗುಹಾಂ ಪ್ರವಿಷ್ಟಾವಾತ್ಮಾನೌ ಹಿತದ್ದರ್ಶನಾತ್" ಎಂಬುವ ಬ್ರಹ್ಮಸೂತ್ರದಿಂದಲೂ ಜೀವೇಶ್ವರರುಗಳಿಗೆ ಒಂದೇ ಒಂದು ಸ್ಥಾನವು ನಿರ್ಣಯಿಸಲ್ಪಟ್ಟಿರುವದು. ಬ್ರಹ್ಮರೂಪನಾದ ಈಶ್ವರನಿಗೂ, ಜೀವನಿಗೂ ಬಿಂಬ ಪ್ರತಿಬಿಂಬಭಾವವನ್ನು ಹೇಳಿದರೆ ಮೇಲೆ ಹೇಳಿದ ಶ್ರುತಿ ಸೂತ್ರಗಳಿಗೆ ವಿರುದ್ಧವಾಗುವದು. ಲೋಕದಲ್ಲಿ ಕನ್ನಡಿಯಲ್ಲಿ ಪ್ರತಿಬಿಂಬವೂ, ಮತ್ತೊಂದು ಕಡೆಯಲ್ಲಿ ಬಿಂಬರೂಪವಾದ ಮುಖವೂ, ಇರುತ್ತವೆಂದು ಬಾಲಕರು ಕೂಡಾ ತಿಳಿಯುತ್ತಾರೆ. ಆ ಬಿಂಬರೂಪನಾದ ಪರಮಾತ್ಮನ ಪ್ರತಿಬಿಂಬವೆ ಜೀವನೆಂದು ಹೇಳುವ ನೀನು ಒಂದೇಕಡೆಯಲ್ಲಿ ಬಿಂಬ ಪ್ರತಿಬಿಂಬಗಳನ್ನು ಹೇಳಬೇಕಾಗುವದು. ಲೋಕವಿರುದ್ಧವಾಗಿ ಒಂದೇ ಕಡೆಯಲ್ಲಿ ಬಿಂಬ ಪ್ರತಿಬಿಂಬಗಳನ್ನು ಹೇಳಲಾಗುವದಿಲ್ಲವೆಂದು ಅಂದರೆ ಜೀವಾತ್ಮ ಪರಮಾತ್ಮರುಗಳಿಗೆ ಒಂದೇ ಸ್ಥಾನವನ್ನು ಹೇಳುವ ಮೇಲೆಉದಾಹರಿಸಿದ ಶ್ರುತಿ ಸೂತ್ರಗಳಿಗೆ ಗತಿಯೇನು ? ಅವು ಅಪ್ರಮಾಣಗಳಾಗಲಾರವಷ್ಟೆ. ಅವು ಪ್ರಮಾಣಗಳೆಂದರೆ ಪರಮಾತ್ಮ ಜೀವಾತ್ಮರುಗಳಿಗೆ ಬಿಂಬ ಪ್ರತಿಬಿಂಬ ಭಾವವೆಂಬುವ ನಿನ್ನ ಮತವು ಆದರಣೀಯವಲ್ಲವೆಂದು ಸಿದ್ಧವಾಗುವದು ಇದಲ್ಲದೆ ಮಾಯೆಯಲ್ಲಿ ಬ್ರಹ್ಮದ ಪ್ರತಿಬಿಂಬವೇ ಈಶ್ವರನೆಂತಲೂ ಅವಿದ್ಯೆಯಲ್ಲಿ ಅಥವಾ ಅಂತಃಕರಣದಲ್ಲಿ ಬ್ರಹ್ಮ ಪ್ರತಿಬಿಂಬವೆ ಜೀವನೆಂತಲೂ ಹೇಳುವ ನೀನು ಮಾಯಾ ಮತ್ತು ಅವಿದ್ಯಾ ಇವುಗಳ ನಾಶವೇ ಮೋಕ್ಷವೆಂದು ಹೇಳಬೇಕಾಗುವದು. ಹೀಗೆ ಹೇಳಿದರೆ

ಜೀವೇಶ್ವರನಾಶವೇ ಮೋಕ್ಷವೆಂದು ಪರ್ಯವಸನ್ನವಾಗುವದು. ಜೀವೇಶ್ವರ ನಾಶವನ್ನು ಒಪ್ಪಿದರೆ ಪಾಷಂಡರಾದ ಬೌದ್ಧಾದಿಗಳ ಮತಪ್ರವೇಶವಾಗುವದು ಜೀವೇಶ್ವರ ನಾಶವೇ ಮೋಕ್ಷವೆಂಬುವ ಪಕ್ಷದಲ್ಲಿ ಮೋಕ್ಷವು ಪುರುಷಾರ್ಥವೆನಿಸಲಾರದು. ''ಆತ್ಮ ಹನನಮಪುರುಷಾರ್ಥಃ'' ಎಂಬುದಾಗಿ ಇರುವದರಿಂದ ಆತ್ಮಶಬ್ದವಾಚ್ಯರಾದ ಜೀವೇಶ್ವರರುಗಳ ನಾಶವು ಪುರುಷಾರ್ಥವೆನಿಸಲಾರದು. ಜೀವೇಶ್ವರರುಗಳು ಕನ್ನಡಿಯಲ್ಲಿ ಪ್ರತಿಫಲಿತವಾದ ಅಗ್ನಿಯಂತೆ ಮಿಥ್ಯಾಭೂತರಾದ್ದರಿಂದ ಲೋಕದಲ್ಲಿ ಯಾವನೂ ಪಾರಲೌಕಿಕ ಪ್ರಯತ್ನವನ್ನು ಮಾಡಬಾರದಾದೀತು, ಎಲ್ಲರೂ ಐಹಿಕ ಪ್ರವೃತ್ತಿಯುಳ್ಳವರಾಗಬೇಕು, ಮುಮುಕ್ಷುವು ಮೋಕ್ಷಕ್ಕಾಗಿ ಪ್ರಯತ್ನಮಾಡದೆ ಇರಬೇಕು, ಸರ್ವರೂ ಪ್ರವೃತ್ತಿಮಾರ್ಗದಲ್ಲಿಯೇ ಇರಬೇಕು. ನಿವೃತ್ತಿಮಾರ್ಗದ ಉಚ್ಛೇದವೇ ಆಗಬೇಕು. ಇದಲ್ಲದೆ ವಿಹಿತ ನಿಷಿದ್ಧ ಕರ್ಮಗಳಿಗೆ ಮಿಥ್ಯಾತ್ವವು ಸಮಾನವಾಗಿರುವದರಿಂದ ಯಾವ ವಿಹಿತ ಕರ್ಮಗಳಲ್ಲಿಯೂ ಯಾರೂ ಪ್ರವರ್ತಿಸದೆ ಹೋಗಬೇಕು. ಹಾಗಾದರೆ ಸನ್ಮಾರ್ಗದ ಉಚ್ಛೇದವೇ ಆಗುವದು. ಜೀವನು ಪ್ರತಿಬಿಂಬರೂಪನಾದ್ದರಿಂದ ಮಿಥ್ಯಾಭೂತನು. ಇವನಿಗೆ ತತ್ವಮಸಿ ಎಂಬಲ್ಲಿ ಸತ್ಯವಾದ ಆ ಬ್ರಹ್ಮವೇ ನೀನಿದ್ದೀ ಎಂದು ಹೇಳುವದು ಸಂಗತವಾಗಲಾರದು. ಶ್ರುತಿಯು ''ಸ ಆತ್ಮಾ'' ಇತ್ಯಂತ ಗ್ರಂಥದಿಂದ ತತ್ತ್ವಂ ಪದಾರ್ಥಗಳನ್ನು ನಿರೂಪಿಸಿ, ಸ ''ತತ್ವಮಸಿ'' ಎಂದು ಹೇಳಿದ್ದರೆ ಸಂಗತವಾಗುತ್ತಿತ್ತು. ಹೀಗೆ ನಿಜ ಘಟಿತವಾಗಿ ಆ ವಾಕ್ಯವಿಲ್ಲದಿರುವದರಿಂದ ಪ್ರತಿಬಿಂಬವಾದದಲ್ಲಿ ಆ ವಾಕ್ಯಕ್ಕೆ ಸಾಂಗತ್ಯವು ಹೇಗೆ ? ಎಲೈ ಶಿವಾದ್ವೈತಿಯೇ ? ನಮ್ಮ ಪ್ರತಿಬಿಂಬವಾದವಾದರೂ ಶ್ರುತಿ ಯುಕ್ತ್ಯನುಭವಗಳಿಗೆ ವಿರುದ್ಧವಾಗಿದ್ದ ಪಕ್ಷದಲ್ಲಿ ಶ್ರುತಿಯು ಈ ಪ್ರತಿಬಿಂಬವಾದವನ್ನು ಸಮರ್ಥನಗೊಳಿಸಬಾರದಷ್ಟೆ ? ನೋಡು ''ಮಾಯಾಭಾಸೇನ ಜೀವೇಶೌಕರೋತಿ'' ಎಂಬುವ ವಾಕ್ಯದಿಂದ ಜೀವೇಶ್ವರರುಗಳಿಗೆ ಕಲ್ಪಿತತ್ವವನ್ನು ಹೇಳಿದ್ದು ಹೇಗೆ ಯುಕ್ತವಾಗುವದು ? ಈ ಶ್ರುತಿಯು ಚಿದಾಭಾಸಸ್ವರೂಪದಿಂದ ಜೀವೇಶ್ವರರನ್ನು ಮಾಯೆಯು ಮಾಡುತ್ತದೆ. ಎಂದು ಹೇಳುತ್ತದೆ. ಚಿದಾಭಾಸವೆಂದರೆ ಚಿದ್ಬ್ರಹ್ಮದ ಪ್ರತಿಬಿಂಬವು ಅರ್ಥಾತ್ ಮಾಯೆಯು ಆ ಬ್ರಹ್ಮದ ಪ್ರತಿಬಿಂಬದಿಂದಲೇ ಜೀವನನ್ನೂ, ಈಶ್ವರನನ್ನೂ ಮಾಡುತ್ತದೆ ಎಂದು ಆ ಶ್ರುತ್ಯರ್ಥವು ಎಲೈ ಪ್ರತಿಬಿಂಬವಾದಿಯೇ ಈ ಪ್ರಕಾರವಾಗಿ ನೀನು ಆ ಶ್ರುತಿಯ ಅರ್ಥವನ್ನು ಮಾಡಿದರೆ ಜೀವೇಶ್ವರರಿಗೆ ಜನ್ಯತ್ವವನ್ನು ಹೇಳಬೇಕಾಗುವದಲ್ಲವೆ ? ಹೌದು ಅದ

ರಿಂದೇನು ಕ್ಷತಿಯು ಅಂದರೆ ‹‹ಜ್ಞಾಜ್ಞಾವಜಾವೀಶಾನೀಶೌ›› ಇವೇ ಮೊದಲಾದ ಜೀವೇಶ್ವರರಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗಳಿಗೆ ವಿರುದ್ಧವಾಗುವದು, ಆದ್ದರಿಂದ ‹‹ಮಾಯಾಭಾಸೇನ›› ಎಂಬುವ ಶ್ರುತಿಗೆ ಪ್ರತಿಬಿಂಬವಾದಪರವಾಗಿ ಅರ್ಥಮಾಡಬಾರದು. ಹಾಗಾದರೆ ಅದರ ಅರ್ಥವನ್ನು ಎಲೈ ಶಿವಾದ್ವೈತಿಯೇ ? ನೀನು ಹೇಗೆ ಮಾಡುವಿ? ಅಂದರೆ ಪ್ರತಿಬಿಂಬವಾದಿಯೇ ಕೇಳು. ಮಾಯಾ ಅಂದರೆ ಶಿವನಲ್ಲಿ ಅವಿನಾ ಭಾವದಿಂದ ಇರತಕ್ಕ ಶಕ್ತಿಯು. ಆಭಾಸೇನ ಆ ಪರಶಿವನ ಸಮಗ್ರ ಪ್ರಕಾಶದಿಂದ, ಜೀವೇಶೌ ಜೀವೇಶ್ವರರನ್ನು ಕರೋತಿ ಪ್ರಕಟಿಸುತ್ತದೆ. ಎಂಬ ಅರ್ಥವು. ಎಲೈ ಶಿವಾದ್ವೈತಿಯೇ ? ಮಾಯಾಶಬ್ದಕ್ಕೆ ಯಾಮಾ ಸಾ ಮಾಯಾ ಎಂಬುವದರಿಂದ ಯಾವದು ಮಿಥ್ಯಾಭೂತವಾದದ್ದೋ ಅದು ಮಾಯೆಯಂದು ಅರ್ಥವಾಗುವದರಿಂದ ಜ್ಞಾನದಿಂದ ನಿವರ್ತ್ಯವಾದ ಅಧ್ಯಾಸಾತ್ಮಕವಾದ ಅವಿದ್ಯಾ ಶಕ್ತಿಯೇ ಮಾಯಾಪದದಿಂದ ಹೇಳಿಸಿಕೊಳ್ಳಲು ಯೋಗ್ಯವಲ್ಲದೆ ಶಿವನಲ್ಲಿ ಅವಿನಾಭಾವದಿಂದ ಇರತಕ್ಕ ಶಕ್ತಿಯು ಮಾಯಾಶಬ್ದಕ್ಕೆ ಅರ್ಥವಲ್ಲ. ಅಂದರೆ ಪ್ರತಿಬಿಂಬವಾದಿಯೇ ? ‹‹ಮಶ್ಯಂಭೌಧಾತರಿಚಂದ್ರೈ›› ಎಂದು ನಿಘಂಟು ಇರುವದರಿಂದಲೂ ಪ್ರಣವಾರ್ಥ ವಿವರಣದಲ್ಲಿ ‹‹ಅಕಾರೋಬ್ರಹ್ಮಾ ಉಕಾರೋ ವಿಷ್ಣುರ್ಮಕಾರೋರುದ್ರಃ›› ಎಂದು ಶ್ರುತಿಯೂ ಕೂಡ ಅಕಾರಕ್ಕೆ ಬ್ರಹ್ಮನೆಂತಲೂ, ಉಕಾರಕ್ಕೆ ವಿಷ್ಣುವೆಂತಲೂ, ಮಕಾರಕ್ಕೆ ರುದ್ರನೆಂತಲೂ, ಹೇಳಿರುವದರಿಂದಲೂ ಮಾಯಾಶಬ್ದದಲ್ಲಿರುವ ಮಕಾರಕ್ಕೆ ಪರಶಿವನೆಂದು ಅರ್ಥಮಾಡಬೇಕು. ಹೀಗೆ ಮಾಡಿದರೆ ಮಂ ಪರಶಿವನನ್ನು ಅಯತಿ ಹೊಂದುತ್ತದೆ. ಅಯಪಯಗತೌ ಎಂಬುವಧಾತುವಿರುವದರಿಂಡ ಆ ಪರಶಿವನನ್ನು ಯಡಬಿಡದೆ ಹೊಂದಿಕೊಂಡು ಇರತಕ್ಕದ್ದು ಯಾವದುಂಟೊ? ಅದು ಮಾಯೆಯಂದು ಅರ್ಥಮಾಡಬೇಕು. ನಿನ್ನ ಅಧ್ಯಾಸಾತ್ಮಕ ಅವಿದ್ಯಾಶಕ್ತಿಗೆ ಉತ್ತರಕಾಲದಲ್ಲಿ ನಾಶವನ್ನು ಹೇಳುವದರಿಂದ ಮಾಯಾ ಶಬ್ದಕ್ಕೆ ‹‹ಮಂ ಶಿವಂ›› ಅಯತಿ ಗಚ್ಛತಿ ಸಾಮಃ ತತ್ರಶಿವೆ ಅವಿನಾಭಾವ ಸಂಬಂಧೇನ ವರ್ತತೆ›› ಎಂಬುವ ವ್ಯುತ್ಪತ್ತಿಗನುಸಾರವಾಗಿ ನಿನ್ನ ಮಿಥ್ಯಾಭೂತವಾದ ಅವಿದ್ಯಾಶಕ್ತಿಯು ಮಾಯಾಶಬ್ದಕ್ಕೆ ಅರ್ಥವಲ್ಲಾ. ಕಿಂತು ಪುಷ್ಪದಲ್ಲಿ ಗಂಧದಂತೆಯೂ, ಪ್ರಭಾಕರನಲ್ಲಿ ಪ್ರಭೆಯಂತೆಯೂ, ನಾನು ಹೇಳಿದ ಪರಶಿವನ ಸ್ವಾಭಾವಿಕವಾದ ಶಕ್ತಿಯೇ ಮಾಯಾಶಬ್ದಾರ್ಥವೆಂದು ತಿಳಿಯಬೇಕು. ಎಲೈ ಶಿವಾದ್ವೈತಿಯೇ ? ಪ್ರತಿಬಿಂಬವಾದವು ಶ್ರುತಿಸಿದ್ಧವಾಗದಿದ್ದರೆ ‹‹ಏಕಧಾ ಬಹುಧಾಚೈವ ದೃಶ್ಯತೆ ಜಲಚಂದ್ರ

ವತ್" ಎಂಬ ಶ್ರುತಿಗೆ ಏನು ವ್ಯವಸ್ಥೆ ಮಾಡುವಿ. ಇದರಿಂದ ಆಕಾಶದಲ್ಲಿ ಚಂದ್ರನು ಒಬ್ಬನಾಗಿದ್ದರೂ ಅನಂತ ಜಲದಮಡುಗಳಲ್ಲಿ ಪ್ರತಿಬಿಂಬಿಸಿದ ಚಂದ್ರನು ಅನೇಕ ರೂಪನಾಗಿರುವಂತೆ ಬ್ರಹ್ಮವು ಅದ್ವಿತೀಯವಾಗಿದ್ದರೂ ಅನೇಕ ಅಂತಃಕರಣಗಳಲ್ಲಿ ಪ್ರತಿಬಿಂಬಗಳು ಅನೇಕಗಳಾಗಿರುವದರಿಂದ ಅನೇಕ ರೂಪವಾಗುವದು. ಎಂಬರ್ಥವುಳ್ಳ ಈ ಶ್ರುತಿಯು ಪ್ರತಿಬಿಂಬವಾದವನ್ನೇ ಸಮರ್ಥನಮಾಡುತ್ತದೆ. ಅಲ್ಲದೆ "ರೂಪಂ ರೂಪಂ ಪ್ರತಿರೂಪೋಬಭೂವ" "ಇಂದ್ರೋ ಮಾಯಾಭಿಃ ಪುರುರೂಪಃ" ಈ ಶ್ರುತಿಗಳಿಂದಲೂ ಕೂಡ ಪ್ರತಿಬಿಂಬವಾದವು ಸಿದ್ಧವಾಗುತ್ತಿರಲು ಅದು ಶ್ರುತಿಸಿದ್ಧವಲ್ಲವೆಂದು ಹೇಳುವದು ಅಯುಕ್ತವು. ಅಂದರೆ ಎಲೈ ಪ್ರತಿಬಿಂಬವಾದಿಯೇ ಶಿವನೊಬ್ಬನೇ ತನ್ನ ಶಕ್ತಿಯ ಮಹಿಮೆಯಿಂದ ಅನೇಕ ರೂಪನಾಗುವನೆಂದು ಹಿಂದೆ ಪರಿಣಾಮವಾದದಲ್ಲಿ ಹೇಳಿರುವದರಿಂದ "ರೂಪಂ ರೂಪಂ ಪ್ರತಿರೂಪೋಬಭೂವ" ಎಂಬುವ ಆಯಾಯ ಉಪಾಧಿರೂಪಗಳನ್ನು ಕುರಿತು ತನ್ನ ಮೊದಲಿನ ಸರ್ವಜ್ಞತ್ವಾದಿ ಸ್ವರೂಪಕ್ಕೆ ಬದಲಾಗಿ ಕಿಂಚಿಜ್ಞತ್ವಾದಿ ಸ್ವರೂಪ ಉಳ್ಳವನಾಗುವನೆಂಬುವ ಅರ್ಥವುಳ್ಳ ಶ್ರುತಿಗೂ ಪರಮೇಶ್ವರನು ತನ್ನ ಮಾಯೆಗಳಿಂದ ಬಹುರೂಪನಾಗುವನೆಂಬುವ ಅರ್ಥವುಳ್ಳ "ಇಂದ್ರೋಮಾಯಾಭಿಃ ಪುರುರೂಪಃ" ಎಂಬುವ ಶ್ರುತಿಗೂ ವಿರೋಧವಿಲ್ಲ. ಎಲೈ ಶಿವಾದ್ವೈತಿಯೇ? ಶಂಕರಾಚಾರ್ಯರು ತಮ್ಮ ಶತಶ್ಲೋಕಿಎಂಬ ಗ್ರಂಥದಲ್ಲಿ ಈ ಶ್ರುತಿಗಳಿಗೆ ಪ್ರತಿಬಿಂಬದ ಪರವಾಗಿ ಅರ್ಥಮಾಡಿರುವರು. ಅಲ್ಲದೆ ಆಶತಶ್ಲೋಕೀ ಟೀಕಾಕಾರರಾದ ಆನಂದಗಿರಿಯವರೂ ಕೂಡ ಪ್ರತಿಬಿಂಬಪರವಾದ ಅರ್ಥವನ್ನೇ ಬರೆದಿರುವರು. ಆದ್ದರಿಂದ ಈ ಶ್ರುತಿಗಳು ಪ್ರತಿಬಿಂಬ ವಿಷಯಕಗಳಲ್ಲವೆಂಬುವದು ಸರಿಯಲ್ಲ. ಆದರೆ ಎಲೈ ಪ್ರತಿಬಿಂಬವಾದಿಯೇ ಜೀವಬ್ರಹ್ಮರುಗಳಿಗೆ ಪ್ರತಿಬಿಂಬವಾದವನ್ನು ಒಪ್ಪಿದರೆ ಮೇಲೆ ಹೇಳಿದ ಗುಹಾಧಿಕರಣಕ್ಕೆ ವಿರೋಧವಾಗುವದಲ್ಲದೆ ಸತ್ಯಜ್ಞಾನಾತ್ಮಕೋನಂತೊ ವಿಭುರಾತ್ಮಾ ಮಹೇಶ್ವರಃ। ತಸ್ಯೈವಾಂಶೋ ಜೀವಲೋಕೋ ಹೃದಯೇ ಪ್ರಾಣಿನಾಂಸ್ಥಿತಃ ॥ ವಿಸ್ಫುಲಿಂಗಾಯಥಾವಹ್ನೇರ್ಜಾಯಂತೆ ಕಾಷ್ಟಯೋಗತಃ। ಅನಾದಿವಾಸನಾಯುಕ್ತಾಕ್ಷೇತ್ರಜ್ಞಾ ಇತಿತೇಸ್ಮೃತಾಃ ॥ ಅಂದರೆ ಸತ್ಯಸ್ವರೂಪನೂ ಜ್ಞಾನಾತ್ಮಕನೂ ತ್ರಿವಿಧಪರಿಚ್ಛೇದರಹಿತನೂ ಆದ ಮಹೇಶ್ವರನ ಅಂಶವೇ ಜೀವಲೋಕವು. ಅಗ್ನಿಯ ದೆಶೆಯಿಂದ ಕಾಷ್ಟಗಳ ಸಂಸರ್ಗವಾಗಿ ಅಗ್ನಿಯಲ್ಲಿ ಅನಂತ ಕಣಗಳು ಹುಟ್ಟುವಂತೆ ಆ ಮಹೇಶ್ವರನ ದಶೆಯಿಂದ ಅನಾದಿವಾಸನೆ

ಯಿಂದ ಕೂಡಿದ ಕ್ಷೇತ್ರಜ್ಞರು (ಅಂದರೆ ಜೀವರು) ಹುಟ್ಟುವರೆಂದು ಹೇಳುವ ಶಿವಗೀತಾವಾಕ್ಯಕ್ಕೂ ವಿರೋಧವಾಗುವದು. ಅಲ್ಲದೆ ಈ ಪ್ರತಿಬಿಂಬವಾದವನ್ನು ನಿರಾಕರಣಮಾಡುವದಕ್ಕಾಗಿಯೆ ‹‹ಅಂಶೋ ನಾನಾವ್ಯಪದೇಶಾತ್›› ಎಂಬುವ ಅಧಿಕರಣವನ್ನು ಹೇಳಿರುವರು. ಆದ್ದರಿಂದ ಮೇಲೆ ಹೇಳಿದ ಶ್ರುತಿಗಳು ಪ್ರತಿಬಿಂಬ ವಿಷಯಕಗಳಲ್ಲ. ‹‹ಏಕಧಾ ಬಹುಧಾಚೈವ ದೃಶ್ಯತೆ ಜಲಚಂದ್ರವತ್›› ಎಂಬುವ ಶ್ರುತಿಯಾದರೂ ಪ್ರತಿಬಿಂಬವಾದವನ್ನು ಸಮರ್ಥನ ಮಾಡುವದಿಲ್ಲ. ‹‹ಗುಹಾಂಪ್ರ ವಿಷ್ಟಾವರಮೇಪರಾರ್ಧೇ›› ಇತ್ಯಾದಿ ಬಹುಶ್ರುತಿಯುಕ್ತ್ಯನುಭವವಿರುದ್ಧವಾಗಿ ಜೀವನಿಗೆ ಪ್ರತಿಬಿಂಬರೂಪವನ್ನು ಹೇಳುವ ಪಕ್ಷದಲ್ಲಿ ‹‹ಏಕಧಾಬಹುಧಾಚೈವ›› ಎಂಬುವ ಶ್ರುತಿಯೇ ಅಸಾಧುವೆನಿಸುವದು. ಅಥವಾ ‹‹ಸಹಿದೃಷ್ಟಾಂತೆ ಸರ್ವಸಂ ಭವಃ›› ಎಂಬುವ ನ್ಯಾಯದಿಂದ ಅಗ್ನಿಯ ಕಣಗಳಂತೆ ಅನೇಕ ರೂಪನಾಗುವ ನೆಂಬುವಲ್ಲಿ ಮಾತ್ರ ಶ್ರುತಿಯು ಜಲಚಂದ್ರನ ದೃಷ್ಟಾಂತವನ್ನು ಕೊಟ್ಟಿದೆಯೆಂದು ಹೇಳಬೇಕು. ಆದ್ದರಿಂದ ಜೀವನೂ ಈಶ್ವರನೂ ಬ್ರಹ್ಮ ಪ್ರತಿಬಿಂಬ ಸ್ವರೂಪರೆಂ ದು ಹೇಳುವ ಮತವು ಅಸಂಗತವು. ಅಲ್ಲದೆ ಅಂತಃಕರಣಾವಚ್ಛಿನ್ನಚೈತನ್ಯವೇ ಜೀವನೆಂದು ಹೇಳಿದರೆ ಘಟಪಟಾವಚ್ಛಿನ್ನಚೈತನ್ಯವು ಕೂಡ ಜೀವನೆನಿಸಬೇಕು. ಅಂತಃಕರಣವೂ ಜಡವೂ ಘಟಪಟಗಳೂ ಕೂಡ ಜಡಗಳಾಗಿವೆಯೆಂದಮೇಲೆ ಜಡವಾದ ಅಂತಃಕರಣಾವಚ್ಛಿನ್ನಚೈತನ್ಯವು ಜೀವನು ಜಡಗಳಾದ ಘಟಪಟಗ ಳಿಂದ ಅವಚ್ಛಿನ್ನ ಚೈತನ್ಯವು ಜೀವನಲ್ಲವೆಂಬುವಲ್ಲಿ ಯುಕ್ತಿಯಿಲ್ಲ. ಅಲ್ಲದೆ ಮಾ ಯಾವಚ್ಛಿನ್ನಚೈತನ್ಯವೇ ಈಶ್ವರನು. ಅಂತಃಕರಣಾವಚ್ಛಿನ್ನಚೈತನ್ಯವೇ ಜೀವನು ಎಂದು ಹೇಳಿದರೆ ಲೋಹಪಿಂಡಾವಚ್ಛಿನ್ನ ಸೂಚಿಕೆಯು ಆ ಲೋಹಪಿಂಡಾಧೀನ ವಾಗಿ ತನ್ನ ಕಾರ್ಯವನ್ನು ಮಾಡದಿರುವಂತೆ ಜೀವನೂ ಈಶ್ವರನೂ ಏನೂ ಕಾರ್ಯವನ್ನು ಮಾಡದೆ ಹೋಗಬೇಕು. ಇದಲ್ಲದೆ ‹‹ಜ್ಞಾಜ್ಞಾವಜಾವೀಶಾ ನೀಶೌ›› ಎಂಬುವಲ್ಲಿ ಜೀವನಿಗೆ ಅಜ್ಞತ್ವ ಪರತಂತ್ರತ್ವಗಳೂ, ಈಶ್ವರನಿಗೆ ಸರ್ವ ಜ್ಞತ್ವ ಸ್ವತಂತ್ರತ್ವಗಳೂ ಹೇಳಲ್ಪಡುತ್ತವೆ. ಸ್ವತಂತ್ರನು ನಿಯಾಮಕನೆಂತಲೂ, ಅಸ್ವತಂತ್ರನು ನಿಯಮ್ಯನೆಂತಲೂ ಲೋಕಪ್ರಸಿದ್ಧವಿರುವದರಿಂದ ಬಂದೇ ಒಂದು ಬ್ರಹ್ಮವು ಉಪಾಧಿಭೇದದಿಂದ ನಿಯಮ್ಯವೂ ನಿಯಾಮಕವೂ ಆಗಲಾರದು. ದೇವದತ್ತನೊಬ್ಬನೇ ಇದ್ದು ಗೃಹಾದಿ ಉಪಾಧಿ ಭೇದದಿಂದ ನಿಯಮ್ಯನೂ, ನಿಯಾಮಕನೂ ಆಗುವದಿಲ್ಲವಷ್ಟೆ? ಆದ್ದರಿಂದ ಅವಚ್ಛಿನ್ನವಾದವು ಕೂಡ ಅಯು ಕ್ತವೇ ಸರಿ. ಹಾಗಾದರೆ ಎಲ್ಲೈ ಶಿವಾದ್ವೈತಿಯೇ! ಜೀವನ ಸ್ವರೂಪವೇಂಥಾ

ದ್ವೆಂದು ಹೇಳುವಿ ? ಬ್ರಹ್ಮಾದ್ವೈತಿಯೇ ಪ್ರತಿಬಿಂಬವಾದದಮೇಲಿನ ನಿನ್ನ ಅಭಿಮಾನವನ್ನು ಬಿಟ್ಟು ಶುದ್ಧ ಮನಸ್ಸಿನಿಂದ ಕೇಳಿ ಧನ್ಯನಾಗು. "ಮಲಾವೃತಸ್ಸಂಸಾರಿ" ಎಂಬುವ ಶಿವಸೂತ್ರದಿಂದ ಆಣವ ಮಾಯಿಾಯ ಕಾರ್ಮಿಕಗಳೆಂಬ ಮೂರು ಮಲಗಳಿಂದ ಆವರಿಸಲ್ಪಟ್ಟಂಥವನೇ ಸಂಸಾರಿಯು (ಜೀವನು) ಎಂದು ಹೇಳುವೆನು. ಶಿವನ ಇಚ್ಛಾಜ್ಞಾನಕ್ರಿಯಾಶಕ್ತಿಗಳು ಸಂಕೋಚವನ್ನು ಹೊಂದುತ್ತಾ ಆಣವ ಮಾಯಿಾಯ ಕಾರ್ಮಿಕ ಮಲಸ್ವರೂಪಗಳಾದವು. ಇವುಗಳಿಂದ ಆ ಸಚ್ಚಿದಾನಂದ ಶಿವನು ಆವರಿಸಲ್ಪಟ್ಟವನಾಗಲು ಜೀವನೆನಿಸುವನು. ಆದ್ದರಿಂದಲೇ ಜೀವನು ನಾನು ಪೂರ್ಣನಲ್ಲವು, ನಾನು ಇದನ್ನು ತಿಳಿಯುವದಿಲ್ಲವು, ನಾನು ಪುಣ್ಯಪಾಪಗಳಿಂದ ಸುಖದುಃಖಗಳುಳ್ಳವನು, ಎಂಬದಾಗಿ ಮೂರು ಮಲಗಳ ಕಾರ್ಯವ್ಯವಹಾರವನ್ನು ಮಾಡುವೆನು. ಎಲೈ ಶಿವಾದ್ವೈತಿಯೇ ನೀನು ಮೊದಲು ಚಿತಿಶಕ್ತಿಯ ಸಂಕೋಚರೂಪವಾದ ಚಿತ್ತವಿಶಿಷ್ಟನೇ ಜೀವನೆಂದು ಹೇಳಿ, ಈಗ ಮಲಗಳಿಂದ ಕೂಡಿದವನೇ ಜೀವನೆಂದು ಹೇಳುತ್ತೀಯಲ್ಲ! ಇದು ಹೇಗೆ? ಅಂದರೆ ಕೇಳು. ಆ ಪರಶಿವನ ಸಂಕಲ್ಪ ಅಥವಾ ಅಂತಃಕರಣರೂಪವಾದ ಯಾವ ಚಿಚ್ಛಕ್ತಿಯುಂಟೋ ಅಂದರೆ ನಾನು ಸರ್ವಾತ್ಮಕನು, ನಾನು ಸರ್ವಾಧಿಕನು, ನಾನು ಸರ್ವತ್ರ ಪರಿಪೂರ್ಣನು ಎಂಬುವ ವೃತ್ತಿಗೆ ಕಾರಣವಾದ ಯಾವ ವಿಮರ್ಶ ಶಕ್ತಿಯುಂಟೋ ಆ ಶಕ್ತಿಯು ಸ್ವಸ್ಥಾನದಿಂದ ವಿಭಕ್ತವಾಗಿ ಸಂಕೋಚಸ್ಥಿತಿಯನ್ನು ಹೊಂದಲಾಗಿ ಚಿತ್ತವೆನಿಸುವದು. ಈ ಚಿತ್ತವು ನಾನು ಸರ್ವಾತ್ಮಕನಲ್ಲ, ನಾನು ವಿಶ್ವಾಧಿಕನು ಅಲ್ಲ. ನಾನು ಸರ್ವತ್ರ ಸಂಪೂರ್ಣನೂ ಅಲ್ಲ. ಎಂಬುವ ವೃತ್ತಿಗೆ ಕಾರಣವಾಗುತ್ತದೆ. ಈ ಚಿತ್ತಕ್ಕೇನೆ ಮಲವೆಂದೂ, ಆಣವ ಮಲವೆಂದೂ, ಅಖ್ಯಾತಿಯೆಂದೂ ಹೆಸರು. ಯಾಕಂದರೆ ತಾನು ಸರ್ವಜ್ಞತ್ವ ಸರ್ವಕರ್ತೃತ್ವಾದಿ ಗುಣಗಳುಳ್ಳವನಾದಾಗ್ಯೂ ಆ ಗುಣಗಳನ್ನು ಹ್ರಾಸಗೊಳಿಸಿ ಕಿಂಚಿಜ್ಞತ್ವರೂಪವಾದ ವಿದ್ಯಾತತ್ವವುಳ್ಳವನನ್ನಾಗಿಯೂ, ಕಿಂಚಿತ್ಕರ್ತೃತ್ವರೂಪವಾದ ಕಲಾತತ್ವವುಳ್ಳವನನ್ನಾಗಿಯೂ, ತಾನು ಸರ್ವತ್ರ ಪರಿಪೂರ್ಣನಾಗಿದ್ದರೂ ನಾನು ಪೂರ್ಣನಲ್ಲವೆಂಬುವ ಅಜ್ಞಾನವನ್ನು ಉಂಟುಮಾಡುವದಾದ್ದರಿಂದ ಅದಕ್ಕೆ ಆಣವಮಲವೆಂತಲೂ ಅಖ್ಯಾತಿಯೆಂತಲೂ ಹೇಳುವೆವು. ಈ ಚಿತ್ತರೂಪವಾದ ಆಣವ ಮಲವು ಮುಂದಿನ ಮಾಯಿಾಯ ಕಾರ್ಮಿಕ ಮಲಗಳಿಗೆ ಕಾರಣವಾಗಿರುವದರಿಂದ ಕಾರ್ಯಕಾರಣಗಳ ಅಭೇದ ದೃಷ್ಟಿಯಿಂದ ಚಿತಿಶಕ್ತಿಸಂಕೋಚರೂಪವಾದ ಚಿತ್ತವಿಶಿಷ್ಟನೆ ಜೀವನೆಂದು ಹೇಳಿದೆವು. ಇದರಿಂದ ಪೂರ್ವಾಪರ

ವಿರೋಧವೇನೂ ಆಗಲಿಲ್ಲ. (ಚಿತ್ತವೆಂದರೆ ಪ್ರಕೃತಿಯ ಕಾರ್ಯವಲ್ಲ. ಕಿಂತು ಮೂಲಾಖ್ಯಾತಿರೂಪವಾದ ಆಣವ ಮಲವೆಂದೂ, ಪ್ರಕೃತಿಯೆಂದೂ ತಿಳಿಯತಕ್ಕದ್ದು. ಆಣವ ಮಲವೇ ಅಖ್ಯಾತಿಯೆಂದು ಹೇಳುವ ವಿಷಯದಲ್ಲಿ "ಸರ್ವಜ್ಞತ್ವಾದಿ ಗುಣಾಪಹಸ್ತನೇನ ಅಖ್ಯಾತಿರೂಪಂ ಆಣವಂ ಮಲಂ ಆಪನ್ನಃ ಯೇನ ಘಟಾಕಾಶವತ್ ಪೂರ್ಣಸ್ವರೂಪಾತ್ ಚಿದಾಕಾಶಾತ್ ಅವಚ್ಛೇದ್ಯಪರಿಮಿತೀಕೃತಸ್ಸನ್ ತದೇವ ಪುಂಸ್ತ್ವಂ" ಎಂದು ಯೋಗರಾಜಾಚಾರ್ಯರು ಹೇಳಿರುವರು. ಎಲೈ ಶಿವಾದ್ವೈತಿಯೇ ಇದು ಹಾಗಿರಲಿ. ಮೂರು ಮಲಗಳಿಂದ ಆವರಿಸಲ್ಪಟ್ಟವನೇ ಜೀವನು ಎಂದು ಹೇಳುವಿಯಷ್ಟೆ? ಆ ಮೂರು ಮಲಗಳ ಸ್ವರೂಪವೇನು. ಅಂದರೆ (ತನ್ನ ನಿಜವಾದ ಸರ್ವಜ್ಞತ್ವಾದಿ ಸ್ವರೂಪವನ್ನು ಆವರಿಸಿ ಕಿಂಚಿಜ್ಞತ್ವಾದಿ ಅಲ್ಪಗುಣಗಳುಳ್ಳವನನ್ನಾಗಿ ಮಾಡುವದೇ ಆಣವ ಮಲವು) ಈ ಸರ್ವಜ್ಞತ್ವಾದಿ ಆರು ಅಂಗಗಳನ್ನು ಅಥವಾ ಶಕ್ತಿಗಳನ್ನು ಪಡೆದುಕೊಳ್ಳುವದೇ ಮುಕ್ತಿಯು. ಅಂದರೆ ಜೀವಾವಸ್ಥೆಯಲ್ಲಿರುವ ಕಿಂಚಿಜ್ಞತ್ವ ಶಕ್ತಿಯನ್ನು ವಿಕಾಸಗೊಳಿಸಲು ಅದೇ ಸರ್ವಜ್ಞತ್ವಶಕ್ತಿಯೆನಿಸುವದು.) ಇದರಂತೆ ತನ್ನಲ್ಲಿರುವ ಕಿಂಚಿತ್ತೃಪ್ತ್ಯಾದಿ ಐದು ಶಕ್ತಿಗಳನ್ನು ವಿಕಾಸಗೊಳಿಸಲು ಶಿವತ್ವಪ್ರಾಪ್ತಿಯಾಗುವದು.

ಈಶಕ್ತಿಯ ವಿಕಾಸರೂಪ ಮೋಕ್ಷಕ್ಕಾಗಿ ಭಕ್ತ್ಯಾದಿ ಐಕ್ಯಾಂತ ಷಡಂಗ ಯೋಗಾಭ್ಯಾಸವು ವೀರಶೈವಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು. ಈ ವಿಷಯವನ್ನು ಮುಂದಿನ ಮೋಕ್ಷಕಾಂಡದಲ್ಲಿ ವಿಸ್ತಾರವಾಗಿ ಹೇಳುವೆವು. ಅರ್ಥಾತ್ ಅಗ್ನಿಯು ಬೂದಿಯೊಳಗಿದ್ದರೂ, ಬೂದಿಯು ಅಗ್ನಿಯನ್ನು ಆವರಿಸಿಕೊಂಡಿದ್ದರೂ ಅಗ್ನಿಯು ತನ್ನ ದಗ್ಧೃತ್ವ ಕಾರ್ಯವನ್ನು ಲೇಶಮಾತ್ರದಿಂದ ಮಾಡುತ್ತದೆ. ಅಂದರೆ ಬೆಂಕಿಯ ಮೇಲಿದ್ದ ಬೂದಿಯ ಮೇಲೆ ಹಾಕಿದ ಒಣಗಿದ ತೃಣ ತೂಲ ಮೊದಲಾದವುಗಳನ್ನು, ತನ್ನ ಅಂಶರೂಪಗಳಾದ ಉಷ್ಣಕಿರಣಗಳಿಂದ ಸುಟ್ಟು ಬಿಡುವಂತೆ, ತನ್ನ ಸರ್ವಜ್ಞತ್ವಾದಿ ಶಕ್ತಿಗಳಿಗೆ ಬದಲಾಗಿ ಕಿಂಚಿಜ್ಞತ್ವಾದಿ ಶಕ್ತಿಗಳುಳ್ಳವನನ್ನಾಗಿ ಮಾಡಿಡುವದೇ ಆಣವಮಲವು.) ಇದಕ್ಕೆ ಪರಶರೀರವೆಂದು ಹೆಸರು. ಎಲೈ ಶಿವಾದ್ವೈತಿಯೇ, ನಾವು ಇದಕ್ಕೆ ಕಾರಣ ಶರೀರವೆಂದು ಅನ್ನುತ್ತೇವೆ. ಹಾಗಾದರೂ ಹೇಳಬಹುದು. ಅದರಲ್ಲಿ ಸಮಗಾವುದೂ ಕ್ಷತಿ ಇಲ್ಲವು. ಇನ್ನು ಮಾಯಿಯಮಲವೆಂದರೆ ಮಾಯಾತತ್ವ ಮೊದಲುಗೊಂಡು ವಿದ್ಯಾತತ್ವದವರೆಗೆ ಇರುವ ಕಂಚುಕಷಟ್ಕವು. ಇದು ಎರಡನೇ ಆವರಣವು. ಇದಕ್ಕೆ ಸೂಕ್ಷ್ಮವೆಂದು ಹೆಸರು. ಈ ಮಾಯೀಯ ಮಲದಿಂದ ಜ್ಞಾನವು ಕ್ರಿಯೆಯಲ್ಲವು. ಕ್ರಿಯೆಯು ಜ್ಞಾನ

ವಲ್ಲವು. ನಾನು ಶಿವನಲ್ಲವು. ಶಿವನು ನಾನಲ್ಲವು. ಎಂಬುವ ಭೇದ ಪ್ರತೀತಿಯುಂಟಾಗುವದು. ಅರ್ಥಾತ್ ಈ ಭೇದ ಜ್ಞಾನಕ್ಕೆ ಕಾರಣವಾದ ಮಾಯಾದಿ ವಿದ್ಯಾಂತ ಕಂಚುಕಷಟ್ಕವು ಮಾಯಿಾಯ ಮಲವೆನಿಸುವದು. ಈ ಮಾಯಿಾಯಮಲಕ್ಕಿಂತಲೂ, ಬಾಹ್ಯವಾದ ಪ್ರಧಾನದಿಂದ ಪರಂಪರೆಯಾಗಿ ಹುಟ್ಟಿದ ಸ್ಥೂಲ ಶರೀರನೇ ಮೂರನೇ ಆವರಣವು. ಇದು ತ್ವಜ್ಮಾಂಸಾದಿ ರೂಪವಾಗಿರುವದರಿಂದ ಸ್ಥೂಲವೆಂದು ಹೆಸರು. ಈ ಸ್ಥೂಲಶರೀರದಿಂದಲೇ ಶುಭಾಶುಭ ಕರ್ಮಗಳ ಸಮೂಹಕ್ಕೆ ಭಾಜನನಾಗುವನು. ಆದ್ದರಿಂದಲೇ ಶುಭಾಶುಭ ಕರ್ಮಫಲಗಳಾದ ಸುಖದುಃಖವುಳ್ಳವನಾಗಿರುವನು. ಆದ್ದರಿಂದ ಈ ಸ್ಥೂಲಶರೀರಕ್ಕೆ ಕಾರ್ಮಮಲವೆಂದು ಹೆಸರು. ಅರ್ಥಾತ್ ಪ್ರಕೃತಿ ತತ್ವ ಮೊದಲುಗೊಂಡು ಪೃಥಿವ್ಯಂತಗಳಾದ ತತ್ವಗಳನ್ನು ಒಳಕೊಂಡಿದ್ದಾಗಿಯೂ, ತನ್ನಿಂದ ಜೀವನು ಮಾಡುವ ಶುಭಾಶುಭ ಕರ್ಮಗಳ ಫಲಗಳಾದ ಸುಖದುಃಖಗಳನ್ನು, ಜೀವನಿಗೆ ಉಂಟುಮಾಡುವದಾಗಿಯೂ, ಇರುವ ಸ್ಥೂಲಶರೀರನೇ ಕಾರ್ಮಮಲವೆನಿಸುವದು. ಈ ಮೂರು ಮಲಗಳೆಂಬ ಆವರಣಗಳಿಂದ ಮುಚ್ಚಲ್ಪಟ್ಟವನಾದ್ದರಿಂದ ಘಟಾಕಾಶದಂತೆ ಸಂಕುಚಿತನಾಗಿ ಅಣುರೂಪನಾದ ಜೀವನೆನಿಸುವನು. ಇವನಿಗೆ ಪಶುವೆಂತಲೂ ಆತ್ಮನೆಂತಲೂ ಶಾಸ್ತ್ರದಲ್ಲಿ ರೂಢಿಯುಂಟು. ಈ ಮೂರು ಮಲಗಳು ಹೇಗಿರುವವೆಂಬ ವಿಷಯದಲ್ಲಿ ಸರಮಾರ್ಥಸಾರಕಾರರು ದೃಷ್ಟಾಂತವನ್ನು ಕೊಟ್ಟಿರುವರೇನಂದರೆ "ತುಷಕಂಬುಕಕಿಂಶಾರುಕಮುಕ್ತಂ ಬೀಜಂ ಯಥಾಂಕುರಂ ಕುರುತೇ | ನೈವತಥಾಣವಮಾಯಾಕರ್ಮವಿಮುಕ್ತೋ ಭವಾಂಕುರಂಹ್ಯಾತ್ಮಾ" ಅಂದರೆ ಕಿಂಶಾರುಕ, ತುಷಾ. ಕಂಬುಕ ಈ ಮೂರು ಪದಾರ್ಥಗಳು ಅಕ್ಕಿಯ ಮೇಲೆ ಇರತಕ್ಕ ಅತಿಸೂಕ್ಷ್ಮವಾಗಿಯೂ, ಸೂಕ್ಷ್ಮವಾಗಿಯೂ, ಸ್ಥೂಲವಾಗಿಯೂ ಇರತಕ್ಕ ಪದರುಗಳು. ಅತಿ ಸ್ಥೂಲವಾದ ಭತ್ತದ ಹೊಟ್ಟಿಗೆ ಕಿಂಶಾರುಕವೆಂದು ಹೆಸರು. ಇದರೊಳಗಿರುವ ಸೂಕ್ಷ್ಮವಾದ ಹೊಟ್ಟಿಗೆ ತುಷವೆಂದು ಹೆಸರು. ಇದರೊಳಗಿರುವ ಅತಿ ಸೂಕ್ಷ್ಮವಾದ ಹೊಟ್ಟಿಗೆ ಕಂಬುಕವೆಂದು ಹೆಸರು. ಈ ಮೂರು ಪದರುಗಳಿಂದ ಪೃಥಕ್ಕರಿಸಲ್ಪಟ್ಟ ಬತ್ತವು ಬೀಜದ ಸ್ವಭಾವಗಳಾದ ಕಿಂಶಾರುಕ ಮೊದಲಾದ ಸಾಮಗ್ರಿಗಳಿಲ್ಲದಿರುವದರಿಂದ ಮುಂದೆ ಅಂಕುರವನ್ನು ಹುಟ್ಟಿಸುವದಿಲ್ಲ. ಅಂದರೆ ಅಕ್ಕಿಯಮೇಲಿನ ಪದರನ್ನು ಮೆಲ್ಲಗೆ ಭೇದಿಸಿ, ಆ ಪದರಿನಲ್ಲಿ ಪುನಃ ಅಕ್ಕಿಯನ್ನು ಜೋಡಿಸಿದ ಬತ್ತವನ್ನು ವೃಷ್ಟಿಯಿಂದ ಹದವಾದ, ಬಿಸಲಿನಿಂದ ಕೂಡಿದ, ಭೂಮಿಯಲ್ಲಿ ಬಿತ್ತಿದರೂ ಕೂಡ ಅದು ಅಂಕುರೋತ್ಪತ್ತಿ

ಕಾರ್ಯದಲ್ಲಿ ಹೇತುವಾಗದಿರುವಂತೆ ಆತ್ಮನನ್ನು ಆವರಿಸಿರುವ ಅತಿ ಸೂಕ್ಷ್ಮ ವಾದ ಹೊಟ್ಟಿನಂತಿರುವ ಆಣವಮಲದಿಂದಲೂ, ಸೂಕ್ಷ್ಮವಾದ ತುಷವೆಂಬ ಹೊಟ್ಟಿನಂತಿರುವ ಮಾಯಾ ಮಲದಿಂದಲೂ, ಸ್ಥೂಲವಾದ ಕಿಂಶಾರುಕವೆಂಬ ಕೊಬ್ಬಟ್ಟಿನಂತಿರುವ ಕಾರ್ಮಮಲದಿಂದಲೂ ಬಿಡಲ್ಪಟ್ಟ ಶುದ್ಧಾತ್ಮನು ಸ್ಥೂಲಾದಿಶರೀರಗಳಲ್ಲಿದ್ದರೂ, ಮಲತ್ರಯಗಳ ಸಂಬಂಧ ವಿಲ್ಲದಿರುವದರಿಂದ ಸಂಸಾರವೆಂಬ ಅಂಕುರವನ್ನು ಹುಟ್ಟಿಸುವದಿಲ್ಲ. ಕಿಂತು ಜಗತ್ತಿನಲ್ಲಿರುವ ಅನೇಕ ಪದಾರ್ಥಗಳ ಪ್ರಾದುರ್ಭಾವ ಮತ್ತು ವಿನಾಶ ಇವುಗಳ ವೈಚಿತ್ರ್ಯವನ್ನು ತನ್ನಲ್ಲಿಯೇ ಪರಾಮರಿಸುವಂಥವನಾಗಿ, ತಾನೇ ತಾನಾಗಿ ಬಿಡುವನು. ಎಂಬದಾಗಿ ಮೇಲಿನ ಶ್ಲೋಕದ ಅಭಿಪ್ರಾಯವು. ಎಲೈ ಶಿವಾದ್ವೈತಿಯೇ ? ಆತ್ಮನು ಸ್ಥೂಲಾದಿ ಶರೀರದಲ್ಲಿದ್ದರೂ ಅದರಿಂದ ಬಿಡಲ್ಪಟ್ಟವನಾಗಿ ಮುಕ್ತನಾಗುವನೆಂದು ಹೇಳುತ್ತೀಯಲ್ಲ ! ಶರೀರದಲ್ಲಿದ್ದವನಿಗೆ ಶರೀರದ ಬಿಡುಗಡೆಯುಂಟೆ ? ಅಂದರೆ ಆ ಶರೀರದ ಅಭಿಮಾನವನ್ನು ಬಿಡುವದೇ ಶರೀರದ ಬಿಡುಗಡೆಯೆಂದು ತಿಳಿಯಬೇಕು. ಆದ್ದರಿಂದಲೇ "ಯದಾ ಗುರುವರಸಮ್ಯಕ್ಕಥಯೇತ್ತನ್ನ ಸಂಶಯಃ | ತದೈವ ಜಾಯತೇ ಮುಕ್ತಿರ್ಯಂತ್ರಸ್ತಿಷ್ಟತಿ ಕೇವಲಂ" ಎಂದು ಶೈವಶಾಸ್ತ್ರವು ದೀಕ್ಷಾಪೂರ್ವಕವಾದ ಗುರೂಪದೇಶದಿಂದಲೇ ಮುಕ್ತಿಯಾಗುವದು. ಎಂತಲೂ, ಸರ್ಪವು ತನ್ನ ಶರೀರದ ಮೇಲೆ ಬಿಟ್ಟ ಪರೆಯೊಳಗೆ ತಾನು ಇದ್ದರೂ ಅದನ್ನು ನಾನು ನನ್ನದೆಂದು ಅಭಿಮಾನಿಸಿಕೊಳ್ಳದಿರುವಂತೆ ಜೀವನ್ಮುಕ್ತನು ತನ್ನನ್ನು ಬಿಟ್ಟ ಸ್ಥೂಲ ಶರೀರಾದಿ ಪದರಿನೊಳಗಿದ್ದರೂ ಅದಕ್ಕೆ ನಾನು ನನ್ನದೆಂದು ಅಭಿಮಾನಿಸಿಕೊಳ್ಳದೆ, ಕೇವಲ ಶರೀರ ಪಂಜರದೊಳಗಿರುತ್ತಿರುವನು. ಆಮೇಲೆ ಶರೀರ ಪಂಜರವು ನಷ್ಟವಾಗಲು, ಸರ್ವಜ್ಞತ್ವಾದಿ ಶಕ್ತಿಗಳ ವಿಕಾಸವಾಗಿ ವಿದೇಹಮುಕ್ತನಾಗುವನು. ಜೀವನ್ಮುಕ್ತಿ ಸ್ಥಿತಿಯಲ್ಲಿ ವಿಶ್ವಾಮಿತ್ರಾದಿಗಳಂತೆ ಸಂಕಲ್ಪಮಾತ್ರದಿಂದ ಸರ್ವಸಾಧಾರಣ ಮನುಷ್ಯರ ಗುಣಗಳಿಗಿಂತಲೂ, ವಿಲಕ್ಷಣಗಳಾದ ಸರ್ವಕರ್ತೃತ್ವ ಸರ್ವಜ್ಞತ್ವಾದಿ ಗುಣಗಳು ಶಿವಯೋಗಿಗಳಲ್ಲಿ ಕಂಡರೂ, ಅವು ಸಿದ್ಧಿರೂಪಗಳೇ ಹೊರತು ನಿರತಿಶಯ ಸರ್ವಜ್ಞತ್ವಾದಿಗಳಲ್ಲ. ನಿರತಿಶಯ ಸರ್ವಜ್ಞತಾದಿಗಳ ವಿಕಾಸವು. ದೇಹಪಂಜರ ಪಾತಾನಂತರದಲ್ಲಿ ಶಿವಾವಸ್ಥೆಯನ್ನು ಹೊಂದಿದವನಿಗೆ ಲಭಿಸುತ್ತದೆಂದು ಶಿವಾದ್ವೈತ ಮಂಜರಿಕಾರರಾದ ಸ್ವಪ್ರಭಾನಂದಾಚಾರ್ಯರು ಹೇಳಿರುವರು.

ಜೀವನ್ಮುಕ್ತರಲ್ಲಿ ಕೆಲವು ಸಿದ್ಧಿಗಳು ಕಂಡುಬರುತ್ತವೆಂದು ಹಿಂದೆ ಶಿವ

ಯೋಗದಿಂದ ಮುಕ್ತಿಯೆಂಬ ವಾದದಲ್ಲಿ ಹೇಳಿರುತ್ತೇವೆ. ಎಲೈ ಶಿವಾದ್ವೈತಿಯೇ ಈ ಬಿಂಬಪ್ರತಿಬಿಂಬವಾದವನ್ನು ವೀರಶೈವ ಮತಾಚಾರ್ಯರಾದ ರೇಣುಕಭಗವತ್ಪಾದರು ಕೂಡ ಸ್ವೀಕರಿಸಿರುವರಲ್ಲ? ನೀನು ಮಾತ್ರ ನಿಮ್ಮ ಆಚಾರ್ಯರ ಮಾರ್ಗಕ್ಕೆ ವಿರುದ್ಧವಾಗಿ ಈ ವಾದವನ್ನು ಒಪ್ಪದೆ, ಜೀವನು ಶಿವನ ಅಂಶನೆಂತಲೂ ಅಣುವೆಂತಲೂ ಹೇಳುತ್ತೀ. ನೋಡು! ನಿಮ್ಮ ಆಚಾರ್ಯರ ಉಕ್ತಿಯನ್ನೇ ಉದಾಹರಿಸುತ್ತೇನೆ. "ಆತ್ಮತ್ವಮೀಶ್ವರತ್ವಂಚಬ್ರಹ್ಮಣ್ಯೇಕತ್ರಕಲ್ಪಿತಂ || ಬಿಂಬತ್ವಂ ಪ್ರತಿಬಿಂಬತ್ವಂ ಯಥಾಪೂಷಣಿಕಲ್ಪಿತಂ" || ಇದರಿಂದ ಜೀವನು ಪ್ರತಿಬಿಂಬರೂಪನಾಗಿರುವನೆಂತಲೂ, ಈಶ್ವರನು ಬಿಂಬರೂಪನಾಗಿರುವನೆಂತಲೂ ಸಿದ್ಧವಾಗುವದರಿಂದ, ಪ್ರತಿಬಿಂಬವಾದವು ನಿಮ್ಮ ಆಚಾರ್ಯರಿಗೆ ಸಮ್ಮತವಾಗಿದೆಯೆಂದು ಕಾಡುಬರುತ್ತದಲ್ಲದೆ, ಜೀವಾಣುತ್ವವಾದವು ಸಮ್ಮತವಾಗಿಲ್ಲವೆಂಬುವದು ಸ್ಪಷ್ಟವಾಗುವದು. ಆದ್ಧರಿಂದ ನಿಮ್ಮ ಆಚಾರ್ಯರ ಮಾರ್ಗವನ್ನು ನೀನು ಅನುಸರಿಸುವದು ಯೋಗ್ಯವಲ್ಲವೇ? ಬ್ರಹ್ಮಾದ್ವೈತಿಯೇ. ನಮ್ಮ ಆಚಾರ್ಯರ ಮಾರ್ಗಕ್ಕೆ ವಿರುದ್ಧವಾಗಿ ಬೇರೆ ಮಾರ್ಗವನ್ನು ಅನುಸರಿಸಿರುವನೆಂದು ತಿಳಿದಿರುವಿಯೇನು? ಹೀಗೆ ತಿಳಿಯಬೇಡ. ನಮ್ಮ ಆಚಾರ್ಯರು ಪೂರ್ವದಲ್ಲಿ, ನಾವು ಪರಿಣಾಮವಾದದಲ್ಲಿ ಬಿಂಬ ಪ್ರತಿಬಿಂಬಗಳ ದೃಷ್ಟಾಂತದಿಂದ ಒಬ್ಬನೇ ಶಿವನು ಅನೇಕ ರೂಪನಾಗಿರುವನೆಂದು ಹೇಳಿರುವಂತೆ, ರೇಣುಕ ಭಗವತ್ಪಾದರೂ ಕೂಡ, ಪ್ರತಿಬಿಂಬದ ದೃಷ್ಟಾಂತ ತೆಗೆದುಕೊಂಡಿರುವರು. ಇದರಿಂದ ಅವರಿಗೆ ಅಣುತ್ವವಾದವು ಸಮ್ಮತವಿಲ್ಲವೆಂದು ಕಲ್ಪಿಸುವದಕ್ಕಾಗುವದಿಲ್ಲ. ಮಿಥ್ಯಾಭೂತವಾದ ಪ್ರತಿಬಿಂಬರೂಪನೇ ಜೀವನೆಂಬುವದು ಆಚಾರ್ಯರಿಗೆ ಸಮ್ಮತವಿದ್ದಪಕ್ಷದಲ್ಲಿ ಹಿಂದೆ ಪಿಂಡಸ್ಥಲದಲ್ಲಿ "ಏಕಏವಶಿವಸ್ಸಾಕ್ಷಾಚ್ಚಿದಾನಂದಮಯೋವಿಭುಃ | ನಿರ್ವಿಕಲ್ಪೋ ನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ || ಅನಾದ್ಯವಿದ್ಯಾಸಂಬಂಧಾತ್ತದಂಶಾ ಜೀವನಾಮಕಾಃ | ದೇವತಿರ್ಯಙ್ಮನುಷ್ಯಾದಿ ಜಾತಿಭೇದೇ ವ್ಯವಸ್ಥಿತಾಃ ||" ಎಂಬುವದರಿಂದ ಜೀವರಿಗೆ ಶಿವಾಂಶತ್ವವನ್ನು ಹೇಳುತಿದ್ದಿಲ್ಲ. ನೋಡು! ಚಿದಾನಂದಸ್ವರೂಪನೂ, ನಿರಾಕಾರನೂ, ನಿರ್ಗುಣನೂ, ಪ್ರಪಂಚರಹಿತನೂ, ಅದ್ವಿತೀಯನೂ ಆದವನೇ ಶಿವನು. ಅನಾದಿಯಾದ ಅವಿದ್ಯೆಯ ಸಂಬಂಧದಿಂದ ಶಿವನ ಅಂಶಭೂತರಾದವರೇ ಜೀವನಾಮವುಳ್ಳವರು. ಇವರು ದೇವತೆಗಳು ಮೊದಲುಗೊಂಡು ಸಮಸ್ತ ಪ್ರಾಣಿಗಳಲ್ಲಿ ಇರತಕ್ಕವರಾಗಿರುವರು. ಇನ್ನು ಮಾಯಿಯಾದ ಮಹೇಶ್ವರನು ಆ ಪ್ರಾಣಿಗಳ

ಹೃದಯದಲ್ಲಿ, ಸೂರ್ಯಕಾಂತ ಕಲ್ಲಿನಲ್ಲಿ ಬೆಂಕಿಯು ಅಡಗಿಕೊಂಡಿರುವಂತೆ ಇದ್ದು ಕೊಂಡು ಆ ಜೀವರಿಗೆ ಪ್ರೇರಕನಾಗುವನು. ಎಂಬುವ ಅವರ ಅಭಿಪ್ರಾಯದಿಂದಲೂ, ಮುಂದೆ ಆತ್ಮಸ್ಥಳದಲ್ಲಿ "ವಾಲಾಗ್ರಶತಭಾಗೇನ ಸದೃಶೋ ಹೃದಯಸ್ಥಿತಃ | ಅಶ್ನನ್ಕರ್ಮಫಲಂ ಸರ್ವಮಾತ್ಮಾ ಸ್ಫುರತಿದೀಪವತ್ || ಆತ್ಮಾಪಿ ಸರ್ವಭೂತಾನಾಮಂತಃಕರಣಮಾಶ್ರಿತಃ | ಅಣುಭೂತೋಮಲಾ ಸಂಗಾದಾದಿ ಕರ್ಮನಿಯಂತ್ರಿತಃ" || ಎಂಬುವ ಶ್ಲೋಕಗಳಿಂದ ಮಲಸಂಬಂಧದಿಂದ ಜೀವನು ಅಣುಭೂತನೆಂದು ಸ್ಪಷ್ಟವಾಗಿ ಹೇಳಿರುವರು. ಇದಲ್ಲದೆ "ಆತ್ಮಾಂತರಾಳವರ್ತಿತ್ವಾತ್ ಜೀವಾತ್ಮ ಪರಮಾತ್ಮನೋಃ" | ಎಂಬುವದರಿಂದ ಶ್ರೀ ರೇಣುಕ ಭಗವತ್ಪಾದರು ಜೀವಾತ್ಮ ಪರಮಾತ್ಮರುಗಳಿಗೆ ಒಂದೇ ಸ್ಥಾನವನ್ನು ಹೇಳಿರುವದರಿಂದ ಬಿಂಬ ಪ್ರತಿಬಿಂಬವಾದವು ಅವರಿಗೆ ಸಮ್ಮತವಲ್ಲವೆಂದು ಸ್ಪಷ್ಟವಾಗುತ್ತದೆ. ಬಿಂಬ ಪ್ರತಿಬಿಂಬಗಳು ಒಂದೇಸ್ಥಾನದಲ್ಲಿರುವದಿಲ್ಲವೆಂದು ಹಿಂದೆ ಹೇಳಿರುವೆವು.

ಇದಲ್ಲದೆ ಪ್ರತಿಬಿಂಬರೂಪನಾದ ಜೀವನು ಮಿಥ್ಯಾರೂಪನಾಗಿರುವದರಿಂದಲೂ, ಬಿಂಬರೂಪವಾದ ಬ್ರಹ್ಮವು ಸತ್ಯವಾಗಿರುವದರಿಂದಲೂ ಮಿಥ್ಯಾಭೂತವಾದ ಜೀವನಿಗೂ ಸತ್ಯವಾದ ಬ್ರಹ್ಮಕ್ಕೂ ಸಾಮರಸ್ಯವೇ ಸಂಭವಿಸುವದಿಲ್ಲ. ಅಂದಮೇಲೆ ಷಡಂಗ ಲಿಂಗಸ್ಥಲಗಳನ್ನೊಪ್ಪುವ ಶ್ರೀ ರೇಣುಕ ಭಗವತ್ಪಾದರು ಪ್ರತಿಬಿಂಬವಾದಕ್ಕೆ ಸಮ್ಮತಿಸುವದುಂಟೆ? ಲಿಂಗಾಂಗ ಸ್ಥಳಗಳ ನಿರೂಪಣವು ಲಿಂಗಾಂಗ ಸಾಮರಸ್ಯ ಫಲಕ್ಕಾಗಿಯೇ ಅಲ್ಲವೇ? ಸತ್ಯ ಮಿಥ್ಯಾ ಪದಾರ್ಥಗಳಿಗೆ ಸಾಮರಸ್ಯವಾಗುವದಿಲ್ಲವೆಂದು ಬಾಲಕರಿಗೂ ಕೂಡ ತಿಳಿದುಬರುತ್ತದೆ. ಲೋಕದಲ್ಲಿಯಾದರೂ ಪರಸ್ಪರ ವಿಲಕ್ಷಣಗಳಾದ ಎರಡು ಪದಾರ್ಥಗಳಿಗೆ ಸಾಮರಸ್ಯವಾಗದೆ. ಸಜಾತೀಯಗಳಾದ ಎರಡು ವಸ್ತುಗಳಿಗೆ ಸಾಮರಸ್ಯವು ಕಂಡುಬರುವದು. ನೋಡು? ಜಲದ ಮಡುವಿನಲ್ಲಿ ಆ ಜಲಮಡುವಿನ ಅಂಶವಾದ ಪಾತ್ರೆಯೊಳಗಿನ ಜಲವನ್ನು ಹಾಕಿದರೆ ಸಮರಸವಾಗಿ ಉಪಾಧಿಕೃತ ಭೇದವು ಕಾಣದಂತಾಗುವದು. ಆ ಜಲಮಡುವಿಗೆ ವಿಲಕ್ಷಣವಾದ ಅಗ್ನಿಕೆಂಡಗಳನ್ನು ಹಾಕಿದರೆ ಅವು ಅಲ್ಲಿ ಸಮರಸಗಳಾಗದೆ ಅವುಗಳ ಭೇದವು ವ್ಯಕ್ತವಾಗಿಯೇ ಕಾಣುವದು. ಜೀವನು ಶಿವಾಂಶನಾಗದೆ ಪ್ರತಿಬಿಂಬರೂಪನಾಗಿ ಶಿವನಿಗೆ ವಿಲಕ್ಷಣವಾಗಿದ್ದ ಪಕ್ಷದಲ್ಲಿ ಆ ಜೀವನ ಸಾಮರಸ್ಯವು ಶಿವನಲ್ಲಿ ಆಗುವ ಬಗೆ ಹೇಗೆ? ಅಲ್ಲದೆ "ಯಥಾನದ್ಯಃ ಸ್ಯಂದಮಾನಾಸ್ಸಮುದ್ರೆ ಅಸ್ತಂಗಚ್ಛಂತಿ ನಾಮರೂಪೇ ವಿಹಾಯ ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷ ಮುಪೈತಿದಿ

ವ್ಯಂ,, ಎಂಬುವ ಶ್ರುತಿಯಿಂದ ಅನೇಕ ನದಿಗಳು ತಮ್ಮ ನಾಮರೂಪಗಳನ್ನು ಬಿಟ್ಟು ಸಮುದ್ರವನ್ನು ಕೂಡಿ ಸಮುದ್ರದಲ್ಲಿ ಸಮರಸಗಳಾಗಿ ಸಮುದ್ರವೆಂಬ ನಾಮವನ್ನೂ ಸಮುದ್ರದ ರೂಪವನ್ನೂ ಹೊಂದಿಕೊಂಡುಬಿಡುವಂತೆ ಲಿಂಗಾಂಗಸ್ಥಲ ಜ್ಞಾನಿಯಾದ ಜೀವನು ತನ್ನ ಸ್ವರೂಪವಾದ ಜೀವಭಾವವನ್ನು ತನ್ನ ಜೀವನೆಂಬ ನಾಮವನ್ನು ಅಥವಾ ವ್ಯಾವಹಾರಿಕ ಚೈತ್ರ ಮೈತ್ರಾದಿ ನಾಮವನ್ನೂ ಬಿಟ್ಟು ಪರಶಿವಲಿಂಗದಲ್ಲಿ ಸಮರಸನಾಗಿ ಪರಶಿವನೆಂಬ ನಾಮವನ್ನೂ ಪರಶಿವನ ಸ್ವರೂಪಗಳಾದ ಸರ್ವಜ್ಞತ್ವಾದಿ ಶಕ್ತಿಗಳನ್ನು ಹೊಂದಿಕೊಂಡು ಶಿವೋಹಂ (ನಾನು ಶಿವನು) ಸರ್ವಾತ್ಮಕೋಽಹಂ (ನಾನು ಸರ್ವಸ್ವರೂಪನೂ) ಸರ್ವಾಧಿಕೋಽಹಂ (ನಾನು ಸರ್ವನಿಯಾಮಕನು) ಎಂಬುವ ಮೊದಲಾದ ವೃತ್ತಿಯುಳ್ಳವನಾಗಿ ‹ ಆತ್ಮರತಿಃ ಆತ್ಮಕ್ರೀಡಃ,, ಮುಂತಾದ ಶ್ರುತಿ ವಚನಗಳಂತೆ ತನ್ನ ಸ್ವರೂಪಾನಂದ ಭೋಗಪರವಶನಾಗಿಬಿಡುವನು. ಎಂದು ಸ್ಪಷ್ಟಾರ್ಥವಾಗುತ್ತದೆ. ಅಂದಮೇಲೆ ಶ್ರೀಮಜ್ಜಗದ್ಗುರು ರೇಣುಕ ಭಗವತ್ಪಾದರು ಅನೇಕ ಶ್ರುತಿ ಯುಕ್ತ್ಯನುಭವವಿರುದ್ಧವಾಗಿ ಪ್ರತಿಬಿಂಬವಾದವನ್ನು ಎಂದೂ ಅಂಗೀಕರಿಸಲಾರರು. ಅವರಿಗೆ ಆ ಪ್ರತಿಬಿಂಬವಾದದ ಅಂಗೀಕಾರವೇ ಇದ್ದ ಪಕ್ಷದಲ್ಲಿ, ಲಿಂಗಾಂಗ ಸಾಮರಸ್ಯಕ್ಕಾಗಿ ಷಟ್ಸ್ಥಲಗಳಲ್ಲಿ ಅಂತರ್ಗತಗಳಾದ ಏಕೋತ್ತರ ಶತಸ್ಥಲಗಳನ್ನು ನಿರೂಪಣಮಾಡುತ್ತಿದ್ದಿಲ್ಲವು. ವಿವರ್ತವಾದದಲ್ಲಿ ಲಿಂಗಾಂಗ ಸಾಮರಸ್ಯವು ಸಂಭವಿಸುವದಿಲ್ಲವೆಂದು ಸ್ವಪ್ರಭಾನಂದ ಶಿವಾಚಾರ್ಯರು ಘಂಟಾಘೋಷವಾಗಿ ಹೇಳಿರುವರು.

ಎಲೈ ಶಿವಾದ್ವೈತಿಯೇ ಅಣುತ್ವವಾದದಲ್ಲಿ ನಿಮ್ಮ ಆಚಾರ್ಯರ ಅಭಿಪ್ರಾಯವಿದ್ದುಕೊಳ್ಳಲಿ. ಆದರೆ ‹‹ಸವಾಏಷಮಹಾನಜಆತ್ಮಾ,, ಇವೇ ಮೊದಲಾದ ಶ್ರುತಿಗಳಿಂದ ಕ್ಷೇತ್ರಜ್ಞನಾದ ಜೀವನು ವಿಭುವಾಗಿರುವನೆಂದು ಕಂಡುಬರುವಕಾರಣ ನಿನ್ನ ಅಣುತ್ವವಾದವು ಶ್ರುತಿವಿರುದ್ಧವಾಯಿತಲ್ಲವೆ. ಅಂದರೆ ಬ್ರಹ್ಮಾದ್ವೈತಿಯೇ ಜೀವಾತ್ಮನು ವಿಭುವಾದರೆ ಪರಲೋಕಗಮನಾಗಮನಗಳು ಸಂಭವಿಸುವುದಿಲ್ಲ. ವಿಭುವಾದವನು ಎಲ್ಲಾ ಲೋಕಗಳಲ್ಲಿಯೂ ಮೊದಲೇ ಇರುವನು. ಜೀವನು ವಿಭುವೆಂದು ಹೇಳಿದರೆ ಅವನು ಮೊದಲೇ ಪರಲೋಕದಲ್ಲಿಯೂ ಮರ್ತ್ಯಲೋಕದಲ್ಲಿಯೂ ಇದ್ದಂತಾಯಿತು. ಅಂದಮೇಲೆ ‹‹ಯೋವೈಕೇಚಾಸ್ಮಾಲ್ಲೋಕಾತ್ಪ್ರಯಂತಿ ಚಂದ್ರಮಸಮೇವ ತೇಸರ್ವೇಗಚ್ಛಂತಿ,, ಎಂಬುವ ಶ್ರುತಿಯಿಂದ ಜೀವರಿಗೆ ಪರಲೋಕಗಮನವೂ ‹‹ತಸ್ಮಾಲ್ಲೋಕಾತ್ಪುನರೇತ್ಯಸ್ಮೈಲೋಕಾಯ,,

ಎಂಬುವ ಶ್ರುತಿಯಿಂದ ಪರಲೋಕದಿಂದ ಮರ್ತ್ಯಲೋಕಕ್ಕೆ ಪುನರಾಗಮನವೂ ಹೇಳಲ್ಪಡುವವು. ಅಲ್ಲದೆ ‹‹ಏಷೋಣುರಾತ್ಮಾ ಚೇತಸಾವೇದಿತವ್ಯಃ›› ಎಂಬುವ ಶ್ರುತಿಯಿಂದಲೂ ಜೀವನಿಗೆ ಅಣುತ್ವವು ಘಂಟಾಘೋಷವಾಗಿ ಸಾರಲ್ಪಡುತ್ತಿರುವದು. ಅಲ್ಲದೆ ‹‹ಉತ್ಕ್ರಾಂತಿ ಗತ್ಯಾಗತೀನಾಂ›› ಎಂಬುವ ಸೂತ್ರದಿಂದ ವ್ಯಾಸಮುನಿಗಳು ಜೀವನಿಗೆ ಶರೀರದಿಂದ ಉತ್ಕ್ರಮಣವನ್ನೂ, ಪರಲೋಕಗಮನಾಗಮನಗಳನ್ನೂ ಒಪ್ಪಿರುವರು. ಜೀವನು ವಿಭುವಾದ ಪಕ್ಷದಲ್ಲಿ ಶರೀರ ವಿಯೋಗವೇ ಸಂಭವಿಸಲಾರದು. ಆದ್ದರಿಂದ ಶರೀರ ವಿಯೋಗವನ್ನು ಹೇಳುವ ಮತ್ತು ಜೀವನಿಗೆ ಗಮನಾಗಮನಗಳನ್ನು ಹೇಳುವ ಶ್ರುತಿಸೂತ್ರಗಳು ವಿಭುತ್ವವಾದದಲ್ಲಿ ಸಂಗತಗಳಾಗಲಾರವು. ಎಲೈ ಶಿವಾದ್ವೈತಿಯೇ ನಿನ್ನ ಅಣುತ್ವವಾದದಲ್ಲಿ ‹‹ಸವಾಏಷ ಮಹಾನಜಆತ್ಮಾ›› ಎಂಬುವ ಶ್ರುತಿಗೆ ಗತಿಯೇನು ? ಈ ಶ್ರುತಿಯು ಜೀವಾತ್ಮನಿಗೆ ಮಹಾನ್ ಅಂದರೆ ವಿಭುವೆಂದು ಹೇಳುತ್ತದೆಯಲ್ಲವೆ? ಅಂದರೆ ವಿಭುತ್ವ ಶ್ರುತಿಗಳೆಲ್ಲವು ಪರಮಾತ್ಮ ವಿಷಯಗಳೆಂದು ತಿಳಿಯಬೇಕು ಇದುಅಲ್ಲದೆ ‹‹ವಾಲಾಗ್ರಶತಭಾಗಸ್ಯ ಶತಧಾಕಲ್ಪಿತಸ್ಯಚ ಭಾಗೋಜೀವಸ್ಸವಿಜ್ಞೇಯಃ›› ಎಂಬುವ ಶ್ರುತಿಯಿಂದಲೂ ಜೀವನು ಅಣುರೂಪನೆಂತಲೇ ಸಿದ್ಧವಾಗುವದು. ಎಲೈ ಶಿವಾದ್ವೈತಿಯೇ ಜೀವನು ಅಣುವಾದ ಪಕ್ಷದಲ್ಲಿ ಶರೀರದ ಯಾವದೋ ಒಂದವಯವದಲ್ಲಿ ಮುಳ್ಳುನಟ್ಟುದರಿಂದುಂಟಾದ ದುಃಖವನ್ನೂ ಅಥವಾ ಅಗ್ನಿಯ ಸ್ಪರ್ಶದಿಂದುಂಟಾದ ದುಃಖವನ್ನೂ ಅನುಭವಿಸುವ ಬಗೆ ಹೇಗೆ? ಜೀವನು ಅಣುವಾದ್ದರಿಂದ ಯಾವದೋ ಒಂದು ಶರೀರದ ಭಾಗದಲ್ಲಿದ್ದುಕೊಂಡಿರುವದರಿಂದ ಎಲ್ಲಾ ಶರೀರಾವಯವಗಳಲ್ಲಿ ಆಯಾಯ ಬಾಹ್ಯವಸ್ತುಗಳಿಂದ ಸಂಭವಿಸುವ ಸುಖದುಃಖಗಳನ್ನು ಅನುಭವಿಸಲಾರನಷ್ಟೆ? ಅಂದರೆ ಈ ಆಕ್ಷೇಪದ ಸಮಾಧಾನಕ್ಕಾಗಿಯೇ ‹‹ಅವಿರೋಧಶ್ಚಂದನವತ್›› ಎಂಬುವ ಸೂತ್ರವನ್ನು ಹೇಳಿರುವರು. ಅಂದರೆ ಶರೀರದ ಒಂದು ಅವಯವದಲ್ಲಿ ಹರಿಚಂದನ ಗಂಧದ ಲೇಪನವನ್ನು ಮಾಡಲು ಆ ಗಂಧದ ಬಿಂದು ಸಕಲ ಶರೀರದಲ್ಲಿ ಶೀತಲತನವನ್ನು ಉಂಟುಮಾಡುವಂತೆ, ಅಣುವಾದ ಜೀವನು ಶರೀರದ ಒಂದು ಸಣ್ಣ ಪ್ರದೇಶದಲ್ಲಿದ್ದರೂ ಸರ್ವಾಂಗಗಳಲ್ಲಿ ಸಂಭವಿಸುವ ಸುಖದುಃಖಾದಿಗಳಿಗೆ ಭೋಕ್ತೃವಾಗುವನು. ಎಂದು ಶ್ರೀವ್ಯಾಸರೆ ಸಮಾಧಾನವನ್ನು ಹೇಳಿರುವರು. ಇದಲ್ಲದೆ ದೀಪದೃಷ್ಟಾಂತದಿಂದಲೂ ಕೂಡಾ ಅಣುವಾದ ಜೀವಾತ್ಮನಿಗೆ ಎಲ್ಲಾ ಶರೀರಾವಯವಗಳಲ್ಲಿ ಆಗುವ ಸುಖದುಃಖಗಳ ಜ್ಞಾನವಾಗುವದೆಂದು ಸಿದ್ಧವಾಗುತ್ತದೆ. ಹ್ಯಾಗಂದರೆ ದೀಪವು ಮನೆಯ ಒಂದು

ಸ್ಥಾನದಲ್ಲಿದ್ದರೂ ಅದರ ಪ್ರಕಾಶವು ಆ ಮನೆಯಲ್ಲವನ್ನು ವ್ಯಾಪಿಸಿಕೊಂಡಿರುವಂತೆ, ಜ್ಞಾತೃವಾದ ಜೀವಾತ್ಮನು ಅತಿ ಸೂಕ್ಷ್ಮವಾದ ಹೃದಯಸ್ಥಾನದಲ್ಲಿದ್ದರೂ, ಅವನ ಪ್ರಕಾಶರೂಪವಾದ ಜ್ಞಾನವು ಎಲ್ಲಾ ಶರೀರಾವಯವಗಳಲ್ಲಿ ವ್ಯಾಪಿಸಿಕೊಂಡಿರುವದು. ಆದ್ದರಿಂದ ಎಲ್ಲಾ ಶರೀರಾವಯವಗಳಲ್ಲಿ ನಡೆಯುವ ಚೇಷ್ಟೆಗಳನ್ನು ತಿಳಿದು, ಸುಖದುಃಖಗಳ ಅನುಭವವುಳ್ಳವನಾಗುವನು. ಎಲೈ ಅಣುತ್ವವಾದಿಯಾದ ವೀರಶೈವನೇ ಶ್ರುತಿಗಳಲ್ಲಿ ಕಾಣುವ ಜೀವಾಣುತ್ವವು ಮಿಥ್ಯಾರೂಪವಾದ ಅಂತಃಕರಣವೆಂಬ ಉಪಾಧಿಕೃತವೇ ಹೊರತು ವಾಸ್ತವವಲ್ಲವೆಂದು ಅಂದರೆ, ಈ ಮಿಥ್ಯಾತ್ಮವಾದವನ್ನು ಮೊದಲೇ ನಿರಸನ ಮಾಡಿರುವೆವು. ಇದಲ್ಲದೆ ಜೀವನು ಬ್ರಹ್ಮಪ್ರತಿಬಿಂಬರೂಪನಾದ್ದರಿಂದ ಮಿಥ್ಯಾಭೂತನು ಎಂದು ಅಂದರೆ ‹‹ಅಂಶೋ ನಾನಾವ್ಯಪದೇಶಾದನ್ಯಥಾಚಾಪಿ ದಾಶಕಿತವಾದಿತ್ವಮಧೀಯತಏಕೇ›› ಎಂಬುವ ಅಧಿಕರಣಕ್ಕೆ ವಿರೋಧವಾಗುತ್ತದೆ. ಸೂತ್ರಾರ್ಥವೇನೆಂದರೆ— ಜೀವನು ಬ್ರಹ್ಮಾಂಶಸ್ವರೂಪನಾಗಿರುವನು. ಯಾಕೆಂದರೆ ಜೀವನು ಅಂಶನೆಂತಲೂ, ಅನೇಕತ್ವವುಳ್ಳವನೆಂತಲೂ, ಶ್ರುತಿಗಳು ಹೇಳುವದರಿಂದಲೂ ಮತ್ತು ಜೀವರಿಗೆ ಅಭೇದವು ಹೇಳಲ್ಪಡುವದರಿಂದಲೂ ಜೀವನು ಅಭೇದವುಳ್ಳವನೆಂತಲೂ ಸಿದ್ಧವಾಗುತ್ತದೆ. ಆದ್ದರಿಂದ ಜೀವರು ಬ್ರಹ್ಮದಅಂಶಭೂತರೆ ಎಂದು ಸಿದ್ಧವಾಗುತ್ತದೆ. ಇದಲ್ಲದೆ ಕೆಲವು ಶಾಖೆಯವರು ಬ್ರಹ್ಮನಿಗೂ ಜೀವನಿಗೂ ದಾಸ್ಯದಾಸಕ ಭಾವವನ್ನು ಹೇಳಿ ಯಾವಾಗಲೂ ಜೀವಬ್ರಹ್ಮರಿಗೆ ಭೇದವನ್ನೇ ಹೇಳುವರು. ಎಂದು ಸೂತ್ರಾರ್ಥವು. ಇನ್ನು ವಿಚಾರಿಸುವ ‹‹ಯಥಾಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾಸಹಸ್ರಶಃ ಪ್ರಭವಂತೆ ಸರೂಪಾಃ ತಥಾಕ್ಷರಾದ್ವಿವಿಧಾ ಸೌಮ್ಯಭಾವಾಃ ಪ್ರಜಾಯಂತೆ ತತ್ರಚೈವಾಪಿಯಂತಿ›› ಎಂಬುವ ಶ್ರುತಿಯಿಂದ ಪ್ರಜ್ವಲಿಸುವ ವಹ್ನಿಯಿಂದ ವಹ್ನಿಗೆ ಸಮಾನರೂಪವುಳ್ಳ ಅನಂತ ಕಿಡಿಗಳು ಕಂಡುಬರುವಂತೆ ನಾಶರಹಿತವಾದ ಬ್ರಹ್ಮದ ದೆಸೆಯಿಂದ ಅನಂತ ವಸ್ತುಗಳು ಆವಿರ್ಭವಿಸಿ ಆ ಬ್ರಹ್ಮದಲ್ಲಿಯೇ ಲಯವನ್ನು ಹೊಂದುತ್ತವೆ. ಆದ್ದರಿಂದ ಜೀವರು ಅಗ್ನಿಯ ವಿಸ್ಫುಲಿಂಗಗಳಂತೆ ಬ್ರಹ್ಮದ ಅಂಶಭೂತರೇ ಎಂದು ಸಿದ್ಧವಾಗುತ್ತದಾದಕಾರಣ ಜೀವರು ಪ್ರತಿಬಿಂಬಸ್ವರೂಪರಲ್ಲವು. ಮತ್ತು ‹‹ದ್ವಾಸುಪರ್ಣಾಸಯುಜಾಸಖಾಯಾಸಮಾನಂವೃಕ್ಷಂ ಪರಿಷಸ್ವಜಾತೆ›› ಎಂಬುವ ಶ್ರುತಿಯಿಂದ ಜೀವಬ್ರಹ್ಮರಿಗೆ ಭೇದವು ಹೇಳಲ್ಪಡುವಕಾರಣದಿಂದಲೂ ‹‹ತತ್ವಮಸಿ›› ಮೊದಲಾದ ಶ್ರುತಿವಾಕ್ಯಗಳಿಂದ ಜೀವಬ್ರಹ್ಮರಿಗೆ ಅಭೇದವು ಹೇಳಲ್ಪಡುವದರಿಂದಲೂ, ಜೀವರು ಬ್ರಹ್ಮನ ಅಂಶ

ಭೂತರೇ ಎಂದು ಹೇಳಬೇಕಲ್ಲದೆ ಪ್ರತಿಬಿಂಬಸ್ವರೂಪರೆಂದು ಹೇಳಬಾರದು. ಅಂಶಾಂಶಿಗಳಿಗೆ ಭೇದಾಭೇದಗಳಿರುತ್ತವಲ್ಲದೆ ಬಿಂಬ ಪ್ರತಿಬಿಂಬಗಳಿಗೆ ಭೇದಾಭೇದಗಳಿರುವದಿಲ್ಲ. ಬಿಂಬ ಪ್ರತಿಬಿಂಬಗಳಿಗೆ ವಾಸ್ತವ ಅಭೇದವಿದ್ದರೆ ಸೂರ್ಯನೆಂಬ ಬಿಂಬದ ಕಾರ್ಯವು ಜಲದಲ್ಲಿ ಪ್ರತಿಬಿಂಬಿತ ಸೂರ್ಯನಿಂದ ಆಗಬೇಕು. ಆದ್ದರಿಂದ ಜೀವ ಬ್ರಹ್ಮರುಗಳಿಗೆ ಪ್ರಭಾಕರ ಪ್ರಭೆಗಳಂತೆಯೂ ಅಹಿಕುಂಡಲಗಳಂತೆಯೂ ಭೇದಾಭೇದಗಳು ಶ್ರುತಿಯಿಂದಲೇ ಸಿದ್ಧಗಳಾದ್ದರಿಂದ ಅಂಶಾಂಶಿ ಭಾವವನ್ನೇ ಹೇಳಬೇಕು. ಮತ್ತೆ ಕೆಲವರು ‹‹ಬ್ರಹ್ಮದಾಶಾ ಬ್ರಹ್ಮದಾಸಾ ಬ್ರಹ್ಮೇಮೇ ಕಿತವಾಃ›› ಎಂಬುವ ಮೊದಲಾದ ಶ್ರುತಿಯಿಂದ ಮುಕ್ತರಿಗೂ ಕೂಡ ಕಿಂಕರತ್ವ ಪರತಂತ್ರತ್ವಾದಿಗಳನ್ನು ಹೇಳಿ ಮೋಕ್ಷದಶೆಯಲ್ಲಿಯೂ ಕೂಡಾ ಭೇದವು ವ್ಯಕ್ತವಾಗಿಯೇ ಇರುತ್ತದೆಂದು ಹೇಳುವರು. ಈ ಮತವು ವೇದೈಕದೇಶದಲ್ಲಿ ಇರುವಂಥಾದ್ದೆಂದು ಸೂತ್ರಕಾರರ ಏಕೇ ಎಂಬುವ ಶ್ರುತಿಯಿಂದ ನಿರ್ದೇಶಮಾಡಿದಂತಾಯಿತು. ಆದ್ದರಿಂದ ಮೋಕ್ಷದೆಸೆಯಲ್ಲಿಯೂ ಕೂಡ ಪರತಂತ್ರತ್ವಾದಿಗಳಿದ್ದರೆ ಭಯಕ್ಕೆ ಕಾರಣವಾಗುವದಾದ್ದರಿಂದಲೂ ‹‹ಯಥಾನದ್ಯಸ್ಯಂದಮಾನಾಃ›› ಎಂಬುವ ಮೊದಲಾದ ಶ್ರುತಿಗಳಿಂದ ಜೀವಬ್ರಹ್ಮರಿಗೆ ಸ್ವರೂಪೈಕ್ಯವೇ ಕಂಡುಬರುವದರಿಂದ ಕೇವಲ ಭೇದವಾದಿಗಳ ಮತದಲ್ಲಿ ಸರ್ವಶ್ರುತಿಗಳ ಸಮನ್ವಯವಾಗದಿರುವದರಿಂದಲೂ, ಕೇವಲ ಅಭೇದವಾದಿಗಳ ಮತದಲ್ಲಿಯೂ ಸರ್ವಶ್ರುತಿಗಳ ಸಮನ್ವಯವಾಗದಿರುವದರಿಂದಲೂ, ಜೀವ ಬ್ರಹ್ಮರಿಗೆ ಭೇದಾಭೇದಗಳೇ ಸಿದ್ಧವಾಗುವವು. ಎಲ್ಲಿ ಭೇದಾಭೇದಗಳೋ ಅಲ್ಲಿ ಅಂಶಾಂಶಭಾವವಿರಲೇಬೇಕು. ಬ್ರಹ್ಮನ ಅಂಶವೇ ಜೀವನೆಂದು ನಿಶ್ಚಯಿಸಲ್ಪಡದಿದ್ದರೆ ಜೀವ ಬ್ರಹ್ಮರಿಗೆ ಅಭೇದವೂ ಭೇದವೂ ಸಿದ್ಧಿಸುವದಿಲ್ಲ. ಎಲೈ ಶಿಷ್ಯಾದ್ವೈತಿಯೇ ಅಂಶವೆಂದರೆ ಒಂದು ವಸ್ತುವಿನ ಏಕದೇಶವು. ಜೀವನು ಬ್ರಹ್ಮಾಂಶವೆಂದರೆ ಘಟದ ಅಂಶವಾದ ಕಪಾಲದಲ್ಲಿದ್ದ ಗುಣಾದಿಗಳು ಘಟದಲ್ಲಿ ಕಂಡುಬರುವಂತೆ ಜೀವನಲ್ಲಿದ್ದ ದೋಷಗಳು ಬ್ರಹ್ಮದಲ್ಲಿ ಬರಬೇಕಾಗುವದು. ಅಲ್ಲದೆ ಬ್ರಹ್ಮಕ್ಕೆ ಸಖಂಡತ್ವವನ್ನು ಹೇಳಬೇಕಾದೀತು. ಈ ಆಕ್ಷೇಪದ ಸಮಾಧಾನವನ್ನು ಹಿಂದಿನ ಪರಿಣಾಮವಾದದಲ್ಲಿಯೆ ಸ್ಥೂಲ ಶರೀರದಲ್ಲಿರುವ ಬಾಲ್ಯ ಯೌವನಾದಿಗಳು ಜೀವನಲ್ಲಿ ಇಲ್ಲದಿರುವಂತೆ ಜೀವನಲ್ಲಿರುವ ದೋಷಗಳು ಬ್ರಹ್ಮದಲ್ಲಿ ಬರುವದಿಲ್ಲವೆಂದು ಹೇಳಿಯೇ ಇರುವೆವು. ಆದ್ದರಿಂದ ಜೀವನು ಪ್ರತಿಬಿಂಬಸ್ವರೂಪನಾಗಿರುವದರಿಂದ ಮಿಥ್ಯಾಭೂತನೆಂದು ಹೇಳಕೂಡದು. ಹಾಗೆ ಪ್ರತಿಬಿಂಬಸ್ವರೂಪನೆಂದು ಹೇಳಿದರೆ ಅನೇಕ ಶ್ರುತಿಗಳಿಗೆ ವಿರೋಧ

ವಾಗುವದಲ್ಲದೆ ‹‹ಶಿವಸ್ಸತ್ಯಂ ಜಗತ್ಸತ್ಯಂ ಜೀವಸ್ಸತ್ಯಂ ಸ್ವಭಾವತಃ | ತೇಷಾಮಭೇದಸ್ಸತ್ಯೋವಾಕ್ಯೈಃ ಭ್ರಮರಕೀಟಯೋರಿವ ||›› ಎಂಬುವ ಸ್ಮೃತಿಗೂ ವಿರೋಧವಾಗುವದು. ಇದಲ್ಲದೆ ‹‹ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ›› ಎಂಬುವ ಭಗವದ್ಗೀತೆಯು ಕೂಡಾ ಜೀವನು ಈಶ್ವರಾಂಶನೆಂದು ಹೇಳುತ್ತದೆ. ಎಲೈ ಶಿವಾದ್ವೈತಿಯೇ ಭಗವದ್ಗೀತೆಯು ಕೃಷ್ಣಾರ್ಜುನರ ಸಂವಾದರೂಪವಾಗಿರುವದು. ಕೃಷ್ಣನು ಬೋಧಿಸತಕ್ಕಂಥವನು ಅರ್ಜುನನು ಕೇಳತಕ್ಕಂಥವನು ಅಂದಮೇಲೆ ‹‹ಮಮೈವಾಂಶಃ›› (ನನ್ನ ಅಂಶವೇ) ಜೀವನೆಂದು ಬೋಧಿಸುವದರಿಂದ ಜೀವನು ವಿಷ್ಣುವಿನ ಅಂಶನೆಂದು ಕಂಡುಬರುತ್ತಿರಲಿಕ್ಕೆ ನೀನು ಈಶ್ವರಾಂಶನೆಂದು ಹೇಳುವದು ಪಕ್ಷಪಾತವಲ್ಲವೆ? ಅಂದರೆ ‹‹ವಿಷ್ಣ್ವಾದ್ಯುತ್ತಮದೇಹೇಷು ಪ್ರವಿಷ್ಟೋ ದೇವತಾಭವೇತ್ ಮನುಷ್ಯಾದ್ಯಧಮದೇಹೇಷು ಪ್ರವಿಷ್ಟೋ ಮಾನವೋ ಭವೇತ್›› ಎಂಬುವ ಸ್ಮೃತಿವಾಕ್ಯದಂತೆ ನನ್ನ ಅಂಶವೇ ಜೀವನೆಂದರೆ ನನ್ನಲ್ಲಿ ಅಂತರ್ಯಾಮಿಯಾಗಿಯೂ, ಸರ್ವಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವ ಈಶ್ವರನ ಅಂಶವು ಜೀವನೆಂದು ಅರ್ಥಮಾಡಬೇಕು. ಎಲೈ ಶಿವಾದ್ವೈತಿಯೇ ಹೀಗೇಕೆ ಕ್ಲಿಷ್ಟವಾದ ಅರ್ಥವನ್ನು ಮಾಡಬೇಕು. ವಿಷ್ಣುವಿನ ಅಂಶವೇ ಜೀವನೆಂದು ಹೇಳುವಲ್ಲಿ ನಿನಗೆ ಅಭಿಮಾನವೇಕೆ. ಬ್ರಹ್ಮಾದ್ವೈತಿಯೇ ನೀನು ಪಂಚದೇವತಾ ಉಪಾಸಕನಲ್ಲವೆ. ಆದ್ದರಿಂದಲೇ ವಿಷ್ಣುವಿನ ಅಭಿಮಾನವಿರುವದು ಸಹಜವು. ಪಂಚದೇವತೆಗಳ ಪೈಕಿ ‹‹ಆದಿತ್ಯಮಂಬಿಕಾಂವಿಷ್ಣುಂ ಗಣನಾಥಂ ಮಹೇಶ್ವರಂ ಪೂಜಯೇದೇಕಭಾವೇನಸ್ವೇಷ್ಟಂ ಮಧ್ಯೇವಿನಿಕ್ಷಿಪೇತ್›› ಎಂಬುವ ನಿಮ್ಮವರ ಉಕ್ತಿಯಂತೆ ನಿನಗೆ ವಿಷ್ಣುದೇವತೆಯೇ ಇಷ್ಟವಾಗಿರಬಹುದೆಂದು ವಿಷ್ಣುವಿನಲ್ಲಿರುವ ನಿನ್ನ ಪಕ್ಷಪಾತದಿಂದಲೆ ಗೊತ್ತಾಗುವದು ನೋಡು! ಕೃಷ್ಣಗೀತೆಯಲ್ಲಿ ಕೃಷ್ಣನು ತಾನೇ ತನ್ನ ಉಪಾಸ್ಯ ದೇವತೆಗೆ ಪ್ರಥಮಪುರುಷಪ್ರಯೋಗವನ್ನು ಮಾಡಿ ‹‹ಹೃದ್ದೇಶೇರ್ಜುನತಿಷ್ಠತಿ ತಮೇವ ಶರಣಂಗಚ್ಛ›› ಎಂದು ಈಶ್ವರನನ್ನೇ ಹೇಳಿರುವನು. ಇದರಿಂದ ಈಶ್ವರನು ತನಗಿಂತಲೂ ಅತಿರಿಕ್ತನೆಂದು ಸಿದ್ಧವಾಗುತ್ತದೆ. ಅಂದಮೇಲೆ ‹‹ಮಮೈವಾಂಶಃ›› ಎಂಬುವಲ್ಲಿ ವಿಷ್ಣುವಿನ ಅಂಶವೇ ಜೀವನೆಂದು ಅಥವಾ ಅರ್ಜುನನಿಗೆ ಸಾರಥಿಯಾದ ಕೃಷ್ಣನ ಅಂಶವೇ ಜೀವನೆಂದು ಸಿದ್ಧವಾಗುವದಿಲ್ಲ. ಆದ್ದರಿಂದ ಕೃಷ್ಣಾಂತರ್ಯಾಮಿಯಾದ ಈಶ್ವರನ ಅಂಶವೇ ಜೀವನೆಂದು ಸಿದ್ಧವಾಗುವದು. ಶಿವಾದ್ವೈತಿಯೇ ‹‹ಹರಿಃ ಓಂ›› ಎಂದು ವೇದ ವೇದಾಂತೋಚ್ಚಾರಣೆಯು ಆರಂಭದಲ್ಲಿ ವಿಷ್ಣು

ಸ್ಮರಣೆಯು ವಿಧಿಸಲ್ಪಡುವದರಿಂದಲೂ "ವೇದವಾಕ್ಯಾನಿ ಸರ್ವಾಣಿ ಹರಿನಾಮಾನಿ" ಎಂದು ಕಾಪಿಲಸ್ಮೃತಿ ಇರುವದರಿಂದಲೂ ಜೀವರು ವಿಷ್ಣುವಿನ ಅಂಶಭೂತರೇಯೆಂದು ಹೇಳಬೇಕು. ಅಂದರೆ "ಹರಿಃ ಓಂ" ಎಂಬುವಲ್ಲಿ ಪ್ರಥಮದಲ್ಲಿ ವಿಷ್ಣು ಶಬ್ದವು ಕಂಡುಬರುವದರಿಂದ ವಿಷ್ಣುವಿಗೇನೆ ವೇದಸ್ವರೂಪತ್ವವು ವೇದಜನಕತ್ವವು ಸರ್ವವೇದ ನಿಯಾಮಕತನವೂ ಸಿದ್ಧವಾಗುವಕಾರಣ ಜೀವರು ವಿಷ್ಣುವಿನ ಅಂಶಭೂತರೇ ಯೆಂದು ಸಿದ್ಧವಾಗಲಾರದು. "ಸರ್ವೋವೈರುದ್ರಃ ಈಶಾನಸ್ಸರ್ವವಿದ್ಯಾನಾಂ" ಇತ್ಯಾದಿ ಶ್ರುತಿಗಳಿಂದಲೂ ವೇದಶ್ಶಿವಶ್ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ | ನಾರುದ್ರಃ ಕ್ರಮಪಾಠಕಃ ಇತ್ಯಾದಿ ಸ್ಮೃತಿಗಳಿಂದಲೂ ಸರ್ವಾತ್ಮಕತ್ವ ಸರ್ವ ಶ್ರುತಿ ಜನಕತ್ವ ಸರ್ವವೇದ ನಿಯಾಮಕತ್ವ ಮೊದಲಾದ ಧರ್ಮಗಳು ಶಿವನಿಗೆ ಹೇಳಲ್ಪಡುವವಲ್ಲದೆ ಬೇರೆ ದೇವತೆಗಳಿಗೆ ಹೇಳಲ್ಪಡುವದಿಲ್ಲ.

ಆದ್ದರಿಂದ "ಹರಿಃ ಓಂ" ಎಂಬ ವಾಕ್ಯದಲ್ಲಿ ಹರಿಶಬ್ದ ವಾಚ್ಯನಾದ ವಿಷ್ಣುವಿನಿಂದ ಕೂಡಿದ "ಓಂ"ಕಾರ ವಾಚ್ಯನಾದ ಶಿವನ ಉಚ್ಚಾರವೇ ಹೇಳಲ್ಪಟ್ಟಿತಲ್ಲದೆ ಕೇವಲ ವಿಷ್ಣುವಿನ ಉಚ್ಚಾರವು ಹೇಳಲ್ಪಡಲಿಲ್ಲ. ಇದಲ್ಲದೆ "ಯೋ ವೇದಾದೌಸ್ವರಃ ಪ್ರೋಕ್ತೋವೇದಾಂತೇಚ ಪ್ರತಿಷ್ಠಿತಃ" ಎಂಬುವ ಶ್ರುತಿಯಲ್ಲಿಯೂ ಬ್ರಹ್ಮಣಃ ಪ್ರಣವಂಕುರ್ಯಾದಾದಾವಂತೇಚ ಸರ್ವದಾ | ದಹತ್ಯೇನಃ ಕೃತಂ ಪೂರ್ವಂ ಪರಸ್ತಾಚ್ಚ ವಿಶೀರ್ಯತಃ || ವೇದ ವೇದಾಂತಗಳ ಉಚ್ಚಾರಣಾರಂಭದಲ್ಲಿ "ಓಂ" ಕಾರವನ್ನೇ ಉಚ್ಚರಿಸಬೇಕೆಂದು ವಿಧಿಯಿದ್ದರೂ ಆ ಪ್ರಣವದ ಹಿಂದೆ ಹರಿಶಬ್ದವನ್ನು ಜೋಡಿಸಿ "ಹರಿಃ ಓಂ" ಎಂದು ಉಚ್ಚರಿಸುವ ಕೆಲವರ ಪದ್ಧತಿಯಾದರೂ ಲೋಕದಲ್ಲಿ ಮಾತಾ ಪಿತರೌ | ತಾಯಿತಂದೆಗಳು ಎಂದು ಮೊದಲೇ ತಾಯಿಯ ಹೆಸರನ್ನು ಉಚ್ಚರಿಸುವಂತೆ ಇರುವದರಿಂದ ಅದರಿಂದ ನಮಗಾವ ಬಾಧಕವೂ ಇಲ್ಲವು. ಮೂಲಪ್ರಣವ ವಾಚ್ಯನು ಶಿವನೆಂಬುವ ವಿಷಯದಲ್ಲಿ "ಓಂ ಮಿತ್ಯೇತ ದಕ್ಷರಮಿದಂ ಸರ್ವಂ" ಎಂದು ಉಪಕ್ರಮಿಸಿ ಪ್ರಪಂಚೋಪ ಶಮಶ್ಶಿವೋದ್ವೈತ ಏವಮೋಂಕಾರಃ ಸಂವಿಶತ್ಯಾತ್ಮ ನಾತ್ಮಾನಂ ಯ ಏವಂ ವೇದ | ಇದೇ ಅಂತವಾಗಿವುಳ್ಳ ವಾಕ್ಯಗಳಿಂದ ಶಿವನು ಪ್ರಣವಸ್ವರೂಪನೆಂತಲೂ, ಪ್ರಣಮವು ಶಿವವಾಚಕವೆಂತಲೂ ಹೇಳುವ ಮಾಂಡೂಕ್ಯೋಪನಿಷತ್ತು ಪ್ರಮಾಣವಾಗಿದೆಯಲ್ಲದೆ "ಬ್ರಹ್ಮಾಧಿಪತಿ ರ್ಬ್ರಹ್ಮಣೋಧಿಪತಿರ್ಬ್ರಹ್ಮಾ ಶಿವೋಮೇ ಅಸ್ತು ಸದಾ ಶಿವೋಂ" ಎಂಬುವ ತೈತ್ತಿರೀಯ ಶ್ರುತಿಯು

ಪ್ರಮಾಣವಾಗಿದೆ. ಮತ್ತು ‟ಓಂಕಾರಂ ಲಿಂಗಮಾಹುಃ” ಎಂಬುವ ಸಾಧು ಶ್ರುತಿಯಿಂದಲೂ, ಪ್ರಣವಸ್ವರೂಪನು ಶಿವನು ಎಂದು ಸಿದ್ಧವಾಗುತ್ತದೆ. ಆದ್ದರಿಂದ ಹರಿಯಮೇಲೆ ಪ್ರಣವಸ್ವರೂಪ ಶಿವೋಚ್ಚಾರಣೆಯು ನಮಗೇನೂ ವಿರುದ್ಧವಲ್ಲವು. ‟ಮಯ್ಯೈಷಾಪರಮಾ ಮೂರ್ತಿರ್ನಾರಾಯಣ ಸಮಾಹ್ವಯಾ” ಎಂದು ಕೂರ್ಮ ಪುರಾಣದಲ್ಲಿ ಈಶ್ವರಗೀತೆ ಇರುವದರಿಂದ ವಿಷ್ಣುವು ಶಿವನ ಶರೀರಸ್ವರೂಪನೆಂಬುವದು ಯುಕ್ತವು. ಅಂದರೆ ಶಿವಶಕ್ತಿಯ ಅಂಶಭೂತನು ವಿಷ್ಣುವಾದ್ದರಿಂದ ಶಿವಶಕ್ತಿಯು ಶಿವನಿಗೆ ಶರೀರಭೂತವಾಗಿರುವದರಿಂದ ವಿಷ್ಣುವು ಶಿವನ ಶರೀರರೂಪವಾಗಿರುವನು. ಇದಲ್ಲದೆ ‟ಶಂಕರ ಶೂಲಪಾಣಿಶ್ಚ ಖಟ್ವಾಂಗೀ ವಿಷ್ಣುವಲ್ಲಭಃ” ಎಂದು ಶಿವಾಷ್ಟೋತ್ತರ ನಾಮಾವಳಿಯಲ್ಲಿಯೂ ‟ಒಂದೇ ಮುಕುಂದಪ್ರಿಯಂ” ಎಂದು ಸ್ಕಾಂದದಲ್ಲಿಯೂ ಇರುವದರಿಂದ ಶಿವನು ವಿಷ್ಣುವಲ್ಲಭನೆಂತಲೂ ಸಿದ್ಧವಾಗುವದು. ಆದ್ದರಿಂದ ಚಂದ್ರನ ಚಂದ್ರಿಕೆಯು ಚಂದ್ರನನ್ನು ಹಿಂಬಾಲಿಸಿಕೊಂಡಿರುವಂತೆ ಹರಿಶಬ್ದವಾಚ್ಯನಾದ ವಿಷ್ಣುವು ‟ಓಂ”ಕಾರ ವಾಚ್ಯನಾದ ಶಿವನನ್ನು ಹಿಂಬಾಲಿಸಿಕೊಂಡಿರುವದು ಯೋಗ್ಯವಾಗಿದೆಯಾದ್ದರಿಂದ ಆರಂಭದಲ್ಲಿ ‟ಹರಿಃ ಓಂ” ಎಂದು ಪಠಿಸಲ್ಪಡುತ್ತದೆಂದು ಹೇಳಬೇಕೇ ಹೊರತು ಆರಂಭದಲ್ಲಿ ಹರಿನಾಮಸ್ಮರಣೆ ಇರುವದರಿಂದ ವಿಷ್ಣುವೇ ಸರ್ವೋತ್ಕೃಷ್ಟನೆಂದು ಸರ್ವ ವೇದಸ್ವರೂಪನೆಂದು ಹೇಳಕೂಡದು. ಆದ್ದರಿಂದ ತ್ರಿಮೂರ್ತಿಗಳ ಪೈಕಿ ಒಬ್ಬನಾಗಿಯೂ ಜೀವಕೋಟಿ ಪ್ರವಿಷ್ಟನಾಗಿಯೂ, ಇರುವ ನಾರಾಯಣನ ಅಂಶಭೂತರೇ ಜೀವರೆಂದು ಹೇಳಕೂಡದು. ‟ಬ್ರಹ್ಮ ವಿಷ್ಣು ರುದ್ರೇಂದ್ರಾಸ್ತೇ ಸಂಪ್ರಸೂಯಂತೆ” ಎಂಬುವ ಶ್ರುತಿಯಿಂದಲೂ ‟ತ್ರಯಸ್ತೇ ಕಾರಣಾತ್ಮಾನೋ ಜಾತಾ ಸಾಕ್ಷಾನ್ಮಹೇಶ್ವರಾತ್” ಎಂಬುವ ವಾಯುಸಂಹಿತೆಯ ವಾಕ್ಯದಿಂದಲೂ ತ್ರಿಮೂರ್ತಿಗಳಿಗೆ ಜನಕನು ಸಾಕ್ಷಾನ್ಮಹೇಶ್ವರನೆಂದು ಸಿದ್ಧವಾಗುತ್ತಿರಲಿಕ್ಕೆ ‟ಮಮೈವಾಂಶಃ” ಎಂಬುವ ಗೀತಾವಾಕ್ಯಕ್ಕೆ ವಿಷ್ಣುವಿನ ಅಂಶಭೂತರೇ ಜೀವರೆಂದು ಅರ್ಥಮಾಡುವದು. ಅನ್ಯಾಯವು ಆದ್ದರಿಂದ ಪೂರ್ವದಲ್ಲಿ ನಾವು ಹೇಳಿದಂತೆ ಕೃಷ್ಣಾಂತರ್ಯಾಮಿಯಾದ ಈಶ್ವರನ ಅಂಶಭೂತರೇ ಜೀವರೆಂದು ಹೇಳಬೇಕು. ಎಲೈ ಶಿವಾದ್ವೈತಿಯೇ ? ‟ಈಶ್ವರಸ್ಸರ್ವಭೂತಾನಾಂ ಹೃದ್ದೇಶೇರ್ಜುನತಿಷ್ಠತಿ” ಎಂಬುವಲ್ಲಿ ಈಶ್ವರನೆಂದರೆ ವಿಷ್ಣುವೆಂದು ಅರ್ಥಮಾಡಬೇಕು. ವಿಷ್ಣುವಿಗೆ ಈಶ್ವರನೆಂದು ಲೋಕವ್ಯವಹಾರವೂ ಉಂಟು. ನೋಡು. ವಿಷ್ಣು ಮೂರ್ತಿಗಳಿಗೆ ವೆಂಕಟೇಶ್ವರ, ವಿಠಲೇಶ್ವರ,

ಎಂದು ಈಶ್ವರ ಶಬ್ದ ವ್ಯವಹಾರವಿರುವದು. ಆದ್ದರಿಂದ ‹‹ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ›› ಎಂಬುವಲ್ಲಿ ಇರುವ ಈಶ್ವರಶಬ್ದವು ವಿಷ್ಣುವಾಚಕವೆಂದು ಕಂಡುಬರುವದರಿಂದ ಈಶ್ವರನು ಕೃಷ್ಣಾವತಾರವನ್ನೆತ್ತಿದ ವಿಷ್ಣುವೆಂದೇ ಹೇಳಬೇಕು. ಅಂದರೆ ಎಲೈ ಬ್ರಹ್ಮಾದ್ವೈತಿಯೇ ? ಎಷ್ಟು ಕಷ್ಟಪಡುವಿಯಲ್ಲ. ಅನೇಕ ಶ್ರುತಿ ಸ್ಮೃತ್ಯಾದಿಗಳಲ್ಲಿ ಶಿವನು ತ್ರಿಮೂರ್ತಿಗಳಿಗಿಂತಲೂ ಅತಿರಿಕ್ತನು. ಎಂದು ಕಂಡುಬರುತ್ತದಲ್ಲದೆ, ಅವರಿಗೆ ಜನಕನೆಂದೂ ಕಂಡುಬರುತ್ತದೆ. ವಿಷ್ಣುವು ಮೂರ್ತಿತ್ರಯಾತೀತನೆಂದೂ ಮೂರ್ತಿತ್ರಯಕ್ಕೆ ಜನಕನೆಂದೂ, ಕಂಡುಬರುವದಿಲ್ಲವಾದರೂ ವಿಷ್ಣುವೇ ಈಶ್ವರನೆಂದು ಜೀವರು ವಿಷ್ಣುವಿನ ಅಂಶರೆಂದು ಸಾಧಿಸುವದು ಪಂಚದೇವತಾ ಉಪಾಸಕನಾದ ನಿನಗೆ ಯೋಗ್ಯವೇ ಸರಿ. ನೋಡು ! ‹‹ನಾದೇವಾಂಶೋದದಾತ್ಯನ್ನಂ ನಾವಿಷ್ಣುಃ ಪೃಥಿವೀಪತಿಃ ನಾಋಷಿಃ ಕುರುತೇಕಾವ್ಯಂ ನಾರುದ್ರಃ ಶ್ರುಮಪಾಠಕಃ›› ಎಂಬುವ ಸ್ಕಾಂದೋಕ್ತಿಯಿಂದ ರುದ್ರಾಂಶನಾದ ಬ್ರಾಹ್ಮಣನು ವೇದಪಾಠಕನು ಎಂಬುವದರಿಂದ ಶಿವನಿಗೆ ಬ್ರಾಹ್ಮಣ್ಯವೂ ವಿಷ್ಣುವಿನಿಗೆ ಪೃಥ್ವೀಪತಿಯೆಂದು ಹೇಳಿದ್ದರಿಂದ ವಿಷ್ಣುವಿನಿಗೆ ಕ್ಷತ್ರಿಯತ್ವವೂ ಸಿದ್ಧವಾಗುತ್ತದೆ. ‹‹ಸರ್ವೇಷಾಮೇವವರ್ಣಾನಾಂ ವರಿಷ್ಟಃ ಪರಮೇಶ್ವರಃ ವರಿಷ್ಟಯೋರ್ಹಿಸಂಬಂಧೋ ಯುಜ್ಯತೇನ ಪರಸ್ಯತುಃ›› ಎಂಬುವ ಪಾರಾಶರೋಕ್ತಿಯಿಂದ ಪರಮೇಶ್ವರನು ಬ್ರಾಹ್ಮಣನೆಂದು ಸಮಸ್ತ ವರ್ಣಗಳಿಗೆ ಶ್ರೇಷ್ಠನೆಂದು ಸಿದ್ಧವಾಗುತ್ತದೆ. ಇದಲ್ಲದೆ ‹‹ಕ್ಷತ್ರಿಯಃ ಪರಮೋಹರಿಃ | ಬ್ರಾಹ್ಮಣೋ ಭಗವಾನ್ ರುದ್ರಃ›› ಎಂಬುವ ಅದೇ ಉಕ್ತಿಯಿಂದ ವಿಷ್ಣುವು ಕ್ಷತ್ರಿಯನೆಂದು ಭಗವಾನ್ ರುದ್ರನು ಬ್ರಾಹ್ಮಣನೆಂದು ಸಿದ್ಧವಾಗುವದರಿಂದ ‹‹ಶ್ರೌತಸ್ಮಾರ್ತ ಸದಾಚಾರ್ಮೈಃ ಬ್ರಾಹ್ಮಣೈಃ ಪರಮೇಶ್ವರಃ ಮಹಾಬ್ರಾಹ್ಮಣಮೀಶಾನ ಮುಪಗಚ್ಛೇತ್ಸದೈವತು | ತಚ್ಛೇಷತ್ವೇನ ವಿಷ್ಣ್ವಾದೀನ್ ಸರ್ವೇಷಾಂ ಹ್ಯಾಸ್ತಿಕೋತ್ತಮು›› ಎಂಬುವ ಸ್ಕಾಂದೋಕ್ತಿಯಿಂದ ಬ್ರಾಹ್ಮಣನಾದ ಶಿವನೇ ಮಹೇಶ್ವರನೆಂದು ಆ ಮಹೇಶ್ವರನಾದ ಮಹಾ ಬ್ರಾಹ್ಮಣನನ್ನೇ ಉಪಗಮಿಸಬೇಕೆಂದು ಆ ಮಹೇಶ್ವರನ ಅಂಶಭೂತರೆ ವಿಷ್ಣ್ವಾದಿಗಳೆಂದು ಅವರನ್ನು ಹೊಂದಬೇಕೆಂತಲೂ ಸಿದ್ಧವಾಗುವದರಿಂದ ವಿಷ್ಣುವು ಈಶ್ವರಪದ ವಾಚ್ಯನಾಗಲಾರನು. ಇದಲ್ಲದೆ ‹‹ಈಶ್ವರಶ್ಶರ್ವ ಈಶಾನಶ್ಶಂಕರ ಶ್ಚಂದ್ರಶೇಖರಃ›› ಎಂಬುವ ಅಮರಕೋಶದಿಂದಲೂ ಶಿವನೇ ಈಶ್ವರನೆಂದು ಸಿದ್ಧವಾಗುತ್ತದೆ. ವಿಷ್ಣುವು ಕ್ಷತ್ರಿಯನೆಂಬುವದಕ್ಕೆ ಕ್ಷತ್ರಿಯಕುಲದಲ್ಲಿ ರಾಮಾವತಾರ, ಕೃಷ್ಣಾವತಾರಗಳ

ಜನ್ಮವೇ ನಿದರ್ಶಕವಾಗಿರುವದಲ್ಲದೆ ಲೋಕದಲ್ಲಿ ವಿಷ್ಣು ವಿಗ್ರಹಗಳಿಗೆ ಗೋವಿಂದರಾಜ, ರಂಗರಾಜ, ವರದರಾಜ, ಎಂಬುವ ನಾಮಗಳೂ ನಿದರ್ಶಕಗಳಾಗಿರುವವು. ಮತ್ತು ಪಾಂಚರಾತ್ರಾಗಮದಲ್ಲಿ ಹೇಳಲ್ಪಟ್ಟ ಕಲ್ಯಾಣೋತ್ಸವಗಳಲ್ಲಿ ವರ್ಮಶಬ್ದ ಪ್ರಯೋಗವು ಕೂಡ ಇರುವದರಿಂದ ವಿಷ್ಣುವು ಕ್ಷತ್ರಿಯನೆಂದು ಸಿದ್ಧವಾಗುವದು. ಇದಲ್ಲದೆ. ‟ಬ್ರಾಹ್ಮಣಾನಾಂ ಶಿವೋದೇವಃ ಕ್ಷತ್ರಿಯಾಣಾಂತು ಮಾಧವಃ” ಎಂಬುವ ಮನುಸ್ಮೃತಿಯಿಂದಲೂ ವಿಷ್ಣುವಿನಿಗೆ ಕ್ಷತ್ರಿಯದೇವತ್ವವು ಸ್ಪಷ್ಟವಾಗಿ ಹೇಳಲ್ಪಟ್ಟಿರುವದು. ಎಲೈ ಶಿವಾದ್ವೈತಿಯೇ ? ಲೋಕದಲ್ಲಿ ವಿಷ್ಣುವಿಗೆ ವೆಂಕಟೇಶ್ವರ, ವಿಠಲೇಶ್ವರ ಸ್ಥಾನಗಳಲ್ಲಿ ಈಶ್ವರಶಬ್ದ ವ್ಯವಹಾರವು ಕಂಡುಬರುವದರಿಂದಲೂ ಪರಶುರಾಮಾವತಾರದಲ್ಲಿ ವಿಷ್ಣುವಿನಿಗೆ ಬ್ರಾಹ್ಮಣಕುಲದಲ್ಲಿ ಉತ್ಪತ್ತಿಯೂ ಕೇಳಿಕೆಯಲ್ಲಿರುವದರಿಂದಲೂ ಅವನಿಗೆ ಕ್ಷತ್ರಿಯತ್ವವನ್ನು ಹೇಳಲಿಕ್ಕೆ ಆಗುವದಿಲ್ಲವೆಂದು ಅಂದರೆ ಬ್ರಹ್ಮಾದ್ವೈತಿಯೇ ! ಕೇಳು. ವೆಂಕಟೇಶ್ವರನಿಗೆ ಹಗ್ಗದಲ್ಲಿ ಹಾವಿನ ಆಭಾಸವಾದಂತೆ ವಿಷ್ಣುವೆಂದು ಹೇಳುವದು ಆ ಭಾಸಪ್ರಯುಕ್ತವೇ ಸರಿ. ಯಾಕಂದರೆ ರಾಮಾನುಜರು ವೆಂಕಟೇಶ್ವರನೆಂದು ತಿಳಿದುಕೊಂಡಿರುವ ಮೂರ್ತಿಯು ವಿಷ್ಣು ಮೂರ್ತಿಯಲ್ಲ. ಆದರೆ ವೀರೇಶ್ವರಮೂರ್ತಿಯು ಆದ್ದರಿಂದಲೇ ಆ ಮೂರ್ತಿಯಲ್ಲಿ ನಾಗಭೂಷಣಾದಿ ಶೈವಾಭರಣಗಳು ಕಂಡುಬರುವದಲ್ಲದೆ ಮೂಲವಿಗ್ರಹದಲ್ಲಿ ಶಂಖ ಚಕ್ರಾದಿ ವೈಷ್ಣವಲಾಂಛನಗಳು ಕಂಡುಬರುವದಿಲ್ಲ. ಆದ್ದರಿಂದ ಶ್ರೀಪತಿ ಪಂಡಿತರು ‟ವೀರೇಶ್ವರಸ್ಯ ರಾಮಾನುಜ ಕಲ್ಪಿತ ವೆಂಕಟೇಶ್ವರತ್ವಂ ರಜ್ಜುಸರ್ಪವದಾಭಾಸಮಾತ್ರಮೇವ ಎಂದು ಹೇಳಿರುವರಲ್ಲದೆ ವಿಠಲೇಶ್ವರಸ್ಯ ವಿಷ್ಣೋಃ ಶಿರಸಿ ಶಿವಲಿಂಗಧಾರಣದರ್ಶನಾತ್ ತತ್ರ ಷಷ್ಠೀ ತತ್ಪುರುಷ ಸಮಾಸೇನ ಈಶ್ವರಶಬ್ದೋ ನಿರ್ಣೀತಃ ಎಂದು ಹೇಳಿರುವರು ಅಂದರೆ ವಿಠಲಸ್ಯ ಈಶ್ವರಃ ವಿಠಲೇಶ್ವರಃ ಎಂದು ಪಂಢರಪುರದ ವಿಠ್ಠಲಮೂರ್ತಿಯು ಮಸ್ತಕದಲ್ಲಿ ಧರಿಸಿರುವ ಲಿಂಗಕ್ಕೆ ಬೋಧವಾಗುವದರಿಂದ ವಿಠಲೇಶ್ವರ ಎಂಬುವ ಶಬ್ದವು ವಿಷ್ಣುಮೂರ್ತಿಗೆ ಅನ್ವಯಿಸದೆ ಲಿಂಗಮೂರ್ತಿಗೆ ಅನ್ವಯಿಸುತ್ತದೆ. ಇನ್ನು ರುದ್ರಾಂಶದಿಂದ ಹುಟ್ಟಿದ ವಿಶ್ವಾಮಿತ್ರನು ಕ್ಷತ್ರಿಯಕುಲದಲ್ಲ ಹುಟ್ಟಿದವನಾಗಿದ್ದರೂ ಅವನಿಗೆ ತಪೋವ್ಯಾಪಾರದಿಂದ ಬ್ರಾಹ್ಮಣ್ಯವೂ ನಾರಾಯಣಾಂಶದಿಂದ ಪರಶುರಾಮನು ಬ್ರಾಹ್ಮಣಕುಲದಲ್ಲಿ ಹುಟ್ಟಿದರೂ ಅವನಿಗೆ ಯುದ್ಧವ್ಯಾಪಾರದಿಂದ ಕ್ಷತ್ರಿಯತ್ವವೂ ಲೋಕಪ್ರಸಿದ್ಧಗಳಾಗಿರುವವು. ನಾರಾಯಣಾಂಶನಾದ ಪರಶುರಾಮನು

ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದರಿಂದ ನಾರಾಯಣನು ಬ್ರಾಹ್ಮಣನೆಂಬುವದಕ್ಕೆ ಆಗುವದಿಲ್ಲ. ಯಾಕಂದರೆ ಶೈವ ವೈಷ್ಣವಚರುಗಳ ವ್ಯತ್ಯಾಸದಿಂದ ಅಂದರೆ ಭೃಗು ಪತ್ನಿಗೆ ದೊರೆಯತಕ್ಕ ಶೈವಚರುಪಿಂಡವು ವ್ಯತ್ಯಾಸವಾಗಿ ಕ್ಷತ್ರಿಯನಾದ ರಾಜನ ಪತ್ನಿಗೆ ಸಿಕ್ಕಿದ್ದರಿಂದ ಕ್ಷತ್ರಿಯ ಕುಲದಲ್ಲಿ ವಿಶ್ವಾಮಿತ್ರನೂ, ಕ್ಷತ್ರಿಯ ರಾಜನಿಗೆ ಸಿಗತಕ್ಕ ಚರುಪಿಂಡವು ಬ್ರಾಹ್ಮಣನಾದ ಭೃಗುವಿನ ಪತ್ನಿಗೆ ಸಿಕ್ಕಿದ್ದರಿಂದ ಬ್ರಾಹ್ಮಣ ಕುಲದಲ್ಲಿ ಪರಶುರಾಮನೂ ಹುಟ್ಟಿ ತಮ್ಮ ಉತ್ಪತ್ತಿಗೆ ಕಾರಣವಾದ ಶೈವ ಚರುವಿನ ತಪಸ್ಸು ಮೊದಲಾದ ಸಾತ್ವಿಕ ಕಾರ್ಯಗಳನ್ನು ವಿಶ್ವಾಮಿತ್ರನೂ, ವೈಷ್ಣವ ಚರುವಿನ ಕಾರ್ಯವಾದ ಯುದ್ಧ ಮೊದಲಾದ ರಾಜಸ ಕಾರ್ಯಗಳನ್ನು ಪರಶುರಾಮನೂ ಮಾಡ ತೊಡಗಿದರು. ಈ ವಿಷಯದಲ್ಲಿ "ಭೃಗೋಃ ಕ್ಷರುವಿಪರ್ಯಾಸೆ ಶೈವವೈಷ್ಣವಯೋಃ ಪುರಾ ಜಗತ್ಯಾಂ ವೈಷ್ಣವಾಂಶಸ್ತು ಜಾಮದಗ್ನ್ಯೋಽಪ್ಯಜಾಯತ ವಿಶ್ವಾಮಿತ್ರಸ್ತು ಶೈವಾಂಶೈರ್ಗಾಧಿಃ ಕೌಶಿಕನಂದನಃ। ಜನಯಾಮಾಸಪುತ್ರಂತು ತಪೋವಿದ್ಯಾಶಮಾತ್ಮಕಂ॥ ಪ್ರಾಪ್ಯಬ್ರಹ್ಮರ್ಷಿ ಸಮತಾಂ ಗತಃ" ಎಂಬುವ ಹರಿವಂಶವಾಕ್ಯವು ಪ್ರಮಾಣವಾಗಿದೆ. ಆದ್ದರಿಂದ ಪರಶುರಾಮಾವತಾರವನ್ನು ಬ್ರಾಹ್ಮಣ ಕುಲದಲ್ಲಿ ಮಾಡಿದ ಮಾತ್ರದಿಂದ ನಾರಾಯಣನಿಗೆ ಬ್ರಾಹ್ಮಣ್ಯವು ಸಿದ್ಧಿಸಲಾರದು. ಅವನಿಗೆ ಬ್ರಾಹ್ಮಣ ಕುಲದಲ್ಲಿ ಜನ್ಮವು ಚರು ವ್ಯತ್ಯಾಸದಿಂದ ತಿಳಿಯಬೇಕೇ ಹೊರತು ಅನ್ಯಥಾ ತಿಳಿಯಕೂಡದು. ಆದ್ದರಿಂದ ಶಿವನೇ ಸರ್ವೋತ್ಕೃಷ್ಟನು. ಶಿವನ ಅಂಶಭೂತರೆ ಜೀವರುಗಳು ಪ್ರತಿಬಿಂಬಸ್ವರೂಪರಲ್ಲವು. ಅಗ್ನಿಗೂ ಅಗ್ನಿಯ ಕಿಡಿಗೂ ಅಂಶಾಂಶಿಭಾವವಿರುವದರಿಂದ, ಅವೆರಡಕ್ಕೆ ಅಗ್ನಿತ್ವ ಸಾಮಾನ್ಯ ಧರ್ಮದಿಂದ ಅಭೇದವೂ, ಕಣತ್ವದಿಂದ ಭೇದವೂ ಕಂಡುಬರುವಂತೆ, ಶಿವಜೀವರುಗಳಿಗೆ ಅಂಶಾಂಶ ಭಾವವನ್ನು ಹೇಳಿದ ರೀನೇ ಶ್ರುತ್ಯುಕ್ತ ಭೇದಾಭೇದಗಳು ಸಿದ್ಧಿಸುವವು. ಈ ಭೇದಾಭೇದ ಮತವೇ ವೀರಶೈವರ ಮತವು. ಇದುವೇ ಮೋಕ್ಷಕ್ಕೆ ಕಲ್ಪವೃಕ್ಷಸ್ವರೂಪವಾದದ್ದು. ಇದುವೇ ಸರ್ವವೇದಾಂತಗಳ ಸಿದ್ಧಾಂತಸಾರವು. ಇದುವೇ ಸರ್ವಸಿದ್ಧಿಗಳನ್ನುಂಟುಮಾಡತಕ್ಕದ್ದು. ಎಂಬುವ ವಿಷಯದಲ್ಲಿ "ದ್ವೈತಾದ್ವೈತಮತಂ ವೀರಶೈವಂ ಮೋಕ್ಷೈಕಕಲ್ಪಕಂ ಸರ್ವವೇದಾಂತಸಿದ್ಧಾಂತಸಾರಂ ಸರ್ವಾರ್ಥಸಿದ್ಧಿದಂ" ಎಂದು ಪ್ರಮಾಣಭೂತವಾದ ಸಿದ್ಧಾಂತಾಗಮವು ಘಂಟಾಘೋಷವಾಗಿ ಸಾರುತ್ತದೆ. ಆದ್ದರಿಂದ ಬ್ರಹ್ಮಾದ್ವೈತಿಯೇ ಜೀವರು ಪ್ರತಿಬಿಂಬಸ್ವರೂಪರು ಎಂಬುವ ನಿನ್ನ ವಾದವನ್ನು ಬಿಟ್ಟು ಅಂಶಾಂಶಿ ಭಾವವನ್ನು ಒಪ್ಪಿಕೊಳ್ಳುವದು ಯೋಗ್ಯವ

ಲ್ಲವೆ? ಎಲೈ ಶಿವಾದ್ವೈತಿಯೇ? ಆಣವಮಲಕ್ಕೆ ನೀನು ಮೂವತ್ತಾರು ತತ್ವಗಳಲ್ಲಿ ಯಾವ ತತ್ವದಲ್ಲಿ ಅಂತರ್ಭಾವಮಾಡುವಿ? ಶುದ್ಧವಿದ್ಯಾ ತತ್ವವಂತೂ "ಸರ್ವಾರ್ಥಕಶ್ಶಿವೋಹಂ" ಎಂಬುವ ಐಕ್ಯಜ್ಞಾನವು. ಅಂದರೆ ತರಂಗದಂತಿರುವ ಸರ್ವ ಪ್ರಪಂಚಕ್ಕೂ ಸಮುದ್ರದಂತಿರುವ ಶಿವರೂಪವಾದ ಅಹಂ ಶಬ್ದಾರ್ಥಕ್ಕೂ ಐಕ್ಯ ಜ್ಞಾನವೇ ಶುದ್ಧ ವಿದ್ಯಾ ತತ್ವವೆನಿಸಿತು. ಇದರಲ್ಲಂತೂ ಆಣವಮಲದ ಅಂತರ್ಭಾವವನ್ನು ಹೇಳುವದಕ್ಕೆ ಆಗುವದಿಲ್ಲ. ಇನ್ನು ಮಾಯಾತತ್ವದಲ್ಲಿ ಅಂತರ್ಭಾವವನ್ನು ಮಾಡುವೆನೆಂದರೆ ಮಾಯಾದಿ ವಿದ್ಯಾಂತಗಳಾದ ಆರು ತತ್ವಗಳಿಗೂ ಮಾಯೀಯ ಮಲವೆಂದು ನೀನೇ ಹೇಳಿರುವಿ. ಅಂದಮೇಲೆ ಮಾಯಾ ತತ್ವದಲ್ಲಿಯೂ ಆಣವಮಲಕ್ಕೆ ಅಂತರ್ಭಾವವಾಗಲಾರದು. ಇನ್ನು ಪ್ರಕೃತಿ ತತ್ವ ಮೊದಲುಗೊಂಡು ಮುಂದಿನ ಪೃಥಿವ್ಯಂತ ತತ್ವಗಳಿಗೂ ಕಾರ್ಮಿಕ ಮಲವೆಂದು ಹೇಳಿರುವಿ, ಆದ್ದರಿಂದ ಆಣವಮಲವು ಕಾರ್ಮಿಕ ಮಲದಲ್ಲಿಯೂ ಅಂತರ್ಭೂತವಾಗಲಾರದು. ಅಂದಮೇಲೆ ಆಣವಮಲಕ್ಕೆ ಯಾವ ತತ್ವದಲ್ಲಿ ಅಂತರ್ಭಾವವು. ಅಂದರೆ ಬ್ರಹ್ಮಾದ್ವೈತಿಯೇ? ಕೇಳು. ಶುದ್ಧ ವಿದ್ಯಾತತ್ವದ ಆವಿರ್ಭಾವಾನಂತರದಲ್ಲಿ ಮಾಯಾತತ್ವದ ಆವಿರ್ಭಾವಕ್ಕಿಂತ ಪೂರ್ವದಲ್ಲಿ ಇದು ಸಮುದ್ರವು. ಇದು ತರಂಗವು. ಎಂಬುವ ವಿಭಾಗ ಬುದ್ಧಿಯಂತೆ ತನ್ನಲ್ಲಿ ಸೂಕ್ಷ್ಮರೂಪವಾಗಿರುವ ಸಮಸ್ತ ಪ್ರಪಂಚಕ್ಕೂ, ತನಗೂ ಯಾವ ವಿಭಾಗ ಬುದ್ಧಿಯುಂಟೋ ಅದುವೇ ಆಣವಮಲವೆನಿಸುವದು. ಈ ವಿಷಯದಲ್ಲಿ "ಮಾಯೋಪರಿಮಹಾಮಾಯಾ" ಎಂಬುವ ಆಗಮ ವಾಕ್ಯವು ಪ್ರಮಾಣವಾಗಿದೆ. "ಮಾಯೋಪರಿ ಶುದ್ಧ ವಿದ್ಯಾಧಶ್ಚ ವರ್ತತೇ" ಎಂಬುವ ಅಭಿಯುಕ್ತರ ವಾಕ್ಯವೂ ಕೂಡ ಪ್ರಮಾಣವಾಗಿದೆ. ಎಲೈ ಶಿವಾದ್ವೈತಿಯೇ? ಮಾಯಾ ತತ್ವವಾದರೂ ವಿಭಾಗಬುದ್ಧಿಯಲ್ಲವೇ? ಅಂದರೆ ಮಾಯಾತತ್ವವು ವಿಭಾಗ ಬುದ್ಧಿರೂಪವಾಗುವದಿಲ್ಲ. ಅದು ಅನ್ಯೋನ್ಯಾಭಾವವೆಂಬ ಭೇದ ಬುದ್ಧಿರೂಪವಾಗುವದು. ಆದ್ದರಿಂದ ಮಾಯಾತತ್ವವು ಆಣವಮಲವೆನಿಸುವದಿಲ್ಲ. ಆದರೆ ಮಾಯೀಯ ಮಲಾಂತರ್ಗತವಾಗುವದು. ಹಾಗಾದರೆ ಆಣವಮಲವೆಂಬುವದೊಂದನ್ನು ಸೇರಿಸಿಕೊಂಡು ಮೂವತ್ತೇಳು ತತ್ವಗಳನ್ನು ಹೇಳುವಿಯೇನು? ಇಲ್ಲ! ಮೂವತ್ತಾರು ತತ್ವಗಳನ್ನೇ ಹೇಳುವೆನು. ಹಾಗಾದರೆ ಆಣವಮಲವನ್ನು ಯಾವ ತತ್ವದಲ್ಲಿ ಸೇರಿಸುವಿ? ಅಂದರೆ ಮಾಯಾತತ್ವದಲ್ಲಿಯೇ ಸೇರಿಸಿಬಿಡುವೆನು. ಅದು ಹ್ಯಾಗೆ ವಿಭಾಗ ಬುದ್ಧಿಗೂ ಅನ್ಯೋನ್ಯಾಭಾವ ಬುದ್ಧಿಗೂ

ವೈಲಕ್ಷಣ್ಯವಿಲ್ಲವೇನು ? ,,ಘಟೋಽನರೂಪಂ'' ಎಂಬುವ ಪ್ರತೀತಿಯಾಗುವಂತೆ ,,ಘಟವಿಭಕ್ತಂ ರೂಪಂ'' ಎಂಬದಾಗಿ ಪ್ರತೀತಿಯಾಗದಿರುವದರಿಂದ ಅನ್ಯೋನ್ಯಾಭಾವ ವಿಭಾಗಗಳು, ಪರಸ್ಪರ ಭಿನ್ನಗಳು, ಇರುವದರಿಂದ ಅವುಗಳ ಬುದ್ಧಿಗಳೂ ಕೂಡಾ ಪರಸ್ಪರ ವಿಲಕ್ಷಣಗಳೆಂದು ತಿಳಿದುಬರುತ್ತದೆ. ಅಂದಮೇಲೆ ವಿಭಾಗ ಬುದ್ಧಿರೂಪವಾದ ಆಣವಮಲವನ್ನು ಅನ್ಯೋನ್ಯಾಭಾವ ಬುದ್ಧಿರೂಪವಾದ ಮಾಯಾತತ್ವದಲ್ಲಿ ಸೇರಿಸುವ ಬಗೆ ಹೇಗೆ? ಅಂದರೆ ಬ್ರಹ್ಮಾದ್ವೈತಿಯೇ ? ಸಾಗರದಲ್ಲಿ ತರಂಗಗಳಿಗೆ ಅನ್ಯೋನ್ಯಾ ಭಾವವಿರದೆ ಇದು ಸಮುದ್ರವು, ಇದು ಸಮುದ್ರದ ತರಂಗವು ಎಂಬದಾಗಿ ಸಮುದ್ರದೊಳಗಿನ ತರಂಗಕ್ಕೆ ವಿಭಾಗವಿರುವಂತೆಯೂ, ಯೋಗಿಯ ಸಂಕಲ್ಪರೂಪವಾದ ಇಚ್ಛಾಶಕ್ತಿಯ ಗರ್ಭದಲ್ಲಿರುವ ಇದು ಸುವರ್ಣವೆಂಬುವ ವೃತ್ತಿಯು. ಆ ವೃತ್ತಿಯುಳ್ಳವನು ನಾನು. ಎಂಬದಾಗಿ ವಿಭಾಗಬುದ್ಧಿ ಪುಂಟಾಗುವಂತೆಯೂ. ಆಣವಮಲವು ಇರುವದು. ಆ ಸೂಕ್ಷ್ಮವೃತ್ತಿರೂಪವಾದ ಸುವರ್ಣವನ್ನು ಭಕ್ತರ ಅನುಗ್ರಹಕ್ಕಾಗಿ ಬಾಹ್ಯದಲ್ಲಿ ತನ್ನ ಸಾಮರ್ಥ್ಯದಿಂದಲೇ ಸ್ಥೂಲವನ್ನಾಗಿ ಮಾಡಿಕೊಟ್ಟ ಮೇಲೆ ಆ ಸ್ಥೂಲಸುವರ್ಣಕ್ಕೂ ತನಗೂ ಅನ್ಯೋನ್ಯಾಭಾವ ಬುದ್ಧಿಯುಂಟಾಗುವಂತೆಯೂ ಮಾಯೆಯಿರುವದು. ಆದ್ದರಿಂದ ಇವೆರಡಕ್ಕೂ ಮಾಯಾತ್ವದಿಂದ ತತ್ವ ನಿರೂಪಣಕಾರರು ಮಾಯಾತತ್ವವೆಂದೇ ಹೇಳಿಬಿಟ್ಟರು. ಆದ್ದರಿಂದ ಮೂವತ್ತಾರು ತತ್ವಗಳಿಗಿಂತಲೂ ಮಹಾ ಮಾಯೆಯೆಂಬ ಆಣವ ಮಲವು ಅತಿರಿಕ್ತವಲ್ಲ. ಆದರೆ ಮಾಯಾತತ್ವಾಂತರ್ಗತವೆಂದು ಹೇಳುವೆವು. ಅಥವಾ ಶಿವಾದ್ವೈತ ಮಂಜರಿಕಾರರು ಹೇಳಿರುವಂತೆ ತನ್ನಲ್ಲಿ ಲೀನವಾದ ಚರಾಚರ ಪ್ರಪಂಚವುಳ್ಳ ಪರಮೇಶ್ವರನ ದಶೆಯಿಂದ ಅವನ ಇಚ್ಛಾಶಕ್ತಿಯ ಯೋಗದಿಂದ ವಿಭಕ್ತವಾದ ಅಂಶವು ಮಾಯಾಶಕ್ತಿಯಲ್ಲಿ ಪ್ರವಿಷ್ಟವಾಗಿ ಪ್ರತಿಸ್ಫುರಿಸುವದೇ ಪುರುಷತತ್ವವು. ಇದು ಅಸ್ವತಂತ್ರ ಪ್ರಕಾಶವುಳ್ಳ ಮಹೇಶ್ವರನಿಂದ ವಿಚ್ಛಿನ್ನವಾದ್ದರಿಂದ ಮಾಯೆಯಿಂದ ಆವರಿಸಲ್ಪಟ್ಟು ನಾನು ಈಶ್ವರನಲ್ಲವು. ಎಂಬದಾಗಿ ಆತ್ಮನಾದ ತನ್ನಲ್ಲಿ ಅನಾತ್ಮತ್ವ ಬುದ್ಧಿಯುಂಟಾಗುವದು. ಅದರಂತೆ ಅನಾತ್ಮಗಳಾದ ದೇಹಾದಿಗಳಲ್ಲಿ ಆತ್ಮತ್ವ ಬುದ್ಧಿಯುಂಟಾಗುವದು. ಹ್ಯಾಗಂದರೆ ನಾನು ಸ್ಥೂಲನು, ನಾನು ಕೃಶನು, ನಾನು ಗಮನಾಗಮನಗಳುಳ್ಳವನು. ಎಂಬದಾಗಿ ಅಭಿಮಾನಿಸಿಕೊಳ್ಳುವನು. ಅಂದರೆ ಆತ್ಮನಲ್ಲಿ ಅನಾತ್ಮಬುದ್ಧಿಯು ಅನಾತ್ಮದಲ್ಲಿ ಆತ್ಮಬುದ್ಧಿಯು, ಇವೆರಡೂ ಆಣವ ಮಲವು, ಎಂದು ಶಿವಾದ್ವೈತ

ತಮಂಜರಿಕಾರರು ಹೇಳಿರುವರು. ಅಂದರೆ ಇವರ ತಾತ್ಪರ್ಯವು ಮಾಯಾ
ತತ್ವವೇ ಆಣವ ಮಲವೆಂದು ಆಯಿತು. ಇನ್ನು ಮುಂದಿನ ಐದು ತತ್ವಗಳು
ಮಾಯೀಯ ಮಲವೆಂದೂ ಮುಂದಿನ ಪ್ರಕೃತಿ ಮೊದಲುಗೊಂಡು ಪೃಥಿವ್ಯಂತ
ತತ್ವಗಳು ಕಾರ್ಮಿಕಮಲವೆಂದು ಹೇಳಿದಂತಾಯಿತು. ಇವರು ಕಲಾದಿ
ವಿದ್ಯಾಂತ ಐದು ತತ್ವಗಳು ತನ್ನ ಸರ್ವಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯ
ತ್ವ, ವ್ಯಾಪಕತ್ವ, ಶಕ್ತಿಗಳ ಕಿಂಚಿದಂಶಗಳು. ಲೌಕಿಕನಾದ ಒಬ್ಬ ಮಹಾರಾಜನು
ಒಬ್ಬಾನೊಬ್ಬ ಧನಿಕನ ಐಶ್ವರ್ಯವನ್ನೆಲ್ಲಾ ಸೆಳೆದುಕೊಂಡು ಅವನ ಜೀವನಾ
ರ್ಥವಾಗಿ ಸ್ವಲ್ಪವನ್ನು ಬಿಡುವಂತೆ ಆತ್ಮನು ಮಹೇಶ್ವರನಿಂದ ವಿಭಕ್ತನಾಗಿ
ಮಾಯಾವಶನಾದ್ದರಿಂದ ಆ ಮಾಯೆಯು ಅವನ ಐಶ್ವರ್ಯವನ್ನೆಲ್ಲಾ ಸೆಳೆದು
ಕೊಂಡು ಸ್ವಲ್ಪಸ್ವಲ್ಪ ಅಂದರೆ ಕಿಂಚಿತ್ಕರ್ತೃತ್ವ ಕಿಂಚಿಜ್ಞತ್ವಾದಿಗಳನ್ನು ಉಂಟು
ಮಾಡುವದು. ಈ ಕಿಂಚಿತ್ಕರ್ತೃತ್ವರೂಪವಾದ ಕಲಾತತ್ವ ಮೊದಲುಗೊಂಡು
ವಿದ್ಯಾತತ್ವ ಕಡೆಯಾದ ಐದು ತತ್ವಗಳು ತನ್ನ ಅಪರಿಚ್ಛಿನ್ನ ಸ್ವರೂಪಗಳಿಗೆ ಆವ
ರಣಗಳಾದ್ದರಿಂದ ಅವುಗಳಿಗೆ ಕಂಚುಕವೆಂದು ಹೆಸರು.

ಎಲೈ ಶಿವಾದ್ವೈತಿಯೇ ನಿಮ್ಮ ಶಿವಾದ್ವೈತಮಂಜರಿಕಾರರು "ಶಾಸ್ತ್ರ
ಯೋಗೇನ ವಹ್ನೇರ್ವಿಸ್ಫುಲಿಂಗಾವಿರ್ಭಾವವತ್ ತದಿಚ್ಛಾವಶಾದ್ವಿಭಕ್ತಸ್ಸನ್
ಉಕ್ತಲಕ್ಷಣಮಾಯಾಶಕ್ತೌ ಪ್ರತಿಬಿಂಬಗತ್ಯಾ ಪ್ರವಿಷ್ಟೋಯಃ ಪ್ರಕಾಶಃ ಸಪು
ರುಷತತ್ವಂಭವತಿ" ಎಂಬುವದರಿಂದ ಆತ್ಮಪ್ರತಿಬಿಂಬವೇ ಜೀವನೆಂದು ಅಭಿಪ್ರಾ
ಯಕೊಟ್ಟಂತಾಗಲಿಲ್ಲವೆ? ಅವರ ಅಭಿಪ್ರಾಯಕ್ಕೆ ವಿರುದ್ಧವಾಗಿ ಪ್ರತಿಬಿಂಬವಾ
ದವನ್ನು ನೀನು ಸ್ವೀಕರಿಸದೆ ಇರುವಲ್ಲಿ ನಿನ್ನ ತಾತ್ಪರ್ಯವೇನು? ಅಂದರೆ
ಬ್ರಹ್ಮಾದ್ವೈತಿಯೇ ಅವರ ತಾತ್ಪರ್ಯವು ನಿನ್ನ ಪ್ರತಿಬಿಂಬವಾದದಲ್ಲಿಲ್ಲವು. ಪ್ರತಿ
ಬಿಂಬಗತ್ಯಾ ಅಂದರೆ ಪ್ರತಿಸ್ಫುರಣರೂಪದಿಂದ ಎಂಬ ಅರ್ಥವು. ಮತ್ತೆ ಕೆಲವು
ಕಡೆಯಲ್ಲಿ ಪ್ರತಿಸ್ಫುರಣರೂಪದಿಂದ ಎಂತಲೂ ಬರೆದಿರುವರು. ಸೂರ್ಯನ ಅತಿ
ವಿರಳಗಳಾದ ಕಿರಣಗಳು ಸೂರ್ಯಕಾಂತಶಿಲೆಗೆ ಬಡೆದು ಪ್ರತಿಸ್ಫುರಿಸಲು, ಆ ಸೂ
ರ್ಯಕಾಂತಶಿಲೆಯ ಸಂಪರ್ಕದಿಂದ ಮೊದಲಿನ ಆ ವಿರಳಕಿರಣಕ್ಕಿಂತಲೂ ವಿಲಕ್ಷಣ
ವಾದ ಅಗ್ನಿಯ ಕಣವು ಕಂಡುಬರುವಂತೆ ಚಿದ್ರೂಪ ಮಹೇಶ್ವರನ ಕಿರಣರೂಪ
ವಾದ ಅಂಶವು ಮಾಯೆಯ ಸಂಪರ್ಕದಿಂದ ಆ ಮೊದಲಿನ ಮಹೇಶ್ವರನ ಅಂಶ
ಕ್ಕಿಂತಲೂ ವಿಲಕ್ಷಣವಾದ ಪುರುಷತತ್ವವೆನಿಸಿತು. ಮುದುಕಿಯಾದ ವೇಶ್ಯಾಂಗ
ನೆಯು ಧನಿಕನಾದ ವಿಟನ ಐಶ್ವರ್ಯವನ್ನು ತನ್ನ ಕೃತ್ರಿಮ ರೂಪಲಾವಣ್ಯಾದಿಗ

ಳಿಂದ ಮೋಹಗೊಳಿಸಿ ಶೆಳೆದುಕೊಂಡು ಬಿಡುವಂತೆ, ತನ್ನ ಮುಂದಿನ ಪೃಥಿವ್ಯಂತ ತತ್ವಗಳಿಗೆ ಜನನಿಯಾದ್ದರಿಂದ ವೃದ್ಧಳಾದ ಈ ಮಾಯಾಂಗನೆಯು ತನ್ನ ಕೃತ್ರಿಮ ಸತ್ವಾದಿ ಗುಣಗಳನ್ನು ಪುರುಷನಿಗೆ ತೋರಿಸಿ ಅವನ ಸರ್ವಸ್ವವನ್ನು ಶೆಳೆದು ಕೊಂಡು ಬಿಡುವಳು. ಆ ಬಾಹ್ಯ ವೇಶ್ಯಾಂಗನೆಯು ಆ ವಿಟನ ಐಶ್ವರ್ಯವೆಲ್ಲವನ್ನು ಕಿತ್ತುಕೊಂಡಾಗ್ಯೂ ಅವನಮೇಲೆ ಕನಿಕರವಿಟ್ಟು ಅವನ ಜೀವನಕ್ಕಾಗಿ ಸ್ವಲ್ಪ ಕೊಟ್ಟುಬಿಡುವಂತೆ ಈ ಮಾಯಾಂಗನೆಯು ಕೂಡ ಆತ್ಮನ ಅಪರಿಚ್ಛಿನ್ನವಾದ ಐಶ್ವರ್ಯವೆಲ್ಲವನ್ನು ಎಳೆದುಕೊಂಡಾಗ್ಯೂ ಕಿಂಚಿಜ್ಞತ್ವಾದಿ ಕೆಲವು ಅಂಶಗಳನ್ನು ಉಳಿಸಿರುವಳು. ಆದ್ದರಿಂದ ಲಿಂಗಾಂಗ ಸಾಮರಸ್ಯವನ್ನು ಮಾನಿಸುವ ಯಾವ ಆಚಾರ್ಯರೂ ಕೂಡ ಮಿಥ್ಯಾಭೂತವಾದ ಪ್ರತಿಬಿಂಬವಾದವನ್ನು ಮಾನಿಸಲಾರರು. ಎಲೈ ಶಿವಾದ್ವೈತಿಯೇ ಚಿದ್ರೂಪ ಬ್ರಹ್ಮದ ಅಂಶವೇ ಜೀವನೆಂದರೆ ಬ್ರಹ್ಮವು ಸಾವಯವವಾಗಲಿಲ್ಲವೆ ? ಅಂದರೆ ಈ ಆಕ್ಷೇಪದ ಸಮಾಧಾನವನ್ನು ಹಿಂದಿನ ಪರಿಣಾಮವಾದದಲ್ಲಿಯೇ ಹೇಳಿರುವೆವು. ಶಿವನು ಸಂಕಲ್ಪರೂಪವಾದ ಇಚ್ಛಾಶಕ್ತಿಯಲ್ಲಿ ಅಘಟಿತ ಘಟನಾಸಾಮರ್ಥ್ಯವಿದೆಯೆಂದು ಹೇಳಿ ಶಿವಯೋಗಿಯ ದೃಷ್ಟಾಂತವನ್ನೂ ಕೊಟ್ಟಿರುವೆವು. ಎಲೈ ಶಿವಾದ್ವೈತಿಯೇ ನೀನು ಒಮ್ಮೆ ಇಚ್ಛಾಶಕ್ತಿಯಂತಲೂ ವಿಮರ್ಶಶಕ್ತಿಯಂತಲೂ ಹೇಳುವಿ. ಇವೆರಡೂ ಪರ್ಯಾಯನಾಮಗಳೊ ಅಥವಾ ಭಿನ್ನನಾಮಗಳೊ ? ಬ್ರಹ್ಮಾದ್ವೈತಿಯೇ ಅವೆರಡೂ ಪರ್ಯಾಯನಾಮಗಳಾಗಿರುವವು. ಚಿಚ್ಛಕ್ತಿಯಂದರೆ ಯಾವದು ? ಅದೂಕೂಡ ಇಚ್ಛಾಶಕ್ತಿಯೇ ಆಗಿರುವದು. ಚಿಚ್ಛಕ್ತಿಯಂದರೆ ಚಿತ್ತಿನ ಶಕ್ತಿಯು ಚಿದ್ರೂಪ ಪರಶಿವನ ಶಕ್ತಿ ಎಂಬರ್ಥವು. ಇದುವೇ ‹‹ಚಿನ್ಮಾತ್ರೋಽಹಂ ಸದಾಶಿವಃ›› ಎಂಬುವ ಸ್ವರೂಪಾನುಭವಕ್ಕೆ ಕಾರಣವಾದ ಅಂತಃಕರಣವೆಂಬ ಸಂಕಲ್ಪವು. ಈ ಸಂಕಲ್ಪವು ಅಥವಾ ಇಚ್ಛಾಶಕ್ತಿಯು ಜ್ಞಾನಕ್ರಿಯೆಗಳನ್ನು ಒಳಕೊಂಡಿರುವದು. ‹‹ಜ್ಞಾನಕ್ರಿಯಾದಿಗರ್ಭೇಚ್ಛಾ ಶಕ್ತಿರ್ಯಃ ಪ್ರಸರಾತ್ಮಕಃ ಸಂಕಲ್ಪೋಕ್ತಸ್ಸ ಉನ್ಮೇಷಃ ಪ್ರೋಕ್ತಂಹ್ಯೇತತ್ ಸ್ವತಂತ್ರಕೇ›› ಎಂಬದಾಗಿ ಇಚ್ಛಾಶಕ್ತಿಗೆ ಸಂಕಲ್ಪವೆಂದು ಹೇಳಲ್ಪಟ್ಟಿರುವದು. ಅದು ಒಂದೇ ಇದ್ದಾಗ್ಯೂ ಅದು ನಾನಾಪ್ರಕಾರವಾಗುವ ಬಗೆ ಹೇಗೆಂಬುವ ವಿಷಯದಲ್ಲಿ ‹‹ಸೈಕಾಪಿ ಸತ್ಯ ನೈಕತ್ವಂ ಯಥಾಗಚ್ಛತಿತಚ್ಛೃಣು ಏವಮೇತದಿತಿಜ್ಞೇಯಂ ನಾನ್ಯಥೇತಿಸುನಿಶ್ಚಿತಂ || ಜ್ಞಾಪಯಂತಿ ಜಗತ್ಯತ್ರಜ್ಞಾನಶಕ್ತಿರ್ನಿಗದ್ಯತೇ | ಏವಂ ಭವತ್ವಿದಂ ಸರ್ವಮಿತಿಕಾರ್ಯೋನ್ಮುಖೀಯದಾ || ಜಾತಾತಶದೈವ ಸಾತದ್ವತ್ಕುರ್ವತ್ಯಪಿ ಕ್ರಿಯೋಚ್ಯತೇ | ಏವ

ಮೇಷಾದ್ವಿರೂಪಾಪಿ ಪುನರ್ಭೇದೈರನೇಕತಾಂ ||" ಎಂದು ಒಂದೇ ಇಚ್ಛಾಶಕ್ತಿಯು ಅನೇಕಪ್ರಕಾರವಾಗಿರುವದೆಂದು ಹೇಳಲ್ಪಟ್ಟಿರುವದು. ಎಲೈ ಶಿವಾದ್ವೈತಿಯೇ ಸರ್ವಜ್ಞತ್ವ ಸರ್ವಕರ್ತೃತ್ವಾದಿ ಶಕ್ತಿಗಳು, ಮಿಥ್ಯಾಭೂತವಾದ ಮಾಯಿಯ ಸಂಬಂಧದಿಂದ ದರ್ಪಣದ ಮಾಲಿನ್ಯವು ಪ್ರತಿಬಿಂಬಿತ ಮುಖದಲ್ಲಿ ಕಂಡುಬರುವಂತೆ, ಮಾಯೆಯ ಸ್ವಾಭಾವಿಕ ಗುಣಗಳಾದ ಸರ್ವಜ್ಞತ್ವ ಸರ್ವಕರ್ತೃತ್ವಾದಿ ಗುಣಗಳು ಅಲ್ಲಿ ಪ್ರತಿಬಿಂಬಿತ ಈಶ್ವರನಲ್ಲಿ ಹೇಳುವದು ಯುಕ್ತವಾಗಿದೆಯಲ್ಲದೆ, ಇವುಗಳು ಈಶ್ವರನ ಸ್ವಾಭಾವಿಕ ಗುಣಗಳೇ ಎಂದು ಹೇಳುವದು ಯುಕ್ತವಲ್ಲ. ಯಾಕಂದರೆ ಚಿದ್ರೂಪ ಪರಬ್ರಹ್ಮವು ನಿರ್ಲಿಪ್ತವಾಗಿರುವದಲ್ಲವೇ? ತನ್ನ ಸ್ವಾಭಾವಿಕ ಶಕ್ತಿಯಿಂದ ಸರ್ವಜ್ಞತ್ವಾದಿ ಗುಣಗಳುಳ್ಳದ್ದಾಗುವದು ಎಂದು ಹೇಳಿದರೆ ಆ ಪರಶಿವಬ್ರಹ್ಮದ ನಿರ್ಲೇಪತ್ವಕ್ಕೆ ಹಾನಿಯಾಗುವದು. ಆದ್ದರಿಂದ ಆ ಪರಶಿವಬ್ರಹ್ಮಕ್ಕೆ ವ್ಯತಿರಿಕ್ತವಾದ ಮಿಥ್ಯಾಭೂತವಾದ ಮಾಯಾಕಲ್ಪಿತಗಳೇ ಸರ್ವಜ್ಞತ್ವಾದಿ ಶಕ್ತಿಗಳೆಂದು ಹೇಳಬೇಕು. ಅಂದರೆ ಅನ್ಯಪದಾರ್ಥದಿಂದ ಬಂದ ಸರ್ವಜ್ಞತ್ವಾದಿಗಳನ್ನು ಸ್ವೀಕರಿಸಿದರೆ ಅವನಿಗೆ ಸ್ವಾತಂತ್ರ್ಯವೆಲ್ಲಿ? ಕುಲಾಲನು ತನಗನ್ಯಗಳಾದ ಮೃತ್ತಿಕಾದಿಗಳನ್ನು ತೆಗೆದುಕೊಂಡು ಘಟವನ್ನು ರಚಿಸುವಂತೆ ಪರಶಿವಬ್ರಹ್ಮವು ತನಗನ್ಯವಾದ ಮಾಯೆಯನ್ನು ತೆಗೆದುಕೊಂಡು ಬ್ರಹ್ಮಾಂಡವೆಂಬ ಘಟವನ್ನು ರಚಿಸಿದರೆ ಅವನಿಗೆ ಈಶ್ವರತ್ವವೆಲ್ಲಿ ಉಳಿಯುವದು? ಆದ್ದರಿಂದ ತನ್ನ ಸ್ವರೂಪವಾದ ಚಂದ್ರನಲ್ಲಿ ಚಂದ್ರಿಕೆಯಂತಿರುವ ಸಂಕಲ್ಪವೆಂಬ ಇಚ್ಛಾಶಕ್ತಿಯಿಂದಲೇ ಬ್ರಹ್ಮಾಂಡಭಾಂಡವನ್ನು ಮಾಡುತ್ತಾನೆಂದು ಹೇಳಬೇಕು. ಈ ವಿಷಯದಲ್ಲಿ "ನಹಿಬೋಧೋವಿಚಿತ್ರಾರ್ಥ ನಿರ್ಮಾಣೇನ್ಯಮಪೇಕ್ಷತೆ | ಸಂಕಲ್ಪಾದೇವಯೋರೂಪ ಸಹಸ್ರಾಣಿ ಸೃಜತ್ಯಜಃ" ಎಂದು ಷಾಡ್ಗುಣ್ಯವಿವೇಕವೆಂಬ ಗ್ರಂಥವು ಹೇಳುತ್ತದೆ. ಅಂದರೆ ಬೋಧರೂಪನಾದ ಪರಶಿವನು ತಾನು ವಿಚಿತ್ರ ಸೃಷ್ಟಿಯನ್ನು ಮಾಡುವಲ್ಲಿ ತನಗನ್ಯವಾದ ಪದಾರ್ಥವನ್ನಪೇಕ್ಷಿಸಿಕೊಳ್ಳದೆ ತನ್ನ ಸಂಕಲ್ಪಮಾತ್ರದಿಂದಲೇ ನಿರ್ಮಿಸುವನು. ಆದ್ದರಿಂದ ಪರಶಿವಬ್ರಹ್ಮವು ನಿರ್ಲಿಪ್ತವಾಗಿಯೇ ಇರುವದು. ಅಂದರೆ ಅದಕ್ಕೆ ಪ್ರಾಕೃತ ಪದಾರ್ಥಗಳ ಲೇಪನವಾಗುವದಿಲ್ಲವು. ಬ್ರಹ್ಮಾದ್ವೈತಿಯೇ? ಜೀವಾತ್ಮನು ಪರಶಿವಬ್ರಹ್ಮದ ಅಂಶರೂಪವಾಗಿದ್ದು ಮಾಯಾದಿಗಳಲ್ಲಿ ಪ್ರವೇಶಿಸಿದರೆ ಅವುಗಳ ಲೇಪನವಾಗುವದು. ಅಂಥ ಲೇಪನದಿಂದ ಸಹಿತನಾದ ಜೀವನ ಸಂಬಂಧದಿಂದ ಪರಶಿವಬ್ರಹ್ಮಕ್ಕೂ ಮಾಯಾದಿಗಳ ಲೇಪನವಾಗುವದೆಂಬ ಭಯದಿಂದಲೇ ನೀನು ಪ್ರತಿಬಿಂಬವಾದ

ವನ್ನು ಮಾನಿಸುತ್ತೀಯಲ್ಲವೆ? ಇದು ನಿನ್ನ ತಪ್ಪು ತಿಳುವಳಿಕೆಯು. ಯಾಕಂದರೆ ಚಿಂತಾಮಣಿಯು ಅನೇಕ ಪದಾರ್ಥಗಳನ್ನು ಸಂಕಲ್ಪಮಾತ್ರದಿಂದಲೇ ನಿರ್ಮಿಸುವದಾದಾಗ್ಯೂ ಚಿಂತಾಮಣಿಗೆ ಆ ಪದಾರ್ಥಗಳ ಲೇಪವಾಗುವದಿಲ್ಲವಷ್ಟೆ? ಮತ್ತು ಆ ಪದಾರ್ಥಗಳು ಆ ಚಿಂತಾಮಣಿಯ ಪರಿಣಾಮಸ್ವರೂಪಗಳಾದಾಗ್ಯೂ ದಧಿಯೆಂಬ ಪರಿಣಾಮವು ಕ್ಷೀರಸ್ವರೂಪವನ್ನು ಕೆಡಿಸಿದಂತೆ ಚಿಂತಾಮಣಿಯ ಸ್ವರೂಪವನ್ನು ಕೆಡಿಸುವದಿಲ್ಲವೆಂಬುವದು ಯಾರಿಗೆ ತಿಳಿಯದ ಸಂಗತಿಯು? ಮತ್ತು ಶಿವಯೋಗಿಯು ತನ್ನ ಸಂಕಲ್ಪಮಾತ್ರದಿಂದಲೇ ಅನೇಕ ಪದಾರ್ಥಗಳನ್ನು ಹುಟ್ಟಿಸಿದರೂ ಆ ಸ್ಥೂಲಪದಾರ್ಥಗಳ ಗುಣದೋಷಗಳ ಲೇಪನವು ಆ ಶಿವಯೋಗಿಗೆ ಆಗುವದಿಲ್ಲವಷ್ಟೇ? ಮತ್ತು ಆ ಸ್ಥೂಲಪದಾರ್ಥಗಳು ಶಿವಯೋಗಿಯ ಸಂಕಲ್ಪಪರಿಣಾಮಗಳಾಗಿದ್ದರೂ ಆ ಶಿವಯೋಗಿ ಸ್ವರೂಪವನ್ನಾಗಲಿ ಅಥವಾ ಆ ಶಿವಯೋಗಿಯ ಸಂಕಲ್ಪ ಸ್ವರೂಪವನ್ನಾಗಲಿ ಕೆಡಿಸದೆ ಇರುವಂತೆ, ಈ ಚರಾಚರಾತ್ಮಕವಾದ ಪ್ರಪಂಚವು ಪರಶಿವಬ್ರಹ್ಮ ಸಂಕಲ್ಪದ ಪರಿಣಾಮಸ್ವರೂಪವಾಗಿದ್ದರೂ ಆ ಪರಶಿವಬ್ರಹ್ಮದ ಸ್ವರೂಪವನ್ನಾಗಲಿ ಅಥವಾ ಅವನ ಸಂಕಲ್ಪರೂಪವಾದ ವಿಮರ್ಶಶಕ್ತಿಯ ಸ್ವರೂಪವನ್ನೇ ಆಗಲಿ ಕೆಡಿಸುವದಿಲ್ಲ. ಆದ್ದರಿಂದ ಈಶ್ವರ ಜೀವರು ಪರಶಿವಬ್ರಹ್ಮದ ಪ್ರತಿಬಿಂಬಸ್ವರೂಪರೆಂದು ಹೇಳಕೂಡದು. ಆ ಪರಶಿವಬ್ರಹ್ಮವು ತನಗೆ ಅತಿರಿಕ್ತವಾದ ಮಾಯೆಯಲ್ಲಿ ಪ್ರತಿಫಲಿಸಲು, ಅದರಲ್ಲಿ ಈಶ್ವರತ್ವ, ಸರ್ವಜ್ಞತ್ವ, ಸರ್ವಕರ್ತೃತ್ವಾದಿಗಳು ಬರುತ್ತವಲ್ಲದೆ, ಶುದ್ಧಬ್ರಹ್ಮದಲ್ಲಿ ಯಾವ ಗುಣಗಳೂ ಇಲ್ಲ. ಆ ಮಾಯೆಯಲ್ಲಿ ಬ್ರಹ್ಮದ ಪ್ರತಿಬಿಂಬವೇ ಈಶ್ವರನು. ಇವನಲ್ಲಿಯೇ ಜಲಚಂದ್ರನಲ್ಲಿ ಚಲನವಲನಾದಿಗಳು ಕಂಡುಬರುವಂತೆ ಸರ್ವಜ್ಞತ್ವಾದಿಗಳು ಕಾಣಿಸಿಕೊಳ್ಳುವವು. ಈ ಈಶ್ವರನೆ ಜಗತ್ತಿಗೆ ನಿಮಿತ್ತಕಾರಣನು. ಶುದ್ಧಬ್ರಹ್ಮವು ಕಾರ್ಯವೂ ಅಲ್ಲ, ಕಾರಣವೂ ಅಲ್ಲ. ಎಂದು ಈಶ್ವರನೂಕೂಡ ಪ್ರತಿಬಿಂಬಸ್ವರೂಪನೇ ಆಗಿರುವನೆಂದು ಹೇಳಕೂಡದು. ಯಾಕಂದರೆ ಈ ನಿನ್ನ ಶಂಕೆಗೆ ಪೂರ್ವದಲ್ಲಿಯೇ ಸರಿಯಾದ ಉತ್ತರವನ್ನು ಹೇಳಿರುವೆನು. ಇನ್ನೂ ಕೇಳು. ಚಂದ್ರಪ್ರತಿಬಿಂಬವು ಜಲಾಧೀನವಾಗಿರುವಂತೆ ಮಾಯೆಯಲ್ಲಿರುವ ಬ್ರಹ್ಮ ಪ್ರತಿಬಿಂಬವು ಮಾಯಾಧೀನವಾಗಿ ಪರತಂತ್ರವಾಗಿರುವದರಿಂದ ಅದರಲ್ಲಿ ಈಶ್ವರತ್ವವೆಲ್ಲಿಬರುವದು. ಲೋಕದಲ್ಲಿಯಾದರೂ ಎಲ್ಲಿ ಪರತಂತ್ರತ್ವವು ಅಲ್ಲಿ ಈಶ್ವರತ್ವವಿಲ್ಲವಷ್ಟೆ? ಆದ್ದರಿಂದ ನಿರತಿಶಯ ಈಶ್ವರತ್ವವಿದ್ದಲ್ಲಿ ಪರತಂತ್ರತ್ವವೆಂದೂ ಇರಲಾರದು. ಪರತಂತ್ರತ್ವವಿದ್ದಲ್ಲಿ ಈಶ್ವರತ್ವವೆಂದೂ

ಇರಲಾರದು. ಆದ್ದರಿಂದ ಪರಶಿವಬ್ರಹ್ಮರೂಪವಾದ ಬಿಂಬಕ್ಕೆ ಅಥವಾ ಪರಶಿವ ಬ್ರಹ್ಮದ ಪ್ರತಿಬಿಂಬಕ್ಕೆ ಉಪಾಧಿಯಾದ ಮಾಯೆಗೆ ಆ ಮಾಯೆಯಲ್ಲಿ ಇರುವ ಪ್ರತಿಬಿಂಬವು ಪರತಂತ್ರವಾಗಿರುವದರಿಂದ ಅದು ಈಶ್ವರನೆನಿಸಲಾರದು. ಅದಕ್ಕೆ ಈಶ್ವರನೆಂದು ಹೆಸರಿಟ್ಟಿರುವದು ರಾಜನಾಗದ ದೂತನಿಗೆ ರಾಜನೆಂದು ಹೆಸರಿಟ್ಟಂತೆಯೇ ಸರಿ. ಆದ್ದರಿಂದ ಮಾಯೆಯಲ್ಲಿ ಬ್ರಹ್ಮಪ್ರತಿಬಿಂಬವೇ ಈಶ್ವರನೆಂಬುವ ನಿನ್ನ ಅಭಿಮಾನವನ್ನು ಬಿಟ್ಟು ನಾವು ಹಿಂದೆ ಪರಿಣಾಮವಾದದಲ್ಲಿ ಹೇಳಿದಂತೆ ಈಶ್ವರನಾವನೆಂಬದನ್ನು ತಿಳಿದುಕೊಂಡು ಧನ್ಯಜೀವಿಯಾಗು. ಬ್ರಹ್ಮಾದ್ವೈತಿಯೇ ನೋಡು. ಪರತಂತ್ರನಾದವನಿಗೆ ಈಶ್ವರನೆಂದು ಹೇಳಬಾರದೆಂಬುವ ವಿಷಯದಲ್ಲಿ ಆಗಮರಹಸ್ಯಕಾರರು ‚‚ಯೇಪೀಶ್ವರಂ ವ್ಯಪದಿಶಂತಿ ನಿಮಿತ್ತ ಹೇತುಂ ತೈರರ್ಪಿತಃಸ್ಥಲ ಜಲಾಂಜಲಿರೀಶಿತಾಯ್ಯೈ | ಅಸ್ಯಾಂಗನೋಪಗಮನೇನವಶೀಕೃತಸ್ಯ ಕಾಮಿನಾಶ್ವರಸ್ಥಿತಿಮಮಿಾ ಬತ ಸಂಗಿರಂತೆ||'' ಎಂದು ಎಷ್ಟು ಕಳಕಳಿಯಿಂದ ಹೇಳಿರುವರು. ಅಂದರೆ ಯಾರು ಈಶ್ವರನನ್ನು ನಿಮಿತ್ತಕಾರಣನನ್ನಾಗಿ ಹೇಳುವರೋ ಅವರಿಂದ ಈಶ್ವರತ್ವಕ್ಕೆ ಸ್ಥಲದಲ್ಲಿ ಜಲಾಂಜಲಿಯೇ ಕೊಡಲ್ಪಟ್ಟಿತು. ಒಬ್ಬಾನೊಬ್ಬ ಕಾಮಿಯಾದ ರಾಜನು ಪರಸ್ತ್ರೀಯಳನ್ನು ಉಪಗಮಿಸಿ ಅವಳಿಂದ ಪರತಂತ್ರನಾಗಲು, ಅವನ ಸ್ಥಿತಿಯನ್ನು ಇವರು ಈಶ್ವರನಿಗೆ ಹೇಳುತ್ತಾರೆ. ಈ ಹೇಳುವಿಕೆಯು ದುಃಖಜನಕವಾಗಿರುವದು ಎಂದು ಅವರ ಅಭಿಪ್ರಾಯವು. ಅಂದರೆ ಯಾರು ಸರ್ವಜ್ಞತ್ವ ಸರ್ವಕರ್ತೃತ್ವಾದಿಗಳನ್ನು ಪರಸ್ತ್ರೀಯಳಂತಿರುವ ಮಾಯೆಯಿಂದ ಕಲ್ಪಿತಗಳೆಂದು ಹೇಳುವರೋ ಅವರು ಈಶ್ವರನನ್ನು ಮಾನಿಸಲೇ ಇಲ್ಲವು. ಎಂಬುವದೇ ಈ ಶ್ಲೋಕದ ಮುಖ್ಯ ತಾತ್ಪರ್ಯವು. ಆದ್ದರಿಂದ ಅಗ್ನಿಯು ಒಂದಾನೊಂದು ಕಟ್ಟಿಗೆಯನ್ನು ಸುಡಬೇಕಾದರೆ ತನಗನ್ಯವಾದ ಮತ್ತೊಂದನ್ನು ಅಪೇಕ್ಷಿಸಿಕೊಳ್ಳದೆ ದಹನಕಾರ್ಯವನ್ನು ಮಾಡುವಂತೆಯೂ, ಜೇಡಹುಳವು ತನ್ನ ಜಾಲವೆಂಬ ವಿಚಿತ್ರಕಾರ್ಯವನ್ನು ಮಾಡಬೇಕಾದರೆ ತನಗನ್ಯವಾದ ಮತ್ತೊಂದನ್ನು ಅಪೇಕ್ಷಿಸಿಕೊಳ್ಳದೆ ಮಾಡುವಂತೆಯೂ, ಪರಮೇಶ್ವರನು ತಾನು ವಿಚಿತ್ರವಾದ ಜಗತ್ತನ್ನು ತನಗನ್ಯವಾದ ಮತ್ತೊಂದು ವಸ್ತುವನ್ನು ಅಪೇಕ್ಷಿಸಿಕೊಳ್ಳದೆ ಮಾಡುವನೆಂದು ತಿಳಿಯಬೇಕೇ ಹೊರತು ತನಗನ್ಯವಾದ ಮಾಯೆಯನ್ನು ಅಪೇಕ್ಷಿಸಿಕೊಂಡು ಮಾಡುತ್ತಾನೆಂದು ತಿಳಿಯಬಾರದು. ಆದ್ದರಿಂದ ಸರ್ವಜ್ಞತ್ವ ಸರ್ವಕರ್ತೃತ್ವಾದಿಗಳು ಸ್ವಾಭಾವಿಕಗಳಲ್ಲವೆಂದು ತಿಳಿಯಕೂಡದು. ಈ ವಿಷಯದಲ್ಲಿ ‚‚ತದಾತ್ಮ್ಯಾ ಕೃತ್ರಿಮೋ ಧರ್ಮೋಜ್ಞತ್ವ ಕರ್ತೃತ್ವಲ

ಕ್ಷಣಃ | ಯತಸ್ತದೀಪ್ಸಿತಂ ಸರ್ವಂ ಜಾನಾತಿಚ ಕರೋತಿಚ,, ಎಂಬುವ ಕಲ್ಲಟಾಚಾರ್ಯರ ಉಕ್ತಿಯು ಪ್ರಮಾಣವಾಗಿದೆ. ಅಂದರೆ ಪರಶಿವಬ್ರಹ್ಮದ ವಿಮರ್ಶಶಕ್ತಿಯು ವಿಭಾಗಾವಸ್ಥೆಯನ್ನು ಬಿಟ್ಟು ಕೇವಲ ಸ್ವಸ್ಥವಾಗಿರಲು ಸರ್ವಜ್ಞತ್ವ ಸರ್ವಕರ್ತೃತ್ವಾದಿ ರೂಪವಾದ ಧರ್ಮವು ಅಕೃತ್ರಿಮ ಸಹಜ) ವೆನಿಸುವದು. ಅಂದರೆ ಪರಮಾತ್ಮನ ಸ್ವಭಾವವೇ ಆಗಿಬಿಡುವದು. ಪರಮಾತ್ಮನ ಸ್ವಭಾವವೆಂದರೆ ವಿಮರ್ಶ ಶಕ್ತಿಯು ಅಥವಾ ಸಂಕಲ್ಪವು, ಅಥವಾ ಇಚ್ಛಾಶಕ್ತಿಯೆಂದು ಅರ್ಥವು. ಯಾಕಂದರೆ ಪರಮಾತ್ಮನು ತನ್ನ ಇಚ್ಛೆಗೆ ವಿಷಯವಾದ ಸಮಸ್ತ ಪ್ರಪಂಚವನ್ನು ತಿಳಿದು ಮಾಡುತ್ತಾನೆ. ಆದ್ದರಿಂದ ತನ್ನಲ್ಲಿ ಲೀನವಾದ ಚರಾಚರ ಪ್ರಪಂಚವುಳ್ಳ ಪರಶಿವಬ್ರಹ್ಮದಿಂದ ,,ಕಿಮೇತಸ್ಮಾದೇಕಾಕೀನರಮತೇ ಸದ್ವಿತೀಯ ಮೈಚ್ಛತ್ ಸಏತಾವಾನಾಸ ತತ್ಸೃಷ್ಟ್ವಾ ತದೇವಾನುಪ್ರಾವಿಶತ್ತದನು ಪ್ರವಿಶ್ಯ ಸಚ್ಚತ್ಯಚ್ಚಾ ಭವತ್,, ಎಂಬುವ ಶ್ರುತಿಯಂತೆ ಇಚ್ಛಾಶಕ್ತಿಯು ಆವಿರ್ಭವಿಸಿತು. ಆ ಇಚ್ಛಾಶಕ್ತಿಯಿಂದ ಮುಂದೆ ಸರ್ವಜ್ಞತ್ವ ಸರ್ವಕರ್ತೃತ್ವಾದಿಗಳು ಆವಿರ್ಭವಿಸಿ ಕಾರಣಕಾರ್ಯವಾದ ಪ್ರಪಂಚವಾಯಿತು. ಪುನಃ ಅವಿರ್ಭಾವ ದೆಶೆಯಲ್ಲಿ ಆ ಸರ್ವಜ್ಞತ್ವ ಸರ್ವಕರ್ತೃತ್ವಾದಿಗಳು ತಮಗೆ ಕಾರಣವಾದ ಆ ಪರಶಿವ ಬ್ರಹ್ಮದ ಸ್ವಭಾವಭೂತವಾದ ವಿಮರ್ಶ ಶಕ್ತಿಯಲ್ಲಿ ಲೀನಗಳಾಗುವವಾದ್ದರಿಂದ ಸ್ವಾಭಾವಿಕ ಗುಣಗಳೆನಿಸುವವು. ಆದ್ದರಿಂದ ಪರಶಿವ ಬ್ರಹ್ಮವು ಕುಲಾಲನಂತೆ ತನಗಿತರವಾದ ಮಾಯೆಯನ್ನು ತೆಗೆದುಕೊಂಡು ಸರ್ವಜಗತ್ತನ್ನು ತಿಳಿದು ಮಾಡುವನೆಂದರೆ ಅನೀಶ್ವರತ್ವದೋಷವು ಬರುವದು. ಆದ್ದರಿಂದಲೇ ಶಿವಾದ್ವೈತ ಮಂಜರಿಕಾರರು ಕೂಡ ,,ಸ್ವಾತಿರಿಕ್ತ ಕಾರಣಾಂತರ ನೈರಪೇಕ್ಷ್ಯೇಣ ಈಪ್ಸಿತಾರ್ಥಪ್ರದ ಚಿಂತಾಮಣ್ಯಾದಿವತ್ ಯೋಗೀಮ್ಯೋರ್ಣಸಾಭವಚ್ಚ ಮಯೂರಾಂಡರಸಗತವಾದ ಪಕ್ಷಾದಿ ವರ್ಣವೈಚಿತ್ರ್ಯ ನ್ಯಾಯೇನ ತಾದಾತ್ಮ್ಯೇನ ಚಿದ್ವ್ಯಾಪ್ತಿರೂಪತ್ವೇನ ಸ್ವತಂತ್ರತಾಲಕ್ಷಣ ಸ್ಪಂದನ ರೂಪತ್ವೇನ ಚಿದುಜ್ವಲನ ರೂಪತ್ವೇನ ಚಿದಾಪ್ಯಾಯನ ರೂಪತ್ವೇನ ಚಿದ್ರೂಪತ್ವೇನಚ ಸ್ವಾತ್ಮಾಮಲ ಮುಕುರ ಮಂಡಲ ತಾದಾತ್ಮ್ಯಪನ್ನ ವಿಮರ್ಶ ಶಕ್ತಿ ಕ್ರೋಡೀಕೃತ ವ್ಯೋಮಾದಿ ಪಂಚ ಪ್ರಮೇಯ ವಿಶ್ವಾದಿ ಚತುರಾತ್ಮ ಲಕ್ಷಣ ಜಡಾತ್ಮಕಂ ವಿಶ್ವಂ ಸ್ವೇಚ್ಛಾ ಶಕ್ತಿರೂಪಾಪೋಹನ ಟಂಕವಶಾತ್ ಶಿವಾದಿ ಧರಣ್ಯಂತ ಷಟ್ತ್ರಿಂಶತ್ತತ್ವಾತ್ಮನಾ ವಿಚಿತ್ರೀಕೃತ್ಯ ಸೃಷ್ಟಿ ಸ್ಥಿತಿಸಂಹಾರ ಬಂಧ ಮೋಕ್ಷ ಲಕ್ಷಣ ಪಂಚಕೃತ್ಯ ಮಹಾನಾಟ್ಯರಸಿಕಸ್ಸನ್ ಕ್ರೀಡತ ಇತಿ

ರಾದ್ಧಾಂತಃ ಇಚ್ಛಾಶಕ್ತೇಃ ಸ್ವವಿಷಯತ್ವಾತ್ ವಿಶ್ವಸ್ಯ ಅಂತಸ್ಥಿತಿಂ ವಿನಾ ತದು ನ್ಮೇಷಾನುಪಪತ್ತೇಃ॥''

ಎಂದು ಹೇಳಿರುವರು. (ಇಲ್ಲಿ ವಿಶ್ವಾದಿ ಚತುರಾತ್ಮರೆಂದು ಹೇಳಿರುವದೂ ಆಕಾಶಾದಿ ಪೃಥಿವ್ಯಂತ ತತ್ವಗಳಿಗೆ ಕಾರಣಗಳಾದ ಪಂಚಶಕ್ತಿಗಳನ್ನು ಹೇಳುವಲ್ಲಿ ಪೃಥ್ವೀ ತತ್ವಕ್ಕೆ ಕಾರಣವಾದ ಚಿದ್ಧೃತಿ ಶಕ್ತಿಯನ್ನು ಹೇಳದೆ ಬಿಟ್ಟಿರುವದೂ ಲೇಖಕರ ಪ್ರಮಾದವೋ ಅಥವಾ ಮತ್ತಾರ ಪ್ರಮಾದವೋ ತಿಳಿಯದು.) ಆದ್ದರಿಂದ ಸರ್ವಜ್ಞತ್ವ ಸರ್ವಕರ್तೃತ್ವಾದಿ ಗುಣಗಳು ಬ್ರಹ್ಮದಲ್ಲಿ ಬ್ರಹ್ಮೇತರವಾದ ಮಾಯಾಕಲ್ಪಿತಗಳಲ್ಲ. ಆದರೆ ಸ್ವಾಭಾವಿಕಗಳೇ ಆಗಿರುವವು. ಎಲೈ ಶಿವಾದ್ವೈತಿಯೇ? ಪೂರ್ವದಲ್ಲಿ ನೀನು ಚಿತಿಶಕ್ತಿಯ ಸಂಕೋಚ ರೂಪವಾದ ಚಿತ್ತ ವಿಶಿಷ್ಟನೇ ಜೀವನೆಂದು ಹೇಳಿರುವಿಯಲ್ಲವೇ? ಹೌದು ಹೇಳಿರುವೆನು. ನನ್ನಂತೆಯೇ ಸಿದ್ಧಾಂತ ಶಿಖಾಮಣಿಯ ಟೀಕಾಕಾರರೂ ಕೂಡ ''ಚಿತಿಶಕ್ತಿ ಸಂಕೋಚ ಚಿತ್ತ ವಿಶಿಷ್ಟೋ ಜೀವಃ'' ಎಂದು ಹೇಳಿರುವರು. ಇದರಲ್ಲಿ ನಿನ್ನ ಆಕ್ಷೇಪವೇನು? ಅಂದರೆ ಶಿವಾದ್ವೈತಿಯೇ? ಚಿತ್ತವೆಂಬುವದು ಪ್ರಕೃತಿಯ ಕಾರ್ಯವಾದ ಅಂತಃಕರಣದೊಳಗಿನದಲ್ಲವೇ? ಇದಕ್ಕೆ ನೀನು ಅಖ್ಯಾತಿರೂಪವಾದ ಆಣವಮಲವೆಂದು ಹೇಳಿದಿ, ಇದು ಹೇಗೆ ಅಂದರೆ ಬ್ರಹ್ಮಾದ್ವೈತಿಯೇ? ಕೇಳು, ಚಿತ್ತವೆಂಬುವದನ್ನು ನಾವು ಅಂತಃಕರಣ ಕೋಟಿಯಲ್ಲಿಯೇ ಸೇರಿಸುವದಿಲ್ಲವು. ಆತ್ಮನ ಸಂಸಾರಕ್ಕೆ ಮೂಲಕಾರಣವಾದ ಯಾವ ಅಜ್ಞಾನ ಗ್ರಂಥಿಯೋ ಅದುವೇ ಚಿತ್ತವೆಂತಲೂ ಅದುವೇ ಅಖ್ಯಾತಿಯಂತಲೂ ಅದುವೇ ಆಣವಮಲವೆಂತಲೂ ಹೇಳುತ್ತೇನೆ. ಯಾಕಂದರೆ ಚಿತ್ತವೆಂಬುವದು ತನ್ನ ರಾಗಾದಿ ಮಾಲಿನ್ಯವನ್ನು ಬಿಟ್ಟು ಶುದ್ಧವಾಗಲು ಅದುವೇ ಚಿಚ್ಛಕ್ತಿ ವಿಕಾಸರೂಪವಾದ ಮೋಕ್ಷವೆನಿಸುವದು. ಈ ಚಿತ್ತವನ್ನು ಪ್ರಕೃತಿ ಕಾರ್ಯದಲ್ಲಿ ಸೇರಿಸಿದರೆ ಚಿತ್ತವನ್ನು ಶುದ್ಧಿಮಾಡಿಕೊಂಡರೂ ಕೂಡ ಅದಕ್ಕೆ ಕಾರಣವಾದ ಪ್ರಕೃತಿತತ್ವವು ಹಾಗೇ ಉಳಿಯುವದು. ಅಂದಮೇಲೆ ಇವನಿಗೆ ಮೋಕ್ಷವೆಲ್ಲಿ ''ಪರಿಣಾಮ ಸ್ವಭಾವಿನೋ ಗುಣಾಃ ನಾಪರಿಣಮಯ್ಯಕ್ಷಣ ಮಪ್ಯವತಿಷ್ಠಂತೇ'' ಎಂಬುವ ವಾಚಸ್ಪತಿಯವರ ಉಕ್ತಿಯಂತೆ ಪ್ರಕೃತಿಯು ತ್ರಿಗುಣಾತ್ಮಕವಾಗಿರುವದರಿಂದ ಅದು ಜೀವನಿಗೆ ತನ್ನ ಕಾರ್ಯವಾದ ಸಂಸಾರವನ್ನುಂಟುಮಾಡದೆ ಬಿಡಲಾರದು. ಆದ್ದರಿಂದ ಚಿತ್ತವೆಂದರೆ ಮೊದಲು ನಾವು ಹೇಳಿದಂತೆ ಪ್ರಕೃತಿ ಮೊದಲುಗೊಂಡು ಮಾಯಾಂತ ತತ್ವಗಳಿಗೆ ಕಾರಣವಾದ

ದ್ದೇ ಎಂದು ಹೇಳಬೇಕು. ಎಲೈ ಶಿವಾದ್ವೈತಿಯೇ ? ನೀನು ಹೀಗೆ ಹೇಳಿದರೆ "ಪ್ರಕೃತೆಶ್ಚಿತ್ತಾಪರಪರ್ಯಾಯತ್ವಾತ್" ಎಂದು ನಿಮ್ಮ ಸ್ವಪ್ರಭಾನಂದ ಶಿವಾಚಾರ್ಯರು ಪ್ರಕೃತಿಯು ಚಿತ್ತದ ಪರ್ಯಾಯನಾಮವೆಂದು ಹೇಳಿರುವ ರಲ್ಲ; ಇದಕ್ಕೆ ವಿರೋಧವಾಗುವದಿಲ್ಲವೇ ? ಅಂದರೆ ಬ್ರಹ್ಮಾದ್ವೈತಿಯೇ ? ವಿರೋಧವಾಗುವದಿಲ್ಲ. "ಪ್ರಕೃಷ್ಟಾಕೃತಿರ್ಯಸ್ಯಾಸ್ಸಾ" ಎಂಬುವ ವ್ಯುತ್ಪತ್ತಿ ಯಿಂದ ಪ್ರಕೃತಿಯಂದರೆ ನಾವು ಮೇಲೆ ಹೇಳಿದ ಅಖ್ಯಾತಿಯಂತಲೇ ಅರ್ಥವು. ಆ ಆಚಾರ್ಯರೇ ಮತ್ತೊಂದುಕಡೆಯಲ್ಲಿ ಈ ವ್ಯುತ್ಪತ್ತಿಯನ್ನು ತೋರಿಸಿರುವರು. ಅಥವಾ ಪ್ರಕೃತಿಯಂದರೆ ತ್ರಿಗುಣಾತ್ಮಕವಾದದ್ದೆಂದು ಹೇಳಿದರೂ ಚಿತ್ತವು ಅದರ ಕಾರ್ಯವಾಗಲಿಲ್ಲ. ಅಂದರೆ ಪ್ರಕೃತಿಯೇ ಚಿತ್ತವೆಂದು ಅವರ ತಾತ್ಪ ರ್ಯವನ್ನು ಹಿಡಿದರೂ ನೀನು ಹೇಳುವಂತೆ ಚಿತ್ತವು ಪ್ರಕೃತಿಯ ಕಾರ್ಯವಾಗ ಲಿಲ್ಲ. ಆದ್ದರಿಂದಲೇ "ಚಿತ್ತಮೇವಹಿ ಸಂಸಾರೋ ರಾಗಾದಿ ಕ್ಲೇಶಭೂಷಿತಂ ತದೇವ ತೈರ್ವಿನಿರ್ಮುಕ್ತಂ ಭವಾಂತ ಇತಿ ಕಥ್ಯತೇ" ಎಂದು ಸ್ಪಂದಪ್ರದೀಪಿಕೆ ಯಲ್ಲಿ ಹೇಳಲ್ಪಟ್ಟಿರುವದು. ಅಂದರೆ ಕಾಮ ಕ್ರೋಧಾದಿ ಅರಿಷಡ್ವರ್ಗದಿಂದಲೂ ಅವಿದ್ಯಾ ಅಸ್ಮಿತಾದಿ ಕ್ಲೇಶಗಳಿಂದಲೂ ಯುಕ್ತವಾದ ಚಿತ್ತವೇ ಸಂಸಾರವು. ಆ ಚಿತ್ತವೇ ಶಿವಯೋಗ ಶಾಸ್ತ್ರದಲ್ಲಿ ಹೇಳಲ್ಪಟ್ಟ ವಿಕಲ್ಪ ಕ್ಷಯಾದಿ ಉಪಾಯಗ ಳಿಂದಲೂ ಆ ಕಾಮಕ್ರೋಧಾದಿಗಳಿಂದಲೂ ಅವಿದ್ಯಾದಿ ಕ್ಲೇಶಗಳಿಂದಲೂ ಬಿಡ ಲ್ಪಡಲು ಸಂಸಾರದ ನಾಶವು (ಮೋಕ್ಷವು) ಎಂದು ಹೇಳಲ್ಪಡುತ್ತದೆ. ಆ ಪರ ಶಿವಬ್ರಹ್ಮದ "ಬಹುಸ್ಯಾಂ" ಎಂಬುವ ಬಹುಭವನಸಕ್ರಿಯಾ ವಿಷಯಕವಾದ ವಿಮರ್ಶ ಶಕ್ತಿಯು ಅಂದರೆ ಚಿತಿಶಕ್ತಿಯು ತನ್ನ ಚೇತನ ಸ್ಥಾನವೆಂಬ ಚಿದಾ ನಂದ ಘನವಾದ ಪರಶಿವನಿಂದ ವಿಭಕ್ತವಾಗಿ ಸಂಕೋಚ ಸ್ಥಿತಿಯನ್ನು ಹೊಂ ದುತ್ತ ರಾಗಾದಿ ಮಾಲಿನ್ಯದಿಂದ ಕೂಡಿಕೊಳ್ಳಲು ಚಿತ್ತವೆನಿಸುವದು. ಇಂತಹ ಚಿತ್ತವೇ ಸಂಸಾರವು. ಈ ಚಿತ್ತದ ವಿಕಾಸವೇ ಮೋಕ್ಷವು. ಅಂದರೆ ಚಿತಿಶಕ್ತಿ ಯು ಸಂಕೋಚವನ್ನು ಹೊಂದಿದ ಕಾರಣ, ಜ್ಞಾನ ಕ್ರಿಯಾದಿ ಶಕ್ತಿಗಳುಕೂಡ ಕಲಾ ಕಾಲಾದಿರೂಪಗಳಾಗುವವು. ಚಿತ್ತವು ವಿಕಾಸವಾಗಲು ಸರ್ವ ಕರ್ತೃ ತ್ವಸರ್ವಜ್ಞತ್ವಾದಿ ಶಕ್ತಿಗಳುಕೂಡ ವಿಕಸಿತಗಳಾಗುವವು. ಈ ಶಕ್ತಿ ವಿಕಾಸ ಗಳೇ ಮೋಕ್ಷವು. ಈ ಚಿತ್ತಕ್ಕೆ ಅಜ್ಞಾನ ಗ್ರಂಥಿಯೆಂತಲೂ ಹೇಳುವದುಂಟು. ಈ ವಿಷಯದಲ್ಲಿ "ನಾನ್ಯತ್ರಗಮನಂ ಸ್ಥಾನಂ ಮೋಕ್ಷೋಽಸ್ತಿ ಸುರಸುಂದರಿ ಅಜ್ಞಾನಗ್ರಂಥಿ ಭೇದೋಽಯಃ ಸಮೋಕ್ಷ ಇತಿಕಥ್ಯತೇ" ಅಂದರೆ ಎಲೈ ಪಾ

ರ್ವತಿಯೇ ? ಮೋಕ್ಷವೆಂಬುವದು ಯಾವದಾದರೊಂದು ಬೇರೆ ಗಮ್ಯಸ್ಥಾನವಾಗಿಲ್ಲವು. ಆದರೆ ತನ್ನಲ್ಲಿರುವ ಅಜ್ಞಾನಗ್ರಂಥಿಯ ಭೇದವೇ ಮೋಕ್ಷವೆಂದು ಹೇಳಲ್ಪಡುವದು. ಅಂದರೆ ಕಾಶೀ ಮೊದಲಾದ ಪವಿತ್ರ ಸ್ಥಾನಗಳಂತೆ ಮೋಕ್ಷವೆಂಬುವದೊಂದು ಪ್ರಯಾಣಮಾಡಲು ಯೋಗ್ಯಸ್ಥಾನವಾಗಿಲ್ಲವು. ಆದರೆ ಕಠಿಣವಾದ ಗ್ರಂಥಿಯಂತಿರುವ ಅಜ್ಞಾನವನ್ನು ಭೇದಿಸುವಿಕೆಯೇ ಮೋಕ್ಷವು. ಬ್ರಹ್ಮಾದ್ವೈತಿಯೇ ? ಈಗ ನೋಡು! ಚಿತ್ತವೆಂಬುವದು ಅಖ್ಯಾತಿಯೆಂಬ ಆಣವಮಲವೆಂದು ಹೇಳಬಹುದಲ್ಲವೆ ? ಯಾಕೆಂದರೆ ಚಿತ್ತವೇ ಸಂಸಾರವೆಂದು ಮತ್ತು ಅದರಲ್ಲಿರುವ ದುರ್ಗುಣಗಳ ಬಿಡುಗಡೆಯೇ ಮೋಕ್ಷವೆಂದು ಮೇಲೆ ಹೇಳಿದ ಶ್ಲೋಕದ ಅಭಿಪ್ರಾಯವಾಗಿದೆಯಷ್ಟೆ ? ‹‹ಅಜ್ಞಾನ ಗ್ರಂಥಿಭೇದಃ›› ಎಂಬುವಲ್ಲಿ ಆ ದುರ್ಗುಣಗಳಿಗೆ ಕಾರಣವಾದ ಅಜ್ಞಾನ ಶಕ್ತಿಯ ಭೇದವೇ ಮೋಕ್ಷವೆಂದು ಹೇಳಲ್ಪಟ್ಟಿದ್ದರಿಂದ ಚಿತ್ತವೆಂದರೂ ಅಜ್ಞಾನವೆಂದರೂ ಒಂದೇ ಎಂದು ಗೊತ್ತಾಗುತ್ತದಲ್ಲವೇ ? ಹಾಗಾದರೆ ಈ ಅಜ್ಞಾನದಿಂದ ಪರಂಪರೆಯಾಗಿ ಹುಟ್ಟಿದ ಪ್ರಕೃತಿಗೆ ಚಿತ್ತವೆಂದು ಹೇಳುವಲ್ಲಿ ಸ್ವಪ್ರಭಾನಂದ ಶಿವಾಚಾರ್ಯರ ಅಭಿಪ್ರಾಯವೇನು ? ಅಂದರೆ ಕಾರ್ಯಕಾರಣಗಳ ಅಭೇದಾಭಿಪ್ರಾಯವೆಂದು ತಿಳಿದುಕೊಳ್ಳತಕ್ಕದ್ದು. ಇದು ಅಲ್ಲದೆ ‹‹ರಾಗಾದಿ ಮಲಿನಂ ಚಿತ್ತಂ ಸಂಸಾರಸ್ತದ್ವಿವಿಕ್ತತಾ | ಸಂಕ್ಷೇಪಾತ್ಕಥಿತೋ ಮೋಕ್ಷಃ›› ಎಂದು ರಾಗಾದಿಗಳಿಂದ ಮಲಿನವಾದ ಚಿತ್ತವೇ ಸಂಸಾರವೆಂತಲೂ ಮತ್ತು ಆ ರಾಗಾದಿಗಳಿಂದ ಬಿಡಲ್ಪಟ್ಟು ಶುದ್ಧವಾದ ಚಿತ್ತವೇ ಸಂಕ್ಷೇಪದಿಂದ ಮೋಕ್ಷವೆಂತಲೂ ಶಿವಜ್ಞಾನಿಗಳು ಹೇಳುವರು. ಎಂಬುವ ಈ ಶ್ಲೋಕದಿಂದಲೂ ಕೂಡ ಚಿತ್ತವು ಪ್ರಕೃತಿಯ ಕಾರ್ಯವಲ್ಲವೆಂದು ಸ್ಪಷ್ಟವಾಗುತ್ತದೆ. ಇದಲ್ಲದೆ ಇದೊಂದೇ ಚಿತ್ತವು ಬಂಧಕ್ಕೂ ಮೋಕ್ಷಕ್ಕೂ ಕೂಡ ಕಾರಣವಾಗಿರುವದು. ಹ್ಯಾಗೆಂದರೆ ಒಂದಾನೊಂದು ಜಡವಾದ ಮಣ್ಣಿನ ಮುದ್ದೆಯು ನದಿಯಲ್ಲಿ ಮುಳುಗಿಬಿಡುತ್ತದೆ. ಅದನ್ನೇ ಪುನಃ ಕೊಡವನ್ನಾಗಿಮಾಡಿ ಅಗ್ನಿಸಂಸ್ಕಾರದಿಂದ ಶುದ್ಧಮಾಡಲು ಅದು ಆ ನೀರಿನಮೇಲೆ ತೇಲುವುದಕ್ಕೆ ಹತ್ತುತ್ತದೆ. ಅದಕ್ಕೆ ಆ ನೀರಿನ ಸಂಬಂಧವಾಗಿ ಕರಗುವದಿಲ್ಲ. ಅಲ್ಲದೆ ಅದರಲ್ಲಿ ಮೊದಲಿನ ಮಣ್ಣಿನ ಮುದ್ದೆಗಿದ್ದ ಗುಣಗಳಿಗಿಂತಲೂ ವಿಲಕ್ಷಣಗಳಾದ ಗುಣಗಳು ಕಾಣಹತ್ತುತ್ತವೆ. ಅಂದರೆ ಅದರನಾದವೂ ಅದರ ಬಣ್ಣವೂ ಅದರ ಕ್ರಿಯೆಯುಕೂಡ ಕೆಡಲಾಗುತ್ತವೆ. ಇದಲ್ಲದೆ ಅದರ ಆಕಾರವೂ ಬದಲಾಗಿ ಹೋಗುತ್ತದೆ. ಇಂತಹ ಕೊಡವನ್ನು ಅವಲಂಬಿಸಿದ ಮನುಷ್ಯನು ಸಹಜವಾಗಿ ಆ ನದಿಯನ್ನು ದಾಟಿ

ಹೋಗುವನು. ಚಿತ್ತವು ಕಾಮಕ್ರೋಧಾದಿ ದುರ್ಗುಣಗಳಿಂದಲೂ ಅವಿದ್ಯಾದಿ ಕ್ಲೇಶಗಳಿಂದಲೂ ತುಂಬಿಕೊಂಡಿರಲು ಅದುವೇ ಜಡವಾದ ಮಣ್ಣಿನ ಮುದ್ದೆಯು. ಇದನ್ನು ಶಿವದೀಕ್ಷೆಯೆಂಬ ಅಗ್ನಿಯಿಂದ ಸಂಸ್ಕರಿಸಲು ಸಂಸಾರವೆಂಬ ನದಿಯಲ್ಲಿ ಮುಳುಗುವದಿಲ್ಲ. ಅದರ ಮೇಲೆಯೇ ತೇಲುವದು. ಮತ್ತೂ ಅದರ ಪೂರ್ವದ ಗುಣಗಳಿಗಿಂತಲೂ (ಕಲಾ ಕಾಲ ನಿಯತಿ ರಾಗ ಕಿಂಚಿಜ್ಜ್ಞತ್ವ ಗುಣಗಳಿಗಿಂತಲೂ) ವಿಲಕ್ಷಣಗಳಾದ ಸರ್ವಕರ್ತೃತ್ವ ಸರ್ವಜ್ಞತ್ವಾದಿ ಗುಣಗಳು ಕಂಡುಬರುವವು. ಅಂದರೆ ಯಾವ ಚಿತ್ತದಿಂದ ಪುರುಷನಿಗೆ ಬಂಧವಾಗಿತ್ತೋ ? ಅದೇ ಚಿತ್ತವು ಶುದ್ಧವಾಗಲು (ವಿಮರ್ಶಶಕ್ತಿರೂಪವಾಗಲು) ಅದರಿಂದ ಪುರುಷನಿಗೆ ಮೋಕ್ಷವು. (ಸರ್ವಕರ್ತೃತ್ವ ಸರ್ವಜ್ಞತ್ವಾದಿ ಶಕ್ತಿಗಳ ವಿಕಾಸವು.) ಈ ವಿಷಯದಲ್ಲಿ (ಸೀದತಿಯೇನೈವ ಜಡಃ ಪ್ರಾಜ್ಞಸ್ತೇನೈವ ಸಂತರತಿದುಃಖಾತ್ | ಪಿಂಡಿಮತಯೋಽಪ್ಸುಮಜ್ಜತಿ ತದೇವಪಾತ್ರೀಕೃತಂ ಪ್ಲವತೇ ||") ಎಂಬುವ ಉತ್ಪಲಾಚಾರ್ಯರ ಉಕ್ತಿಯು ಪ್ರಮಾಣವಾಗಿದೆ. ಇದರಿಂದಲೂ ಕೂಡ ಚಿತಿಶಕ್ತಿಯ ಸಂಕೋಚರೂಪವಾದ ಅಖ್ಯಾತಿಯೆಂಬ ಮಲವೆ ಚಿತ್ತವೆಂದು ಅಭಿಪ್ರಾಯವಾಯಿತು. ಈ ಚಿತ್ತವೆಂಬುವದು ತನ್ನ ಪರಂಪರೆಯಾದ ಪರಿಣಾಮಗಳಾದ ಸುಖದುಃಖ ಮೋಹಗಳನ್ನುಂಟುಮಾಡುವ ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯನ್ನು ಹೊಂದಲು ಪ್ರಕೃತಿಯೆನಿಸುವದು. ಆದ್ದರಿಂದ ಮೃದ್ಘಟಗಳಿಗೆ ಅಭೇದವಿರುವಂತೆ ಚಿತ್ತಕ್ಕೂ ಪ್ರಕೃತಿಗೂ ಅಭೇದವಿರುವ ಕಾರಣ ಚಿತ್ತವು ಪ್ರಕೃತಿಯ ಮತ್ತೊಂದು ನಾಮವಾಗಿರುವದೆಂದು ಸ್ವಪ್ರಭಾನಂದ ಶಿವಾಚಾರ್ಯರು ಹೇಳಿರುವರು. ಅಥವಾ ಚಿತ್ತವೆಂಬುವದು ವಿಶ್ವಜೀವನ ಅಂತಃಕರಣರೂಪವಾದ ಪ್ರಕೃತಿಯಾದ್ದರಿಂದ ಅದಕ್ಕೆ ತ್ರಿಗುಣಾತ್ಮಕ ಪ್ರಕೃತಿಯೆಂದು ಹೇಳಿದರೂ ಹೇಳಬಹುದು. ಇದರಲ್ಲಿ ನಮಗೆ ಅಷ್ಟೊಂದು ಆಗ್ರಹವೇನೂ ಇಲ್ಲ. ಪರಂತು ಜೀವನು ಅಣುರೂಪನಾಗಿರುವನು ಎಂದು ಹೇಳಬೇಕಾಗಿರುವದು. ಜೀವನು ಪರಶಿವನ ಅಂಶರೂಪನಾದ್ದರಿಂದಲೇ ತನ್ನ ಪರಶಿವನೆಂಬ ಸ್ಥಾನದಿಂದ ವಿಭಕ್ತನಾಗಲು ಆಣವಾದಿ ಮಲಗಳು ಅವನನ್ನು ಆಕ್ರಮಿಸಿ ಅವನ ಪೂರ್ವ ಸ್ಥಿತಿಯನ್ನು ಸಂಕೋಚಗೊಳಿಸಿ ಹೀನಸ್ಥಿತಿಯುಳ್ಳವನನ್ನಾಗಿ ಮಾಡುವವು.

ಅಂದರೆ ಒಂದಾನೊಂದು ಅತ್ಯುನ್ನತವಾದ ಸ್ಥಾನದಲ್ಲಿ ತನ್ನ ಮಾತಾಪಿತೃಗಳಿಂದ ಸಹಿತವಾಗಿ ಇದ್ದ ಪಕ್ಷಿಯ ಮರಿಯು ಏನೊಂದೂ ವ್ಯಸನವಿಲ್ಲದೆ ಅತಿ ಸಂತೋಷದಿಂದಲೂ ಏನೊಂದೂ ಬಾಧೆ ಇಲ್ಲದ್ದಾಗಿಯೂ ಇರುತ್ತದೆ.

ಅದೇ ಪಕ್ಷಿಯ ಮರಿಯು ತನ್ನ ಸ್ಥಾನವನ್ನು ಬಿಟ್ಟು ಮಾತಾಪಿತೃಗಳಿಂದ ವಿಭಕ್ತವಾಗಿ (ಅಗಲಿ) ವಿಹಾರಕ್ಕಾಗಿ ಭೂಮಿಗಿಳಿಯಲು, ಅಲ್ಲಿರುವ ಬೇಡನ ಬಲೆಯೊಳಗೆ ಶಿಕ್ಕಿ ಅದರಿಂದ ಬಂಧಿತವಾಗುವದು. ಪುನಃ ಒಬ್ಬಾನೊಬ್ಬ ದಯಾಳುವಾದ ಪುರುಷನು ಕತ್ತರಿಯಿಂದ ಆ ಜಾಲವನ್ನು ಛೇದಿಸಲು ಆ ಪಕ್ಷಿಯ ಮರಿಯು ಮುಳ್ಳಿನ ಬಲೆಯನ್ನು ಬಿಡಿಸಿಕೊಂಡು ತನ್ನ ಮಾತಾಪಿತೃಗಳನ್ನು ಸ್ಮರಿಸಿ ಸ್ವಸ್ಥಾನಕ್ಕೆ ಮುಟ್ಟಿ ಸುಖಿಯಾಗುವದು. ಅರ್ಥಾತ್ ಬಲೆಯಲ್ಲಿದ್ದ ಕಾಲದಲ್ಲಿ ತಾನು ಅತ್ತಿತ್ತ ಸಂಚರಿಸುವಾಗ್ಗೆ ಆ ಬಲೆಯೊಳಗಿನ ಮುಳ್ಳುಗಳು ಸುತ್ತಲೂ ಚುಚ್ಚಿ ಅತಿ ಪೀಡೆಯನ್ನುಂಟುಮಾಡಲು, ಆ ಪಕ್ಷಿಯ ಮರಿಯು ಗಾಬರಿಯಾಗಿ ಚಡಪಡಿಸಿ ಸಂಕಟಪಡುತ್ತ ತನ್ನ ಪೂರ್ವದ ಸ್ಥಿತಿಯನ್ನೂ ತನ್ನ ಮಾತಾಪಿತೃಗಳನ್ನೂ ಮರೆತುಬಿಟ್ಟು ದಯಾಳುಶೀಲನು ಕತ್ತರಿಯಿಂದ ಆ ಬಲೆಯನ್ನು ಛೇದಿಸಲು ಅದರಿಂದುಂಟಾದ ಪೀಡೆಯು ಕಡಿಮೆಯಾಗಿ ತನ್ನ ಮಾತಾಪಿತೃಗಳನ್ನು ಹೊಂದಿಕೊಂಡು ಜಿಡುವಂತೆ ಆತ್ಮನು ತನ್ನ ಪರಶಿವಸ್ಥಾನದಿಂದ ವಿಭಕ್ತನಾಗಿ ಚಿತ್ತವೆಂಬ ಬಲೆಯೊಳಗೆ ಬೀಳಲು, ಅದರೊಳಗಿರುವ ಕಾಮಕ್ರೋಧಾದಿಗಳೆಂಬ ಮುಳ್ಳುಗಳಿಂದ ಪೀಡಿತನಾಗಿ ತನ್ನ ಪೂರ್ವಸ್ಥಿತಿಯನ್ನೇ ಮರೆತು (ನಾನು ಈಶ್ವರನಲ್ಲವೆಂಬುವ ಮರವೆಯನ್ನು ಹೊಂದಿ) ಅತಿ ದುಃಖಿಸುತ್ತಿರಲು ದಯಾಳುವಾದ ಗುರುವು ಶಿವದೀಕ್ಷೆಯೆಂಬ ಕತ್ತರಿಯಿಂದ ಆ ಚಿತ್ತವೆಂಬ ಬಲೆಯನ್ನು ಭೇದಿಸಲು, ಪೀಡೆಯು ಸ್ವಲ್ಪ ಕಡಿಮೆಯಾಗಿ ತನ್ನ ಪೂರ್ವದ ಸ್ಥಿತಿಯನ್ನು ಸ್ಮರಿಸಿ (ಶಿವಯೋಗಾಭ್ಯಾಸವನ್ನು ಮಾಡಿ) ತಂದೆತಾಯಿಗಳಂತಿರುವ ಶಿವಶಕ್ತಿಯರೊಳಗೆ (ಶಕ್ತಿವಿಶಿಷ್ಟ ಶಿವನಲ್ಲಿ ಕೂಡಿಕೊಂಡು ಸುಖಿಯಾಗುವನು. ತಾತ್ಪರ್ಯವೇನಂದರೆ ಆ ಪಕ್ಷಿಯ ಮರಿಯ ಅಧಃಪತನಕ್ಕೆ ಯಾವ ಪಕ್ಕಗಳು ಕಾರಣಗಳಾಗಿದ್ದವೋ ಅವೇ ಪಕ್ಕಗಳೇ ಊರ್ಧ್ವಮುಖಗಳಾಗಲು ಉತ್ಪತನಕ್ಕೂ ಕಾರಣಗಳಾದಂತೆ, ಜೀವನ ಅಧಃಪತನಕ್ಕೆ ಯಾವ ವಿಷಯಾಸಕ್ತವಾದ ಚಿತ್ತವು ಕಾರಣವಾಗಿತ್ತೋ ಅದೇ ಚಿತ್ತವು ವಿಷಯ ವಿಯುಕ್ತವಾಗಿ ಊರ್ಧ್ವಮುಖವಾಗಲು (ವಿಕಾಸವಾಗಿ ಚಿತಿಶಕ್ತಿರೂಪವಾಗಲು) ಜೀವನ ಉತ್ಪತನಕ್ಕೆ ಕಾರಣವಾಗುವದು. ಅಂದರೆ ಒಂದೇ ಚಿತ್ತವು ಬಂಧಕ್ಕೂ ಮೋಕ್ಷಕ್ಕೂ ಕೂಡ ಕಾರಣವಾಗುವದು. ಈ ವಿಷಯದಲ್ಲಿ ,,ಪ್ರಾಣಿನಾಂಪತನಂಯೇನ ತೇನೈವೋತ್ಪತನಂಸ್ಮೃತಂ ಅಜ್ಞಸ್ತು ಬಧ್ಯತೆಯೇನ ಜ್ಞಾತಾತೇನೈವಮುಚ್ಯತೆ'' ಎಂಬುವ ಕುಲಯುಕ್ತಿಗ್ರಂಥದ ಶ್ಲೋಕವಿರುತ್ತದೆ. ಅಂದರೆ ಪ್ರಾಣಿಗಳಿಗೆ ಯಾವದರಿಂದ ಪತನವೋ ಅದರಿಂದಲೇ ಉತ್ಪತನವು ಎಂದು

ಹೇಳಲ್ಪಡುವದು. ಯಾವದರಿಂದ ತಿಳಿಗೇಡಿಯು ಬಂಧಿಸಲ್ಪಡುವನೋ ಅದರಿಂದಲೇ ತಿಳಿದವನು ಬಿಡಲ್ಪಡುವನು. ಎಂಬ ಅರ್ಥವು. ಇದರಿಂದಲೂ ಚಿತ್ತವು ಬಂಧಕ್ಕೂ ಮೋಕ್ಷಕ್ಕೂ ಕಾರಣವೆಂದು ತಿಳಿದುಬರುವದು. ಎಲೈ ಶಿವಾದ್ವೈತಿಯೇ ಚಿತ್ತವಿಷಯಕವಾಗಿ ಇಷ್ಟೊಂದು ಹೇಳುವದರಿಂದ ಏನುಪ್ರಯೋಜನವು? ಹಾಗಾದರೆ ಬ್ರಹ್ಮಾದ್ವೈತಿಯೇ ಏನೂ ಪ್ರಯೋಜನವಿಲ್ಲೆಂದು ತಿಳಿದಿರುವಿಯೇನು? ನಿನ್ನ ಮತದಲ್ಲಿ ಬ್ರಹ್ಮ ಪ್ರತಿಬಿಂಬಕ್ಕೆ ಉಪಾಧಿಯಾದ ಮಾಯೆಯೂ ಅಂತಃಕರಣವೂ ಬ್ರಹ್ಮಜ್ಞಾನದಿಂದ ಸ್ವರೂಪತಃ ನಷ್ಟಗಳಾಗಲು ಪ್ರತಿಬಿಂಬವೂಕೂಡ ನಷ್ಟವಾಗುವದೆಂದು ಹೇಳುವದರಿಂದ ಜೀವೇಶ್ವರ ನಾಶವೇ ಮೋಕ್ಷವೆಂದು ಹೇಳಿದಂತಾಗುವದು. ಇದರಿಂದ ನಾವು ಹಿಂದೆ ಹೇಳಿದ ಅನೇಕ ದೋಷಗಳು ಸಂಭವಿಸುವವು. ನಿನ್ನ ಮತದಲ್ಲಿ ಉಪಾಧಿಗಳು ಮಿಥ್ಯೆಗಳಾದ್ದರಿಂದ ಅವುಗಳಿಗೆ ಸ್ವರೂಪತಃ ನಾಶವನ್ನು ಹೇಳುವಕಾರಣ, ಪ್ರತಿಬಿಂಬಕ್ಕೂ ನಾಶವನ್ನು ಹೇಳಬೇಕಾಗುವದು. ನಾನು ಚಿತ್ತಕ್ಕೆ ಸ್ವರೂಪತಃ ನಾಶವನ್ನು ಹೇಳುವದಿಲ್ಲ; ಕಿಂತು ಸಂಕೋಚ ವಿಕಾಸಗಳನ್ನು ಹೇಳುವೆನು. ಚಿತ್ತವೇ ವಿಕಾಸಾವಸ್ಥೆಯನ್ನು ಹೊಂದಲು ಅದರಿಂದ ಕೂಡಿದವನೇ ಈಶ್ವರನೆಂತಲೂ, ಚಿತಿಶಕ್ತಿಯೇ ಸಂಕೋಚಾವಸ್ಥೆಯನ್ನು ಹೊಂದಿ ಚಿತ್ತರೂಪವಾಗಲು ಅದರಿಂದ ಕೂಡಿದ ಶಿವನ ಅಂಶರೂಪವಾದ ಪ್ರಕಾಶವೇ ಜೀವನೆಂದು ಹೇಳುವೆನು. ನೀನು ಮಾಯಾಂತಃಕರಣಗಳಲ್ಲಿ ಬ್ರಹ್ಮ ಪ್ರತಿಬಿಂಬಗಳೇ ಈಶ್ವರ ಜೀವರೆಂದು ಹೇಳುವಿ. ವಿಮರ್ಶಶಕ್ತಿಗೆ ಸಾಕ್ಷಿಯು ಚಿದಾನಂದ ಶಿವನು. ಈ ಶಿವನಿಗೆ ಸಾಕ್ಷಿಯು ವಿಮರ್ಶಶಕ್ತಿಯು. ಹಾಗೂ ಇವೆರಡೂ ಅಂಗಾಂಗಿಭಾವವುಳ್ಳವುಗಳೆಂತಲೂ ನಾನು ಹೇಳುವೆನಲ್ಲದೆ ಈ ಶಕ್ತಿಯಿಂದ ಸರ್ವಜ್ಞತ್ವಾದಿಗಳು ಶಿವನಲ್ಲಿ ಸಹಜಗಳೆಂದು ಹೇಳುವೆನು. ನೀನು ಮಾಯೆಗೂ ಬ್ರಹ್ಮಕ್ಕೂ ಪರಸ್ಪರ ಸಾಕ್ಷಿಗಳೆಂದೂ ಅಂಗಾಂಗಿ ಭಾವವುಳ್ಳವುಗಳೆಂದೂ ಹೇಳುವದಿಲ್ಲ. ಮತ್ತು ಸರ್ವಜ್ಞತ್ವಾದಿಗಳು ಬ್ರಹ್ಮದಲ್ಲಿ ಮಾಯಾಕಲ್ಪಿತಗಳೆಂದೂ ಮಿಥ್ಯೆಗಳೆಂದೂ ಹೇಳುವಿ, ಇದರಂತೆಯೇ ಜೀವನ ಗುಣಗಳೂ ಕೂಡ ಅಂತಃಕರಣ ಕಲ್ಪಿತಗಳೆಂದು ಹೇಳುವಿ, ಹೀಗೆ ಹೇಳಿದರೆ ಬಂಧಮೋಕ್ಷಗಳೂಕೂಡ ಅಂತಃಕರಣಕ್ಕೇ ಆಗಬೇಕಾಗುವದು. ಯಾಕಂದರೆ ಎಲ್ಲಿ ಬಂಧವೋ ಅಲ್ಲಿಯೇ ಮೋಕ್ಷವು. ಎಲ್ಲಿ ಮುಮುಕ್ಷುತ್ವವೋ ಅಲ್ಲಿಯೇ ಮೋಕ್ಷವು. ಕಾಮಾದಿಗಳು ಜೀವನಿಗೆ ವಾಸ್ತವಿಕವಾಗಿರದೆ ಅಂತಃಕರಣಕ್ಕಿದ್ದರೆ ಮುಮುಕ್ಷುತ್ವವು (ಮೋಕ್ಷೇಚ್ಛೆಯು) ಅಲ್ಲಿಯೇ ಇದ್ದಂತಾಯಿತು. ಆದ್ದರಿಂದ ಮುಕ್ತಿಯನ್ನು ಅಂ

ತಃಕರಣಕ್ಕೆ ಹೇಳಬೇಕಾಗುವದು. ಲೋಕದಲ್ಲಿಯಾದರೂ ಒಬ್ಬನಿಗೆ ಫಲದಮೇಲೆ ಇಚ್ಛೆ ಇದ್ದು ಮತ್ತೊಬ್ಬನಿಗೆ ಫಲಪ್ರಾಪ್ತಿಯಾದರೆ ಮೊದಲನೇಯವನ ಇಚ್ಛೆಯು ನಿವೃತ್ತವಾಗುವದಿಲ್ಲ. ಫಲವನ್ನು ಇಚ್ಛಿಸಿದವನಿಗೇನೆ ಫಲಪ್ರಾಪ್ತಿಯಾಗಲು ಆ ಇಚ್ಛೆಯು ನಿವೃತ್ತವಾಗುವದು. ಅಂದರೆ ಯಾವನಿಗೆ ಫಲೇಚ್ಛೆಯೋ ಅವನಿಗೆ ಫಲಪ್ರಾಪ್ತಿಯು. ಯಾವನಿಗೆ ಇಚ್ಛೆ ಇಲ್ಲವೋ ಅವನಿಗೆ ಫಲಪ್ರಾಪ್ತಿ ಇಲ್ಲ. ಇದರಂತೆ ಜೀವನಿಗೆ ಮೋಕ್ಷೇಚ್ಛೆ ಇರದೆ ಅಂತಃಕರಣಕ್ಕೆ ಇದ್ದರೆ ಅಂತಃಕರಣಕ್ಕೇನೇ ಮೋಕ್ಷಫಲಪ್ರಾಪ್ತಿಯಾಗಬೇಕು. ಅಂದಮೇಲೆ ಜೀವನು ಮೋಕ್ಷಕ್ಕಾಗಿ ಶ್ರವಣ ಮನನಾದಿ ಪ್ರಯತ್ನವನ್ನು ಮಾಡುವದು ವ್ಯರ್ಥವಾಗಲಿಲ್ಲವೇ? ಶಿವಾದ್ವೈತಿಯೇ ಜೀವನಿಗೆ ಮುಮುಕ್ಷುತ್ವವು ಇಲ್ಲವೆಂದು ಹೇಳುವದಿಲ್ಲ. ಬ್ರಹ್ಮಾದ್ವೈತಿಯೇ ಯಥಾರ್ಥವಾಗಿ ಮುಮುಕ್ಷುತ್ವವಿದೆಯೆಂದು ಹೇಳುವಿಯೇನು? ಇಲ್ಲ; ಜಲದ ಚಲನವಲನ ಕ್ರಿಯೆಗಳು ಜಲದಲ್ಲಿ ತೋರುವ ಆ ಚಂದ್ರ ಪ್ರತಿಬಿಂಬದಲ್ಲಿ ತೋರುವಂತೆ, ಅಂತಃಕರಣದ ಗುಣಗಳು ಜೀವನಲ್ಲಿ ತೋರುವವಾದ್ದರಿಂದಕಾಮಾದಿ ಗುಣಗಳು ವಸ್ತುತಃ ಜೀವನಲ್ಲಿಲ್ಲವೆಂದು ಹೇಳುವೆನು. ವಸ್ತುತಃ ಜೀವನಲ್ಲಿ ಮೋಕ್ಷೇಚ್ಛಾ ಮೊದಲಾದ ಗುಣಗಳಿಲ್ಲದಿದ್ದರೆ ಜೀವನಿಗೆ ವಸ್ತುತಃ ಮೋಕ್ಷವನ್ನು ಹೇಳುವಿಯೇನು? ಅದನ್ನೂ ಹೇಳುವದಿಲ್ಲ. ವಸ್ತುತಃ ಬಂಧವೂ ಮೋಕ್ಷವೂ ಇಲ್ಲವೆಂದು ಹೇಳುವೆನು. ಬ್ರಹ್ಮಾದ್ವೈತಿಯೇ ಬಂಧಮೋಕ್ಷಗಳಿಲ್ಲದಿದ್ದರೆ ವೇದಾಂತಶ್ರವಣಾದಿ ಪ್ರಯತ್ನಗಳೇಕೆಬೇಕು? ಇದು ಎಂತಹ ಕಲ್ಪನೆಯು. ವಸ್ತುತಃ ಗಗನಪುಷ್ಪಗಳಿಲ್ಲದಿರುವಂತೆ ಬಂಧಮೋಕ್ಷಗಳಿಲ್ಲವಂತೆ. ಮತ್ತೆ ವೇದಾಂತಶ್ರವಣಾದಿಗಳ ಪ್ರಯತ್ನವನ್ನು ಮಾಡಬೇಕಂತೆ; ಗಗನಪುಷ್ಪಾದಿಗಳ ಪ್ರಾಪ್ತಿಯ ಸಲುವಾಗಿ ಯಾವ ಮೂರ್ಖನೂ ಕೂಡ ಪ್ರಯತ್ನಪಡಲಾರನು. ಆದ್ದರಿಂದ ಕಾಮಾದಿ ಗುಣಗಳು ಜೀವನಿಗೆ ಸಹಜಗಳೇ ಹೊರತು ಆರೋಪಿತಗಳಲ್ಲ. ಯಾಕಂದರೆ ಜಿಜ್ಞಾಸಾ ಬಂಧಮೋಕ್ಷಗಳಿಗೆ ಒಂದೇಸ್ಥಾನದಲ್ಲಿರುವಿಕೆಯು ಅನುಭವಸಿದ್ಧವಾಗಿದೆಯಷ್ಟೇ? ಯಾವನಿಗೆ ಬಂಧವೋ ಅವನು ಆ ಬಂಧನಿವೃತ್ತಿಗಾಗಿ ಬ್ರಹ್ಮಜಿಜ್ಞಾಸೆಯನ್ನು ಮಾಡುವನು. ಆಮೇಲೆ ಅವನಿಗೇನೇ ಬ್ರಹ್ಮಜ್ಞಾನವುಂಟಾಗಿ ಅವನೇ ಮೋಕ್ಷವನ್ನು ಹೊಂದುವನು ಎಂಬುವದು ಲೋಕಸಿದ್ಧವಾಗಿದೆ. ಎಲೈ ಶಿವಾದ್ವೈತಿಯೇ ಕಾಮಾದಿ ಗುಣಗಳನ್ನು ಆತ್ಮನಿಗೆ ಸಹಜಗಳನ್ನಾಗಿ ಹೇಳಿದರೆ „ಕಾಮಃಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಶ್ರದ್ಧಾಧೃತಿರಧೃತಿ ರ್ಹ್ರೀರ್ಧೀರ್ಭೀರಿತ್ಯೇತತ್ಸರ್ವಂ ಮನಏವ" ಎಂಬುವ ಶ್ರುತಿಗೆ

ವಿರೋಧವಾಗವದು. ಏಕದಂರೆ ಕಾಮಾದಿ ಗುಣಗಳು ಮನಸ್ಸಿನ ಕಾರ್ಯಗಳು ಮತ್ತು ಮನಸ್ಸಿನ ಸಹಜ ಗುಣಗಳೆಂದು ಶ್ರುತಿಯ ತಾತ್ಪರ್ಯವು ಬ್ರಹ್ಮಾದ್ವೈತಿಯೇ ! ಇತ್ಯೇತತ್ಸರ್ವಂ ಮನ ಏವ,, ಎಂಬುವದರಿಂದ ಕಾಮಾದಿಗಳೆಲ್ಲವೂ ಮನಸ್ಸೇಎಂದು ತಿಳಿಯುವದೇ ಹೊರ್ತು ಮನಸ್ಸಿನ ಗುಣಗಳೆಂದಾಗಲೀ, ಮನಸ್ಸಿನ ಕಾರ್ಯಗಳೆಂದಾಗಲೀ ತಿಳಿದುಬರುವದಿಲ್ಲವಲ್ಲಾ! ಅಂದರೆ ಶಿವಾದ್ವೈತಿಯೇ? ಮೃದ್ ಘಟಃ ಎಂಬುವಲ್ಲಿ ಮೃತ್ಸಮವೇತವಾದಘಟವು ಮೃತ್ತಿಕೆಯ ಕಾರ್ಯವಾದ್ದರಿಂದ ಹೇಗೆ ಅಭೇದವೋ ಅದರಂತೆ ಮನಸ್ಸಮವೇತಗಳಾದ ಕಾಮಾದಿಗಳು ಮನಸ್ಸಿನ ಕಾರ್ಯಗಳಾದ್ದರಿಂದ ಕಾಮಾದಿಗಳೆಲ್ಲಕ್ಕೂ ಮನಸ್ಸೆ ಎಂದು ಕಾರ್ಯಕಾರಣಗಳಿಗೆ ಅಭೇದದೃಷ್ಟಿಯಿಂದ ಶ್ರುತಿಯು ಹೇಳಿತು. ಬ್ರಹ್ಮಾದ್ವೈತಿಯೇ! ಆತ್ಮಸಮವೇತಗಳಾದ ಕಾಮಾದಿಗಳು ಮನಸ್ಸಿನಿಂದ ಅಭಿವ್ಯಕ್ತಗಳಾಗುತ್ತವೆಂದು ಶ್ರುತ್ಯರ್ಥವನ್ನು ಮಾಡಿ ಕಾಮಾದಿಗಳು ಆತ್ಮನ ಸಹಜ ಧರ್ಮಗಳೆಂದು ಏಕೆ ಹೇಳಬಾರದು! ಕಾಮಾದಿಗಳು ಆತ್ಮನ ಧರ್ಮಗಳಲ್ಲವೆಂದರೆ ಆತ್ಮನು ಪಾಷಾಣ ಕಲ್ಪನಾಗುವನು ಆದ್ದರಿಂದ ಕಾಮಾದಿಗಳೆಲ್ಲವೂ ಆತ್ಮಧರ್ಮವೆಂದೇ ಹೇಳಬೇಕು. ಸ್ವಪ್ರಭಾನಂದ ಶಿವಾಚಾರ್ಯರೂಕೂಡ,,ತಸ್ಮಾತ್ ಕೃತ್ರಿಮಪ್ರಮಾತುರಿಚ್ಛಾದೇರ್ಮನಸೋಭಿವ್ಯಕ್ತತಾಮಾತ್ರ ಪ್ರತಿಪಾದನೇ ಶ್ರುತೇಃ ಸ್ತಾತ್ಪರ್ಯಮಿತ್ಯಂಗೀಕರಣೀಯತ್ವೇನ ವಿರೋಧಾಭಾವಾತ್ || ಕಾಮಾದಿಗಳು ಆತ್ಮಸ್ವಭಾವಗಳೇ ಎಂದು ಇದೇ ಶ್ರುತ್ಯರ್ಥವನ್ನು ಒಪ್ಪಿಕೊಂಡಿರುವರು. ಇದಲ್ಲದೆ ,,ತಸ್ಮಿನ್ಕಾಮಾಃ ಸಮಾಹಿತಾಃ,, ಎಂಬುವ ಶ್ರುತಿವಚನದಲ್ಲಿರುವ ಸಪ್ತಮ್ಯಂತಪದ ಸ್ವಾರಸ್ಯದಿಂದ ಕಾಮಾದಿ ಗುಣಗಳು ಆತ್ಮನಲ್ಲಿ ಸಹಜಗಳಾಗಿರುವವೆಂತಲೂ ಹೇಳಿದ್ದಾರೆ. ಶಿವಾದ್ವೈತಿಯೇ ಆತ್ಮನು ಕೂಟಸ್ಥನಲ್ಲವೆ ? ಇವನು ಯಾವ ಕಾಮಾದಿ ಗುಣಗಳುಳ್ಳವನೂ ಅಲ್ಲ. ಕಿಂತು ಬುದ್ಧಿಯಲ್ಲಿ ಇವನಿಗೆ ಅಧ್ಯಾಸವಾಗಿ ನಾನು ಕಾಮಿಯು, ನಾನು ಕರ್ತೃವು, ನಾನು ಸುಖದುಃಖವುಳ್ಳವನು ಎಂಬದಾಗಿ ಆ ಬುದ್ಧಿಯ ಕಾಮ ಕೃತಿ ಮೊದಲಾದ ಗುಣಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುವನು. ಎಂದು ಅಂದರೆ, ವಿಧಿನಿಷೇಧಶಾಸ್ತ್ರಗಳು ವ್ಯರ್ಥಗಳಾಗಬೇಕು. ಆತ್ಮನಿಗೇನೆ ಮಾಡು ಮಾಡಬೇಡ ಎಂಬದಾಗಿ ಶಾಸ್ತ್ರದಲ್ಲಿ ವಿಧಿನಿಷೇಧಗಳುಂಟಾಗಿವೆಯೇ ಹೊರತು ಬುದ್ಧಿಯನ್ನೇ ಆಗಲಿ ಅಥವಾ ಪ್ರಕೃತಿಯನ್ನೇ ಆಗಲಿ ಉದ್ದೇಶಿಸಿ ವಿಧಿನಿಷೇಧಗಳಿಲ್ಲ. ಆದ್ದರಿಂದ ಕಾಮಾದಿಗಳೂ ಕೃತಿಯೂ ಆತ್ಮನಿಗೆ ಸ್ವಾಭಾವಿಕಗಳೇ ಆಗಿರುವವು. ಆದ್ದರಿಂದಲೇ

"ಕರ್ತಾಶಾಸ್ತ್ರಾರ್ಥವತ್ವಾತ್" ಎಂಬುವದರಿಂದ ಕರ್ತೃತ್ವವು ಆತ್ಮನಿಗೆ ಹೇಳಲ್ಪಟ್ಟಿರುವದು. ಅಲ್ಲದೆ "ವಿಜ್ಞಾನಂ ಯಜ್ಞಂತನುತೆ" ಎಂಬುವ ತೈತ್ತಿರೀಯ ಶ್ರುತಿಯು ಕೂಡ ವಿಜ್ಞಾನ ಶಬ್ದವಾಚ್ಯನಾದ ಆತ್ಮನಿಗೆ ಕರ್ತೃತ್ವವನ್ನು ಹೇಳಿರುವದು. ಲೋಕದಲ್ಲಿಯಾದರೂ ಕರ್ತೃಕರಣಕ್ರಿಯೆಗಳು ಬೇರೆಬೇರೆ ಪದಾರ್ಥಗಳಾಗುವವು. ದೇವದತ್ತನು ಕೊಡಲಿಯಿಂದ ಗಿಡವನ್ನು ಛೇದಿಸಿದನು ಎಂಬುವಲ್ಲಿ ಛೇದನವೆಂಬುವದು ಕಾರ್ಯವು. ಗಿಡವು ಆ ಛೇದನ ಕ್ರಿಯೆಗೆ ಕರ್ಮವಾಗಿರುವದು. ಕೊಡಲಿಯು ಕರಣವು. ದೇವದತ್ತನು ಕರ್ತೃವೆನಿಸುವನು. ಇದರಂತೆ ನಾನು ಕಾಮಿಯು, ನಾನು ಸುಖಿಯು ದುಃಖಿಯು ಎಂಬುವ ಮಾನಸ ಪ್ರತ್ಯಕ್ಷವೆಂಬ ಕಾರ್ಯಕ್ಕೆ ಕರ್ತೃ ಕರ್ಮ ಕರಣ ಕ್ರಿಯೆಗಳು ಭಿನ್ನಭಿನ್ನಗಳಿರಬೇಕಲ್ಲವೆ? ಕಾಮಾದಿಗಳು ಅಂತಃಕರಣದ ಸ್ವಾಭಾವಿಕ ಗುಣಗಳು. ಅಂದರೆ ಅಂತಃಕರಣವು ಎಂಬುವ ಹೆಸರು ಬುದ್ಧಿಗೆ ಬರಲಾರದು. ಎಲ್ಲಿ ಕೃತಿಯೋ ಅದುವೇ ಕರ್ತೃವೆನಿಸುವದು. ಎಲ್ಲಿ ಕಾಮವೋ ಅಲ್ಲಿಯೇ ಕೃತಿಯು ಎಂದು ಲೋಕಸಿದ್ಧವು. ಯಥಾರ್ಥವಾಗಿ ಬುದ್ಧಿಗೆ ಕೃತಿಯನ್ನು ಹೇಳಿದರೆ ಅದುವೇ ಕರ್ತೃವೆನಿಸುವದರಿಂದ ಮೇಲೆ ಅದಕ್ಕೆ ಅಂತಃಕರಣವೆಂದೆನ್ನುವ ಬಗೆ ಹೇಗೆ? "ಮನಸೈತಾನ್ ಕಾಮಾನ್ ಪಶ್ಯನ್ ರಮತೆ ಯ ಏತೇ ಬ್ರಹ್ಮಲೋಕೇ" ಎಂಬುವ ಛಾಂದೋಗ್ಯ ಶ್ರುತಿಯನ್ನು ನೋಡು. ಕಾಮಾದಿಗಳ ಪ್ರತ್ಯಕ್ಷಕ್ಕೆ ಮನಸ್ಸು ಕರಣವೆಂಬುವದು ತೃತೀಯಾಂತವಾದ ಮನಸ್ಸು ಶಬ್ದದಿಂದಲೇ ತಿಳಿದುಬರುವದು. ಆದ್ದರಿಂದ ಅಂತಃಕರಣವು ಕರಣವಲ್ಲದೆ ಕರ್ತೃವಲ್ಲವು. ಅಂದರೆ ಕಾಮಾದಿಗಳ ಪ್ರತ್ಯಕ್ಷವೆಂಬ ಜ್ಞಾನಕ್ಕೆ ಆಶ್ರಯನು ಆತ್ಮನೆಂತಲೂ, ಮನಸ್ಸು ಕರಣವೆಂತಲೂ, ಈ ಶ್ರುತಿಯಿಂದ ಸ್ಪಷ್ಟವಾಗುವದು. ಶಿವಾದ್ವೈತಿಯೇ ಜ್ಞಾನಕ್ಕಾದರೂ ಆತ್ಮನು ಆಶ್ರಯನಾಗುವದಿಲ್ಲ. ಯಾಕಂದರೆ ಅವನು ಜ್ಞಾನಸ್ವರೂಪನೇ ಆಗಿರುವನು. ಈ ವಿಷಯದಲ್ಲಿ "ವಿಜ್ಞಾನಂ ಯಜ್ಞಂ ತನುತೆ" ಸತ್ಯಂ ಜ್ಞಾನಮಾನಂದಂಬ್ರಹ್ಮ" ಇತ್ಯಾದಿ ಶ್ರುತಿಗಳು ಪ್ರಮಾಣಗಳಾಗಿರುವವು. ಇದಲ್ಲದೆ "ಜ್ಞಾಜ್ಞಾವಜಾವೀಶಾನೀಶೌ" ಎಂಬುವ ಶ್ವೇತಾಶ್ವತರ ಶ್ರುತಿಯು ಜೀವನಿಗೆ ಅಜ್ಞತ್ವವನ್ನು ಹೇಳುತ್ತಿದೆಂದಮೇಲೆ ನೀನು ಆತ್ಮನಿಗೆ ಜ್ಞಾನಾಶ್ರಯವನ್ನು ಹೇಳುವದು ಶ್ರುತಿವಿರುದ್ಧವೆಂದರೆ "ಜ್ಞೋತಏವ" ಎಂಬುವ ಸೂತ್ರವು ಜೀವನು ಜ್ಞಾನಾಶ್ರಯನೆಂದು ಹೇಳುವದೇಕೆ? ಆದ್ದರಿಂದ ಅಜ್ಞತ್ವವೆಂದರೆ ಕಿಂಚಿಜ್ಞತ್ವವೆಂದು ಅರ್ಥಮಾಡಬೇಕು. ಇಲ್ಲದಿದ್ದರೆ "ವಿಜ್ಞಾತಾರಮತಿ" ಇತ್ಯಾದಿ ಶ್ರುತಿಗಳು ವಿರುದ್ಧ

ಗಳಾಗುವವು. ಇನ್ನು ಆತ್ಮನಿಗೆ ಜ್ಞಾನಸ್ವರೂಪವನ್ನು ಹೇಳಿರುವದು. ಆತ್ಮನು ಜ್ಞಾನಗುಣವೇ ಸಾರವುಳ್ಳವನಾಗಿರುವದರಿಂದ ಯುಕ್ತವಾಗುತ್ತದೆ. ಪಾಷಾಣೋಽಯಂ ಕಠಿಣಃ (ಈ ಕಲ್ಲು ಕಠಿಣವು) ಮತ್ತು ಈ ಜಲವು ಶೀತವು ಎಂಬುವಲ್ಲಿ ಕಾಠಿಣ್ಯ ಗುಣವೇ ಸಾರವಾಗಿವುಳ್ಳದ್ದರಿಂದ ಪಾಷಾಣಕ್ಕೆ ಕಠಿಣವೆಂದೂ ಶೀತಗುಣವೇ ಸಾರವಾಗಿ ಉಳ್ಳದ್ದರಿಂದ ಜಲಕ್ಕೆ ಶೀತವೆಂದೂ ವ್ಯವಹರಿಸುವಂತೆ ಆತ್ಮನು ಜ್ಞಾನಗುಣವೇ ಸಾರವುಳ್ಳವನಾದ್ದರಿಂದ ಆತ್ಮನಿಗೆ ಜ್ಞಾನವೆಂಬ ವ್ಯವಹಾರವು ಶ್ರುತಿಯಲ್ಲಿ ಕಂಡುಬರುವದು. ಆದ್ದರಿಂದಲೇ "ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್" ಎಂದು ಶ್ರೀ ವ್ಯಾಸರು ಸೂತ್ರಿಸಿರುವರು. ಎಲೈ ಶಿವಾದ್ವೈತಿಯೇ ಜ್ಞಾನವೆಂಬುವದು ಆತ್ಮನಲ್ಲಿ ಕಲ್ಲಿನಲ್ಲಿ ಕಾಠಿಣ್ಯವಿದ್ದಂತೆಯೂ ಜಲದಲ್ಲಿ ಶೀತಸ್ಪರ್ಶವಿದ್ದಂತೆಯೂ, ಪುಷ್ಪದಲ್ಲಿ ಗಂಧವಿದ್ದಂತೆಯೂ ಇರುತ್ತದೆಂದು ಹೇಳಿದರೆ ಆ ಜ್ಞಾನವು ಆತ್ಮನಲ್ಲಿ ಎಲ್ಲಾ ಅವಸ್ಥೆಗಳಲ್ಲಿ ಇರಬೇಕಲ್ಲವೆ? ಸುಷುಪ್ತಿ ಮೂರ್ಛಾದ್ಯವಸ್ಥೆಗಳಲ್ಲಿ ಆ ಜ್ಞಾನವು ಕಂಡುಬರುವದಿಲ್ಲವೇಕೆ? ಅಂದರೆ ಬ್ರಹ್ಮಾದ್ವೈತಿಯೆ ಈ ಆಕ್ಷೇಪಣೆಗೆ ಹಿಂದೆ ವೃತ್ತಿನಿತ್ಯತ್ವವಾದದಲ್ಲಿಯೇ ಸಮಾಧಾನವು ಅರ್ಥಾತ್ ಹೇಳಲ್ಪಟ್ಟಿರುವದು. ಆದರೂ ಪುನಃ ಹೇಳುವೆನು ಕೇಳು. ಸುಷುಪ್ತಿ ಮೂರ್ಛಾದಿಗಳಲ್ಲಿ ಆತ್ಮನ ಜ್ಞಾನವು ಸಂಕುಚಿತವಾಗಿರುವದು. ಜಾಗ್ರದಾದಿಗಳಲ್ಲಿ ವಿಕಸಿತವಾಗಿರುವದು. ಬಾಲ್ಯದಲ್ಲಿ ಸಂಕುಚಿತವಾಗಿದ್ದ ಪುಂಸ್ತ್ವವು ಯೌವನಾವಸ್ಥೆಯಲ್ಲಿ ಅಭಿವ್ಯಕ್ತವಾಗುವಂತೆ ಜ್ಞಾನಕ್ಕೆ ಸಂಕೋಚವಿಕಾಸಗಳನ್ನು ಹೇಳುವೆವು. ಆದ್ದರಿಂದ ಯಾವ ಶ್ರುತಿಗೂ ನಮ್ಮ ಮತದಲ್ಲಿ ವಿರೋಧವಾಗುವದಿಲ್ಲ. ಆದ್ದರಿಂದ ಆತ್ಮನಲ್ಲಿ ಜ್ಞಾನ ಕೃತಿ ಇಚ್ಛಾದಿಗಳು ಸ್ವಾಭಾವಿಕ ಧರ್ಮಗಳೆಂದು ತಿಳಿಯುತಕ್ಕದ್ದು. ಜೀವಾತ್ಮನು ತನ್ನ ಶಕ್ತಿರೂಪವಾದ ಅಂತಃಕರಣವೆಂಬ ಚಿತ್ತವನ್ನು ವಿಕಾಸಗೊಳಿಸಲು ಸೂಕ್ಷ್ಮಚಿದಚಿತ್ಪ್ರಪಂಚಾಕಾರವಾದ ವಿಮರ್ಶಶಕ್ತಿವಿಶಿಷ್ಟಶಿವನೇ ಆಗಿಬಿಡುವನು. ಒಂದಾನೊಂದು ಆಕಾಶದಲ್ಲಿ ನಿರ್ಭೀತಿಯಿಂದ ಸಂಚರಿಸುವ ಪಕ್ಷಿಯು ತನ್ನ ಪಕ್ಕಗಳನ್ನು ಸಂಕುಚಿತಗಳನ್ನಾಗಿ ಮಾಡಿಕೊಂಡು ಅಧೋಮುಖವಾಗಿ ಭೂಮಿಗಿಳಿದು ಅಲ್ಲಿದ್ದ ಬಲಿಯಿಂದ ಬಂಧಿತವಾಗಿ ದುಃಖಪಡುವದು. ಅದೇ ಪಕ್ಷಿಯು ತನ್ನ ಪುಣ್ಯವಶಾತ್ ಪ್ರಾಪ್ತನಾದ ಪುರುಷನಿಂದ ತನ್ನ ಬಲೆಯನ್ನು ತಪ್ಪಿಸಿಕೊಂಡು ಪುನಃ ಊರ್ಧ್ವಮುಖವಾಗಿ ತನ್ನ ಪಕ್ಕಗಳನ್ನು ವಿಸ್ತರಿಸಿ, ಆ ಪಕ್ಕಗಳಿಂದಲೇ ತಾನು ಮೇಲಕ್ಕೆ ಹೋಗುವದಕ್ಕೆ ವಾಯುವನ್ನು ಬಟ್ಟುಮಾಡಿಕೊಂಡು ಆಕಾಶಮಧ್ಯದಲ್ಲಿ ಹೋಗಿ

ಅಲ್ಲಿ ನಿರ್ಭೀತವಾಗಿ ಆನಂದಪಡುವಂತೆ ಜೀವಾತ್ಮನೆಂಬ ಪಕ್ಷಿಯು ತನ್ನ ವಿಮರ್ಶಶಕ್ತಿಯಿಂದುಂಟಾದ ಜ್ಞಾನಕ್ರಿಯಾಶಕ್ತಿಗಳೆಂಬ ಪಕ್ಕಗಳನ್ನು ಸಂಕುಚಿತಗಳನ್ನಾಗಿ ಮಾಡಿಕೊಂಡು ಚಿತ್ತಭೂಮಿಗಿಳಿಯಲು ಬಂಧಿತವಾಗಿ ದುಃಖಪಡುವದು. ತನ್ನ ಪುಣ್ಯಪರಿಪಾಕದಿಂದ ಪ್ರಾಪ್ತನಾದ ಗುರುವಿನಿಂದ ಆ ಚಿತ್ತಭೂಮಿಯಲ್ಲಿರುವ ತನ್ನನ್ನು ಅತಿ ಜಿಗಿಯಾಗಿ ಬಂಧಿಸಿರುವ ಮಲಪಾಶವನ್ನು ಬಿಡಿಸಿಕೊಂಡು, ತನ್ನ ಸಂಕುಚಿತಗಳಾದ ಜ್ಞಾನಕ್ರಿಯಾಶಕ್ತಿಗಳೆಂಬ ಪಕ್ಕಗಳನ್ನು ವಿಸ್ತಾರಗೊಳಿಸಿ, ಅವುಗಳಿಂದ ಎಲ್ಲಾ ಕಡೆಯಲ್ಲಿ ಸಂಚರಿಸುವ ಪ್ರಾಣವಾಯುವನ್ನು ಒಟ್ಟುಗೂಡಿಸಿ, ಅದರೊಡನೆ ಸುಷುಮ್ನಾನಾಡಿಯ ಪೊಳ್ಳಿನಲ್ಲಿ ಹೊಕ್ಕು, ಊರ್ಧ್ವಮುಖವಾಗಿ ಕ್ರಮೇಣ ಮೇಲಕ್ಕೇರಿ ಚಿದಾಕಾಶದಲ್ಲಿಯೇ ಸೇರಿ ಸುಖಿಯಾಗುವದು.

ಎಲ್ಲೈ ಶಿವಾದ್ವೈತಿಯೇ? ಸಮಸ್ತ ಜೀವಾತ್ಮರು ಬ್ರಹ್ಮದ ಅಂಶರೂಪರಾಗಿದ್ದರಿಂದಲೂ ಅವರಲ್ಲಿ ಚೈತನ್ಯವು ಒಂದೇ ಯಾಗಿರುವದರಿಂದಲೂ, ಜೀವಾತ್ಮರೆಲ್ಲರೂ ಸಮಾನಾಧಿಕಾರ ಉಳ್ಳವರೆಂದು ಸ್ಪಷ್ಟವಾಗುತ್ತಿರಲಿಕ್ಕೆ ಕೆಲವರಿಗೆ ವೇದಾಧ್ಯಯನವೂ, ವೇದಾರ್ಥಾನುಷ್ಠಾನವೂ ಮತ್ತೆ ಕೆಲವರಿಗೆ ಅವುಗಳ ನಿಷೇಧವೂ, ಎಂದು ಹೇಳುವದು ಅಯುಕ್ತವಲ್ಲವೆ? ಅಂದರೆ ಬ್ರಹ್ಮಾದ್ವೈತಿಯೇ? ಈ ಆಕ್ಷೇಪಣೆಯ ಸಮಾಧಾನಕ್ಕಾಗಿ ವ್ಯಾಸಮಹರ್ಷಿಗಳು "ಅನುಜ್ಞಾಪರಿಹಾರೌದೇಹಸಂಬಂಧಾಜ್ಜ್ಯೋತಿರಾದಿವತ್" ಎಂಬುವದೊಂದು ಸೂತ್ರವನ್ನೇ ರಚಿಸಿರುವದು. ಅಂದರೆ ಶುಚ್ಯಶುಚಿದೇಶಗಳಲ್ಲಿರುವ ತೇಜಃ ಪದಾರ್ಥಗಳ ಗ್ರಹಣ ವಿಧಿನಿಷೇಧಗಳಿರುವಂತೆ ಶುಚ್ಯಶುಚಿಗಳಾದ ದೇಹಗಳ ಸಂಬಂಧದಿಂದ ವೇದಾಧ್ಯಯನಾದಿ ಕರ್ಮಗಳ ವಿಧಿನಿಷೇಧಗಳಿಂದು ತಿಳಿದುಬರುವ ಕಾರಣ ಶಿವದೀಕ್ಷೆಯಿಂದ ಶುದ್ಧವಾದ ಶರೀರವುಳ್ಳವನಿಗೆ ವೇದಾಧ್ಯಯನಾದಿಗಳ ಅನುಜ್ಞೆಯೂ ಅಶುದ್ಧವಾದ ಶರೀರವುಳ್ಳವನಿಗೆ ವೇದಾಧ್ಯಯನಗಳ ನಿಷೇಧವೂ ಕಂಡುಬರುವವಾದ್ದರಿಂದ ಸಮಸ್ತ ಜೀವರು ಶಿವಾಂಶರಾಗಿದ್ದರೂ ಅವರುಗಳ ಶುದ್ಧಾಶುದ್ಧ ಶರೀರ ಸಂಬಂಧದಿಂದ ಎಲ್ಲರೂ ಸಮಾನಾಧಿಕಾರಿಗಳಾಗಲಾರರು. ಆದ್ದರಿಂದಲೇ "ಶಿವೋಭೂತ್ವಾ ಶಿವಂಯಜೇತ್" ಎಂಬುವ ಶ್ರುತಿಯೂ "ಶಿವೋಭೂತ್ವಾಯಜೇತೇತಿ ಭಕ್ತೋಭೂತ್ವೇತಿ ಕಥ್ಯತೇ" ಎಂಬುವ ಶಿವಸ್ತೋತ್ರಾವಳಿಯ ಉಕ್ತಿಯೂ, "ನಾರುದ್ರಃ ಕ್ರಮುಪಾಠಕಃ" ಎಂಬುವ ಸ್ಕಾಂದೋಕ್ತಿಯೂ ಶಿವದೀಕ್ಷೆಯಿಂದ ಪರಿಶುದ್ಧನಾದ ಶಿವಭಕ್ತನಿಗೆ ವೇದಾಧ್ಯಯನ

ವೇದಾರ್ಥರೂಪನಾದ ಶಿವನ ಪೂಜಾನುಷ್ಠಾನಗಳನ್ನು ವಿಧಿಸುತ್ತವೆ. ಪ್ರತಿಬಿಂಬವಾದಿಯೇ ಜೀವನು ಪ್ರತಿಬಿಂಬಸ್ವರೂಪನೆಂದು ಹೇಳಿದರೆ ಅವನಿಗೆ ತ್ರಿಕಾಲಾಬಾಧ್ಯವಾದ ಸತ್ಯತ್ವ ವಿರಲಾರದಷ್ಟೆ? ಪ್ರತಿಬಿಂಬವು ಉಪಾಧ್ಯಧೀನವಾದುದರಿಂದ ಉಪಾಧಿಯು ಜ್ಞಾನದಿಂದ ನಷ್ಟವಾಗಲು ಜೀವನಾಶವನ್ನು ಹೇಳಬೇಕಾಗುವದು. ಶಿವಾದ್ವೈತಿಯೇ? ಹೀಗೆಯೇ ಹೇಳುವೆನು. ಇದರಲ್ಲಿ ನಿನ್ನ ಆಕ್ಷೇಪಣೆಯೇನು? ಆದರೆ ಜೀವನಿಗೆ ನಿತ್ಯತ್ವವನ್ನು ಹೇಳುವ "ನಜಾಯತೆ ಮ್ರಿಯತೇವಾ ವಿಪಶ್ಚಿತ್" "ನಿತ್ಯೋ ನಿತ್ಯಾನಾಂ" "ಜ್ಞಾಜ್ಞೌದ್ವಾವಜಾವೀಶಾನೀಶೌ" ಇತ್ಯಾದಿ ಶ್ರುತಿಗಳಿಗೆ ವಿರೋಧವಾಗುವದಲ್ಲದೇ ನತ್ವೇವಾಹಂ ಜಾತುನಾಸಂ ನತ್ವಂ ನೇಮೇಜನಾಧಿಪಾಃ | ನಚೈವ ನಭವಿಷ್ಯಾಮಃ ಸರ್ವೇವಯಮತಃಪರಂ || ಎಂದು ಮೂರೂ ಕಾಲಗಳಲ್ಲಿ ಜೀವರಿಗೆ ಅಬಾಧ್ಯವಾದ ಸತ್ಯತ್ವವನ್ನು ಹೇಳುವ ಗೀತಾವಾಕ್ಯಕ್ಕೂ ವಿರೋಧವಾಗುವದು ಬ್ರಹ್ಮಾದ್ವೈತಿಯೇ? ಈ ಗೀತಾವಾಕ್ಯವನ್ನು ಸ್ವಲ್ಪ ವಿಚಾರಿಸು. ಉತ್ತಮ, ಮಧ್ಯಮ, ಪ್ರಥಮ, ಪುರುಷಗಳಿಂದ ತಿಳಿಯಲ್ಪಡುವ ನಾನು ನೀನು ಅದು ಅಥವಾ ಅವನು ಎಂಬುವ ಸಮಸ್ತರಿಗೂ ವಯಂ (ನಾವು) ಎಂದು ಪ್ರಯೋಗಿಸಿರುವ ಕಾರಣ, ಯುಷ್ಮತ್ ಪ್ರತ್ಯಯಕ್ಕೆ ವಿಷಯವಾವುದೋ ಅದೇ ಅಸ್ಮತ್ಪ್ರತ್ಯಯಕ್ಕೆ ವಿಷಯವೆಂದು ಕಂಡುಬರುತ್ತದಲ್ಲವೇ? ಇವೆರಡೂ ಪ್ರತ್ಯಯಗಳು ಚೈತನ್ಯೈಕ ವಿಷಯಗಳಾದ್ದರಿಂದ ಯುಷ್ಮತ್ಪ್ರತ್ಯಯಕ್ಕೆ ವಿಷಯವಾದದ್ದು. ಜಡವೆಂತಲೂ ಅಸ್ಮತ್ಪ್ರತ್ಯಯಕ್ಕೆ ವಿಷಯವಾದದ್ದು, ಚೇತನವೆಂತಲೂ, ಜಡಚೇತನ ವಿಭಾಗವಾಗಲಾರದು. ಅಂದಮೇಲೆ "ಯುಷ್ಮದಸ್ಮತ್ಪ್ರತ್ಯಯ ಗೋಚರಯೋಃ" ಎಂಬುವ ವಾಕ್ಯದಿಂದ ನಿಮ್ಮ ಭಾಷ್ಯಕಾರರು ಜಡಚೇತನ ವಿಭಾಗವನ್ನು ಮಾಡಿದ್ದು ಅಸಂಗತವಲ್ಲವೇ? ಮತ್ತು ಅಸ್ಮತ್ಪ್ರತ್ಯಯವೂ ಕೂಡ ವಂಧ್ಯಾಪುತ್ರನ ಪ್ರತ್ಯಯದಂತೆ ಮಿಥ್ಯಾಭೂತವಾಗಿರುವದರಿಂದ ಅದಕ್ಕೆ ವಿಷಯವಾದ ಚೈತನ್ಯವೂ ಕೂಡ ವಂಧ್ಯಾಪುತ್ರ ಪ್ರಾಯವಾದುದರಿಂದ "ಅಸ್ಮತ್ಪ್ರತ್ಯಯ ವಿಷಯತ್ವಾದ ಪರೋಕ್ಷತ್ವಾಚ್ಚ ಪ್ರತ್ಯಗಾತ್ಮ ಪ್ರಸಿದ್ಧೇಃ || ಎಂದು ಪ್ರತ್ಯಗಾತ್ಮ ಪ್ರಸಿದ್ಧಿಯನ್ನು ಹೇಳಿದ್ದು ಅಯುಕ್ತವಲ್ಲವೆ? ಇದಲ್ಲದೇ ಇಬ್ಬರು ಪರಸ್ಪರ ಕಲಹ ಮಾಡುವಕಾಲದಲ್ಲಿ ನೀನು ಇಂಥವನು, ನೀನು ಅಂಥವನು ಎಂದು ಪ್ರಯೋಗಿಸುವ ತ್ವಂಕಾರದಿಂದ ಅವರಿಗೂ ಅಹಂ ಪ್ರಕಾರಕ ಬೋಧವೇ (ನಾನು ಎಂಬು ವಜ್ಞಾನವೇ) ಆಗುವದರಿಂದ ನೀನು ಎಂಬುವ ಪ್ರತೀತಿಗೆ ಚೇತನವೇ ವಿಷಯ

ವೆಂದು ಅನುಭವಸಿದ್ಧವು. ಹೀಗಿದ್ದೂ ಯುಷ್ಮತ್ಪ್ರತ್ಯಯಕ್ಕೆ ವಿಷಯವು ಜಡ ವೆಂದು ಹೇಳಬಹುದೇ? ‟ಇದಂ ಸರ್ವಮಸೃಜತ್” ‟ಇದಂ ಶರೀರಂ ಕೌಂತೆಯಕ್ಷೇತ್ರಮಿತ್ಯಭಿಧೀಯತೆ” ಎಂದು ಇತ್ಯಾದಿ ಶ್ರುತಿ ಸ್ಮೃತಿಗಳಿಂದ ಜಡವು ಇದಂ ಪ್ರತ್ಯಯಕ್ಕೆ (ಇದು ಎಂಬುವ ಜ್ಞಾನಕ್ಕೆ) ವಿಷಯವೆಂದು ಕಂಡುಬರುವದಿಲ್ಲವೆ? ಮತ್ತು ಯುಷ್ಮತ್ಪ್ರತ್ಯಯಕ್ಕೆ (ನೀನು ಎಂಬುವ ಜ್ಞಾನಕ್ಕೆ) ವಿಷಯವು ಜಡವಾದಪಕ್ಷದಲ್ಲಿ ‟ತತ್ತ್ವಮಸಿ” ಎಂಬುವ ಉಪದೇಶವು ಜಡಕ್ಕೇ ಎಂದು ಹೇಳಬಹುದೆ? ಅದೇಕೆ ಶಿವಾದ್ವೈತಿಯೇ? ಈ ಉಪದೇಶವು ಜೀವನಿಗುಂಟು ಅಂದರೆ ತ್ವಮರ್ಥವು ಜೀವನೆಂದು ಹೇಳುವಿಯೇನು? ಹೌದು ಹೇಳುವೆನು. ಹಾಗಾದರೆ ಆಚಾರ್ಯರು ಹೇಳಿದ್ದು ತಪ್ಪು ಎಂದು ಒಪ್ಪಿಕೊಂಡಂತಾಯಿತಲ್ಲವೆ? ಅಂದರೆ ಶಿವಾದ್ವೈತಿಯೇ? ಇದಮಸ್ಮತ್ಪ್ರತ್ಯಯಗೋಚರಯೋರಿತಿ ವಕ್ತವ್ಯೇ ಯುಷ್ಮದ್ಗ್ರಹಣಮತ್ಯಂತ ಭೇದೋಪಲಕ್ಷಣಾರ್ಥಂ || ಎಂದು ಟೀಕಾಕಾರರು ಅವರ ತಾತ್ಪರ್ಯವನ್ನು ವಿಶದಮಾಡಿರುತ್ತಾರೆಂಬುವದು ಗೊತ್ತಿಲ್ಲವೆ? ಪ್ರತಿಬಿಂಬವಾದಿಯೇ? ಗೊತ್ತುಂಟು. ಅಂತಹ ಅತ್ಯಂತ ಭೇದವಾದರೂ ತ್ವಮಹಂ ಪದಾರ್ಥಗಳಿಗೆ ಸಿದ್ಧಿಸಬೇಕಲ್ಲವೆ? ತ್ವಮಹಂ ಪದಾರ್ಥಗಳಿಗೆ ಒಂದೇ ಒಂದು ಚೈತನ್ಯರೂಪವಾದ ಅರ್ಥವೇ ಸಿದ್ಧಿಸುತ್ತದಂದಮೇಲೆ ಟೀಕಾಕಾರರು ಅತ್ಯಂತ ಭೇದವನ್ನು ತೋರಿಸುವದಕ್ಕಾಗಿ ಯುಷ್ಮದ್ಗ್ರಹಣವೆಂದು ಹೇಳಿರುವದಾದರೂ ಯುಕ್ತವಲ್ಲ. ಇದಲ್ಲದೆ ತ್ವಮಹ ಮರ್ಥಗಳಿಗೆ ವಿಷಯ ವಿಷಯಿಭಾವವೂ ಕೂಡ ಯುಕ್ತವಾಗುವದಿಲ್ಲ. ಘಟಕ್ಕೂ ಘಟಜ್ಞಾನಕ್ಕೂ ವೈಜಾತ್ಯ (ಭೇದ)ವಿರುವಂತೆ ಅವುಗಳಿಗೆ ಭೇದವಿಲ್ಲವಷ್ಟೆ? ತ್ವಮರ್ಥವಾದ ಚೈತನ್ಯವು ಅಹಮರ್ಥವಾದ ಚೈತನ್ಯಕ್ಕೆ ವಿಷಯವಾಗುವದೆಂದರೆ ಜ್ಞಾನಕ್ಕೆ ವಿಷಯವಾದ ಘಟವು ಜಡವೆನಿಸಿರುವಂತೆ ತ್ವಮರ್ಥ ಚೈತನ್ಯವು ಜಡವೆನಿಸಬೇಕು. ಶಿವಾದ್ವೈತಿಯೇ? ನಾನು ಘಟಜ್ಞಾನವುಳ್ಳವನು. ಅಥವಾ ಘಟವನ್ನು ತಿಳಿಯುತ್ತೇನೆ. ಎಂಬುವ ಅನುವ್ಯವಸಾಯರೂಪವಾದ ಚೈತನ್ಯಕ್ಕೆ ಘಟಚೈತನ್ಯವು (ಘಟಜ್ಞಾನವು) ವಿಷಯವಾಗಿರುವಂತೆ ತ್ವಮರ್ಥ ಚೈತನ್ಯವು ಅಹಮರ್ಥ ಚೈತನ್ಯಕ್ಕೆ ವಿಷಯವಾಗಬಹುದಲ್ಲವೆ? ಅಂದರೆ ಪ್ರತಿಬಿಂಬವಾದಿಯೇ? ವ್ಯವಸಾಯವು (ಇದು ಘಟವು ಎಂಬುವ ಜ್ಞಾನವು) ವ್ಯವಸಾತೃವಿನಲ್ಲಿ (ಜ್ಞಾತೃವಾದಾತ್ಮನಲ್ಲಿ) ವಿಶ್ರಾಂತವಾಗಿರುವ ಮೂಲಕ ಘಟಪಟಾದಿಗಳಂತೆ ಜ್ಞಾನಕ್ಕೆ ಇದು ಎಂಬದಾಗಿ ಇದಂಕಾರವಿಲ್ಲದಿರುವದರಿಂದ ಯಾವಾ

ಗಲೂ ಪ್ರಮೇಯಮಾರ್ಗವನ್ನು ದಾಟಿರುವ ಜ್ಞಾನವು ಮತ್ತೊಂದು ಜ್ಞಾನಕ್ಕೆ ವಿಷಯವೇ ಅಲ್ಲವು. ವ್ಯವಸಾಯ ಮತ್ತು ಅನುವ್ಯವಸಾಯಗಳಿಗೆ ಘಟವೇ ವಿಷಯವಾಗಿದೆ. ಆದ್ದರಿಂದಲೆ ನನ್ನಿಂದ ಘಟವು ತಿಳಿಯಲ್ಪಟ್ಟಿತು. ಎಂಬುವ ಅನುಭವವು ಲೋಕಸಿದ್ಧವಾಗಿದೆ. ಜ್ಞಾನಕ್ಕೆ ಜ್ಞಾನವು ವಿಷಯವಲ್ಲವು. ಸಜಾತೀಯ ಪದಾರ್ಥಗಳಿಗೆ ವಿಷಯ ವಿಷಯೀಭಾವವು ಸಂಭವಿಸುವದಿಲ್ಲವಾದ್ದರಿಂದ ಪ್ರಮಾಣ ಪ್ರಮಿತಿ ಪ್ರಮೇಯ ಪದಾರ್ಥಗಳ ವ್ಯವಸ್ಥೆಯಾಗುವದು. ಈ ವ್ಯವಸ್ಥೆಯು ಪ್ರಮಿತಿಗೆ ಪ್ರಮೇಯತ್ವವನ್ನಂಗೀಕರಿಸಿದಲ್ಲಿ ಅಸಂಗತವಾಗುವದು. ತ್ವಮಹಂ ಪದಾರ್ಥಗಳು ತೇಜಸ್ತಿಮಿರಗಳಂತೆ ಪರಸ್ಪರ ವಿರುದ್ಧಗಳಲ್ಲ ಯಾಕಂದರೆ ತ್ವಂ ಪದಕ್ಕೂ ಅಹಂ ಪದಕ್ಕೂ ಚೈತನ್ಯರೂಪವಾದ ಒಂದೇ ಅರ್ಥವೆಂದು ಹೇಳಿದ್ದಾಗಿದೆಯಷ್ಟೆ? ಯದ್ಯಪಿ ತ್ವಂಪದಕ್ಕೆ ಜಡದಲ್ಲಿ ನಿಮ್ಮಾಚಾರ್ಯರಿಗೆ ಲೋಕವಿರುದ್ಧವಾದ ಲಕ್ಷಣಾವೃತ್ತಿಯ ವಿವಕ್ಷೆ ಇದ್ದರೆ ತ್ವಂಪದಕ್ಕೆ ಜಡವೆಂದು ಅರ್ಥಮಾಡಿದರೂ ಜಡಕ್ಕೂ ಆತ್ಮಜ್ಞಾನಕ್ಕೂ ವಿರೋಧವಿಲ್ಲ. ವಿರೋಧವೇ ಇದ್ದಪಕ್ಷದಲ್ಲಿ ನನ್ನಿಂದ ಇದು ನೋಡಲ್ಪಡುತ್ತದೆ. ನನಗೆ ಇದು ತೋರುತ್ತೆ. ಇದು ಭಾಸಮಾನವಾಗುತ್ತದೆ. ಎಂದು ಆತ್ಮ ಪ್ರಕಾಶಾರೂಢವಾದ ಜಡವು ವಿಷಯವಾಗುಳ್ಳ ಪ್ರತೀತಿಯೇ (ಅನುಭವವೇ) ಆಗದಿರಬೇಕು. ಬ್ರಹ್ಮಾದ್ವೈತಿಯೇ? ತೇಜಸ್ತಿಮಿರಗಳಿಗಾದರೂ ಜ್ಞಾನದಲ್ಲಿ ಸಹಾವಸ್ಥಾನವಿರುವ ಮೂಲಕವಿರೋಧವನ್ನು ಹೇಳಲಾಗುವದಿಲ್ಲ. ತೇಜಸ್ತಿಮಿರ ವಿಷಯಕ ಜ್ಞಾನವಿರದಿದ್ದರೆ ಅವುಗಳಿಗೆ ವಿರೋಧ ಜ್ಞಾನವಾದರೂ ಹೇಗೆ ಆಗಬೇಕು ಆದ್ದರಿಂದ ತೇಜಸ್ತಿಮಿರಗಳೂ ಕೂಡ ಆತ್ಮಪ್ರಕಾಶವನ್ನು ಅವಲಂಬಿಸಿ ಭಾಸಮಾನಗಳಾಗುತ್ತವಂದಮೇಲೆ ಅವುಗಳಿಗಾದರೂ ವಿರೋಧವು ಯುಕ್ತವೆನಿಸದು. ‹‹ತಸ್ಯ ಭಾಸಾಸರ್ವಮಿದಂ ವಿಭಾತಿ ತಮೇವ ಭಾಂತಮನುಭಾತಿ ಸರ್ವಂ›› ಎಂಬುವ ಶ್ರುತಿಯಿಂದ ಸಮಸ್ತ ವಸ್ತುಗಳೂ ಆತ್ಮಪ್ರಕಾಶಾವಲಂಬಿಗಳಾಗಿಯೇ ಭಾಸಮಾನಗಳಾಗುತ್ತವೆಂದು ತಿಳಿದುಬರುವಕಾರಣ ತೇಜಸ್ತಿಮಿರಗಳ ವಿರೋಧವು ಸಾರ್ವತ್ರಿಕವಲ್ಲೆಂದು ಸ್ಪಷ್ಟವು. ಜಡವಾದ ಪ್ರಮೇಯದ ಸ್ಮೃತಿಯ ಸಲುವಾಗಿ ಪ್ರಮೇಯವು ಪ್ರಮಾದ್ವಾರಾ ಪ್ರಮಾತೃವಿನಲ್ಲಿ ವಿಶ್ರಾಂತಿಯನ್ನು ಹೊಂದುತ್ತದೆಂದು ಹೇಳಬೇಕು. ಆದ್ದರಿಂದ ಆ ಪ್ರಮೇಯವು ಪ್ರಮಾತೃಚೇತನಕ್ಕೆ ಅಭಿನ್ನವು. ಹೀಗಿರಲು ‹‹ಯುಷ್ಮದಸ್ಮತ್ಪ್ರತ್ಯಯ ಗೋಚರಯೋಃ›› ಎಂದು ಜಡಚೇತನಗಳಿಗೆ ‹‹ಇತರೇತರ ಭಾವಾನುಪಪತ್ತಿಃ›› ಅಭೇದವು ಯುಕ್ತವಾಗುವದಿಲ್ಲವೆಂದು ನಿಮ್ಮ ಆಚಾರ್ಯರು ಹೇಳಿರುವದು. ಸಮಂಜಸವಾಗಬಹುದೆ?

ಎಲೈ ಶಿವಾದ್ವೈತಿಯೆ! ಮುಂದಾಗುವ ಸ್ಮೃತಿಯು ಸಲುವಾಗಿ ಅನುಭವದ್ವಾರಾ ಘಟಪಟಾದಿ ಪ್ರಮೇಯಕ್ಕೆ ಆತ್ಮವಿಶ್ರಾಂತಿಯನ್ನು ಹೇಳುವದಕ್ಕಿಂತಲೂ ಪೂರ್ವಾನುಭವಜನ್ಯಸಂಸ್ಕಾರದಿಂದಲೇ ಸ್ಮೃತಿಯನ್ನು ಹೇಳುವದು ಯುಕ್ತವಲ್ಲವೆ? ಅಂದರೆ ಸಂಸ್ಕಾರವೂ ಕೂಡ ಸವಿಷಯಕ ವಿರುವದರಿಂದ ಪ್ರಮೇಯವೆಂಬ ವಿಷಯದಿಂದ ಸಹಿತವಾದ ಸಂಸ್ಕಾರಕ್ಕೆ ಆತ್ಮವಿಶ್ರಾಂತಿಯನ್ನು ಹೇಳಿದರೆ ಅಲ್ಲಿ ವಿಷಯವಾದ ಪ್ರಮೇಯ ಪದಾರ್ಥಕ್ಕೂ ಆತ್ಮವಿಶ್ರಾಂತಿಯನ್ನು ಹೇಳಬೇಕು. ಆದ್ದರಿಂದ ಪ್ರಮೇಯವು ಪ್ರಮಾತೃನಿಷ್ಠವಾದಮೇಲೆ ಅವುಗಳಿಗೆ ಇತರೇತರ ಭಾವವು ಸಂಗತವಾಗುವದಿಲ್ಲವೇಕೆ? ಶಿವಾದ್ವೈತಿಯೇ ಪ್ರಮೇಯರೂಪವಾದ ಘಟಾದಿಗಳು ನಷ್ಟಗಳಾದ್ದರಿಂದ ಕೇವಲ ಅವುಗಳ ವಿಷಯತ್ವ ಸಾಹಿತ್ಯದಿಂದಲೇ ಸಂಸ್ಕಾರದಿಂದ ಸ್ಮೃತಿಯು ಸಂಭವಿಸುತ್ತದೆ. ಆದ್ದರಿಂದ ಪ್ರಮೇಯಕ್ಕೆ ಚೇತನವಿಶ್ರಾಂತಿಯಿಲ್ಲ. ವಿಷಯತ್ವವು ವಿಷಯದ ಧರ್ಮವು ವಿಷಯದ ನಾಶವಾಗಿದ್ದರೆ ಅದರ ಧರ್ಮವಾದ ವಿಷಯತ್ವವೆಲ್ಲಿಂದಬರಬೇಕು. ಆದ್ದರಿಂದ ವಿಷಯತ್ವಸಾಹಿತ್ಯಮಾತ್ರದಿಂದ ಸಂಸ್ಕಾರವು ಸ್ಮೃತಿಯನ್ನುಂಟುಮಾಡಲಾರದು. ಘಟಾದಿ ಪ್ರಮೇಯವು ಆತ್ಮಪ್ರಕಾಶಾಂತರ್ಗತವಾಗದೆ ತೇಜಸ್ಸಿಗೆ ಬಾಹ್ಯವಾದ ಅಂಧಕಾರದಂತೆ ಆತ್ಮಪ್ರಕಾಶಕ್ಕೆ ಬಾಹ್ಯವಾಗಿರುವದೆಂದು ಹೇಳಿದರೆ ಇದು ಘಟವು ಎಂಬುವ ಸ್ಫೂರ್ತಿಯೇ ಆಗದಿರಬೇಕು. ಇದಲ್ಲದೆ ಬ್ರಹ್ಮಾದ್ವೈತಿಯೇ ಕೇಳು—"ಆತ್ಮನ ಆಕಾಶಃ ಸಂಭೂತಃ" ಇತ್ಯಾದಿ ಶ್ರುತಿಯಿಂದ ಉತ್ತರೋತ್ತರಭೂತವು ಪೂರ್ವಪೂರ್ವಭೂತದ ಕಾರ್ಯವೆಂದು ತಿಳಿದುಬರುವದರಿಂದಲೂ ಮೃದ್ಘಟನ್ಯಾಯದಿಂದ ಕಾರ್ಯಕಾರಣಗಳಿಗೆ ಅಭೇದವಿರುವದರಿಂದಲೂ ಸಮಸ್ತಪ್ರಮೇಯರೂಪಗಳಾದ ಜಡಪದಾರ್ಥಗಳು ಆತ್ಮನಿಗೆ ಅಭಿನ್ನಗಳೆಂದು ಸ್ಪಷ್ಟವಾಗುತ್ತಿರಲು ಜಡಚೇತನಗಳಿಗೆ "ಇತರೇತರಭಾವಾನುಪಪತ್ತಿಃ" ತಾದಾತ್ಮ್ಯವು ಉಪಪನ್ನವಾಗುವದಿಲ್ಲವೆಂದು ಹೇಳುವದು ಶ್ರುತಿವಿರುದ್ಧವಲ್ಲವೆ? ಜಡಚೇತನಗಳಿಗೆ ತೇಜಸ್ತಿಮಿರಗಳಂತೆ ಅತ್ಯಂತ ಭೇದವಿದ್ದಪಕ್ಷದಲ್ಲಿ "ಏತದಾತ್ಮ್ಯಮಿದಂಸರ್ವಂ ಸಆತ್ಮಾ ತತ್ವಮಸಿ" "ಸರ್ವಂ ಖಲ್ವಿದಂಬ್ರಹ್ಮ" ಎಂಬುವ ಮೊದಲಾದ ಶ್ರುತಿಗಳಿಗೆ ವಿರೋಧವಾಗುವದಿಲ್ಲವೇ? ಆದ್ದರಿಂದ ಜಡಚೇತನಗಳಿಗೆ ಅತ್ಯಂತ ಭೇದವನ್ನು ಹೇಳಕೂಡದು. ಮತ್ತು ಅಭೇದದಲ್ಲಿ ಪರ್ಯವಸಾನವನ್ನು ಹೊಂದುವ ಭೇದವನ್ನು ಹೇಳಬೇಕು. ಇದಲ್ಲದೆ ಜಡಚೇತನಗಳಿಗೆ ಅತ್ಯಂತಭೇದವೇ ಇದ್ದಪಕ್ಷದಲ್ಲಿ "ಅಹಮನ್ನ ಮಹಮನ್ನ ಮಹಮನ್ನಂ" ಎಂದು ಅನ್ನ

ಸ್ವರೂಪವಾದ ಪೃಥಿವ್ಯಾದಿ ಜಡಪದಾರ್ಥಗಳಿಗೆ ಅಹಮರ್ಥವಾದ ಚೇತನದ ಅಭೇದವು ಹೇಳಲ್ಪಡುತ್ತಿದ್ದಿಲ್ಲ. ಮತ್ತು ಜಡಚೇತನಗಳಿಗೆ ಅತ್ಯಂತ ಅಭೇದವೇ ಇದ್ದಪಕ್ಷದಲ್ಲಿ ‟ಅಹಮನ್ನಾದೋಽಹಮನ್ನಾದೋಽಹಮನ್ನಾದಃ” ಎಂದು ಜಡ ಚೇತನಗಳಿಗೆ ಭೇದವು ಹೇಳಲ್ಪಡುತ್ತಿದ್ದಿಲ್ಲ. ಆದ್ದರಿಂದ ಕಾರ್ಯಕಾರಣಗಳಿಗೆ ಭೇದಾಭೇದ ತಾತ್ಪರ್ಯದಿಂದ ನಾನೇ ಅನ್ನಸ್ವರೂಪನು, ನಾನೇ ಅನ್ನವನ್ನು ತಿನ್ನ ತಕ್ಕವನು ಎಂದು ಶ್ರುತಿಯು ಹೇಳಿರುವದು. ಆದ್ದರಿಂದ ತೇಜಸ್ತಿಮಿರಗಳಂತೆ ಜಡ ಚೇತನಗಳಿಗೆ ಅತ್ಯಂತ ಭೇದವನ್ನು ಹೇಳುವದು ಶ್ರುತಿವಿರುದ್ಧವೇ ಸರಿ. ಆದ್ದ ರಿಂದಪ್ರತಿಬಿಂಬವಾದಿಯೇ ! ಜೀವನು ಪ್ರತಿಬಿಂಬಸ್ವರೂಪವೆಂದು ಹೇಳಿದರೆ ಜೀ ವನಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗಳಿಗೂ ಮತ್ತು ಜೀವರಿಗೆ ತ್ರಿಕಾಲದಲ್ಲಿಯೂ ಅಬಾಧ್ಯವಾದ ಸತ್ಯತ್ವವನ್ನು ಹೇಳುವ ‟ನತ್ವೇವಾಹಂ ಜಾತುನಾಸಂ ನತ್ವಂ ನೇಮೇ ಜನಾಧಿಪಾಃ” ಎಂಬುವ ಕೃಷ್ಣಗೀತಾ ವಾಕ್ಯಕ್ಕೂ ವಿರೋಧವಾಗುವದು. ಆದ್ದರಿಂದ ಪ್ರತಿಬಿಂಬವಾದವನ್ನು ಬಿಟ್ಟು ಸನ್ಮಾರ್ಗವನ್ನು ಅನುಸರಿಸುವದು ಯೋ ಗ್ಯವಲ್ಲವೇ ? ಎಲೈ ಪ್ರತಿಬಿಂಬವಾದಿಯೇ ? ಜೀವಾತ್ಮನು ಚಿದಾಭಾಸನು (ಚಿತ್ಪ್ರತಿಬಿಂಬಸ್ವರೂಪನು) ಎಂದು ನಿಮ್ಮ ಆಚಾರ್ಯರಾದರೂ ಕಂಠತಃ ಎಲ್ಲಿ ಹೇಳಿರುವರು ? ಶಿವಾದ್ವೈತಿಯೇ ? ಆಚಾರ್ಯರು ಹೇಳಿರುವರು. ಆದ್ದರಿಂದ ಲೇ ಪ್ರತಿಬಿಂಬವಾದದಲ್ಲಿ ನನಗೆ ವಿಶ್ವಾಸವಿರುವದು. ನೋಡು. ‟ಪೂರ್ಣಾತ್ಮಾ ನಾತ್ಮಭೇದಾತ್ತ್ರಿವಿಧಮಿಹಪರಂ ಬುದ್ಧ್ಯವಚ್ಛಿನ್ನಮನ್ಯ ತ್ತತ್ರೈವಾಭಾಸಮಾ ತ್ರಂಗಗನಮಿವ ಜಲೇತ್ರಿಪ್ರಕಾರಂ ವಿಭಾತಿ ‖ ಅಂಭೋವಚ್ಛಿನ್ನಮಸ್ಮಿನ್ಪ್ರತಿಫಲಿತ ಮತಃ ಪಾಥಸೋಂತರ್ಬಹಿಶ್ಚ ಪೂರ್ಣಾವಚ್ಛಿನ್ನಯೋಗೆ ವ್ರಜತಿಲಯಮವಿದ್ಯಾ ಸ್ವಕಾರ್ಯೈಃ ಸಹೈವ” ಎಂಬದಾಗಿ ಆಚಾರ್ಯರೇ ತಮ್ಮ ಶತಶ್ಲೋಕಿಯಲ್ಲಿ ಹೇಳಿರುವರು. ಈ ಶ್ಲೋಕದ ಅಭಿಪ್ರಾಯವೇನಂದರೆ, ಒಂದೇ ಒಂದಾದ ಆಕಾಶವು ಉದಕಾವಚ್ಛಿನ್ನವಾಗಲು ಅದಕ್ಕೆ ಉದಕಾವಚ್ಛಿನ್ನ ಆಕಾಶವೆಂತಲೂ, ಆ ಉದಕದಮೇಲೆ ಪ್ರತಿಬಿಂಬಿಸಲು ಉದಕ ಪ್ರತಿಬಿಂಬಿತ ಆಕಾಶವೆಂತಲೂ, ಆ ಉದಕದ ಒಳಗೂ ಹೊರಗೂ ವ್ಯಾಪಿಸಿರುವ ಆಕಾಶವು ಮಹಾಕಾಶವೆಂತಲೂ, ಮೂರುಪ್ರಕಾರವಾಗಿರುವಂತೆ ಒಂದೇ ಒಂದಾದ ಬ್ರಹ್ಮವು ಅಂತಃಕರಣಾವ ಚ್ಛಿನ್ನವಾಗಲು ಅದಕ್ಕೆ ಆತ್ಮವೆಂತಲೂ, ಆ ಬುದ್ಧಿಯಲ್ಲಿ ಪ್ರತಿಬಿಂಬಿತವಾಗಲು ಆ ಪ್ರತಿಬಿಂಬಕ್ಕೆ ಅನಾತ್ಮವು (ಚಿದಾಭಾಸನು) ಎಂತಲೂ, ಆ ಬುದ್ಧಿಯ ಒಳಗೂ ಹೊರಗೂ ವ್ಯಾಪಿಸಿರುವ ಬ್ರಹ್ಮಕ್ಕೆ ಪೂರ್ಣಾತ್ಮನೆಂತಲೂ ಮೂರುಪ್ರ

ಕಾರವಾಗಿರುವದು. ಈ ಪೂರ್ಣಬ್ರಹ್ಮವೆಂಬ ಅಧಿಷ್ಠಾನ ವಸ್ತುವಿನ ಸಾಕ್ಷಾತ್ಕಾರವಾಗಲು ಅವಿದ್ಯೆಯು ತನ್ನ ಕಾರ್ಯಗಳಾದ ಪ್ರತಿಬಿಂಬಾದಿಗಳೊಡನೆ ನಾಶವನ್ನು ಹೊಂದುತ್ತದೆ. ಎಂದು ಆನಂದಗಿರಿಯವರು ಆ ಶ್ಲೋಕಾರ್ಥವನ್ನು ಹೇಳಿರುವರು. ಆದ್ದರಿಂದ ಅಂತಃಕರಣದಲ್ಲಿ ಚಿತ್ಪ್ರತಿಬಿಂಬವೆ ಜೀವನೆಂದು ಹೇಳುವೆನು. ಬ್ರಹ್ಮಾದ್ವೈತಿಯೇ ನಿಮ್ಮ ಆಚಾರ್ಯರು ಹೇಳಿರುವರೆಂಬುವ ಕಾರಣದಿಂದಲೇ ಪ್ರತಿಬಿಂಬವಾದವನ್ನು ಸ್ವೀಕರಿಸತಕ್ಕದ್ದು ಕುಶಲಪುರುಷರ ಕರ್ತವ್ಯವಲ್ಲವು. ಶ್ರುತಿಯುಕ್ತ ಅನುಭವಗಳಿಂದ ವಿರುದ್ಧವಾಗಲು ಎಂಥವರ ಮಾತಿನಲ್ಲಿಯಾದರೂ ವಿಶ್ವಾಸ ಹುಟ್ಟಲಾರದು. ನೋಡು ಮೊದಲು ಆಕಾಶದೃಷ್ಟಾಂತವೇ ಅಯುಕ್ತವು. ಆಕಾಶವು ಪ್ರತಿಬಿಂಬಿಸುವದೆಂಬುವದೇ ಸರ್ವಲೋಕವಿರುದ್ಧವು. ಹಿಂದೂ ಮುಂದೂ ಈಗೂ ಯಾರ ಅನುಭವದಲ್ಲಿಯೂ ಬಾರದಿರುವ ಆಕಾಶ ಪ್ರತಿಬಿಂಬವನ್ನು ಪ್ರಾಸಿಸಿರುವದು ನಿಮ್ಮ ಆಚಾರ್ಯರೊಬ್ಬರ ಅನುಭವವೇದ್ಯವೇ ಸರಿ. ಆದ್ದರಿಂದ ಪ್ರತಿಬಿಂಬವಾದದ ಅಭಿಮಾನವನ್ನು ಬಿಟ್ಟು ಚಿತ್ತಶಕ್ತಿಯ ವಿಶಿಷ್ಟನೇ ಜೀವನೆಂದು ಹೇಳುವದು ಯುಕ್ತವಲ್ಲವೆ? ಚಿತ್ತಕ್ಕೂ ಶಿವಾಂಶರೂಪನಾದ ಜೀವನಿಗೂ ಅವಿನಾಭಾವ ಸಂಬಂಧವನ್ನು ಹೇಳುವದರಿಂದ ಚಿತ್ತವೈಶಿಷ್ಟ್ಯವು ಶಿವಾಂಶರೂಪವಾದ ಶಿವಚೈತನ್ಯಕ್ಕೆ ಯುಕ್ತವಾಗುವದು. ಎಲೈ ಪ್ರತಿಬಿಂಬವಾದಿಯೇ ‚‚ಯಥಾಗ್ನೇರ್ವಿಸ್ಫುಲಿಂಗಾ'' ಎಂಬುವ ಶ್ರುತಿಯಿಂದಲೂ, ‚‚ಪಾದೋಽಸ್ಯವಿಶ್ವಾಭೂತಾನಿ'' ಎಂಬುವ ಶ್ರುತಿಯಿಂದಲೂ, ಜೀವನು ಪರಶಿವಬ್ರಹ್ಮದ ಅಂಶವೆಂದು ತಿಳಿದುಬರುತ್ತಿರಲಿಕ್ಕೆ ಜೀವನು ಚಿದಾಭಾಸನೆಂದು ಹೇಳುವದು ಅಯುಕ್ತವು. ಮತ್ತು ಬ್ರಹ್ಮಸೂತ್ರಗಳ ಅರ್ಥವನ್ನು ಕಾರಿಕಾರೂಪದಿಂದ ಬರದಿರುವ ನೀಲಕಂಠ ಶಿವಾಚಾರ್ಯರು ಕೂಡ ‚‚ಯಥಾವಹ್ನೇರ್ವಿಸ್ಫುಲಿಂಗ ಈಶಾಂಶೊ ಜೀವಈರಿತಃ ಎಂಬದಾಗಿ ವಹ್ನಿಯ ಕಿಡಿಯಂತೆ ಜೀವನು ಈಶನ ಅಂಶನಾಗಿರುವನೆಂದು ಹೇಳಿರುವರು. ಇದಲ್ಲದೆ ಅಗ್ನಿತ್ವ ಸಾಮಾನ್ಯ ಧರ್ಮದಿಂದ ಅಭೇದವೂ, ಜ್ವಾಲಾವಿಸ್ಫುಲಿಂಗತ್ವಗಳಿಂದ ಭೇದವೂ ಅಗ್ನಿಕಣಗಳಿಗೆ ಕಂಡುಬರುವಂತೆ, ಚೈತನ್ಯರೂಪದಿಂದ ಅಭೇದವೂ, ಕಿಂಚಿಜ್ಞತ್ವಾದಿಗಳಿಂದ ಭೇದವೂ ಎಂದು ಶಿವಜೀವರುಗಳಿಗೆ ಭೇದಾಭೇದಗಳನ್ನು ಹೇಳಿರುವರು. ಬ್ರಹ್ಮಾದ್ವೈತಿಯೇ! ‚‚ಅಧಿಕಂತುಭೇದನಿರ್ದೇಶಾತ್'' ಎಂಬುವ ಸೂತ್ರದಿಂದ ಶಿವಜೀವರುಗಳಿಗೆ ಸ್ವಾಭಾವಿಕ ಭೇದವೂ, ‚‚ತದನನ್ಯತ್ವಮಾರಂಭಣ ಶಬ್ದಾದಿಭ್ಯಃ'' ಎಂಬುವ ಸೂತ್ರದಿಂದ ಅಭೇದವೂ ಹೇಳಲ್ಪಡುವದರಿಂದ ಭೇದಾಭೇದ ಮತವೆ ಸೂತ್ರಕಾ

ರಿಗೆ ಸಮ್ಮತವಾದ ಮತವೆಂದು ಬಾಲಕರಿಗೂ ಕೂಡ ತಿಳಿದುಬರುತ್ತಿರಲಿಕ್ಕೆ ನಿನಗೇಕೆ ತಿಳಿಯಬಾರದು ? (ಶಿವಾದ್ವೈತಿಯೇ) ಶಿವಜೀವರುಗಳ ಭೇದವು ಸ್ವಾಭಾವಿಕವೆಂದರೆ ಅದರ ನಿವೃತ್ತಿಯಾಗಲಾರದು. ಮತ್ತು ಜೀವಭಾವವು ಈಶ್ವರಭಾವವು ನನ್ನ ಮತದಲ್ಲಿ ಔಪಾಧಿಕಗಳಾಗಿರುವವು. (ಮಿಥ್ಯಾಭೂತ ಮಾಯಾ ಕಲ್ಪಿತಗಳಾದ್ದರಿಂದ ಮಿಥ್ಯಾಭೂತಗಳು) ನನ್ನಂತೆ ನಿಮ್ಮ ಜಗದ್ಗುರು ರೇಣುಕ ಭಗವತ್ಪಾದರು ಕೂಡಾ ''ಜೀವತ್ವಮೀಶ್ವರತ್ವಂಚ ಬ್ರಹ್ಮಣ್ಯೇಕತ್ರ ಕಲ್ಪಿತಂ'' ಎಂದು ಹೇಳಿರುವರಂದಮೇಲೆ ನೀನು ಅವರ ಮತವನ್ನುಲ್ಲಂಘಿಸುವದು ''ಆಚಾರ್ಯ ದೇವೋಭವ ಪಿತೃದೇವೋಭವ'' ಇತ್ಯಾದಿ ಶ್ರುತಿಗಳಿಗೆ ವಿರುದ್ಧವಾಗುವದಿಲ್ಲವೇ. ಪ್ರತಿಬಿಂಬವಾದೀಯೆ (''ಸ್ವಶಕ್ತಿಕ್ಷೋಭಮಾತ್ರೇಣಸ್ಥಲಂತದ್ದ್ವಿವಿಧಂಭವೇತ್. ಏಕಂ ಲಿಂಗಸ್ಥಲಂಪ್ರೋಕ್ತಂ ಅನ್ಯದಂಗಸ್ಥಲಂಸ್ಮೃತಂ'' ಎಂಬ ಆಗಮವಾಕ್ಯದಂತೆ ಒಂದೇ ಬ್ರಹ್ಮವಸ್ತುವಿನಲ್ಲಿ ತನ್ನ ಶಕ್ತಿಯ ಕ್ಷೋಭದಿಂದ ಈಶ್ವರತ್ವವೂ ಜೀವತ್ವವೂ ಕಲ್ಪಿತಗಳಾಗಿವೆ ಎಂಬುವುದರಲ್ಲಿ ಭಗವತ್ಪಾದರ ತಾತ್ಪರ್ಯವೆಂದು ತಿಳಿಯಬೇಕು. ಇಲ್ಲದಿದ್ದರೆ ಅವರಿಂದ ನಿರೂಪಿಸಲ್ಪಟ್ಟ ಶಿವಜಗನ್ಮಯಸ್ಥಲಕ್ಕೂ ಭಾಂಡಭಾಜನಸ್ಥಲಗಳಿಗೂ ವಿರೋಧವಾಗುವದಲ್ಲದೆ ''ಯತ್ರವಿಶ್ರಾಮ್ಯತೀಶತ್ವಂ ಸ್ವಾಭಾವಿಕಮನುತ್ತಮಂ ನಮಸ್ತಸ್ಮೈ ಮಹೇಶಾಯ ಮಹಾದೇವಾಯ ಶೂಲಿನೇ'' ಎಂಬುವ ಅವರ ಉಪಕ್ರಮವಾಕ್ಯಕ್ಕೂ ವಿರೋಧವಾಗುವದು. ನೋಡು ಈ ಶ್ಲೋಕದಿಂದ ಈಶತ್ವವು ಸ್ವಾಭಾವಿಕವೆಂದು ಅವರೇ ಕಂಠತಃ ಹೇಳಿರುವುದರಿಂದ ನಿನ್ನಂತೆ ಅವರು ಈಶತ್ವ ಜೀವತ್ವಗಳಿಗೆ ಮಿಥ್ಯಾ ಮಾಯಾ ಕಲ್ಪಿತಗಳೆಂದು ಹೇಳಲಾರರು. ಶಿವಾದ್ವೈತಿಯೇ ಜೀವಭಾವವೂ ಕೂಡ ಸ್ವಾಭಾವಿಕವೆಂದು ಹೇಳಿದರೆ ಅದು ಎಂದೂ ನಿವೃತ್ತವಾಗಲಾರದು. ಆದ್ದರಿಂದ ನಿನ್ನ ಮತಕ್ಕೆ ವಿಶಿಷ್ಟಾದ್ವೈತಮತವೆಂದು ಹೇಳುವಿಯೇನು ? ಈ ವಿಶಿಷ್ಟಾದ್ವೈತಮತವು ಶೈವಾಗ್ರಗಣ್ಯರಾದ ಶ್ರೀಕಂಠ ಶಿವಾಚಾರ್ಯರಿಂದ ರಚಿತವಾದ ಬ್ರಹ್ಮ ಮೀಮಾಂಸಾ ಭಾಷ್ಯದಲ್ಲಿ ನಿರೂಪಿಸಲ್ಪಟ್ಟಿರುವುದು. ಈ ಮತವು ನಿನಗೆ ಸಮ್ಮತವಾಗಿದ್ದಪಕ್ಷದಲ್ಲಿ ಮುಕ್ತಿದಶೆಯಲ್ಲಿಯೂ ಕೂಡ ಅವರಂತೆ ನೀನು ಭೇದವನ್ನು ಒಪ್ಪಿಕೊಳ್ಳಬೇಕಾಗುವದು. ಅಂದರೆ ಜೀವ ಬ್ರಹ್ಮರುಗಳಿಗೆ ಪಾರಮಾರ್ಥಿಕ ಭೇದವೆಂದು ಹೇಳುವುದು ಯುಕ್ತವಾಗುವುದು. ಯಾಕಂದರೆ ಯಾವುದು ಯಾವ ಪದಾರ್ಥದ ಸ್ವಭಾವವಾಗಿದೆಯೋ ಅದು ಎಂದೂ ನಷ್ಟವಾಗಲಾರದು. ಭೇದವು ಜೀವನಿಗೆ ಸ್ವಾಭಾವಿಕವೆಂದು ಹೇಳಿದರೆ ಅದು ಮುಕ್ತಿದಶೆಯಲ್ಲಿಯೂ

ಕೂಡ ಇರಲೇಬೇಕು. ಮುಕ್ತಿದಶೆಯಲ್ಲಿಯೂ ಭೇದವನ್ನೊಪ್ಪಿದರೆ ನೀನೂಕೂಡ ಶ್ರೀಕಂಠ ಶಿವಾರಾಧ್ಯರ ವಿಶಿಷ್ಟಾದ್ವೈತಮತವನ್ನೇ ಒಪ್ಪಿಕೊಂಡಂತಾಯಿತು. ಅಂದಮೇಲೆ ವೀರಶೈವನೆಂದೂ, ಭೇದಾಭೇದವಾದಿಯೆಂದೂ, ವಿಶೇಷಾದ್ವೈತ ವಾದಿಯೆಂದೂ, ಶಿವಾದ್ವೈತವಾದಿಯೆಂದೂ, ಶಕ್ತಿವಿಶಿಷ್ಟಾದ್ವೈತವಾದಿಯೆಂದೂ ಹೇಳಿಕೊಳ್ಳುವುದು ಯುಕ್ತವಾಗಲಾರದು. ಅಂದರೆ ಬ್ರಹ್ಮಾದ್ವೈತಿಯೇ ಜೀವನಿಗೆ ನಾನು ಸ್ವಾಭಾವಿಕ ಭೇದವನ್ನು ಹೇಳಿದರೆ ನನ್ನನ್ನು ವಿಶಿಷ್ಟಾದ್ವೈತ ವಾದಿಗಳಾದ ಶ್ರೀಕಂಠ ಶಿವಾರಾಧ್ಯರ ಮತದವನೆಂದು ತಿಳಿಯುವುದು ತಪ್ಪು. ಹಾಗಾದರೆ ಶಿವಾದ್ವೈತಿಯೇ ಆ ಮತಕ್ಕೂ ನಿನ್ನ ಮತಕ್ಕೂ ವೈಲಕ್ಷಣ್ಯವೇನು? ಶ್ರೀಕಂಠ ಶಿವಾರಾಧ್ಯರು ಶಿವಜೀವರುಗಳ ಭೇದವು ಸ್ವಾಭಾವಿಕವೆಂದು ಹೇಳಿ ಪದಾರ್ಥದ ಸ್ವಭಾವವು ನಿಂಬೇಹಣ್ಣಿಗೆ ಕಷಾಯಕ್ಕಾಗಿ ಎಷ್ಟು ಅಗ್ನಿಸಂಸ್ಕಾರವನ್ನು ಮಾಡಿದರೂ ಅದರ ಆಮ್ಲಸ್ವಭಾವವು ನಿವೃತ್ತವಾಗದಿರುವಂತೆ ನಿವೃತ್ತವಾಗಲಾರದಾದ್ದರಿಂದ ಮೋಕ್ಷದಶೆಯಲ್ಲಿಯೂಕೂಡ ಭೇದವನ್ನು ಒಪ್ಪಿರುವರು. ನೀನು ಭೇದವನ್ನು ಒಪ್ಪುವದಿಲ್ಲವೇನು? ಇಲ್ಲ. ಕಿಂತು ಅದರ ಲಯವನ್ನು ಒಪ್ಪುವೆನು. ಭೇದಾ ಭೇದಗಳಿಗೆ ವಸ್ತುತಃ ವಿರೋಧವೆಂಬುವ ಕಾರಣದಿಂದ ಮುಕ್ತಿದೆಶೆಯಲ್ಲಿ ಭೇದಕ್ಕೆ ಲಯವನ್ನು ಒಪ್ಪದೆ. ಶಿವಸಾಮ್ಯವೇ ಮುಕ್ತಿಯೆಂದೂ ಸಾಮ್ಯವೆಂದರೆ ಗೌರೀಪತಿತ್ವ ಸರ್ವಕರ್ತೃತ್ವ ಸರ್ವಾಂತರ್ಯಾಮಿತ್ವ ಮೊದಲಾದ ಕೆಲವು ಶಿವನ ಧರ್ಮಗಳನ್ನು ಬಿಟ್ಟು ಸರ್ವಜ್ಞತ್ವಾದಿ ಶಿವನ ಷಡಂಗಗಳ ಪ್ರಾಪ್ತಿಯು ಮುಕ್ತನಾದ ಜೀವನಿಗೆ ಆಗುವದೆಂತಲೂ ಶ್ರೀಕಂಠ ಶಿವಾರಾಧ್ಯರ ತಾತ್ಪರ್ಯವು. ಈ ಮತವನ್ನು ಸ್ವಲ್ಪ ವಿಚಾರಿಸುವೆನು. ಬ್ರಹ್ಮಾದ್ವೈತಿಯೇ ! ಭೇದಾ ಭೇದಗಳಿಗೆ ವಸ್ತುತಃ ವಿರೋಧವೆಂದು ಅವರು ತಿಳಿದುಕೊಂಡಿರುವದೇ ತಪ್ಪು. ಮತ್ತು ಭೇದವು ಸ್ವಾಭಾವಿಕವೆಂದು ಹೇಳಿದರೆ ಆಮ್ಲರಸದಂತೆ ಅದರ ನಿವೃತ್ತಿಯಾಗಲಾರದೆಂಬುವದೇ ಅವರ ತಪ್ಪುತಿಳುವಳಿಕೆಯು. ಯಾಕೆಂದರೆ! ಶ್ರುತಿ ಸ್ಮೃತಿ ಪುರಾಣಾಗಮ ಸೂತ್ರಾದಿಗಳಲ್ಲಿ ಶಿವಜೀವರುಗಳಿಗೆ ಭೇದಾಭೇದಗಳು ತೋರಿಸಲ್ಪಡುವಕಾರಣದಿಂದಲೂ ಜಾಗ್ರತ್ ಸ್ವಪ್ನಾವಸ್ಥೆಗಳಲ್ಲಿ ಭೇದವೂ ಸುಷುಪ್ತ್ಯವಸ್ಥೆಗಳಲ್ಲಿ ಅಭೇದವೂ ಸರ್ವಾನುಭವ ಸಿದ್ಧವಾಗಿರುವದರಿಂದಲೂ ಶ್ಲೋ|| ಸುಪ್ತಿರೇವಹಿದೃಷ್ಟಾಂತಃ ಸೃಷ್ಟಿ ಪ್ರಲಯಯೋರಪಿ ಸೃಷ್ಟಿಕಾಲೇಭವೆದ್ಭೇದ ಮಭೇದಂ ಪ್ರಲಯೆ ಸ್ಮೃತಂ || ಎಂದು ಶಿವಾಗಮವು ಭೇದಾ ಭೇದಗಳನ್ನು ಹೇಳುವದರಿಂದಲೂ ವಸ್ತುವಿರೋಧವಿಲ್ಲವು. ಶ್ಲೋ|| ಮೇರುಮಂದರ

ಮಾಸಾದ್ಯಕಾಕೋಪಿ ಕನಕಾಯತೆ | ತಥಾ ಭಕ್ತ್ಯಾ ಶಿವಂ ಪ್ರಾಪ್ಯ ಜೀವೋ ಭವತಿ ಶಂಕರಃ || ಶುಕ್ತಿ ಲಬ್ಧಂ ಜಲಂ ಲೋಕೆ ಮೌಕ್ತಿಕಂ ಭವತಿ ಧ್ರುವಂ | ಭಕ್ತಿ ಸಂಯುಕ್ತ ಜೀವೋಹಿ ಶಿವೋಭವತಿ ನಾನ್ಯಥಾ || ರಸವೇಧಾದ್ಯಥಾ ತಾಮ್ರಂ ಕಾಂಚನಂ ಭವತಿ ಧ್ರುವಂ | ಗುರೋಃ ಕಟಾಕ್ಷವೇಧೇನ ಜೀವೋ ಭವತಿ ಶಂಕರಃ || ಇವೇ ಮೊದಲಾದ ದೃಷ್ಟಾಂತ ಶಾಸ್ತ್ರಾನುಭವಗಳು ಕಂಡು ಬರುವದರಿಂದ ಸ್ವಾಭಾವಿಕ ಭೇದದ ನಿವೃತ್ತಿಯಾಗುವ ವಿಷಯದಲ್ಲಿ ಯಾವ ಸಂಶಯವೂಇಲ್ಲ. ಆದ್ದರಿಂದಲೇ ,,ಯಥಾನದ್ಯಸ್ಯಂದಮಾನಾಸ್ಸಮುದ್ರೆ ಅಸ್ತಂಗಚ್ಛಂತಿ ನಾಮರೂಪೇ ವಿಹಾಯ ತಥಾವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷ ಮುಪೈತಿದಿವ್ಯಂ,, ,,ಬ್ರಹ್ಮವೇದ ಬ್ರಹ್ಮೈವಭವತಿ,, ,,ತತ್ವಮಸಿ,, ,,ಅಹಂ ಬ್ರಹ್ಮಾಸ್ಮಿ,, ಇವೇ ಮೊದಲಾದ ಶ್ರುತಿಗಳಲ್ಲಿ ಶಿವಭಾವ ಪ್ರಾಪ್ತಿಯೇ ಮುಕ್ತಿಯೆಂದು ಹೇಳಿದ್ದಕ್ಕೆ ವಿರೋಧವಿಲ್ಲವು. ಮುಕ್ತಿ ದೆಶೆಯಲ್ಲಿ ಕಿಂಚಿದ್ಭೇದವನ್ನು ಹೇಳಿದರೆ ಈ ಶ್ರುತಿಗಳಿಗೆ ವಿರೋಧವಾಗುವದು. ಶಿವಾದ್ವೈತಿಯೆ? ಕಿಂಚಿಜ್ಞತ್ವ ಅಲ್ಪತ್ವಾದಿ ಜೀವಭಾವವು ನಿಂಬಕಷಾಯ ನ್ಯಾಯದಂತೆ ನಿವೃತ್ತಿಯನ್ನು ಹೊಂದಲಾರದು. ಆದ್ದರಿಂದ ಮುಕ್ತಿದೆಶೆಯಲ್ಲಿ ಭೇದವನ್ನು ಹೇಳಬೇಕು. ಅಂದರೆ, ಭ್ರಮರಕೀಟನ್ಯಾಯದಿಂದಲೂ, ಶುಕ್ತಿಸಲಿಲ ನ್ಯಾಯದಿಂದಲೂ, ಸ್ವಾಭಾವಿಕಧರ್ಮದ ನಿವೃತ್ತಿಯು, ಕಂಡುಬರುವದರಿಂದ ಮುಕ್ತಿದೆಶೆಯಲ್ಲಿ ಭೇದವನ್ನು ಹೇಳಲಾಗುವದಿಲ್ಲ. ಮತ್ತು ,,ಯದಾಹ್ಯೇವೈಷ ಏತಸ್ಮಿನ್ನದೃಶ್ಯೇನಾತ್ಮೇ ನಿರುಕ್ತೇ ನಿಲಯನೇ ಭಯಂಪ್ರತಿಷ್ಠಾಂ ವಿಂದತೆ | ಅಥಸೋ ಭಯಂಗತೊ ಭವತಿ | ಯದಾಹ್ಯೇವೈಷ ಏತಸ್ಮಿನ್ನುದರಮಂತರಂಕುರುತೆ ಅಥತಸ್ಯ ಭಯಂಭವತಿ,, ಅಂದರೆ ಯಾವನು ಮುಕ್ತಿದೆಶೆಯಲ್ಲಿಯೂ ಕೂಡ ಈ ಆನಂದ ಸಮುದ್ರನಾದ ಪರಶಿವನಲ್ಲಿ ಕಿಂಚಿದ್ಭೇದವನ್ನು ತಿಳಿಯುವನೋ ಅವನಿಗೆ ಜನ್ಮ ಜರಾಮರಣಭಯವು ತಪ್ಪಲಾರದು. ಮತ್ತು ಯಾವನು ಉಪಾಸನಾಕಾಲದಲ್ಲಿ ಪರಶಿವನಿಗೂ, ತನಗೂ ಅಭೇದವನ್ನೇ ತಿಳಿದು, ಅಂದರೆ ನಾನು ಸರ್ವಕರ್ತೃವು ನಾನೇ ಸರ್ವಜ್ಞತ್ವಾದಿ ಷಡಂಗಗಳುಳ್ಳ ಶಿವನು ಎಂಬದಾಗಿ ಅಭೇದವನ್ನೇ ತಿಳಿದು ಉಪಾಸನೆಯನ್ನು ಮಾಡುವನೊ ಅವನು ಸಂಸಾರಭಯದಿಂದ ಮುಕ್ತನಾಗುವನೆಂದು ಶ್ರುತಿಗಳ ತಾತ್ಪರ್ಯವು. ಆದ್ದರಿಂದ ಮುಕ್ತಿದೆಶೆಯಲ್ಲಿ ಕಿಂಚಿದ್ಭೇದವನ್ನು ಮಾನಿಸುವ ವಿಶಿಷ್ಟಾದ್ವೈತಿಗೆ ಸಾಂಸಾರಿಕ ಭಯವು ತಪ್ಪಲಾರದೆಂಬುವದು ಸ್ಪಷ್ಟವು. ಎಲೈ ಶಿವಾದ್ವೈತಿಯೇ? ಜೀವಭಾವವು ಜಲಶೈತ್ಯದಂತೆ ಸ್ವಾಭಾ

ಖಿಕವಿದ್ದು ಜಲಕ್ಕೆ ಅಗ್ನಿಸಂಸ್ಕಾರ ಸಂಬಂಧವಾಗಲು ಆ ಶೈತ್ಯವೆಲ್ಲವೂ ಅಡಗಿ ಮುಂದೆ ಕೆಲವು ಕಾಲದಮೇಲೆ ಆ ಜಲದಲ್ಲಿ ಶೀತತನವು ಕಂಡುಬರುವಂತೆ ಲಿಂಗಾಗ್ನಿ ಸಂಬಂಧದಿಂದ ಜೀವಭಾವವಡಗಿ ಮುಕ್ತನಾದರೂ ಪುನಃ ತನ್ನ ಸ್ವಭಾವವಾದ ಜೀವಭಾವವು ಕಾಣಿಸಿಕೊಂಡು ಬದ್ಧನಾಗಬಹುದಲ್ಲವೆ? ಅಂಥವೆ ಬ್ರಹ್ಮಾದ್ವೈತಿಯೇ? ಲೋಕದಲ್ಲಿ ಕ್ಷೀರಕ್ಕೆ ತಕ್ರಾದಿಗಳ ಸಂಯೋಗವಾಗಲು ಕ್ಷೀರಸ್ವಭಾವವಡಗಿ ದಧ್ಯಾಕಾರ ಪರಿಣಾಮವು ಕಂಡುಬರುವದು. ಆ ಮೇಲೆ ಆ ದಧಿಗೆ ಕ್ಷೀರಸ್ವಭಾವವು ಕಂಡುಬರುವದೇನು? ಆ ದಧ್ಯಾಕಾರವನ್ನು ಹೊಂದಿಸಲಿಕ್ಕೆ ಮನುಷ್ಯನಲ್ಲಿ ಕ್ಷೀರಕ್ಕೆ ತಕ್ರಾದಿ ಸಂಯೋಗವನ್ನು ಮಾಡುವ ಶಕ್ತಿಯನ್ನು ಸ್ವೀಕರಿಸಬೇಕು. ಮತ್ತು ಭೃಂಗದಲ್ಲಿ ತನಗೆ ಬೇರೆಯಾದ ಜಾತಿಯಲ್ಲಿ ಹುಟ್ಟಿದ ಕೀಡೆಯೆಂಬ ಹುಳದ ಸ್ವಭಾವವನ್ನು ನಿವೃತ್ತಿಗೊಳಿಸಿ ತನ್ನ ಸಮಾನ ಸ್ವರೂಪವನ್ನು ಹೊಂದಿಸುವ ಶಕ್ತಿಯು ಕಂಡುಬರುವದರಿಂದ ಅಘಟನಾಘಟನ ಸಾಮರ್ಥ್ಯವುಳ್ಳವನೂ, ಭಕ್ತಾಭೀಷ್ಟ ಫಲಪ್ರದಾಯಕನೂ, ಸರ್ವವಿದ್ಯೆಗಳಿಗೆ ಆಶ್ರಯನೂ, ಸತ್ಯಕಾಮನೂ, ಸತ್ಯಸಂಕಲ್ಪನೂ ಆದ ಪರಶಿವನಲ್ಲಿ ತನ್ನ ಭಕ್ತರ ಸ್ವಾಭಾವಿಕವಾದ ಜೀವಭಾವವನ್ನು ನಿವೃತ್ತಿಗೊಳಿಸಿ ಸ್ವರೂಪವಾದ ಶಿವತ್ವರೂಪ ಮುಕ್ತಿಯನ್ನು ಕೊಡುವ ಸಾಮರ್ಥ್ಯವನ್ನು ಒಪ್ಪಲೇಬೇಕು. ಕ್ಷುದ್ರವಾದ ಭೃಂಗದಲ್ಲಿಯೇ ಒಂದು ಜಾತಿಯ ಸ್ವಭಾವವನ್ನು ಕಳೆದು ತನ್ನ ಸಮಾನಸ್ವರೂಪವನ್ನು ಕೊಡುವ ಶಕ್ತಿಯಿದೆ ಎಂದಮೇಲೆ ಸರ್ವಶಕ್ತನಲ್ಲಿ ಅಂತಹ ಸಾಮರ್ಥ್ಯ ಇರಲೇಬೇಕಲ್ಲವೆ? ಆದ್ದರಿಂದ ಸ್ವಾಭಾವಿಕ ಭೇದವು ನಿವೃತ್ತವಾಗಲಾರದೆಂಬುವ ವಿಶಿಷ್ಟಾದ್ವೈತಿಗಳಾದವೂ ಮತ್ತು ನಿನ್ನ ವಾದವೂ ಕೂಡ ಅಯುಕ್ತವೇ ಸರಿ. ಇದಲ್ಲದೆ ಪರಿಚ್ಛಿನ್ನ ಶಕ್ತಿಯುಳ್ಳ ದೇವಋಷಿಯೋಗಸಿದ್ಧರುಗಳಲ್ಲಿ ತಮ್ಮ ಭಕ್ತರ ಮೂಢತನ ದರಿದ್ರತನ ಮೊದಲಾದವುಗಳನ್ನು ಕಳೆದು ವಿದ್ಯಾ ಧನಧಾನ್ಯ ಸಂತಾನಾದಿ ರೂಪವಾದ ಅಪೂರ್ವ ಫಲವನ್ನು ಕೊಡುವ ಸಾಮರ್ಥ್ಯವಿರಲು ಸರ್ವಶಕ್ತನಾದ ಪರಶಿವನಲ್ಲಿ ತನ್ನ ಭಕ್ತರ ಸ್ವಾಭಾವಿಕ ಜೀವಭಾವವನ್ನು ಕಳೆದು ತನ್ನ ಸ್ವರೂಪವನ್ನು ಹೊಂದಿಸುವ ಸಾಮರ್ಥ್ಯವಿರುವದೊಂದತಿಶಯವಲ್ಲ.

ಬ್ರಹ್ಮಾದ್ವೈತಿಯೆ ಜೀವಭಾವವು ಸ್ವಾಭಾವಿಕವಾದರೂ ಅದರ ವಿಲಯವು ಸಂಭವಿಸುತ್ತದೆಂಬುವದು ತಿಳಿಯಲ್ಪಟ್ಟಿತಷ್ಟೇ! ಇನ್ನು ಆ ಶ್ರೀಕಂಠಾರಾಧ್ಯರು ಹೇಳುವ ಮುಕ್ತಿಯ ಸ್ವರೂಪವೇನಂದರೆ? ಪಾಶಗಳ ಸಮೂಹವು ನಷ್ಟವಾಗಿ

ನಿರತಿಶಯಾನಂದದ ಸಾಕ್ಷಾತ್ಕಾರಾನಂತರದಲ್ಲಿ ಆ ಪಶುಪತಿಯ ಗುಣಗಳಿಗೆ ಸದೃಶ ಗುಣಗಳ ಸಾರವುಳ್ಳ ಕೈವಲ್ಯ ಲಕ್ಷ್ಮಿಯೇ ಮೋಕ್ಷವು. ಅಂದರೆ ಸಿಹ್ಮೊ ಮಾಣವಕಃ (ಸಿಹ್ಮನಂತೆ ಮಾಣವಕನೆಂಬ ಪುರುಷನು) ಎಂಬಲ್ಲಿ ಸಿಹ್ಮದ ಕೆಲವು ಪ್ರತಾಪ ಕ್ರೋಧ ಶೌರ್ಯ ಧೈರ್ಯಾದಿ ಗುಣಗಳ ಸಾಧರ್ಮ್ಯವು ಪುರುಷನಲ್ಲಿ ಇದ್ದರೂ ಈ ಪುರುಷನು ಸಿಂಹನಂತಿರುವನು ಎಂಬದಾಗಿ ಸಿಂಹ ಸಾಮ್ಯವನ್ನು ಪುರುಷನಲ್ಲಿ ಹೇಳುವಂತೆ ಪಶುಪತಿಯ ಕೆಲವು ಗುಣಗಳ ಸಾಮ್ಯವೇ ಮುಕ್ತಿಯೆಂದು ಅವರ ತಾತ್ಪರ್ಯವು. ಈ ವಿಷಯದಲ್ಲಿ ‹‹ನಿರಂಜನಃ ಪರಮಂಸಾಮ್ಯ ಮುಪೈತಿ›› ಎಂಬುವ ಶ್ರುತಿಯು ಪ್ರಮಾಣವೆಂತಲೂ ಹೇಳುವರು. ಇದಲ್ಲದೆ ಜೀವರುಗಳು ಪಶುಪತಿಯ ವಿದ್ಯಾಶಕ್ತಿಯ ಅಂಶಭೂತರಾದ್ದರಿಂದ ಆ ಶಿವ ಜೀವರಿಗಿರುವ ಸ್ವಾಭಾವಿಕ ಭೇದವು ನಷ್ಟವಾಗದೆ ಆ ಶಿವನ ಅಂಗವಾದ ಚಿದಂಬರಶಕ್ತಿಯಲ್ಲಿದ್ದುಕೊಂಡು ಶಿವನೊಡನೆ ಸರ್ವ ಕಾಮುಗಳನ್ನು ಭೋಗಿಸುತ್ತ ಶಿವನ ಸರ್ವಕರ್ತೃತ್ವಾದಿಗಳನ್ನು ಬಿಟ್ಟು ಸರ್ವಜ್ಞತ್ವಾದಿಗಳನ್ನು ಪಡೆದುಕೊಂಡವರಾದ್ದರಿಂದ ಶಿವಸಾಯುಜ್ಯವೇ ಮುಕ್ತಿಯಲ್ಲದೆ ಸರ್ವಥಾ ಲಿಂಗ ಶರೀರವು ನಷ್ಟವಾಗಿ ಶಿವತ್ವಪ್ರಾಪ್ತಿಯೆಂಬ ಶಿವರೂಪವಾದ ಲಿಂಗಾಂಗ ಸಾಮರಸ್ಯವೆಂಬ ಮುಕ್ತಿಯು ಸಂಭವಿಸುವದಿಲ್ಲವೆಂತಲೂ ಹೇಳುವರು. ಇವರು ಅಂಗಾಂಗಿ ಭಾವದಿಂದ ಹೇಳುವ ಈ ಸಾಯುಜ್ಯ ಮುಕ್ತಿಯು ನಾವು ಪೂರ್ವದಲ್ಲಿ ಹೇಳಿದ ‹‹ಯಥಾನದ್ಯಾದಿ›› ಶ್ರುತಿಗಳಿಂದ ಸ್ವರೂಪೈಕ್ಯವೆಂಬ ಲಿಂಗಾಂಗ ಸಾಮರಸ್ಯವೇ ಮುಕ್ತಿಯೆಂದು ಬೋಧಿಸುವ ಕಾರಣ ‹‹ಯಥಾನದ್ಯಾದಿ›› ಶ್ರುತಿಗೆ ವಿರುದ್ಧವು. ಮತ್ತು ಅವರು ಹೇಳುವ ಅಂಗಾಂಗಿ ಭಾವವು ಕೂಡ ಯುಕ್ತವಾಗುವದಿಲ್ಲ. ಜೀವನು ಬ್ರಹ್ಮನ ಅಂಗವೆಂದರೆ ಅವನೇ ಶರೀರವೆಂದು ಹೇಳಬೇಕಾಗುವದು. ಶೀರ್ಯತೆ ಇತಿ (ನಷ್ಟವಾಗುತ್ತದೆ) ಎಂಬುವ ವ್ಯುತ್ಪತ್ತಿಯಿಂದ ಸಿದ್ಧವಾದ ಶರೀರತ್ವವು ಜೀವನಿಗೆ ಸಂಭವಿಸುವದಿಲ್ಲ. ಯಾಕಂದರೆ ಜೀವನು ನಿತ್ಯನಷ್ಟೆ! ಇನ್ನು ಜೀವನೆಂಬ ಶರೀರದಿಂದ ಕೂಡಿದ ಪರಮಾತ್ಮನಿಗೆ ಹಿತದ ಪ್ರಾಪ್ತಿಗೆ ಮತ್ತು ಅಹಿತದ ಪರಿಹಾರಕ್ಕೆ ಕಾರಣವಾದ ಚೇಷ್ಟೆ ಇಲ್ಲದಿರುವದರಿಂದ ಚೇಷ್ಟಾಶ್ರಯತ್ವವೆಂಬ ಶರೀರದ ಲಕ್ಷಣವು ಜೀವನಲ್ಲಿಲ್ಲದಿರುವದರಿಂದ ಜೀವನು ಪರಮಾತ್ಮನ ಶರೀರರೂಪನಾಗಲಾರನು. ಸರ್ವಜೀವ ಪ್ರೇರಕನಾದ ಈಶ್ವರನಿಂದ ನಿಯಮ್ಯನಾದ ಜೀವನು ಈಶ್ವರನಿಗೆ ಶರೀರನೆಂದು ಹೇಳಿದರೆ ನಮ್ಮಗಳಿಂದ ಪ್ರೇರಿಸಲ್ಪಡುವ ರಥ ತುರುಗಾದಿಗಳೂ ನಮ್ಮಗಳ ಶರೀರಗಳಾಗಬೇಕು. ಅವಾಪ್ತ ಸಕಲ ಕಾಮು

ನಾದ ಈಶ್ವರನಿಗೆ ಜೀವನು ಭೋಗಾಯತನವಾದ್ದರಿಂದ ಜೀವನು ಈಶ್ವರನ ಶರೀರನಾಗುವನೆಂದು ಹೇಳಿದರೆ ನಿತ್ಯತೃಪ್ತನಾದ ಈಶ್ವರನಿಗೆ ಸುಖದುಃಖಾನುಭವರೂಪವಾದ ಭೋಗವನ್ನು ಹೇಳಬೇಕು. ನಮ್ಮಗಳ ಶರೀರವು ಕರ್ಮಜನ್ಯವು. ಹಾಗೆ ಜೀವನು ಯಾವ ಕರ್ಮಜನ್ಯನಾಗುವನು? ಈಶ್ವರನಿಗೆ ಕರ್ಮವನ್ನು ಮಾನಿಸಬಹುದೆ? ನಮ್ಮ ಶರೀರದಲ್ಲಿ ನಮಗೆ ಅಹಮಿದಂ ಮಮೇದಂ ಎಂಬುವ ಅಭಿಮಾನ ಹುಟ್ಟುವಂತೆ ಜೀವನಲ್ಲಿ ಈಶ್ವರನಿಗೆ ಇಂಥಾ ಅಭಿಮಾನವು ಹುಟ್ಟದಿರುವದರಿಂದಲೂ, ಅವನಿಗೆ ನಮ್ಮಂತೆ ಭ್ರಾಂತ್ಯಾದಿಗಳಿಲ್ಲದಿರುವದರಿಂದಲೂ, ನಮ್ಮಗಳ ಶರೀರದಂತೆ ಜೀವನು ಅಂತ್ಯಾವಯವಿಯಾಗದಿರುವದರಿಂದಲೂ, ಜೀವನು ಪರಮಾತ್ಮನ ಶರೀರರೂಪನಾಗಲಾರನು. ‹‹ಯಸ್ಯಾತ್ಮಾ ಶರೀರಂ›› ಎಂಬುವ ಶ್ರುತಿಯಿಂದ ಜೀವನಲ್ಲಿ ಶರೀರಶಬ್ದದ ಪ್ರಯೋಗಮಾತ್ರದಿಂದಲೆ ಜೀವನಿಗೆ ಶರೀರತ್ವವು ಸಿದ್ಧಿಸಲ್ಪಡಲಾರದು. ಯಾಕಂದರೆ ‹‹ ವಾಚಂಧೇನುಮುಪಾಸೀತ ›› ‹‹ಅನ್ನಂ ಬ್ರಹ್ಮೇತ್ಯುಪಾಸೀತ›› ಎಂಬುವ ಶ್ರುತಿಯಿಂದ ವಾಕ್ಯಕ್ಕೆ ಧೇನುಯೆಂಬದಾಗಿಯೂ, ಅನ್ನಕ್ಕೆ ಬ್ರಹ್ಮವೆಂಬದಾಗಿಯೂ ಪ್ರಯೋಗವು ಕಾಡುಬರುವದರಿಂದ ವಾಕ್ಯವೇ ಧೇನುವೆಂದು, ಅನ್ನವೇ ಬ್ರಹ್ಮವೆಂದು ಸಿದ್ಧವಾಗಲಾರದಷ್ಟೆ? ಈದಲ್ಲದೆ ಪರಮಾತ್ಮನಿಗೆ ಶರೀರವಿಲ್ಲೆಂದು ಹೇಳುವ ‹‹ಅಶರೀರಂ ಶರೀರೆಷ್ವನವಸ್ಥಿತೇಷ್ವವಸ್ಥಿತಂ›› ‹‹ಅಥಾಯಮ ಶರೀರೋಮೃತಃ›› ‹‹ಅಕಾಯಮವ್ರಣಂ›› ಇತ್ಯಾದಿ ಶ್ರುತಿಗಳಿಗೆ ವಿರುದ್ಧವಾಗುವದು. ಈಶ್ವರನು ಸರ್ವ ಪದಾರ್ಥಗಳ ಅಂತರ್ಯಾಮಿಯಾಗಿರುವದರಿಂದ ಸರ್ವವೂ ಈಶ್ವರನ ಶರೀರವೆಂಬದಾಗಿ ಹೇಳಿರುವದು ಉಪಾಸನೆಗೋಸ್ಕರವೆಂದು ತಿಳಿಯಬೇಕು. ಅಥವಾ ಅಂತರ್ಯಾಮಿಯಾದ ಶಿವನಿಗೂ ಜೀವನಿಗೂ ಭೇದಾಭೇದಗಳನ್ನು ಸೂಚಿಸುವದಕ್ಕಾಗಿಯೆಂದು ತಿಳಿಯಬೇಕು. ಇದಲ್ಲದೆ ‹‹ತತ್ಪ್ರಾಣೆಷ್ವಂತರ್ಮನಸೊಲಿಂಗಮಾಹುರ್ಯಸ್ಮಿನ್ ಕ್ರೊಧೊ ಯಾಚ ತೃಷ್ಣಾಕ್ಷಮಾಚ ತೃಷ್ಣಾಂ ಭಿತ್ವಾ ಹೇತುಜಾಲಸ್ಯ ಮೂಲಂ ಬುಧ್ಯಾಸಂಚಿಂತ್ಯಸ್ಥಾಪಯಿತ್ವಾಥ ರುದ್ರೆ ರುದ್ರುವತ್ವಮಾಹುಃ›› ಇತ್ಯಾದಿ ಶ್ರುತಿಗಳಿಂದ ಲಿಂಗಶರೀರ ವಿಲಯವಾದನಂತರದಲ್ಲಿ ಶಿವತ್ವ ಪ್ರಾಪ್ತಿಯೆಂಬ ಮುಕ್ತಿಯು ಹೇಳಲ್ಪಡುವಕಾರಣದಿಂದಲೂ ನಿಷ್ಕಲ ಪರಶಿವೋಪಾಸಕರಾದ ಭಕ್ತರ ಲಿಂಗ ಶರೀರದ ಭಂಗಾನಂತರದಲ್ಲಿಯೇ ಮುಕ್ತಿಯೆಂದು ತಿಳಿಯಬೇಕು. ಆದ್ದರಿಂದ ವಿಶಿಷ್ಟಾದ್ವೈತಿಗಳು ಹೇಳುವ ಸಾಮ್ಯಮುಕ್ತಿಯೂ ಮತ್ತು ನೀನು ಹೇಳುವ ತನ್ನ ಕಂಠಾಭರಣದಂತೆ ನಿತ್ಯ ಸಿದ್ಧಬ್ರಹ್ಮ ಪ್ರಾಪ್ತಿಯೆಂಬ ಮುಕ್ತಿ

ಯೂ ಶ್ರುತಿವಿರುದ್ಧವು. ಯಾಕಂದರೆ "ನಾಮರೂಪೆ ವಿಹಾಯ ಪರಾತ್ಪರಂ ಪುರುಷಮುಪೈತಿ" ಎಂಬುವ ಶ್ರುತಿಯಿಂದ ಭ್ರಮರಕೀಟ ನ್ಯಾಯದಂತೆ ಸ್ವಾಭಾವಿಕ ಜೀವಭಾವದ ನಿವೃತ್ತಿಯಾಗಿ ಶಿವತ್ವಪ್ರಾಪ್ತಿಯೇ ಮುಕ್ತಿಯೆಂದು ಉಪದೇಶಿಸಲ್ಪಡುವದಷ್ಟೆ? "ನಿರಂಜನಂ ಪರಮಂ ಸಾಮ್ಯಮುಪೈತಿ" ಎಂಬುವ ಶ್ರುತಿಯಲ್ಲಿ ಪರಮ ಶಬ್ದ ಸ್ವಾರಸ್ಯದಿಂದ (ಸಾಮ್ಯವೆಂದರೆ ಅಭೇದವೆಂದು) ಅರ್ಥಮಾಡಬೇಕು. ತದ್ಭಿನ್ನತ್ವೆ ಸತಿ ತದ್ಗತ ಭೂಯೊ ಧರ್ಮವತ್ವಂ | ಎಂಬುವ ಅರ್ಥವು ಸಾಮ್ಯಪದಾರ್ಥವಲ್ಲ. ಗೌರೀಪತಿತ್ವ ಸರ್ವ ಕರ್ತೃತ್ವ ಮೊದಲಾದ ಧರ್ಮಗಳಿಂದ ಜೀವನಲ್ಲಿ ಈಶ್ವರ ಭೇದವೂ ಈಶ್ವರನ ಸರ್ವಜ್ಞತ್ವಾದಿ ಭೂಯೋ ಧರ್ಮವೂ ಕಂಡುಬರುವದರಿಂದ ಪ್ರಸಿದ್ಧ ಸಾಮ್ಯವನ್ನೇ ಮುಕ್ತನಲ್ಲಿ ಹೇಳಬಹುದಲ್ಲವೆ. ಅಂದರೆ "ನತತ್ಸಮಶ್ಚಾಪ್ಯಧಿಕಶ್ಚ ದೃಶ್ಯತೆ" ಎಂಬುವ ಶ್ರುತಿಯು ಈಶ್ವರ ಸಾಮ್ಯವನ್ನು ಈಶ್ವರಾಧಿಕ್ಯವನ್ನು ನಿಷೇಧಿಸುವ ಕಾರಣ ಮುಕ್ತನು ಶಿವಸದೃಶನಲ್ಲವು. ಕಿಂತು ಶಿವನೇ ಆಗುವನು. ವೀರಶೈವನಿಗೆ ಇಷ್ಟ ಪ್ರಾಣ ಭಾವಲಿಂಗಗಳ ಉಪಾಸನಾಶ್ರಯವೆ "ಉಪಾಸಾ ತ್ರೈವಿಧ್ಯಾತ್" ಎಂದು ಹೇಳಿರುವದರಿಂದಲೂ, "ಆಧಾರೆ ಕನಕಪ್ರಖ್ಯಂ ಹೃದಯೆ ವಿದ್ರುಮಪ್ರಭಂ ಭ್ರೂಮಧ್ಯೆ ಸ್ಫಟಿಕಚ್ಛಾಯಂ ನಿತ್ಯಂ ಯೋಗೀ ವಿಭಾವಯೇತ್" ಎಂದು ಹೇಳಿರುವದರಿಂದಲೂ, ಲಿಂಗತ್ರಯೋಪಾಸಕನಾದ ವೀರಶೈವನಿಗೆ ಗೌರೀಪತಿತ್ವವು ಬರುವದಿಲ್ಲ. "ಯೊಯದ್ಯಥೋಪಾಸ್ತೆ ತತ್ತದೇವಭವತಿ" ಎಂಬುವದರಿಂದ ಗೌರೀಪತಿಯಾದ ಚಂದ್ರಕಲಾಧಾರಿಯಾದ ಪ್ರತಿಮಾಕಾರವಾದ ಮೂರ್ತಿಯನ್ನು ಉಪಾಸನೆ ಮಾಡುವದು ನಿರರ್ಥಕವು. ಇದನ್ನು ವೀರಶೈವನು ಉಪಾಸನೆ ಮಾಡದೆ ಸಚ್ಚಿದಾನಂದ ಸ್ವರೂಪವಾದ ಅಖಂಡ ಗೋಲಕಾಕಾರವಾದ ಲಿಂಗಮೂರ್ತಿಯನ್ನು ಉಪಾಸಿಸುವನಾದಕಾರಣ ವೀರಶೈವನು ಲಿಂಗಸ್ವರೂಪನೇ ಆಗುವನು. ಪ್ರತಿಮಾಕಾರವಾದ ಘೋರಮೂರ್ತಿಯು ಅಘೋರಮಾಯಾಕಲ್ಪಿತವಾಗಿರುವದರಿಂದ ಅದಕ್ಕೆ ಸಂಸಾರವುಂಟೆಂದು ಹೇಳಬೇಕು. ಇಂಥ ಮೂರ್ತಿಯನ್ನು ಅವಲಂಬಿಸಿರುವದು ನಿರರ್ಥಕವಲ್ಲವೆ? ಇದನ್ನವಲಂಬಿಸಿ ಉಪಾಸನೆಮಾಡುವದು ವೀರಶೈವನಿಗೆ ವಿಹಿತವಾಗಿದ್ದರೆ ಜಗಜ್ಜನನಿಯಾದ ಗೌರಿಗೆ ಪತಿಯಾಗಬೇಕಾದೀತೆಂಬುವ ಭಯದಿಂದ ಪರಶಿವಾಭಿನ್ನತ್ವವೇ ಮುಕ್ತಿಯೆಂದು ಹೇಳುವದನ್ನು ಬಿಟ್ಟು ಶಿವನ ಕೆಲವು ಗುಣಗಳ ಸಾಮ್ಯವೇ ಮುಕ್ತಿಯೆಂದು ಹೇಳಬಹುದು. "ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇವ್ಯಯೆ ಸರ್ವಏಕೀಭವಂತಿ"

ಎಂಬುವ ಮೊದಲಾದ ಅನೇಕ ಶ್ರುತಿಗಳಿಂದ ಕ್ಷೀರಕ್ಕೆ ಕ್ಷೀರದಲ್ಲಿಯೂ, ನೀರಿಗೆ ನೀರಿನಲ್ಲಿಯೂ ಏಕತ್ವವುಂಟಾಗುವಂತೆ ಮುಕ್ತನಿಗೆ ಶಿವೈಕ್ಯವೇ ಸಿದ್ಧವಾಗುವದರಿಂದ ಶಿವಸಾಮ್ಯವನ್ನು ಹೇಳಕೂಡದು. ವೀರಶೈವನು ಆರು ಶಕ್ತಿಗಳಿಂದ ಕೂಡಿದ ಲಿಂಗಸ್ಥಲಗಳನ್ನು ಉಪಾಸನೆ ಮಾಡುವನಾದಕಾರಣ ಸಂಕುಚಿತಗಳಾದ ಆರುಶಕ್ತಿಗಳ ವಿಕಾಸವೇ ಮುಕ್ತಿಯು. ಈ ಆರುಶಕ್ತಿಗಳೊಳಗೆ ಕ್ರಿಯಾಶಕ್ತಿಯು ಸರ್ವಕರ್ತೃತ್ವ ಶಕ್ತಿಯಾಗಿ ಇರುವದರಿಂದ ಈ ಶಕ್ತಿಯೂ ಕೂಡ ಮುಕ್ತನಿಗೆ ಸಿದ್ಧವಾಗುವದು. ಈ ಶಕ್ತಿಯನ್ನು ಮುಕ್ತನಲ್ಲಿ ಹೇಳದಿದ್ದರೆ ಇದರ ಕಾರ್ಯವಾದ ಕಲಾತತ್ವವು ಉಳಿಯುವದು. ಈ ಕಲಾತತ್ವವು (ಕಿಂಚಿತ್ಕರ್ತೃತ್ವಶಕ್ತಿಯು) ಇದರ ಶುದ್ಧಿಯಾಗದೆ ಮುಕ್ತನಾಗಲಾರನು. ಕಲಾತತ್ವದ ಶುದ್ಧಿಯಂದರೆ ತನಗೆ ಕಾರಣವಾದ ಕ್ರಿಯಾಶಕ್ತಿಯ ಸ್ವರೂಪವಾಗೋಣವು, ಉಪಾಸಕನು ಯಾವಾಗ ಕಲಾತತ್ವವನ್ನು ಶುದ್ಧಿಗೊಳಿಸುವನೋ ಆಗ ಅವನಲ್ಲಿ ಕ್ರಿಯಾಶಕ್ತಿಯ ವಿಕಾಸವನ್ನು ಒಪ್ಪಲೇಬೇಕು. ಅಂದಮೇಲೆ ಮುಕ್ತನಿಗೆ ಸರ್ವಕರ್ತೃತ್ವಶಕ್ತಿಯು ಇಲ್ಲ. ಸರ್ವಜ್ಞತ್ವಾದಿ ಶಕ್ತಿಗಳು ಮಾತ್ರ ಬರುತ್ತವೆಯಾದ್ದರಿಂದ ಕೆಲವು ಧರ್ಮಸಾಮ್ಯವೇ ಮುಕ್ತಿಯೆನ್ನುವದು ತಪ್ಪು. ಇದಲ್ಲದೆ ವೀರಶೈವನು ಮುಕ್ತನಿಗೆ ಶಿವಸಾಮ್ಯವನ್ನೇ ಹೇಳಿದರೆ ಐಕ್ಯಸ್ಥಲಕ್ಕೆ ವಿರುದ್ಧವಾಗುವದು. "ಅಪ್ರಮೇಯೆ ಚಿದಾಕಾರೆ ಬ್ರಹ್ಮಣ್ಯದ್ವೈತವೈಭವೆ ವಿಲೀನಃ ಕಿನ್ನು ಜಾನಾತಿ ಸ್ವಾತ್ಮಾನಂ ಪರಮೇವವಾ ಯತ್ರ ನಾಸ್ತಿ ಭಿದಾಯೋಗಾತ್" ಎಂಬುವ ಐಕ್ಯಸ್ಥಲಾಂತರ್ಗತವಾದ ಸ್ವಪರಾಜ್ಞಸ್ಥಲವಾಕ್ಯಕ್ಕೂ "ಜಲೇ ಜಲಮಿವನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಂ ಪರೆ ಬ್ರಹ್ಮಣಿ ಲೀನಾತ್ಮಾ ವಿಭಾಗೇನ ನದೃಶ್ಯತೆ" ಎಂಬುವ ಐಕ್ಯಸ್ಥಲದ ಜ್ಞಾನಶೂನ್ಯಸ್ಥಲವಾಕ್ಯಕ್ಕೂ ವಿರೋಧವಾಗುವದು. ಯಾಕಂದರೆ ವಿಶಿಷ್ಟಾದ್ವೈತಿಗಳು ಮುಕ್ತನಲ್ಲಿ ಹೇಳುವ ಶಿವಸಾಮ್ಯವು ಭೇದಘಟಿತವಾದದ್ದು. ಈ ಐಕ್ಯಸ್ಥಲದ ವಾಕ್ಯಗಳು ಮುಕ್ತನಿಗೂ ಶಿವನಿಗೂ ಯಾವದೊಂದೂ ಭೇದವಿಲ್ಲೆಂದು ಹೇಳುತ್ತವೆಯಾದ್ದರಿಂದ ಅವರು ಹೇಳುವ ಶಿವಸಾಮ್ಯರೂಪವಾದ ಮುಕ್ತಿಯು ಐಕ್ಯಸ್ಥಲಕ್ಕೆ ವಿರುದ್ಧವು. ಎಲೈ ಶಿವಾದ್ವೈತಿಯೇ ಶ್ರೀಕಂಠಾಚಾರ್ಯರು ಐಕ್ಯಸ್ಥಲದಲ್ಲಿ ನೀನು ಮುಕ್ತನಿಗೆ ಶಿವಸಾಮ್ಯವಿಲ್ಲದೆ ಶಿವತಾದಾತ್ಮ್ಯವೇ ಸಿದ್ಧಿಸುತ್ತದೆಂಬ ವಿಷಯದಲ್ಲಿ ಶ್ರೀ ರೇಣುಕ ಭಗವತ್ಪಾದರ ಉಕ್ತಿಗಳನ್ನು ಉದಾಹರಿಸುವಂತೆ "ಮುಕ್ತಃ ಶಿವಸಮೋಭವೇತ್" ಎಂಬುವ ರೇಣುಕ ಭಗವತ್ಪಾದರ ಉಕ್ತಿಯನ್ನೆ ತಮ್ಮ ಶಿವಸಾಮ್ಯವೇ ಮುಕ್ತಿಯೆಂಬುವ ವಿಷಯದಲ್ಲಿ ಪದೇ

ಪದೇ ಪ್ರಮಾಣವನ್ನಾಗಿ ಉದಾಹರಿಸಿ ತಮ್ಮ ಭಾಷ್ಯದಲ್ಲಿ ಶಿವಸಾಮ್ಯವೇ ಮುಕ್ತಿಯೆಂದು ಸ್ಥಿರಗೊಳಿಸಿರುವರು ಅಂದಮೇಲೆ ನಿಮ್ಮ ಆಚಾರ್ಯರ ಅಭಿಪ್ರಾಯದಂತೆ ನೀನು ಶಿವಸಾಮ್ಯರೂಪವಾದ ಮುಕ್ತಿಯನ್ನು ಒಪ್ಪುವದು ಯುಕ್ತವಲ್ಲವೆ? ಬ್ರಹ್ಮಾದ್ವೈತಿಯೇ ಶ್ರೀ ರೇಣುಕ ಶಿವಾಚಾರ್ಯರ ಅಭಿಪ್ರಾಯವು ಭೇದಘಟಿತವಾದ ಶಿವಸಾಮ್ಯವೆ ಮುಕ್ತಿಯೆಂಬುವ ವಿಷಯದಲ್ಲಿಲ್ಲವು. ಅವರ ತಾತ್ಪರ್ಯವು ಭೇದಘಟಿತ ಸಾಮ್ಯದಲ್ಲಿದ್ದರೆ ಮುಂದೆ ಅವರು ನಿರೂಪಿಸುವ ಐಕ್ಯಸ್ಥಲವೇ ವಿರುದ್ಧವಾಗುವದು. ಆದ್ದರಿಂದ ಶ್ರೀಕಂಠಾರಾಧ್ಯರು ‹‹ಮುಕ್ತಃ ಶಿವಸಮೋಭವೇತ್›› ಎಂಬುವ ಅವರ ವಾಕ್ಯವನ್ನಷ್ಟೇ ತನ್ನ ಪಕ್ಷಕ್ಕೆ ಪ್ರಮಾಣವನ್ನಾಗಿ ತೆಗೆದುಕೊಂಡು ಮುಂದಿನ ಐಕ್ಯಸ್ಥಲದ ಮುಕ್ತನಿಗೆ ಶಿವನ ಅಭಿನ್ನತ್ವವನ್ನು ಹೇಳುವ ವಾಕ್ಯಗಳನ್ನು ಬಿಡುವದು ಅಯುಕ್ತವು. ಐಕ್ಯಸ್ಥಲದಲ್ಲಿರುವ ಮುಕ್ತನಿಗೂ ಶಿವನಿಗೂ ಭೇದವಿಲ್ಲೆಂದು ಹೇಳುವ ವಾಕ್ಯಗಳು ಸರ್ವಜ್ಞತ್ವಾದಿ ಧರ್ಮಗಳಿಂದ ಭೇದವಿಲ್ಲೆಂದೂ, ‹‹ಮುಕ್ತಃ ಶಿವಸಮೋಭವೇತ್›› ಎಂಬುವ ವಾಕ್ಯವು ಸರ್ವಕರ್ತೃತ್ವಾದಿಗಳಿಂದ ಭೇದವಿದೆಯಂದೂ ವ್ಯವಸ್ಥೆಯನ್ನು ಮಾಡಲಾಗುವದಿಲ್ಲ. ಯಾಕಂದರೆ ಜೀವನ್ಮುಕ್ತನಲ್ಲಿ ಸರ್ವಕರ್ತೃತ್ವವೂ ಕೂಡ ಬರುವದೆಂದು ಅವರ ಐಕ್ಯಸ್ಥಲದ ವಾಕ್ಯವಿರುವದು.

ಶ್ಲೋ|| ಪರಾಹಂತಾ ಸಮಾವೇಶ ಪರಿಪೂರ್ಣ ವಿಮರ್ಶವಾನ್ ಸರ್ವಜ್ಞಸ್ಸರ್ವಗಸ್ಸಾಕ್ಷೀ ಸರ್ವಕರ್ತಾ ಮಹೇಶ್ವರಃ || ಎಂಬ ಭಾಂಡಸ್ಥಲದ ವಾಕ್ಯವು ‹‹ಸರ್ವಾತ್ಮಕ ಶಿವೋಹಂ›› ಎಂಬುವ ಪರಾಹಂತಾಸ್ವರೂಪವಾದ ಶಕ್ತಿಯ ಸಮಾವೇಶದಿಂದ ಪರಿಪೂರ್ಣವಾದ ವಿಮರ್ಶಶಕ್ತಿಯುಳ್ಳ ಮುಕ್ತನು ಸರ್ವಜ್ಞನೂ ಸರ್ವಾಂತರ್ಯಾಮಿಯೂ ಸರ್ವಕರ್ತೃವೂ ಮಹೇಶ್ವರನೂ ಆಗಿಬಿಡುವನು ಎಂದು ಹೇಳುತ್ತದೆ. ಅಂದಮೇಲೆ ಮುಕ್ತನಲ್ಲಿ ಸರ್ವಕರ್ತೃತ್ವ ಸರ್ವಾಂತರ್ಯಾಮಿತ್ವಗಳು ಇಲ್ಲದಿರುವದರಿಂದ ಶಿವನ ಭೇದವೂ ಸರ್ವಜ್ಞತ್ವಾದಿಗಳೂ ಇರುವದರಿಂದ ಶಿವನ ಅಭೇದವೂ ಎಂದು ಅವರ ತಾತ್ಪರ್ಯವನ್ನು ವರ್ಣಿಸುವದು ಅಯುಕ್ತವೇಸರಿ. ಆದ್ದರಿಂದಲೇ ‹‹ಮುಕ್ತಃ ಶಿವಸಮೋಭವೇತ್›› ಎಂಬುವಲ್ಲಿ ಶಿವಸಾಮ್ಯವನ್ನು ಮುಕ್ತನಿಗೆ ಹೇಳಿದರೆ ‹‹ನತತ್ಸಮಶ್ಚಾಭ್ಯಧಿಕಶ್ಚದೃಶ್ಯತೆ›› ಎಂಬುವ ಶ್ರುತಿವಾಕ್ಯಕ್ಕೆ ವಿರುದ್ಧವಾಗುವದಾದ್ದರಿಂದ ‹‹ಇಂದುರಿಂದುರಿವಶ್ರೀಮಾನ್›› ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ | ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ || ಎಂಬುವಲ್ಲಿ ಹೇಗೆ ಅಭಿನ್ನತ್ವವೇಸಾ

ದೃಶ್ಯವೊ ಹಾಗೆ ಶಿವನ ಅಭಿನ್ನತ್ವವೇ ಸಾಮ್ಯವೆಂದು ಮರಿತೋಂಟದಾರ್ಯರು ಟೀಕೆಯನ್ನು ಬರೆದಿರುವರು. ಆದ್ದರಿಂದ ವಿಶಿಷ್ಟಾದ್ವೈತಿಗಳು ಹೇಳುವ ಸಾಮ್ಯ ಮುಕ್ತಿಯೂ ನೀನು ಹೇಳುವ ಜೀವಾತ್ಮನಾಶರೂಪವಾದ ಮುಕ್ತಿಯೂ ಶ್ರುತಿ ಯುಕ್ತಿಗಳಿಗೆ ವಿರುದ್ಧವು. ಯಾಕೆಂದರೆ ‹‹ತದೈಕ್ಷತ ಬಹುಸ್ಯಾಂ ಪ್ರಜಾಯೇಯ | ತತ್ ಸೃಷ್ಟ್ವಾ ತದೇವಾನುಪ್ರಾವಿಶತ್›› ಇತ್ಯಾದಿ ಶ್ರುತಿಗಳಿಂದ ಜೀವರು ಸೃಷ್ಟ್ಯಾದಿಯಲ್ಲಿ ಶಿವನೊಳಗೆ ಲೀನರಾಗಿದ್ದರೆಂದೂ, ಸೃಷ್ಟಿಯಾದನಂತರದಲ್ಲಿ ಸಾಗರತರಂಗ ನ್ಯಾಯದಂತೆ ಶಿವನಿಂದ ವಿಭಕ್ತರಾಗಿ ‹‹ಅಥಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮಸಮಶ್ನುತೇ›› ‹‹ಭಿದ್ಯತೆ ಹೃದಯಗ್ರಂಥಿಃ›› ‹‹ಯಥಾನದ್ಯಃ›› ಎಂಬುವ ಶ್ರುತಿಗಳಿಂದ ಆ ಶಿವನಲ್ಲಿಯೇ ಲೀನರಾಗಿ ‹‹ನಚಪುನರಾವರ್ತತೆ ನಚ ಪುನರಾವರ್ತತೇ›› ಎಂಬುವ ಶ್ರುತಿಯಿಂದ ಪುನಃ ಸಂಸಾರವನ್ನು ಹೊಂದುವದಿಲ್ಲವೆಂತಲೂ ತಿಳಿದುಬರುತ್ತದಷ್ಟೆ! ಎಲೈ ಶಿವಾದ್ವೈತಿಯೆ ಮಹಾಜನರು ಅನುಸರಿಸಿದ ಪರಮತದ ನಿಂದೆಯಿಂದ ಪ್ರತ್ಯವಾಯವನ್ನು ಕಟ್ಟಿಕೊಳ್ಳುವದಕ್ಕಿಂತಲೂ ಕೇವಲ ಮುಮುಕ್ಷುಗಳಾದ ವೀರಶೈವರಿಗೆ ವೀರಶೈವ ಸಿದ್ಧಾಂತವನ್ನು ಬೋಧಿಸುವದು ಯುಕ್ತವಲ್ಲವೇ? ಪರಮತದವರು ಹೀಗೆ ಅನ್ನುವರು ಹಾಗನ್ನುವದು ತಪ್ಪೆಂದು ಪರಪಕ್ಷ ಪ್ರತಿಕ್ಷೇಪವನ್ನು ಮಾಡೋಣದರಲ್ಲಿ ಪ್ರಯೋಜನವೇನು? ಬ್ರಹ್ಮಾದ್ವೈತಿಯೇ ‹‹ನಹಿನಿಂದಾನಿಂದಿತುಮಿಚ್ಛೇ ಸ್ತುತ್ಯಂ ಪ್ರಾಪ್ತುಂ ಪ್ರವರ್ತತೇ›› ಎಂಬುವ ನ್ಯಾಯದಂತೆ ಪರಪಕ್ಷ ನಿರಸನದಿಂದ ಪ್ರತ್ಯವಾಯವಿಲ್ಲವು. ಶಿವಜ್ಞಾನಾಧಿಕ್ಯಸ್ಥಾಪನೆಯು ಪರಪಕ್ಷ ಪ್ರತಿಕ್ಷೇಪವಿಲ್ಲದೆ ಸಂಭವಿಸಲಾರದು. ಸ್ವಸಿದ್ಧಾಂತವನ್ನು ಸ್ಥಾಪನೆಮಾಡಬೇಕಾದರೆ ಎಲ್ಲಾ ಆಚಾರ್ಯರು ಪರಪಕ್ಷದ ಗೋಜಿಗೆ ಹೋಗುವದುಂಟು. ಮತ್ತು ಅದನ್ನು ನಿರಸನಮಾಡುವದೂ ಉಂಟು ಅಂದಮೇಲೆ ನಾವು ಪರಪಕ್ಷದ ವಿಚಾರವನ್ನು ಮಾಡುವದು ಅನ್ಯಾಯವಲ್ಲ.

ಎಲೈ ಶಿವಾದ್ವೈತಿಯೇ? ನೀನಾದರೂ ಶಕ್ತಿವಿಶಿಷ್ಟಾದ್ವೈತವನ್ನು ಒಪ್ಪುವೆಯಲ್ಲವೆ? ಅಂದಮೇಲೆ ವಿಶಿಷ್ಟಾದ್ವೈತವನ್ನು ನಿರಸನಮಾಡುವದು ಅಯುಕ್ತವಲ್ಲವೇ? ಅಂದರೆ ಬ್ರಹ್ಮಾದ್ವೈತಿಯೇ? ನಾನು ಹೇಳುವ ಶಕ್ತಿವಿಶಿಷ್ಟಾದ್ವೈತವಾದವು. ಶಿವಾದ್ವೈತದಲ್ಲಿಯೇ ಪರ್ಯವಸನ್ನವಾಗುವದು. ಶಿವಾದ್ವೈತಕ್ಕೇನೇ ಶಕ್ತಿವಿಶಿಷ್ಟಾದ್ವೈತವೆಂದೂ, ವಿಶೇಷಾದ್ವೈತವೆಂದೂ, ಪರ್ಯಾಯನಾಮಗಳು. ಶಕ್ತಿವಿಶಿಷ್ಟಾದ್ವೈತವೆಂದರೆ ಸ್ಥೂಲಶಕ್ತಿಯೆಂತಲೂ, ಸೂಕ್ಷ್ಮ

ಶಕ್ತಿಯೆಂತಲೂ, ಎರಡು ಶಕ್ತಿಗಳು. ಸ್ಥೂಲಶಕ್ತಿಯೆ ಜಡವೆಂತಲೂ, ಸೂಕ್ಷ್ಮ ಶಕ್ತಿಯೆ ಅಜಡವೆಂತಲೂ, ಹೇಳುವದುಂಟು. ಈ ಸ್ಥೂಲಶಕ್ತಿಯು ಎರಡು ಪ್ರಕಾರವಾಗಿರುವದು. ಒಂದು ಅಚಿತ್ ಶಕ್ತಿಯೆಂತಲೂ ಮತ್ತೊಂದು ಚಿಚ್ಛಕ್ತಿಯೆಂತಲೂ, ಇವೆರಡು ಸ್ವರೂಪವಾದದ್ದೇ ಚಿತ್ತಶಕ್ತಿಯು (ಅಚಿತ್ ಶಕ್ತಿಯೆಂದರೆ, ಜೀವಾತ್ಮನ ಕೃತಿರೂಪವಾದ ಕ್ರಿಯಾಶಕ್ತಿಯು. ಸ್ಥೂಲಚಿಚ್ಛಕ್ತಿಯೆಂದರೆ ಜೀವಾತ್ಮನ ಕಿಂಚಿಜ್ಞತ್ವರೂಪವಾದ ಜ್ಞಾನಶಕ್ತಿಯು. ಇದರೊಳಗೆ ಜೀವಾತ್ಮನ ಕಾಮಕ್ರೋಧಾದಿಗಳೂ ಅಂತರ್ಗತಗಳಾಗುವವು. ಸ್ಥೂಲ ಕ್ರಿಯಾಶಕ್ತಿಯಲ್ಲಿ ನಿದ್ರಾಲಸ್ಯಾದಿಗಳು ಅಂತರ್ಗತಗಳಾಗುವವು. ಈ ಕಿಂಚಿಜ್ಞತ್ವ ಕಿಂಚಿತ್ ಕರ್ತೃತ್ವರೂಪಗಳಾದ ಜ್ಞಾನ ಕ್ರಿಯಾಶಕ್ತಿಗಳಿಗೆ ಆಶ್ರಯವಾದ ಜೀವಾತ್ಮನ ಇಚ್ಛಾಶಕ್ತಿಯೇ ಚಿತ್ತವು. ಇದುವೇ ಅಂತಃಕರಣವು. (ಈ ಜಡಶಕ್ತಿಯಿಂದ ಕೂಡಿದ ಶಿವಾಂಶರೂಪವಾದ ಶಿವಪ್ರಕಾಶವೇ ಜೀವಾತ್ಮನು.) ಇನ್ನು ಸೂಕ್ಷ್ಮಶಕ್ತಿಯು ಕೂಡ ಎರಡು ಪ್ರಕಾರವಾಗಿರುವದು. ಒಂದು ಸೂಕ್ಷ್ಮವಾದ ಅಚಿತ್ಪ್ರಪಂಚಕ್ಕೆ ಕಾರಣವಾದ ಕ್ರಿಯಾಶಕ್ತಿಯು, ಮತ್ತೊಂದು ಸೂಕ್ಷ್ಮಚಿತ್ಪ್ರಪಂಚಕ್ಕೆ ಕಾರಣವಾದ ಜ್ಞಾನಶಕ್ತಿಯು. ಈ ಶಿವನ ಕ್ರಿಯಾ ಜ್ಞಾನಶಕ್ತಿಗಳಿಗೆ ಸರ್ವಕರ್ತೃತ್ವ ಸರ್ವಜ್ಞತ್ವ ಶಕ್ತಿಗಳೆಂತಲೂ ಹೇಳುವದುಂಟು. ಈ ಜ್ಞಾನ ಕ್ರಿಯಾಶಕ್ತಿಗಳಿಗೆ ಆಶ್ರಯವಾದ ಶಿವಸಂಕಲ್ಪವೆಂಬ ವಿಮರ್ಶಶಕ್ತಿಗೆ ಇಚ್ಛಾಶಕ್ತಿಯೆಂದು ಹೆಸರು. ಇದರಿಂದ ಕೂಡಿದವನೇ ಚಿದಾನಂದಾತ್ಮಕನಾದ ಶಿವನು ಇವರಿಬ್ಬರುಗಳಿಗೆ ಅದ್ವೈತವನ್ನು ಪ್ರತಿಪಾದಿಸುವ ಮತವೇ (ಶಕ್ತಿ ವಿಶಿಷ್ಟಾದ್ವೈತಮತವು.) ಜಡವಾದ ಚಿತ್ತಶಕ್ತಿಯಿಂದ ಕೂಡಿದವನು ಜೀವಾತ್ಮನೆಂತಲೂ, ಅಜಡವಾದ ವಿಮರ್ಶ ಶಕ್ತಿಯಿಂದ ಕೂಡಿದವನು ಶಿವನೆಂತಲೂ ಹೇಳುವ ವಿಷಯದಲ್ಲಿ "ಚಿತ್ತಮಾತ್ಮಾ" "ಚೈತನ್ಯಮಾತ್ಮಾ" ಎಂಬುವ ಶಿವಸೂತ್ರಗಳು ಪ್ರಮಾಣಗಳಾಗಿರುವವು. ಜೀವನು ತನ್ನ ಸಂಕುಚಿತವಾದ ಜಡಶಕ್ತಿಯನ್ನು ಶಿವಯೋಗಾಭ್ಯಾಸದಿಂದ ತನ್ನ ಶಕ್ತಿಯ ಜಾಡ್ಯವನ್ನು ಕಳೆದು ವಿಕಾಸಗೊಳಿಸಲು ಆಗ ಶುದ್ಧಾತ್ಮನಾಗಿ ಸೂಕ್ಷ್ಮಶಕ್ತಿಯಿಂದ ಕೂಡಿದ ಶಿವನಲ್ಲಿ ಸಮರಸನಾಗಿ ಅಭಿನ್ನನಾಗುವನು. ಅಂದರೆ ಶಕ್ತಿವಿಶಿಷ್ಟಾದ್ವೈತವೆಂಬಲ್ಲಿ ಶಕ್ತಿಯೆಂದರೆ ಒಂದು ಶಿವಶಕ್ತಿಯು, ಮತ್ತೊಂದು ಜೀವನ ಶಕ್ತಿಯು, ಇವೆರಡರಿಂದ ವಿಶಿಷ್ಟರು ಶಿವಜೀವರು ಇವರುಗಳ ಅದ್ವೈತವೆಂದರ್ಥವು. ಇನ್ನು ಶಿವಾದ್ವೈತವೆಂದರೆ ಸ್ವಪ್ರಕಾಶತಾ ಶಕ್ತಿವಿಶಿಷ್ಟ ಶಿವನಲ್ಲಿ ಜೀವಾತ್ಮನ ಐಕ್ಯವು. ಈ ಐಕ್ಯವನ್ನು ಹೇಳುವದೆ ಶಿವಾ

ದ್ವೈತಮತವು. ಇನ್ನು ವಿಶೇಷಾದ್ವೈತವೆಂದರೆ ವಿ-ಅಂದರೆ ಪರಮಾತ್ಮನು, ಶೇಷ ವೆಂದರೆ ಜೀವಾತ್ಮನು ಇವರ ಅದ್ವೈತವೆಂಬರ್ಥವು. ಕೇವಲ ಅದ್ವೈತಪದದಿಂದ ಜೀವಾತ್ಮನಿಗಿರುವ ಸ್ವಾಭಾವಿಕ ಭೇದವು ತೋರುವದಿಲ್ಲ. ಶಿವಜೀವರುಗಳಿಗೆ ಚೈತನ್ಯ ಸಾಮಾನ್ಯ ಧರ್ಮದಿಂದ ಅಭೇದವಿದ್ದರೂ ಅಣುತ್ವ, ವಿಭುತ್ವ, ಕಿಂಚಿ ಜ್ಞತ್ವ, ಸರ್ವಜ್ಞತ್ವ ಮೊದಲಾದ ಪರಸ್ಪರ ವಿರುದ್ಧ ಧರ್ಮಗಳಿಂದ ಪಾರಮಾರ್ಥಿ ಕಭೇದವು ಕಂಡುಬರುವದರಿಂದ ಅದ್ವೈತಪದದ ಹಿಂದಿರುವ ವಿಶೇಷಪದವು, ಸಾರ್ಥಕವಾಗುವದು. ಇದೇ ಕಾರಣದಿಂದಲೆ ಶಕ್ತಿ ವಿಶಿಷ್ಟಾದ್ವೈತವೆಂಬುವಲ್ಲಿ ಶಕ್ತಿ ವೈಶಿಷ್ಟ್ಯಾಂಶವು ಕೂಡಾ ಸಾರ್ಥಕವಾಗುವದು. ವಿಶ್ಚ ಶೇಷಶ್ಚ ವಿಶೇಷೌ| ವಿಶೇಷಯೋರದ್ವೈತಂ ವಿಶೇಷಾದ್ವೈತಂ | ಎಂದು ವ್ಯುತ್ಪತ್ತಿಯು ಅಂದರೆ, ವಿಶೇಷಾದ್ವೈತವೆಂಬಲ್ಲಿಯ ಅದ್ವೈತ ಪದದಿಂದ ಭ್ರಮರಕೀಟದಂತೆ ಜೀವನ ಸ್ವಾಭಾವಿಕ ಭೇದದ ನಿವೃತ್ತಿಯು ಬೋಧಿಸಲ್ಪಡುವದು. ‚‚ಹಂಸ ಹಂಸೇತಿ ಯೋಬ್ರೂಯಾತ್'' ಇತ್ಯಾದಿ ಶ್ರುತಿಗಳಿಂದಲೂ, ‚‚ವಿಶ್ಚಕ್ಷುಷಿ ವ್ಯೋಮ್ನಿ ಜಾತೇ ಪರಮಾತ್ಮನಿ ಪಕ್ಷಿಣಿ'' ಎಂಬುವ ಕೋಶದಿಂದಲೂ ವಿಶಬ್ದವು ಪರಮಾ ತ್ಮವಾಚಕವೆಂದು ತಿಳಿಯುವದು. ಇದಲ್ಲದೆ ‚‚ವಾತ್ಯುತ್ಪಾದಯತೀತಿವಿಃ'' ಎಂ ಬುವ ವ್ಯುತ್ಪತ್ತಿಯಿಂದಲೂ ಜಗತ್ಕಾರಣವಾದ ಬ್ರಹ್ಮವು ವಿಶಬ್ದದಿಂದ ಸೂಚಿಸ ಲ್ಪಡುವದು. ಶೇಷ ಶಬ್ದದಿಂದ ‚‚ಯಥಾಗ್ನೇರ್ವಿಸ್ಫುಲಿಂಗಾಃ'' ಇತ್ಯಾದಿ ಶ್ರುತಿಗ ಳಲ್ಲಿ ಹೇಳಲ್ಪಟ್ಟ ಪರಮೇಶ್ವರಾಂಶಭೂತನಾದ ಜೀವನು ತಿಳಿಯಲ್ಪಡುವನು. ಅದ್ವೈತಪದದಿಂದ ‚‚ಯಥಾನದ್ಯ'' ಇತ್ಯಾದಿ ಶ್ರುತಿಸಿದ್ಧವಾದ ಸಾಮರಸ್ಯವು ಜೀವಬ್ರಹ್ಮರುಗಳಿಗೆ ಬೋಧಿಸಲ್ಪಡುವದು. ಬ್ರಹ್ಮಾದ್ವೈತಿಯೇ ? ನಿನ್ನ ಮತ ದಲ್ಲಿ ಜೀವೇಶ್ವರರು ಪ್ರತಿಬಿಂಬಸ್ವರೂಪರಾಗಿರುವದರಿಂದ ನಿರೀಶ್ವರಮತ ಪ್ರವೇ ಶವಾಗುವದು. ವಿಶಿಷ್ಟಾದ್ವೈತಿಗಳು ಶಿವಸಂಕಲ್ಪವನ್ನು ಮೀರಿ ಸ್ವತಂತ್ರರಾಗಿ ತಮಗೆ ಬೇಕಾದ ಪದಾರ್ಥಗಳನ್ನು ನಿರ್ಮಿಸಿಕೊಂಡು ಜೀವನ್ಮುಕ್ತರು ಆನಂದ ಪರವಶರಾಗುವರು. ಎಂದು ಹೇಳುವದರಿಂದ ಆ ಜೀವನ್ಮುಕ್ತರ ಸ್ಥಿತಿಯು ಕೆಟ್ಟು ಹೋಗುವದು. ಹೇಗಂದರೆ, ಒಬ್ಬ ಮಾಂಡಲಿಕ ರಾಜನು ಒಬ್ಬಾನೊಬ್ಬ ಚಕ್ರ ವರ್ತಿಯ ಅನುಗ್ರಹದಿಂದ ಸ್ವಲ್ಪ ಸೇನಾಬಲವನ್ನು ಸಂಪಾದಿಸಿಕೊಂಡು ಪುನಃ ಆ ಚಕ್ರವರ್ತಿಯ ಆಜ್ಞೆಗೆ ಮೀರಿ ನಡೆದರೂ ಆ ಚಕ್ರವರ್ತಿಯ ಮೇಲೆ ತನ್ನ ಅಲ್ಪ ಸೇನಾಬಲದಿಂದ ತಿರುಗಿಬಿದ್ದರೂ ಆ ಮಾಂಡಲಿಕ ರಾಜನು ತನ್ನ ಸೇನಾಬ ಲವನ್ನು ಕಳೆದುಕೊಂಡು ಅತಿ ಸಂಕಟದಲ್ಲಿ ಬೀಳುವಂತೆ ಕೆಲವು ಧರ್ಮಗಳಿಂದ

ಶಿವಸದೃಶರಾದ ಜೀವನ್ಮುಕ್ತರು ಪುನಃ ಸಂಸಾರ ಸಂಕಟದಲ್ಲಿ ಬೀಳಬೇಕಾಗು ವದು. ಆದ್ದರಿಂದ ಶ್ರೀಕಂಠಶಿವಾರಾಧ್ಯ ಕೃತವಾದ ಪಾಶುಪತ ಪರವಾದ ಶ್ರೀಕಂಠಭಾಷ್ಯವು ವೀರಶೈವಮತಭಾಷ್ಯವಲ್ಲ. ಈ ಶ್ರೀಕಂಠಭಾಷ್ಯಕ್ಕೆ ಪಾಶು ಪತ ಮತಾವಲಂಬಿಗಳಾದ ಲಿಂಗಧಾರಣ ರಹಿತರಾದ ಅಪ್ಪಯ ದೀಕ್ಷಿತರು ಶಿವಾರ್ಕಮಣಿ ದೀಪಿಕೆಯೆಂಬ ವಿಸ್ತಾರವಾದ ಟೀಕೆಯನ್ನು ಒರೆದಿರುವರು. ಯಾರೋ ತಿಳಿಗೇಡಿಗಳು ಶ್ರೀಕಂಠಭಾಷ್ಯದ ಭೂಮಿಕೆಯಲ್ಲಿ ಕೆಲವರು ಈ ಶ್ರೀ ಕಂಠಭಾಷ್ಯಕ್ಕೇನೆ ನೀಲಕಂಠ ಭಾಷ್ಯವೆಂದನ್ನುವರೆಂದು ಬರೆದಿರುವರು. ಇದು ತಪ್ಪು. ನೀಲಕಂಠ ಭಾಷ್ಯವೇ ಬೇರೆ ಶ್ರೀಕಂಠ ಭಾಷ್ಯವೇ ಬೇರೆ ಎಂಬುವ ವಿಷಯವು ಶ್ರೀಕರಭಾಷ್ಯದಲ್ಲಿ ನೀಲಕಂಠ ಭಾಷ್ಯೆ ಶ್ರೀಕಂಠಭಾಷ್ಯೆ ಎಂದು ಪ್ರತ್ಯೇಕವಾಗಿ ಉದಹರಿಸಿದ ಕಾರಣದಿಂದಲೂ ತನ್ನ ಮತ ಪುಷ್ಟಿಗಾಗಿ ನೀಲ ಕಂಠ ಭಾಷ್ಯದಲ್ಲಿ ಬರೆದಿರುವ ಕೆಲವು ವಿಷಯಗಳನ್ನು ಪ್ರಮಾಣಗಳನ್ನಾಗಿ ತೆಗೆ ದುಕೊಳ್ಳುವದರಿಂದಲೂ ಶ್ರೀಕಂಠ ಶಿವಾರಾಧ್ಯಕೃತ ಬ್ರಹ್ಮಮೀಮಾಂಸಾ ಭಾಷ್ಯೆ | ಎಂದು ಶ್ರೀಕಂಠಭಾಷ್ಯದಲ್ಲಿ ಹೇಳಿದ ಶಿವಸಾಮ್ಯವೇ ಮುಕ್ತಿಯಂ ಬುವದೇ ಮೊದಲಾದ ವಿಷಯವನ್ನು ಖಂಡನಮಾಡುವದರಿಂದಲೂ ನೀಲಕಂಠ ಶಿವಾಚಾರ್ಯರೇ ಬೇರೆ ಶ್ರೀಕಂಠ ಶಿವಾರಾಧ್ಯರೇ ಬೇರೆಯೆಂದು ಸ್ಪಷ್ಟವಾಗು ವದು. ನೀಲಕಂಠ ಶಿವಾಚಾರ್ಯರು ಪ್ರಸಿದ್ಧರೆಂದೂ ಶಂಕರಾಚಾರ್ಯರ ಸಮ ಕಾಲಿಕರೆಂದೂ ಶಂಕರದಿಗ್ವಿಜಯ ಗ್ರಂಥದಿಂದ ತಿಳಿದುಬರುತ್ತದೆ. ಶ್ರೀಕಂಠಾ ಚಾರ್ಯನಿಗೇನೇ ನೀಲಕಂಠನೆಂಬ ಹೆಸರಿತ್ತೆಂದು ಹೇಳಿದರೆ ಆ ತನ್ನ ಪ್ರಸಿದ್ಧ ವಾದ ನೀಲಕಂಠನೆಂಬ ಹೆಸರನ್ನೇ ತನ್ನ ಭಾಷ್ಯದ ಆದಿಯಲ್ಲಿ ಉದಹರಿಸಬೇಕಾ ಗಿತ್ತು ಅದನ್ನು ಬಿಟ್ಟು ಶ್ರೀಕಂಠನೆಂದು ಉದಹರಿಸಿರುವದರಿಂದ ನೀಲಕಂಠ ಶಿವಾ ಚಾರ್ಯರೆಂಬುವರು ಬೇರೆ ಭಾಷ್ಯಕಾರರೆಂದು ತಿಳಿದುಬರುವದು. ಈ ನೀಲಕಂಠ ಭಾಷ್ಯದ ತಾತ್ಪರ್ಯವೆ ಕ್ರಿಯಾಸಾರವೆಂಬ ಕಾರಿಕಾರೂಪವಾದ ಗ್ರಂಥವು ಬರೆಯಲ್ಪಟ್ಟಿರುವದು.

ಈ ಕಾರಿಕಾನುಸಾರವಾಗಿ ಬರೆಯಲ್ಪಟ್ಟಿರುವ ಬ್ರಹ್ಮಸೂತ್ರ ಶಾಂಕರೀ ವೃತ್ತಿಯಲ್ಲಿ ಶಿವಸಾಮ್ಯರೂಪವಾದ ಮುಕ್ತಿಯು ಯುಕ್ತವಲ್ಲವೆಂದು ವಿಸ್ತಾರ ವಾಗಿ ಬರೆದಿರುವೆವು. ಆದ್ದರಿಂದ ಇಲ್ಲಿ ಇಷ್ಟಕ್ಕೆ ಈ ಪ್ರಾಸಂಗಿಕ ವಿಷಯುವನ್ನು ಬಿಟ್ಟು ಪ್ರಕೃತವನ್ನು ಅನುಸರಿಸುವೆನು. ಪ್ರತಿಬಿಂಬವಾದಿಯೆ! ಜೀವನು ಪ್ರತಿ ಬಿಂಬರೂಪನೆಂದು ಯಾವ ಶ್ರುತಿ ಸೂತ್ರಗಳೂ ಹೇಳದಿರುವದರಿಂದ ಜೀವನು

ಬ್ರಹ್ಮಾಂಶನೆಂದು ಹೇಳಬೇಕು. ಶಿವಾದ್ವೈತಿಯೇ ! ,,ಏಕಏವಹಿಭೂತಾತ್ಮಾ ಭೂತೇಭೂತೇ ವ್ಯವಸ್ಥಿತಃ | ಏಕಧಾ ಬಹುಧಾಚೈವ ದೃಶ್ಯತೆ ಜಲಚಂದ್ರವತ್'' ,,ಅತಏವಚೋಪಮಾಸೂರ್ಯಕಾದಿವತ್'' ಎಂಬುವ ಶ್ರುತಿಸೂತ್ರಗಳು ಪ್ರತಿಬಿಂಬವಾದವನ್ನೇ ಸಮರ್ಥನ ಮಾಡುತ್ತವೆಯಾದ್ದರಿಂದ ಜೀವಭಾವವು ಉಪಾಧಿಕೃತವಾದದ್ದು. ಉಪಾಧಿಯು ನಷ್ಟವಾಗಲು ಸ್ವರೂಪೈಕ್ಯವೇ ಸಂಭವಿಸುವದರಿಂದ ಜೀವಭಾವವು ಸ್ವಾಭಾವಿಕವೆಂದು ಹೇಳಕೂಡದು. ಪ್ರತಿಬಿಂಬವಾದಿಯೆ ಆ ಮೇಲಿನ ಶ್ರುತಿಸೂತ್ರಗಳು ಜೀವನು ಪ್ರತಿಬಿಂಬಸ್ವರೂಪನೆಂದೂ ಔಪಾಧಿಕನೆಂದೂ ಹೇಳುವದಿಲ್ಲ. ಕಿಂತು ,,ಅಣೋರಣೀಯಾನ್ಮಹತೊ ಮಹೀಯಾನಾತ್ಮಾ ಗುಹಾಯಾಂನಿಹಿತೋಸ್ಯಜಂತೋಃ'' ಎಂಬುವ ಶ್ರುತಿಬಲದಿಂದ ಜೀವನು ಅಣುರೂಪನಾದುದರಿಂದ ,,ಅನೇನ ಜೀವೇನಾತ್ಮನಾನುಪ್ರವಿಶ್ಯ'' ಎಂಬುವ ಶ್ರುತಿಯಂತೆ ಅನುಪ್ರವಿಷ್ಟನಾದ ಪರಮಾತ್ಮನಿಗೆ ಅಣುತ್ವವೂ ಕೂಡ ಸಂಭವಿಸುತ್ತದೆಂದೂ, ಹಾಗೆ ಅಣುರೂಪನಾಗಿ ಜೀವನೊಡನೆ ಪ್ರವೇಶಮಾಡಿದರೂ ಆಕಾಶಗತನಾದ ಸೂರ್ಯನಿಗೆ ಜಲದ ಯಾವ ಕ್ರಿಯಾಗುಣಗಳೂ ಸಂಬಂಧಿಸದೇ ಇರುವಂತೆ ಶರೀರಗಳ ಯಾವ ಗುಣದೋಷಗಳೂ ಪರಮಾತ್ಮನಿಗೆ ಸಂಬಂಧಿಸುವದಿಲ್ಲವೆನ್ನುವಲ್ಲಿ ಸೂರ್ಯಾದಿಗಳ ದೃಷ್ಟಾಂತವೇ ಹೊರತು ಪರಮೇಶ್ವರ ಜೀವರುಗಳಿಗೆ ಬಿಂಬ ಪ್ರತಿಬಿಂಬಭಾವವಿರುವದರಿಂದ ಜೀವಭಾವವು ಸ್ವಾಭಾವಿಕವಲ್ಲವೆಂಬುವಲ್ಲಿ ದೃಷ್ಟಾಂತವಲ್ಲವಾದ್ದರಿಂದಲೇ ಮುಂದಿನ ,,ಬಿಂಬವದ ಗ್ರಹಣಾತ್ತುನತಥಾತ್ವಂ'' ಎಂಬುವ ಸೂತ್ರವು ಜಲ ಸೂರ್ಯ ಪದಾರ್ಥಗಳು ಮೂರ್ತದ್ರವ್ಯಗಳಾದ್ದರಿಂದಲೂ, ರೂಪಸಹಿತಗಳಾದ್ದರಿಂದಲೂ, ಅವುಗಳಿಗೆ ಬಿಂಬ ಪ್ರತಿಬಿಂಬ ಭಾವವನ್ನು ಹೇಳಬಹುದು. ಸೂರ್ಯನಂತೆ ಪರಮಾತ್ಮನು ಮೂರ್ತದ್ರವ್ಯನೂ ರೂಪಸಹಿತನೂ ಆಗದಿರುವದರಿಂದ ಪರಮಾತ್ಮನ ಪ್ರತಿಬಿಂಬವನ್ನು ಹೇಳಕೂಡದು ಎಂಬುವ ಅಭಿಪ್ರಾಯವನ್ನು ಕೊಡುತ್ತದೆ. ಹಾಗಾದರೆ ಆ ದೃಷ್ಟಾಂತವೇ ಅಸಂಗತವೇನು ಅಂದರೆ ಶ್ಲೋ|| ಯುಕ್ತಏವಹಿದೃಷ್ಟಾಂತಃ ಪ್ರಕೃತಾಂಶೋಪವರ್ಣನಾತ್ | ತದ್ವೃದ್ಧಿಹ್ರಾಸಭಾಕ್ತ್ವಂಹಿ ಏಂದ್ಯಾಜ್ಜಲಗತಂಹಿತತ್|| ಸೂರ್ಯಸ್ಯ ಪ್ರತಿಬಿಂಬಂ ಹಿ ಜಲವೃದ್ಧೌ ಪ್ರವರ್ಧತೆ | ಹ್ರಸತೀವ ತಥಾಹ್ರಾಸೆ ಚಲನೇಚಲತೀವಚ || ಭೇದೇಚಭಿದ್ಯತ ಇವನಹ್ಯೇವಂ ಪರಮಾರ್ಥತಃ | ತದ್ವೈಕಮೇವಹಿ ಬ್ರಹ್ಮದೇಹಾಂತರ್ಭಾವತಃ ಸ್ವಯಂ | ತದ್ಧರ್ಮಾನ್ನಹತೀವಾಪಿ ವೃದ್ಧಿಹ್ರಾಸಾದಿಕಂತಥಾ || ದೃಷಾಂತದ್ರಾಷ್ಟಾಂತಿಕಯೋರವಿರೋಧಾತ್ಸ

ಮಂಜಸಂ | ಎಂದು ಕಾಶಿಕಾಕಾರರು ಕಿಂಚಿದಂಶದಲ್ಲಿ ಸೂರ್ಯಾದಿಗಳ ದೃಷ್ಟಾಂತವೆಂದು ಹೇಳಿರುವರು. ಆದ್ದರಿಂದ ಮೇಲಿನ ಶ್ರುತಿ ಸೂತ್ರಗಳಿಂದ ಈಶ್ವರ ಜೀವರುಗಳಿಗೆ ಬಿಂಬ ಪ್ರತಿಬಿಂಬ ಭಾವದಿಂದ ಭೇದವೆಂದು ಸಿದ್ಧವಾಗಲಿಲ್ಲವಾದ್ದರಿಂದ ಭೇದವು ಪಾರಮಾರ್ಥಿಕವೇ (ಸ್ವಾಭಾವಿಕವೇ) ಆಗಿರುವದರಿಂದ ಜೀವನು ಪ್ರತಿಬಿಂಬನಲ್ಲ. ಆದರೆ ಪರಶಿವಲಿಂಗದ ಅಂಶರೂಪನೆಂದು ಹೇಳಬೇಕು. ಜೀವನು ಲಿಂಗಾಂಶನೆಂಬುವ ವಿಷಯದಲ್ಲಿ ''ಯುಜೇವಾಂ ಬ್ರಹ್ಮ ಪೂರ್ವ್ಯಂ ನವೋಭಿರ್ವಿಶ್ಲೋಕಾಯಂತಿ ಪಥ್ಯೇವ ಸೂರಾಃ ಶೃಣ್ವಂತಿ ವಿಶ್ವೇ ಅಮೃತಸ್ಯ ಪುತ್ರಾ ಆಯೇಧಾಮಾನಿದಿವ್ಯಾನಿ ತಸ್ಥುಃ'' ಎಂಬುವ ಕರ್ಮಕಾಂಡದಲ್ಲಿ ಹೇಳಿರುವ ಯಜುರ್ವೇದದ ಚತುರ್ಥಕಾಂಡದ ಪ್ರಥಮಾನುವಾಕದ ವಾಕ್ಯವು ಕೂಡ ಪ್ರಮಾಣವಾಗಿದೆ. ಈ ಮಂತ್ರಾರ್ಥವು ಕಾರಿಕಾಕಾರರಿಂದ ಹೇಳಲ್ಪಟ್ಟಿರುವುದು ಹೇಗಂದರೆ, ವಾಂ ಲಿಂಗ ಪೀಠಗಳ (ಶಿವಶಕ್ತಿಯರ) ಯುಜೇ ಯೋಗದಿಂದ ಇಲ್ಲಿ ತೃತೀಯಾರ್ಥದಲ್ಲಿ ಚತುರ್ಥಿಯಾಗಿರುವದು. ಅರ್ಥಾತ್ ಶಿವಶಕ್ತ್ಯಾತ್ಮಕವಾದ ಲಿಂಗದ ಧಾರಣೆಯಿಂದ ಬ್ರಹ್ಮಲಿಂಗತತ್ವವು ಪೂರ್ವ್ಯಂ ಪೂರಣವಾಗುವದು. ಈ ಸಾಮರಸ್ಯರೂಪವಾದ ಲಿಂಗತತ್ವವು ಪಂಚಾಚಾರಾಷ್ಟಾವರಣಗಳೆಂಬ ಸಾಧನಗಳಿಂದ ಪೂರ್ಣಸ್ವರೂಪವನ್ನು ಹೊಂದುವದು. ಪಂಚಾಚಾರಾಷ್ಟಾವರಣರೂಪಗಳಾದ ಸಾಧನಗಳಲ್ಲಿ ಯಾವದಾದರೊಂದು ಸಾಧನವು ವಿಚ್ಛೇದವಾದರೂ ಗುರುವಿನಿಂದ ಅಂಕುರಿಸಲ್ಪಟ್ಟ ಸಾಮರಸ್ಯವು ವಿಚ್ಛೇದವಾಗುವದು. ಈ ಸಾಮರಸ್ಯವು ವಿಚ್ಛಿನ್ನವಾಗಲು ಅಧಃಪತನವು ಆಗಮಗಳಲ್ಲಿ ಹೇಳಲ್ಪಟ್ಟಿರುವದು. ಆದ್ದರಿಂದ ಪೄ ಪಾಲನ ಪೂರಣಯೋಃ | ಪಾಲನ ಪೂರಣಾರ್ಥಕವಾದ ಪೄಧಾತುವಿನಿಂದ ಪೂರ್ವ್ಯಂ ಎಂದು ಆಗಿರುವದರಿಂದ ಪಂಚಾಚಾರಾಷ್ಟಾವರಣಗಳಿಂದ ಅಂಕುರಿತವಾದ ಸಾಮರಸ್ಯರೂಪವಾದ ಲಿಂಗತತ್ವವು ಪಾಲನಯೋಗ್ಯವೂ ಪೂರಣವೂ ಆಗಿರುವದು. ಇದೇ ವಿಷಯವನ್ನೇ ಮುಂದಿನ ಪದಗಳಿಂದ ಮಂತ್ರವು ಹೇಳುತ್ತದೆ. ಸೂರಾಃ ಸೂರಿಗಳು (ಲಿಂಗತತ್ವಾಂಗತತ್ವಗಳ ಜ್ಞಾನವುಳ್ಳವರು) ಅಥವಾ ಶ್ಲೋ|| ಸೂರಸೂರ್ಯಾರ್ಯಮಾದಿತ್ಯದ್ವಾದಶಾತ್ಮದಿವಾಕರಾಃ | ಎಂಬುವ ಅಮರಕೋಶದಂತೆ ಸೂರಾಃ ಆದಿತ್ಯರು ಪ್ರತಿಯೊಂದು ಕಲ್ಪದಲ್ಲಿಯೂ ಸೂರ್ಯನು ಭಿನ್ನನಾದುದರಿಂದ ಬಹುವಚನವು ಪಥ್ಯೇವ ಲಿಂಗಾಂಗ ಸಾಮರಸ್ಯಕ್ಕೆ ಅನುಕೂಲಗಳಾದ ಪಂಚಾಚಾರಾಷ್ಟಾವರಣಗಳ ಮಾರ್ಗದಲ್ಲಿಯೇ ನವೋಭಿಃ ನಮಸ್ಕಾರಗಳಿಂದ, ನಮ

ಸ್ಕಾರವು ಪೂಜೆಯ ಅಂಗವಾಗಿರುವದರಿಂದ ನಮಸ್ಕಾರ ಸಹಿತವಾದ ಪೂಜೆಯಿಂದ) ಅವಹಿತ ಚಿತ್ತರಾಗಿ, ವಿಶ್ಲೋಕಾಯಂತಿ ಅತ್ಯಂತವಾಗಿ ಶ್ಲಾಘಿಸಲು ಯೋಗ್ಯರಾಗುತ್ತಾರೆ. ಅಂದರೆ ಇತರರಿಗೆ ದುರ್ಲಭವಾದ ಚಿಚ್ಛಕ್ತಿ ವಿಶಿಷ್ಟ ಲಿಂಗತತ್ವದ ಸಾಮರಸ್ಯವನ್ನು ಹೊಂದುವರು. ಶೃಣ್ವಂತಿ ಕೇಳುತ್ತಾರೆ. (ಶಿವಶಕ್ತಿರೂಪವಾದ ಪಂಚಾಕ್ಷರ ಮಂತ್ರವನ್ನು ಗುರುಮುಖದಿಂದ ಕೇಳಿ ಜಪಿಸುತ್ತಾರೆ). ಇಂಥ ವಿಶ್ವೇ ಎಲ್ಲಾ ಆದಿತ್ಯರು (ಶಿವನು ವಿಶ್ವೇಶ್ವರನಾದ್ದರಿಂದ ವಿಶ್ವಾಂತಃ ಪಾತಿಗಳಾದ ಸಮಸ್ತ ಸೂರ್ಯರೆಂದರ್ಥವು) ಅಮೃತಸ್ಯ ಲಿಂಗದ ಪುತ್ರಾಃ ಲಿಂಗಾಂಶಭೂತರಾದ ಸೂರ್ಯರು ಪ್ರಜ್ವಲಿಸುವ ಕಾಡುಗಿಚ್ಚಿನಿಂದ ಹೊರಟ ವಿಸ್ಫುಲಿಂಗಗಳು ಆ ಮಹಾ ದಾವಾಗ್ನಿಗೆ ಭಿನ್ನಾಭಿನ್ನಾಂಶಭೂತಗಳಾಗಿರುವಂತೆ ಮೇಲೆಹೇಳಿದ ಸಾಧನ ಸಂಪನ್ನರಾದ ಶಿವಲಿಂಗ ತತ್ವಾಂಶರಾದ ಯೇ ಯಾವ ಆದಿತ್ಯರು ದಿವ್ಯಾನಿ ಆನಂದಯೋಗ್ಯಗಳಾದ ಅಥವಾ ಸ್ತುತ್ಯಗಳಾದ ಧಾಮಾನಿ ತೇಜಸ್ಸುಗಳನ್ನು ವಿಸ್ಫುಲಿಂಗಗಳ ಸಮೂಹ ರೂಪವಾದ ದಾವಾಗ್ನಿಯ ಜ್ವಾಲೆಗಳಂತೆ ಅನೇಕ ಜೀವರಾಶಿಗಳಿಗೆ ಮಹಾ ಪ್ರಕಾಶರೂಪವಾದ ಲಿಂಗತತ್ವವು ಆಧಾರವಾಗಿರುವದರಿಂದ ಆಧೇಯರಾದ ಜೀವರುಗಳಲ್ಲಿರುವ ಬಹುತ್ವದಿಂದ ಆಧಾರವಾದ ಧಾಮಶಬ್ದದಿಂದ ಹೇಳಲ್ಪಟ್ಟ ಲಿಂಗತತ್ವಕ್ಕೆ ಬಹುತ್ವವು ಧಾಮಾನಿ ಎಂಬುವ ಬಹುವಚನದಿಂದ ಹೇಳಲ್ಪಟ್ಟಿತು. ಧಾಮಾನಿ ಲಿಂಗತತ್ವೆ ಲಿಂಗತತ್ವದಲ್ಲಿ ವಚನ ವ್ಯತ್ಯಾಸವು ಛಾಂದಸವು ಆತಸ್ಥುಃ ಇದ್ದರು (ಮುಕ್ತಿಯನ್ನು ಹೊಂದಿದರು) ಅಂದರೆ ವೇದಗಳಿಗೆ ಅನುಕೂಲಗಳಾದ ಶಿವಾಗಮಗಳಲ್ಲಿ ಹೇಳಲ್ಪಟ್ಟ ಶಿವದೀಕ್ಷಾ ಪೂರ್ವಕವಾಗಿ ಲಿಂಗಧಾರಣೆಯನ್ನು ಮಾಡಿಕೊಂಡು ಆದಿತ್ಯರು ತಮ್ಮಿಂದ ಧರಿಸಲ್ಪಟ್ಟ ಲಿಂಗಪೂಜೆಗಳಿಂದಲೂ, ಪಂಚಾಚಾರ ಅಷ್ಟಾವರಣಗಳ ಆಚರಣೆಯಿಂದ ಲಿಂಗಾಂಗ ಸಾಮರಸ್ಯಾಂಕುರವನ್ನು ವೃದ್ಧಿಗೊಳಿಸಿ ಪಂಚಾಕ್ಷರ ಮಂತ್ರಜಪದಲ್ಲಿ ಸಮರ್ಥರಾಗಿ ಸರ್ವಶ್ರೇಷ್ಠರೆನಿಸಿ ಪರಶಿವಲಿಂಗದ ಸಾಮರಸ್ಯದಿಂದ ಅಮೃತತ್ವವನ್ನು ಹೊಂದಿದರು. ಎಂಬುವ ಅರ್ಥವು ಪರ್ಯಪಸಿತವಾಯಿತು. ನೋಡು. ಬ್ರಹ್ಮಾದ್ವೈತಿಯೇ ? ಅಮೃತಸ್ಯ ಪುತ್ರಾಃ । ಎಂಬುವದರಿಂದ ಜೀವರು ಶಿವಾಂಶರೆಂದು ಸ್ಪಷ್ಟವಾಗಿ ಹೇಳಿದಂತಾಯಿತಲ್ಲವೆ? ಈ ಮಂತ್ರವು ಕರ್ಮಕಾಂಡೋಕ್ತವಾದುದರಿಂದ ಬ್ರಹ್ಮಕಾಂಡೋಕ್ತವಾದ ಅರ್ಥಕ್ಕೆ ಪ್ರತಿಪಾದಕವಾಗಲಾರದೆಂದು ಶಂಕೆಯುಂ ಮಾಡಕೂಡದು. ಯಾಕಂದರೆ ಸಕಲ ಕರ್ಮಕಾಂಡಕ್ಕೆ ಪ್ರಾಥಮಿಕವಾದ ಪ್ರಣವಕ್ಕೆ ಸಮಸ್ತ ಪಶುಕರ್ಮಗಳ

ಆರಂಭದಲ್ಲಿ ಉಚ್ಚಾರಣೆಯೂ, ಮತ್ತು ಆ ಪಶುಕರ್ಮಗಳಲ್ಲಿ ಅಧಿಕಾರ ಸಂಪಾದಕವಾದ ಉಪನಯನ ಕಾಲದಲ್ಲಿ ಮುಖ್ಯವಾಗಿ ಉಪದಿಷ್ಟವಾಗುವ ಗಾಯತ್ರೀ ಮಂತ್ರದ ಅಧ್ಯಯನವಿಲ್ಲದಿರುವದರಿಂದ ಬ್ರಾಹ್ಮಣ್ಯವಿಲ್ಲದವನಾದರೂ ಅವನಿಗೆ ಮೊದಲು ಉಪದಿಷ್ಟವಾಗುವ ಪ್ರಣವವು ಕರ್ಮಕಾಂಡ ವಿಹಿತವಾಗಿದ್ದರೂ ಸಕಲ ಕರ್ಮಗಳ ಪರಿತ್ಯಾಗಮಾಡಿದ ಈಷಣತ್ರಯವನ್ನು ತುಚ್ಛೀಕರಿಸಿದ ಯತಿಯ ಪರಮಪುರುಷಾರ್ಥಕ್ಕೆ ನಿರ್ವಾಹಕವಾಗಿರುವದು. ಆದ್ದರಿಂದ ಕರ್ಮಕಾಂಡ ವಿಹಿತವಾದದ್ದು ಬ್ರಹ್ಮಕಾಂಡೋಕ್ತವಾದ ಅರ್ಥಕ್ಕೆ ಪ್ರತಿಪಾದಕವಾಗುವದೆಂಬುವದು ಸರ್ವಜನರಿಂದ ಸ್ವೀಕರಿಸಲ್ಪಡತಕ್ಕದೇ ಆಗಿರುವದಲ್ಲವೆ? ಶಿವಾದ್ವೈತಿಯೇ? ಆದಿತ್ಯರು ಶಿವಲಿಂಗಧಾರಣೆಯಿಂದ ಮುಕ್ತರಾದರೆಂದೂ ಅವರು ಪ್ರತಿಬಿಂಬಸ್ವರೂಪರಲ್ಲವೆಂದೂ, ಅಂಶರೂಪರೆಂದೂ ಈ ಮಂತ್ರದಿಂದ ಹೇಳುವಿಯಲ್ಲವೆ? ಬ್ರಹ್ಮಾದ್ವೈತಿಯೇ? ಹಾಗೆಯೇ ಹೇಳುವೆನು. ಲಿಂಗಪುರಾಣವೂ ಕೂಡ ಬ್ರಹ್ಮ ವಿಷ್ಣು ಮೊದಲಾದ ಸಮಸ್ತ ದೇವತೆಗಳೂ ಲಿಂಗಧಾರಣೆಯಿಂದಲೇ ಮುಕ್ತರಾದರೆಂದು ಹೇಳುವದು. ಶ್ಲೋ॥ ಲಿಂಗಸ್ಯಧಾರಣಾದೇವ ಪಶುತ್ವಂ ವಿನಿವಾರ್ಯತೆ। ನಾನ್ಯಥಾ ಬಹುಯತ್ನೇನ ಜನ್ಮಕೋಟಿಶತೈರಪಿ॥ ಯೇ ಲಿಂಗಧಾರಿಣೋ ಲೋಕೆ ತೇ ಭಕ್ತಾ ಇತಿಕೀರ್ತಿತಾಃ। ತದನ್ಯಾಃ ಪಶವಃ ಪ್ರೋಕ್ತಾಸ್ತಸ್ಮಾತ್ಪಾಶುಪತಂ ಚರೇತ್॥ ಬ್ರಹ್ಮ ವಿಷ್ಣ್ವಾದಿ ದೇವಾಶ್ಚ ಮುನಯೋ ಗೌತಮಾದಯಃ। ಲಿಂಗಸ್ಯ ಧಾರಣಾದೇವ ಪಶುತ್ವ ವಿನಿವಾರಿತಾಃ॥ ಅಂದರೆ, ಲಿಂಗಧಾರಣೆಯಿಂದಲೇ ಪಶುತ್ವವು ನಿವೃತ್ತವಾಗುವದು. ಬೇರೆ ಯಾವ ಪ್ರಯತ್ನದಿಂದ ಎಷ್ಟೋ ಜನ್ಮಗಳನ್ನು ಕಳೆದರೂ ನಿವೃತ್ತವಾಗುವದಿಲ್ಲ. ಲೋಕದಲ್ಲಿ ಯಾರು ಲಿಂಗಧಾರಿಗಳೋ ಅವರೇ ಭಕ್ತರು. ಇತರರು ಪಶುಗಳು. ಆದುದರಿಂದ ಲಿಂಗಧಾರಣ ರೂಪವಾದ ಪಾಶುಪತ ವ್ರತವನ್ನಾಚರಿಸಬೇಕು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ, ಗೌತಮಾದಿ ಮುನಿಗಳೂ, ಲಿಂಗಧಾರಣೆಯಿಂದಲೇ ಪಶುತ್ವವನ್ನು ಕಳೆದುಕೊಂಡು ಮುಕ್ತರಾದರು. ಶಿವಾದ್ವೈತಿಯೇ? ಲಿಂಗಧಾರಿಗಳಾದ ವೀರಶೈವರೂ ಲಿಂಗಧಾರಣವಿಲ್ಲದ ಶೈವಪಾಶುಪತರಿಗೂ, ಶೈವಾಃ ಪಾಶಪತಾಂ ಶ್ಚೈವ ಲಿಂಗಿನೊ ವ್ರತಿನಸ್ತಥಾ। ಜಟಿಲಾನ್ಮುಂಡಿನಶ್ಚೈವ ಪಾಷಂಡಾನ್ ಪರಿವರ್ಜಯೇತ್॥ ಎಂಬುವ ವಾಕ್ಯದಿಂದ ಪಾಷಂಡಿಗಳೆಂದು ಹೇಳಲ್ಪಡುವದರಿಂದ ಲಿಂಗಧಾರಣವು ನಿಷಿದ್ಧವಾಗಿರುವಲ್ಲಿ ಮೇಲಿನ ಮಂತ್ರಕ್ಕೆ ಲಿಂಗಧಾರಣಪರವಾದ ಅರ್ಥವನ್ನು ಮಾಡಬಹುದೆ!

ಬ್ರಹ್ಮಾದ್ವೈತಿಯೇ ? ಇಂತಹ ರಾಗದ್ವೇಷ ಮೂಲಕವಾದ ಕಲ್ಪಿತವಾಕ್ಯವನ್ನು ನೀನು ಉಚ್ಚರಿಸಲೂಬಾರದು, ನಾನು ಅದನ್ನು ಕೇಳಲೂ ಬಾರದು. ಅನೇಕ ಶ್ರುತಿ ಸ್ಮೃತಿ ಪುರಾಣಾಗಮಗಳಲ್ಲಿ ಉದ್ಘೋಷಿಸಲ್ಪಡುವ ಲಿಂಗಧಾರಣಕ್ಕೆ ನಿಷಿದ್ಧಕರ್ಮವೆನ್ನಬಹುದೆ? ಮತ್ತು ಪರಮ ಪವಿತ್ರರಾದ ವೀರಶೈವಶಿಷ್ಟರಿಗೆ ಪಾಖಂಡಿಗಳೆಂದೆನ್ನಬಹುದೆ? ಇಂತಹ ಸತ್ಪುರುಷರಿಗೆ ಪಾಖಂಡಿಗಳೆಂದು ನಿಂದಿಸುವವರೆ ಪಾಖಂಡಿಗಳಲ್ಲವೆ? ದೇವತೆ ಯೊಂದರಲ್ಲಿಯೇ ಪ್ರೀತಿ ಇಲ್ಲದವರು ಪತಿವ್ರತೆಯರಂತೆ ಆಗಬಹುದೆ? ಸೌರಮತದವರು ಸೂರ್ಯನೊಬ್ಬನನ್ನೆ ಶಾಕ್ತರು ಶಕ್ತಿಯೊಂದನ್ನೆ ವೈಷ್ಣವರು ವಿಷ್ಣುದೇವತೆ ಯೊಂದನ್ನೇ ಗಾಣಪತರು ಗಣಪತಿಯೊಬ್ಬನನ್ನೇ ಶೈವರು ಶಿವನೊಬ್ಬನನ್ನೇ ದೇವರನ್ನಾಗಿ ತಿಳಿದು ಉಪಾಸನೆ ಮಾಡುವರು ಐದು ದೇವತೆಗಳನ್ನು ಉಪಾಸನೆಮಾಡುವದು ಸರ್ವಮತ ಭ್ರಷ್ಟತೆಯಲ್ಲವೆ? ಆದ್ದರಿಂದಲೇ ಶ್ರೀಕರಭಾಷ್ಯದಲ್ಲಿ ಶ್ಲೋ|| ಸ್ಮಾರ್ತಾನ್ ಸರ್ವಮತ ಭ್ರಷ್ಟಾನ್ ಜಗನ್ಮಿಥ್ಯಾತ್ವಸಾಧಕಾನ್ | ಗಣಿಕಾ ಮಾರ್ಗಸಂಚಾರಾನ್ ಪಾಷಂಡಾನ್ ಪರಿವರ್ಜಯೇತ್ || ದಧೀಚಿ ಗೌತಮ ವ್ಯಾಸ ದೂರ್ವಾಸಾದಿ ಮಹರ್ಷಿಭಿಃ | ಶಪ್ತಾನ್ ಶೈವೈಕವಿದ್ವೇಷಾನ್ ಪಾಷಂಡಾನ್ ಪರಿವರ್ಜಯೇತ್ || ಎಂದು ಪುರಾತನ ವಾಕ್ಯಗಳು ಉದಾಹರಿಸಲ್ಪಟ್ಟಿರುವವು. "ಶಿವಏಕೊ ಧ್ಯೇಯಃ ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ" ಇತ್ಯಾದ್ಯನೇಕ ಶ್ರುತಿಗಳಿಗೆ ವಿರುದ್ಧವಾದ ಪಂಚದೇವತಾ ಪೂಜೋಪಾಸನೆಯುಳ್ಳವರು ಕೇವಲ ಸ್ಮಾರ್ತರೆಂತಲೂ, ಜಗನ್ಮಿಥ್ಯಾತ್ವ ಸಾಧಕರೆಂತಲೂ, "ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವನಾಪರಃ" ಎಂದು ಹೇಳುವದರಿಂದ ಜಗತ್ತಿನಲ್ಲಿ ಅಸತ್ಯತ್ವವಾದಿಗಳೆಂದೂ ಗಣಿಕೆಯರ ನಡತೆಯಂತೆ ನಡತೆಯುಳ್ಳವರೆಂತಲೂ ಶಿವೈಕೋಪಾಸನೆಯನ್ನು ವಿಧಿಸುವ ವಾಕ್ಯಗಳಿಗೂ ಶಿವಜೀವರುಗಳಿಗೆ ಸ್ವಾಭಾವಿಕ ಭೇದವನ್ನು ಹೇಳುವ ಶ್ರುತಿ ವಾಕ್ಯಗಳಿಗೂ ಯಥಾರ್ಥವನ್ನು ಮಾನಿಸದಿರುವದರಿಂದ ಪಾಖಂಡಿಗಳೆಂದೂ ಯಾರುಂಟೊ ಅವರನ್ನು ಬಿಡತಕ್ಕದ್ದು. ಮತ್ತು ದಧೀಚಿ ಗೌತಮ ವ್ಯಾಸ ದುರ್ವಾಸ ಪ್ರಭೃತಿ ಋಷಿಗಳಿಂದ ಶಪಿಸಲ್ಪಟ್ಟವರೂ ಶಿವಭಕ್ತರಲ್ಲಿ ಮುಖ್ಯವಾಗಿ ದ್ವೇಷವುಳ್ಳವರೂ ಆದವರನ್ನು ಬಿಡಬೇಕು ಎಂಬುವ ವಾಕ್ಯಗಳೂ ಇರುವವು ಆದರೆ ತನಗೆ ಸದ್ಗತಿಯೆನ್ನುಂಟುಮಾಡುವ ವಾಕ್ಯಾರ್ಥವನ್ನು ವಿಚಾರಿಸಬೇಕು. ಮೇಲೆ ಹೇಳಿದ "ಅಮೃತಸ್ಯ ಪುತ್ರಾಃ" ಎಂಬುವ ಶ್ರುತಿವಾಕ್ಯದಂತೆ ಎಲ್ಲರೂ ಶಿವಾಂಶರೆ; ಮಹಾದೇವನ ಮಕ್ಕಳೇ ಆಗಿರುವರು. ಒಬ್ಬರನ್ನೊಬ್ಬರು ನಿಂದಿ

ಸಬಾರದು. ತಪ್ಪು ತಿಳಿವಳಿಕೆಯಿಂದ ವೇದವಿರುದ್ಧವಾದ ಕರ್ಮವನ್ನಾಚರಿಸುವವನು ಸನ್ಮಾರ್ಗವನ್ನವಲಂಬಿಸಲಿ ಎಂಬುದ್ದೇಶದಿಂದ ಯಥಾರ್ಥವನ್ನು ಹೇಳಬೇಕು. ನೋಡು ಯಾವ ಶ್ರುತಿವಾಕ್ಯದಿಂದಲೂ ವಿಹಿತವಾಗದಿದ್ದ ಪಮುಷ್ಟ್ಯುಪಾಸನವನ್ನು ಆಚರಿಸುವದರಿಂದಲೂ, „ಶಿವಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" „ಏಕಏವರುದ್ರೋನದ್ವಿತೀಯಾಯತಸ್ಥೆ" „ತ್ರಿಯಂಬಕಂಯಜಾಮಹೆ" „ಶಿವೋಭೂತ್ವಾ ಶಿವಂಯಜೇತ್" ಇವೇ ಮೊದಲಾದ ಅನೇಕ ಶ್ರುತಿವಾಕ್ಯಗಳಿಂದ ವಿಹಿತವಾದ ಶಿವೈಕೋಪಾಸನೆಯನ್ನು ಆಚರಿಸದೆ ಇರುವದರಿಂದಲೂ, ಯಾರು ಪಾಖಂಡಿಗಳೋ ಅವರು ಅನ್ಯರಿಗೆ (ಶೈವರಿಗೂ ಪಾಶುಪತರಿಗೂ ಪರಮ ಪವಿತ್ರರಾದ ಲಿಂಗಿಗಳು ಮೊದಲಾದವರಿಗೆ) ಪಾಖಂಡಿಗಳೆಂದೂ, ಅವರನ್ನು ಹತ್ತರಕ್ಕೆ ಶೇರಿಸದೆ ಬಿಟ್ಟುಬಿಡಬೇಕೆಂದೂ ಅನ್ನುವದು ಜಗತ್ತಿಗೇನೇ ಸುಳ್ಳೆನ್ನುವ ಅವರಿಗೆ ಅಲ್ಪವೇ ಸರಿ. ಶಿವಾದ್ವೈತಿಯೇ ನೀನು ಯಾವ ಶಿವನೊಬ್ಬನನ್ನೇ ಪೂಜಿಸಬೇಕೆಂದು ಹೇಳುವಿಯೋ ಆದಿತ್ಯನು ಆ ಶಿವನ ನೇತ್ರವಾಗಿಲ್ಲವೆ? ಅಂಬಿಕೆಯು ಆ ಶಿವನ ಪತ್ನಿಯಲ್ಲವೆ? ಗಣಪತಿಯು ಆ ಶಿವನ ಪುತ್ರನಲ್ಲವೆ? ವಿಷ್ಣುವು ಆ ಶಿವನ ಭಕ್ತನಲ್ಲವೆ? ಮಹೇಶ್ವರನ ಪೂಜೆಯಂತೂ ನಿನಗೂ ಸಮ್ಮತವೇ ಆಗಿರುವದು. ಆದ್ದರಿಂದ ಆದಿತ್ಯನನ್ನು ಪೂಜಿಸುವ ಸೌರಮತದವರೂ, ಅಂಬಿಕೆಯನ್ನು ಪೂಜಿಸುವ ಶಾಕ್ತರೂ, ವಿಷ್ಣುದೇವರನ್ನು ಪೂಜಿಸುವ ವೈಷ್ಣವರೂ, ಗಣನಾಥನನ್ನು ಪೂಜಿಸುವ ಶಾಕ್ತರೂ, ವಿಷ್ಣುದೇವರನ್ನು ಪೂಜಿಸುವ ವೈಷ್ಣವರೂ, ಗಣನಾಥನನ್ನು ಪೂಜಿಸುವ ಗಾಣಪತ ಮತದವರೂ ಶೈವಮತಾಂತರ್ಭೂತರೇ ಆಗಿರುವರು. ಮತ್ತು ಆ ಪಂಚದೇವತೆಗಳನ್ನು ಒಟ್ಟುಕೂಡಿಸಿ ಪೂಜಿಸುವವರೂ ಕೂಡ ಶೈವರೇ ಆಗಿರುವಲ್ಲಿ ಅವರ ಮತವಂ ನಿರಸನಮಾಡುವದು ಶೈವರಿಗೆ ಯುಕ್ತವಾಗಬಹುದೆ? ಬ್ರಹ್ಮಾದ್ವೈತಿಯೆ! ನಿನ್ನ ಮಾತು ಶಿಜವು. ಶ್ಲೋ || ಸೂರ್ಯೋವುುಖ್ಯಶರೀರಂಸ್ಯಾಚ್ಛಿವಸ್ಯ ಪರಮಾತ್ಮನಃ | ಆದಿತ್ಯಹೃದಯೆ ರುದ್ರೋಭಾತಿ ತಸ್ಯನಿಯಾಮಕಃ | ಸೌರಮಂಡಲಮಧ್ಯಸ್ಥಂ ಸಾಂಬಂ ಸಂಸಾರಭೇಷಜಂ || ವಂದೇಸೂರ್ಯಶಶಾಂಕವಹ್ನಿನಯನಂ ವಂದೇಮುಕುಂದಪ್ರಿಯಂ| ಎಂಬ ಸ್ಕಾಂದ ಲೈಂಗ್ಯಾದಿ ವಾಕ್ಯಗಳಿಂದ ಆದಿತ್ಯನು ಶಿವನ ದೇಹರೂಪನೆಂದೂ, ಶಿವನ ನೇತ್ರವೆಂದೂ ತಿಳಿದುಬರುವಕಾರಣ ಸೂರ್ಯೋಪಾಸಕರಾದ ಸೌರರು ಶೈವರೇ ಆಗಿರುವರು. ಅಂಬಿಕೆಯು ಶಿವಪತ್ನಿಯೆಂಬುವದು ಲೋಕಪ್ರಸಿದ್ಧವೇ ಇರುವದು. ಆದ್ದರಿಂದ ದೇವಿಯನ್ನು

ಪೂಜಿಸುವವರೂ ಶೈವಮತಾಂತರ್ಭೂತರೆ ಆಗಿರುವರು. ಇದರಂತೆ ಗಾಣಪಾತರೂ ವೈಷ್ಣವರೂ ಶೈವಮತಾಂತರ್ಗತರೇ ಆಗುವರು. ವಿಷ್ಣುವು ಶಿವಭಕ್ತನೆಂಬುವ ವಿಷಯದಲ್ಲಿ, ಗೋಪಾಲಕಃ ಶಿರಸಿ ಲಿಂಗಮುವಾಹಭಕ್ತ್ಯಾ | ಉರಸ್ಥಲೆ ಹರಿರ್ಲಿಂಗಂಧೃತ್ವಾ ಮೂರ್ಧ್ನಿ ಪಿತಾಮಹಃ | ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂ ಸ್ವಂ ಪದಮವಾಪತುಃ || ಇಂತೆಂಬುವ ಶ್ರೀಕರಭಾಷ್ಯಕಾರಾದ್ಧೃತ ಶೈವಪುರಾಣ ಶಂಕರಸಂಹಿತೆಗಳ ಶ್ಲೋಕಗಳು ಪ್ರಮಾಣಗಳಾಗಿವೆಯುಲ್ಲದೆ ಪಾಂಡುರಂಗ ವೊದಲಾದ ವಿಷ್ಣು ವಿಗ್ರಹಗಳ ಮಸ್ತಕದಲ್ಲಿರುವ ಲಿಂಗಧಾರಣೆಯೂ ಕೂಡ ಪ್ರತ್ಯಕ್ಷ ಪ್ರಮಾಣವಾಗಿದೆ. ಇದಲ್ಲದೆ ವೀರಾಗಮದಲ್ಲಿ ದಶವಿಧಶೈವರನ್ನು ಹೇಳುವ ಸಂದರ್ಭದಲ್ಲಿ ವೈಷ್ಣವರಿಗೆ ಸಾಮಾನ್ಯ ಶೈವರೆಂದೂ, ಸೌರರಿಗೆ ಪೂರ್ವಶೈವರೆಂದೂ, ಪಂಚದೇವತಾ ಪೂಜಾವಿಧಾನವು ಮಿಶ್ರಶೈವವೆಂದೂ ಹೇಳಲ್ಪಟ್ಟಿದೆ.

ಶ್ಲೋ|| ಸಾಮಾನ್ಯಶೈವಂ ದೇವೇಶಿ ವೈಷ್ಣವಂ ಪರಿಕೀರ್ತಿತಂ | ಪೂರ್ವಶೈವಂ ಮಹಾದೇವಿ ಸೌರಂತು ಪರಿಕೀರ್ತಿತಂ | ಪಂಚಪೂಜಾವಿಧಾನಂತು ಮಿಶ್ರಶೈವಮಿತೀರ್ಯತೆ || ಎಂಬುವ ವೊದಲಾದ ವಚನಗಳಿಂದ ಪಂಚದೇವತೆಗಳನ್ನು ಬೇರೆ ಬೇರೆ ಉಪಾಸನೆ ಮಾಡುವವರೂ, ಕೂಡಿಸಿ ಉಪಾಸನೆ ಮಾಡುವವರೂ ಶೈವಮತಾಂತರ್ಭೂತರೇ ಆಗಿದ್ದರೂ ಸೌರವೈಷ್ಣವಾದಿಗಳಿಗೆ ಶಿವನೇ ಸರ್ವೋತ್ತಮನೆಂಬುವ ವಿಷಯದಲ್ಲಿ ನಿಷ್ಠೆಯಿಲ್ಲದಿರುವದರಿಂದಲೂ, ಶಿವನಿಗೆ ಜಗದುಭಯಕಾರಣತ್ವವನ್ನು ಮನ್ನಿಸದಿರುವದರಿಂದಲೂ, ಸಮಷ್ಟಿ ಪೂಜಾವಿಧಾಯಕ ಶ್ರುತಿವಾಕ್ಯಗಳಿಲ್ಲದ್ದರಿಂದಲೂ, ಶಿವಸರ್ವಗತ್ವ ನಿರಸನಸ್ಥಲಕ್ಕೆ ವಿರುದ್ಧವಾಗುವದರಿಂದಲೂ, ಸೌರಾದಿಮತ ನಿರಸನವನ್ನು ವೀರಶೈವನು ಸಮ್ಮತಿಸಲೇಬೇಕು. ಸೂರ್ಯನು ಶಿವನ ಪೃಥಿವ್ಯಾದಿ ಅಷ್ಟಮೂರ್ತಿಗಳಪೈಕಿ ಒಂದು ಮೂರ್ತಿಯಾಗಿದ್ದರೂ ಅವನ ಉಪಾಸನೆಯು ವೀರಶೈವನಿಗೆ ನಿಷಿದ್ಧವು. ಮತ್ತು ಅಷ್ಟಮೂರ್ತಿನಿರಸನಸ್ಥಲಕ್ಕೂ ವಿರುದ್ಧವು. ಅದಂತಿರಲಿ? ಸೌರಾದಿ ಮತವಿಚಾರಕ್ಕೆ ನಾನು ಹೊರಟಿಲ್ಲವು. ಮಿಶ್ರಶೈವನಾದ ನಿನ್ನ ಕೂಡ ಮಾತ್ರ ವಿಚಾರಮಾಡಬೇಕಾಗಿದೆ. ಆದ್ದರಿಂದ ಮಿಶ್ರಶೈವನಾದ ಎಲೊ ಬ್ರಹ್ಮಾದ್ವೈತಿಯೇ ‹‹ಯುಜೇವಾಂ ಬ್ರಹ್ಮ ಪೂರ್ವ್ಯಂ›› ಎಂಬುವ ಲಿಂಗಧಾರಣಪರವಾದ ಮಂತ್ರದಲ್ಲಿರುವ ‹‹ಅಮೃತಸ್ಯ ಪುತ್ರಾಃ›› ಎಂಬುವದರಿಂದ ಎಲ್ಲಾ ಜೀವಾತ್ಮರೂ ಅಥವಾ ಆದಿತ್ಯರೂ ಶಿವಾಂಶರೇ ಎಂದು ತೋರಿಸುವದಕ್ಕಾಗಿ ಆ ಮಂತ್ರಾರ್ಥವನ್ನು ತೋರಿಸಿದೆನು. ಅದರ ಮೇಲೆ ನೀನು ಲಿಂಗಿಗಳಿಗೆ ‹‹ಶೈವಾನ್ ಪಾಶುಪತಾಂಶ್ಚೈವ›› ಎಂಬುವ ನಿಂದಾ

ವಾಕ್ಯವನ್ನು ಹೇಳಿದಕಾರಣ ಇಷ್ಟು ವಿಚಾರ ಮಾಡಬೇಕಾಯಿತು. ಈ ನಿನ್ನ ಪಂಚದೇವತೆಗಳ ಉಪಾಸನೆಯು ಮೊದಲೇ ವಿಚಾರಿಸಲ್ಪಟ್ಟಿದೆ. ಆದ್ದರಿಂದ ಈ ಪ್ರಾಸಂಗಿಕ ವಿಚಾರವನ್ನು ನಿಲ್ಲಿಸಿ, ಪ್ರಾಕೃತ ವಿಷಯವನ್ನು ಅನುಸರಿಸು ವೆನು. ಪ್ರಕೃತ ವಿಷಯವೆಂದರೆ ಜೀವೇಶ್ವರ ವಿಷಯವಷ್ಟೆ. ಜೀವೇಶ್ವರರು ನಿನ್ನ ಮತದಲ್ಲಿ ಚಿದಾಭಾಸರೆಂದೂ, ನನ್ನ ಮತದಲ್ಲಿ ಚಿದಾಭಾಸರಲ್ಲವೆಂದೂ, ಅಂದರೆ ಚಿತ್ತಶಕ್ತಿವಿಶಿಷ್ಟನೇ ಜೀವನೆಂದೂ, ಚಿದ್ಬ್ರಹ್ಮದ ವಿಮರ್ಶ ಶಕ್ತಿವಿಶಿಷ್ಟನೇ ಈಶ್ವರನೆಂದೂ ಎರಡುಪಕ್ಷಗಳಿರುವವು ನಿನ್ನ ಮತದಲ್ಲಿ ಜೀವೇಶ್ವರರು ಪ್ರತಿ ಬಿಂಬಸ್ವರೂಪರಾದ್ದರಿಂದ ಪೂರ್ವೋಕ್ತಗಳಾದ ಅನೇಕ ದೋಷಗಳು ಬರುವವು. ಆದ್ದರಿಂದ ಪ್ರತಿಬಿಂಬವಾದವನ್ನು ಬಿಟ್ಟು ಶಕ್ತಿವಿಶಿಷ್ಟಾದ್ವೈತವಾದವನ್ನನುಸರಿ ಸುವದು ಉತ್ತಮವಲ್ಲವೇ.

ಎಲೈ ಶಿವಾದ್ವೈತಿಯೇ ನನ್ನ ಮತದಲ್ಲಿ ಜೀವಭಾವವು ಸ್ವಾಭಾವಿಕವಿದ್ದು. ಮೋಕ್ಷದಶೆಯಲ್ಲಿ ಅದರ ನಿವೃತ್ತಿಯನ್ನು ಮಾನಿಸುವದರಿಂದಲೂ, ಶಿವನಲ್ಲಿ ಜೀವ ನಿಗೆ ಲಯವನ್ನು ಹೇಳುವುದರಿಂದಲೂ, ಮತ್ತು ಸೃಷ್ಟ್ಯಾದಿಯಲ್ಲಿ ಜೀವರು ಶಿವನಲ್ಲಿ ಲೀನರಾಗಿದ್ದರೆಂದು ಹೇಳುವುದರಿಂದಲೂ, ಜೀವಭಾವವು ಸ್ವಾಭಾವಿಕ ವೆಂದು ಹೇಳುವುದು ಆಗ್ರಹವಲ್ಲವೇ ? ಸ್ವಾಭಾವಿಕವಾದದ್ದು ಎಲ್ಲಾ ಕಾಲಗಳಲ್ಲಿ ಒಂದೇ ರೀತಿಯಾಗಿರತಕ್ಕದ್ದು ಲೋಕದಲ್ಲಿ ಕಂಡು ಬರುತ್ತದೆ. ನೋಡು ಪುಷ್ಪ ದಲ್ಲಿ ಗಂಧವು. ಜಲದಲ್ಲಿ ಶೈತ್ಯವು, ಅಗ್ನಿಯಲ್ಲಿ ಉಷ್ಣತ್ವವು ಎಲ್ಲಾ ಕಾಲಗಳಲ್ಲಿ ಯೂ ಒಂದೇ ರೀತಿಯಾಗಿರುವುದುಂಟಲ್ಲವೇ ? ಹಾಗೆ ನಿನ್ನ ಜೀವಭಾವವು. ಮೋಕ್ಷದಶೆಯಲ್ಲಿಯೂ ಕೂಡ ಒಂದೇ ರೀತಿಯಾಗಿರಬೇಕಲ್ಲವೇ? ಬದ್ಧದಶೆಯಲ್ಲಿ ಹ್ಯಾಗೆ ಜೀವಭಾವವಿರುವುದೊ ಹಾಗೆ ಮೋಕ್ಷದಶೆಯಲ್ಲಿಯೂ ಕೂಡ ಮಾನಿ ಸಿದ್ದಾದರೆ ನಿನ್ನ ಮತದಲ್ಲಿ ಮುಕ್ತಿಯೇ ಇಲ್ಲದಂತಾಗುವುದು. ಮೋಕ್ಷದಶೆಯಲ್ಲಿ ಅಜ್ಞಾನ ಸುಖ ದುಃಖಾದಿರೂಪವಾದ ಜೀವಭಾವದ ನಿವೃತ್ತಿಯನ್ನು ಮಾನಿಸಿ ದರೆ ಜೀವಭಾವಕ್ಕೆ ಸ್ವಾಭಾವಿಕವೆನ್ನುವುದು ತಪ್ಪಾಗುವುದು ಆದ್ದರಿಂದ ಪ್ರತಿ ಬಿಂಬವಾದವನ್ನೇ ಮಾನಿಸುವುದು ಯೋಗ್ಯವಲ್ಲವೇ. ಪ್ರತಿಬಿಂಬವಾದಿಯೇ ? ನನ್ನ ಮತದಲ್ಲಿ ಕೇವಲ ಚೇತನ ಸೃಷ್ಟಿಯೇಕೆ. ಎಲ್ಲಾ ಚೇತನಾ ಚೇತನಾತ್ಮಕ ವಾದ ದ್ವೈತ ಪ್ರಪಂಚವೇ ಸ್ವಾಭಾವಿಕವಾಗಿರುವುದು. ಯಾಕಂದರೆ ಪರಶಿವನ ಸ್ವಭಾವರೂಪವಾದ ವಿಮರ್ಶ ಶಕ್ತಿಯಿಂದಲೇ ಆವಿರ್ಭವಿಸಿರುವುದಷ್ಟೆ. ಈ ವಿಮರ್ಶ ಶಕ್ತಿಯಿಂದ ಅಖ್ಯಾತಿರೂಪವಾದ ಮಾಯೆಯೂ, ಅದರಿಂದ ಪ್ರಕೃತಿ

ಯೆಂಬ ಅಂಡವು ಇದರಿಂದ ಮುಂದೆ ಪೃಥಿವ್ಯಂಡವು ಆವಿರ್ಭವಿಸಿತು ಎಂದು ನಾವು ಹೇಳುವುದರಿಂದ ನನ್ನ ಮತದಲ್ಲಿ ಚೇತನಾಚೇತನಾತ್ಮಕವಾದ ದ್ವೈತ ಪ್ರಪಂಚದ ಸೃಷ್ಟಿಯೂ ಕೂಡ ಸ್ವಾಭಾವಿಕವಾಗಿಯೇ ಇರುವುದು. ಈ ವಿಷಯದಲ್ಲಿ ಚಿಚ್ಛಕ್ತಿ ಸಂಸ್ತುತಿಯೆಂಬ ಗ್ರಂಥದಲ್ಲಿ ಯೋಗಿನಾಥರು ''ಜ್ವಲನಾದೂರ್ಧ್ವ ಮೋದ್ಗತಿರಿವ ವಿವಿಧಾಕೃತಿರಂಬರೆ ಗರ್ತೆಭಾತಿ | ತದ್ವದ್ವಿಷ್ಣೋಸ್ಸೃಷ್ಟಿಃ ಸ್ವಭಾವಜಾದ್ವೈತರೂಪೇಯಂ || ಎಂಬುವ ಶ್ಲೋಕದಿಂದ ದ್ವೈತಪ್ರಪಂಚದ ಸೃಷ್ಟಿಯು ಸ್ವಾಭಾವಿಕವೆಂದೂ, ಪ್ರಾಶ್ಯಾನಶ್ಚಿದ್ರಸಸ್ಯೈಘಃ ಸಾಕಾರತ್ವಮುಪಾಗತಃ | ಅವಶ್ಯಾ ಯಃಪ್ರಬೋಧಾರ್ಕೆ ತೂದಿತೆ ಸ್ವಸ್ವಭಾವಭಾಕ್ || ಎಂಬುವ ಶ್ಲೋಕದಿಂದ ಸ್ವಾಭಾವಿಕವಾದ ದ್ವೈತಪ್ರಪಂಚವು ಅದ್ವೈತರೂಪವಾದ ಪರಬ್ರಹ್ಮದ ಸ್ವಭಾವಭೂತವಾದ ವಿಮರ್ಶಶಕ್ತಿ ಸ್ವರೂಪವನ್ನು ಹೊಂದುತ್ತದೆಂತಲೂ ಹೇಳಿರುವರು. ಅಂದರೆ ಇವರ ಅಭಿಪ್ರಾಯವು ಸ್ವಾಭಾವಿಕವಾದದ್ದು ಎಲ್ಲಾ ಕಾಲಗಳಲ್ಲಿಯೂ ಒಂದೇರೀತಿಯಾಗಿ ಇರತಕ್ಕದ್ದೆಂಬ ನಿನ್ನಭಿಪ್ರಾಯದಂತಾಗಲಿಲ್ಲವು. ನೋಡು ಚಿಚ್ಛಕ್ತಿವಿಶಿಷ್ಟಬ್ರಹ್ಮವೆಂಬ ವ್ಯಾಪಕವಾದ ಜಲದ ಪ್ರವಾಹವು ಘನೀಭತವಾಗಿ ಹಿಮಕರಕವಾಗುವುದು. ಆ ಹಿಮಕರಕಕ್ಕೆ (ಆಲೇಕಲ್ಲಿಗೆ) ಶಿವಾದ್ವೈತಜ್ಞಾನವೆಂಬ ಸೂರ್ಯನು ಉದಯವಾಗಿ ಸಂಬಂಧವಾಗಲು, ಆ ಹಿಮಕರಕವು ತನ್ನ ಘನೀಭಾವವನ್ನು ಬಿಟ್ಟು ವ್ಯಾಪಕವಾದ ಪರಬ್ರಹ್ಮಸ್ವರೂಪೋದಕವೇ ಆಗಿಬಿಡುವುದು. ಎಂಬುವ ಇವರ ಶ್ಲೋಕಾಭಿಪ್ರಾಯದಿಂದ ಚೇತನಾಚೇತನ ಸೃಷ್ಟಿಯು ಸ್ವಾಭಾವಿಕವೆಂದು. ಮತ್ತು ಇದು ಜ್ಞಾನದಿಂದ ಲಯವನ್ನು ಹೊಂದುವದೆಂದೂ ಸ್ಪಷ್ಟವಾಯಿತು. ಅರ್ಥಾತ್ ಶಿವದೀಕ್ಷಾಸಂಪನ್ನನಾಗಿ ನಾವು ಹಿಂದೆ ಹೇಳಿದ ಮೂರು ಮಲಗಳನ್ನು ಕಳೆಪುಕೊಂಡು ಶುದ್ಧಾಧ್ವದಲ್ಲಿ ಪ್ರವಿಷ್ಟನಾಗಿ ಶಿವಸ್ವರೂಪನಾದ ಜೀವನ್ಮುಕ್ತನಿಗೆ ಜೀವಭಾವವು ಸ್ವಾಭಾವಿಕವಾಗಿದ್ದರೂ ಅದರ ವಿಲಯವಾಗುವದೆಂದು ನಮ್ಮ ಸಿದ್ಧಾಂತವು. ಈ ವಿಷಯದಲ್ಲಿ ಹಿಂದೆ ಎಷ್ಟೋ ಲೌಕಿಕ ದೃಷ್ಟಾಂತಗಳನ್ನು ಕೊಟ್ಟಿರುವೆನು. ಜೀವಭಾವವೆಂದರೆ ಆತ್ಮನನ್ನಾವರಿಸಿರುವ ಮಲತ್ರಯವೆಂದರ್ಥವು. ಶ್ಲೋ|| ತನುತ್ರಯಿ ಗತಾನಾದಿ ಮಲತ್ರಯ ಮಸೌಗುರುಃ | ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶತ್ || ಎಂಬುವ ಆಗಮವಾಕ್ಯದಂತೆ ಇಷ್ಟಲಿಂಗಧಾರಣಾತ್ಮಕವಾದ ಕ್ರಿಯಾದೀಕ್ಷೆಯಿಂದ ಪ್ರಕೃತ್ಯಾದಿ ಪೃಥಿವ್ಯಂತವಾದ ಸ್ಥೂಲಶರೀರಗತವಾದ ಕಾರ್ಮಿಕ ಮಲವನ್ನು ಕಳೆದುಕೊಳ್ಳಲು ಅಂದರೆ ಗುರು

ವಿನಿಂದುಪದೇಶಿಸಲ್ಪಟ್ಟ ಇಷ್ಟಲಿಂಗ ಯೋಗದಿಂದ ಪ್ರಕೃತ್ಯಾದಿ ಪೃಥಿವ್ಯಂತಗ ಳಾದಇಪ್ಪತ್ತುನಾಲ್ಕು ತತ್ವಗಳು ಶುದ್ಧಗಳಾಗಲು (ತನಗೆ ವಶವರ್ತಿಗಳಾಗಲು) ಕಾರ್ಮಿಕ ಮಲವು ತನಗೆ ಕಾರಣವಾದ ಕ್ರಿಯಾಶಕ್ತಿರೂಪವಾಗುವುದು. ಮಾ ಯಾದಿ ವಿದ್ಯಾಂತವಾದ ಕಂಚುಕ ಷಟ್ಕವೇ ಮಾಯಿಾಯ ಮಲವು. ಇದು ಪ್ರಾ ಣಲಿಂಗೋಪಾಸನೆಯಿಂದ ಶುದ್ಧವಾಗಲು, (ಈ ಆರುತತ್ವಗಳು ವಶಗಳಾಗಲು) ಮಾಯಿಾಯ ಮಲವು ತನಗೆ ಕಾರಣವಾದ ಜ್ಞಾನಶಕ್ತಿರೂಪವಾಗುವದು. ಅಖ್ಯಾತಿ (ಅಜ್ಞಾನ) ಎಂಬ ಆಣವಮಲವು (ಕಾರಣಶರೀರವು) ಸರ್ವತ್ರಪೂರ್ಣ ವಾಗಿರುವ ಸದ್ರೂಪವಾದ ಚಿಚ್ಛಕ್ತಿಯಿಂದ ಕೂಡಿದ ಭಾವಲಿಂಗೋಪಾಸನೆ ಯಿಂದ ಶುದ್ಧವಾಗಲು ತನಗೆ ಕಾರಣವಾದ ಇಚ್ಛಾಶಕ್ತಿರೂಪವನ್ನು ಹೊಂದು ವದು. ಈ ಇಚ್ಛಾಶಕ್ತಿಗೆ ವಿಮರ್ಶಶಕ್ತಿ ಚಿಚ್ಛಕ್ತಿಗಳೆಂಬ ಬೇರೆ ಹೆಸರುಗಳುಂಟು. ಈ ಅಖ್ಯಾತಿಯೆಂಬ ಆಣವಮಲವು ಸ್ವರ್ಣತಾಮ್ರಗಳಲ್ಲಿ ಕಾಲಿಕೆಯಂತೆಯೂ, ಚೇತನ ಪುರುಷನಲ್ಲಿ ಲೋಮನಖಾದಿಗಳಂತೆಯೂ ಪರಶಿವ ಶಕ್ತಿಯಲ್ಲಿದ್ದು ಆದ ರಿಂದಾವಿರ್ಭವಿಸಿರುವದು. ಆದ್ದರಿಂದ ತಾನು ತನ್ನ ಕಾರಣಸ್ವರೂಪವನ್ನು ಹೊಂದಿ, ಇಚ್ಛಾಶಕ್ತಿರೂಪವಾಗಿ ತನ್ನ ಜ್ಞಾನ ಕ್ರಿಯಾಶಕ್ತಿಸಹಿತವಾಗಿ ಪರಶಿ ವಲಿಂಗದಲ್ಲಿ ಸ್ವಸ್ಥವಾಗಲು ಸಕಲನೂ, ಸಕಲ ನಿಷ್ಕಲನೂ, ನಿಷ್ಕಲನೂ, ಆದ ಪರ ಶಿವಲಿಂಗದಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗರೂಪಗಳಾದ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳ ಅಭಿಮಾನಿಗಳಾದ ಜೀವರು ಸಮರಸರಾಗಿ (ಅಲ್ಲಿ ಲೀನರಾಗಿ) ಮುಕ್ತಿಯಂ ಪಡೆಯುವರು. ಶಿವಾದ್ವೈತಿಯೆ? ಮಲತ್ರಯವೆಂಬ ಜೀವಭಾವವು ನಿವೃತ್ತಿಯನ್ನು ಹೊಂದಿದಮೇಲೆ ನೀನುಕೂಡ ಜೀವಾತ್ಮನಿಗೆ ನಾಶವನ್ನು ಹೇಳಿದಂತೆ ಆಗಲಿಲ್ಲವೆ? ಮತ್ತು ಜೀವನಿಗೆ ಲಿಂಗವೆಂಬಗ್ನಿಯ ಸಂ ಯೋಗವಾಗಲು, ಶಿಖಿಕರ್ಪೂರಯೋಗನ್ಯಾಯದಿಂದ ಅಂದರೆ ಕರ್ಪೂರಕ್ಕೆ ಅಗ್ನಿ ಯ ಸಂಯೋಗವಾಗಲು ಅದು ಸ್ವರೂಪತಃ ನಷ್ಟವಾಗುವದು. ಅದರಂತೆ ನೀನು ಆಂಗನೆಂಬ ಜೀವನಿಗೆ ಲಿಂಗಾಗ್ನಿ ಸಂಯೋಗವಾಗಲು ಜೀವನಿಗೆ ಸ್ವರೂಪತಃ ನಾಶವನ್ನು ಹೇಳಬೇಕಲ್ಲವೆ? ಹೇಳಿದರೆ ನನ್ನ ಪ್ರತಿಬಿಂಬವಾದದಲ್ಲಿ ನೀನು ದೋ ಷಕೊಟ್ಟಂತೆ ನಿನ್ನ ಮತದಲ್ಲಿಯೂ ಆತ್ಮಹನನದೋಷವು ಬರುತ್ತದಲ್ಲವೆ? ಅಂದರೆ ಬ್ರಹ್ಮಾದ್ವೈತಿಯೆ? ನನ್ನ ಮತದಲ್ಲಿ ದೋಷವು ಬರುವದಿಲ್ಲ. ಕರ್ಪೂರಕ್ಕೆ ಬೆಂ ಕಿಯನ್ನು ಹಚ್ಚಿದರೆ ಅದು ಕಾಣದಿರುವಂತೆ ಜೀವನಿಗೆ ಲಿಂಗಾಗ್ನಿ ಸಂಬಂಧವಾ ಗಲು ಜೀವಭಾವವು (ಮಲತ್ರಯವು) ಕಾಣದೆ ತನ್ನ ಕಾರಣದಲ್ಲಿ ಲೀನವಾಗು

ತ್ತದೆಂದು ನಮ್ಮ ಪ್ರಾಚೀನರು ಈ ದೃಷ್ಟಾಂತವನ್ನು ಕೊಟ್ಟಿರುವರು. ನಾನೂ ಹಿಂದೆ ಈ ಧೃಷ್ಟಾಂತವನ್ನು ತೆಗೆದುಕೊಂಡಿದ್ದೇನೆ. ಇದರಿಂದ ನಾನಾಗಲಿ ಅಥವಾ ನಮ್ಮ ಪೂರ್ವಾಚಾರ್ಯರೇ ಆಗಲಿ ಜೀವಾತ್ಮನಿಗೆ ಸ್ವರೂಪತಃ ನಾಶವೇ ಮೋಕ್ಷವೆಂದು ಹೇಳಿದಂತಾಗಲಿಲ್ಲ. ಅದೇಕೆ ಕರ್ಪೂರದ ದೃಷ್ಟಾಂತವನ್ನು ತೆಗೆದುಕೊಂಡಮೇಲೆ ಕರ್ಪೂರಕ್ಕೆ ಸ್ವರೂಪತಃ ನಾಶವಾಗುವಂತೆ ಆತ್ಮನಿಗೆ ಸ್ವರೂಪತಃ ನಾಶವೆ ಮೋಕ್ಷವೆಂದು ಹೇಳಿದಂತಾಗಲಿಲ್ಲವೆ. ಬ್ರಹ್ಮಾದ್ವೈತಿಯೆ? ನನ್ನ ಮತದಲ್ಲಿ ಯಾವ ಪದಾರ್ಥಕ್ಕೂ ಸ್ವರೂಪತಃ ನಾಶವೇಯಿಲ್ಲ. ಕಾರ್ಯನಾಶವೆಂದರೆ ಕಾರಣರೂಪದಿಂದಿರುವಿಕೆಯು. ಕಾರ್ಯವು ಕಾರಣದಲ್ಲಿ ಲೀನವಾಗಲು ಕಾರಣವೇ ಆಗಿಬಿಡುವದು. ಕರ್ಪೂರಕ್ಕಾದರೂ ನಾನು ನಿನ್ನಂತೆ ಸ್ವರೂಪತಃ ನಾಶವನ್ನು ಹೇಳುವದಿಲ್ಲ. ಕಬ್ಬಿನ ಹಾಲು ಘಟ್ಟಿಯಾಗಿ ಬೆಲ್ಲವಾಗಿರುವಂತೆ ಒಂದು ತರದ ಗಿಡದ ಹಾಲು ಕರ್ಪೂರವಾಗಿರುವದು. ಆದ್ದರಿಂದ ಕರ್ಪೂರವು ಭೂತಕತ್ವವು. ಇದಕ್ಕೆ ಕಾರಣವು ಜಲತತ್ವವು ಮತ್ತು ತೇಜಸ್ತತ್ವವು ಆದ್ದರಿಂದ ಕರ್ಪೂರವು ತನಗೆ ಪರಂಪರೆಯಾಗಿ ಕಾರಣವಾದ ತೇಜಸ್ತತ್ವದಲ್ಲಿ ಸಮರಸವಾಗಿ (ಲೀನವಾಗಿ) ಬಿಡುವದರಿಂದ ಕರ್ಪೂರವು ತೇಜಸ್ಸಂಬಂಧದಿಂದ ತೇಜಸ್ಸೇ ಆಗುವಂತೆ, ಲಿಂಗಸಂಯೋಗದಿಂದ ಜೀವನು ಲಿಂಗದಲ್ಲಿ ಲೀನನಾಗಿ ಲಿಂಗವೇ ಆಗುವನು.

ಆದ್ದರಿಂದ ಜೀವಾತ್ಮನಿಗೆ ಸ್ವರೂಪದಿಂದ ನಾಶವಿಲ್ಲ. ನಿನ್ನ ಮತದಲ್ಲಿ ಜೀವಾತ್ಮನು ಮಿಥ್ಯಾಭೂತವಾದ ಪ್ರತಿಬಿಂಬ ಸ್ವರೂಪವಾಗಿರುವದರಿಂದ ಅದು ಸತ್ಯವಾದ ಬ್ರಹ್ಮದಲ್ಲಿ ಲೀನವಾಗಲಾರದು. ಆದ್ದರಿಂದದಕ್ಕೆ ಸ್ವರೂಪತಃ ನಾಶವನ್ನು ನೀನು ಹೇಳುವಿ. ಆದ್ದರಿಂದ ನಿನ್ನ ಮೋಕ್ಷವು ಆತ್ಮಹನನರೂಪವಾಗುವದೆಂದು ತಿಳಿಯಬೇಕು. ಸಚ್ಚಿದಾನಂದರೂಪನೂ, ವಿಮರ್ಶಶಕ್ತಿವಿಶಿಷ್ಟನೂ ಅಂದರೆ ಅಸ್ಮಿ, ಪ್ರಕಾಶೆ, ನಂದಾಮಿ ಎಂಬುವ ಅನುಭವರೂಪವಾದ ಭೋಗಕ್ಕೆ ಕಾರಣವಾದ ಶಕ್ತಿಯಿಂದ ವಿಶಿಷ್ಟನಾದ ಪರಶಿವನಿಗೆ ಪೂಜ್ಯ ಪೂಜಕ ಲೀಲೆಯು ಉತ್ಪನ್ನವಾಗಲು, ತರಂಗಗಳ ಉತ್ಪತ್ತಿಗಿಂತಲೂ ಪೂರ್ವದಲ್ಲಿ ನಿಸ್ತರಂಗವಾದ ಸಮುದ್ರದಲ್ಲಿ ಸ್ವಲ್ಪ ಚಲನೆಯುಂಟಾಗಿ, ಆ ಚಲನೆಯಿಂದ ಮುಂದೆ ಅನೇಕ ತರಂಗಗಳುಂಟಾಗುವಂತೆ, ಪರಶಿವ ಬ್ರಹ್ಮದಲ್ಲಿ ಕಿಂಚಿಚ್ಚಲನೆಯುಂಟಾಗಿ ಆ ಚಲನೆಯಿಂದ ತನ್ನ ಸ್ವಾಭಾವಿಕವಾದ ವಿಮರ್ಶಶಕ್ತಿ ಎಂಬ ಸಮುದ್ರದಲ್ಲಿ ಎರಡು ಭಾಗಗಳಾಗುವವು. ಅಂದರೆ ಒಂದು ಭಾಗವು ಸರ್ವಜ್ಞತ್ವ ಸರ್ವಕರ್ತೃತ್ವಾದಿ

ಶಕ್ತಿಗಳಿಂದ ಕೂಡಿದ ಅಧಿಕ ಭಾಗವು. ಇನ್ನೊಂದು ಕಿಂಚಿಜ್ಞತ್ವ ಕಿಂಚಿತ್ಕರ್ತೃತ್ವಾದಿ ಶಕ್ತಿಗಳಿಂದ ಕೂಡಿದ ನ್ಯೂನಭಾಗವು. ಈ ನ್ಯೂನಭಾಗಕ್ಕೆ ಅಂತಃಕರಣಶಕ್ತಿಯೆಂತಲೂ ಅಥವಾ ಚಿತ್ತಶಕ್ತಿಯೆಂತಲೂ ಹೇಳಬಹುದು. ಅಧಿಕಭಾಗಕ್ಕೆ ಚಿಚ್ಛಕ್ತಿಯೆಂತಲೂ, ಸ್ವಪ್ರಕಾಶತಾಶಕ್ತಿಯೆಂತಲೂ ಹೇಳಬಹುದು. ಈ ಚಿಚ್ಛಕ್ತಿಯಲ್ಲಿ ಸಚ್ಚಿದಾನಂದರೂಪವಾದ ಶಿವಲಿಂಗವು ಪ್ರವಿಷ್ಟವಾಗಲು ಲಿಂಗತತ್ವವೆನಿಸುವದು. ನ್ಯೂನೀಭೂತವಾದ ಚಿತ್ತವೆಂಬ ಸ್ವಪ್ರಕಾಶತಾ ಶಕ್ತಿಯಲ್ಲಿ ಪ್ರವಿಷ್ಟವಾದ ಶಿವಚೈತನ್ಯವು ಅಂಗತತ್ವವೆನಿಸುವುದು. ಈ ಲಿಂಗತತ್ವವು ಕ್ರಮದಿಂದ ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗವೆಂದು ಮೂರುಪ್ರಕಾರವಾಗಿ ಮತ್ತೆ ಮಹಾಲಿಂಗಾದಿ ಭೇದದಿಂದ ಆರುಪ್ರಕಾರವಾಗುವುದು. ಅಂಗತತ್ವವೂಕೂಡ ಯೋಗಾಂಗ ಭೋಗಾಂಗ ತ್ಯಾಗಾಂಗಗಳೆಂದು ತ್ರಿವಿಧವಾಗಿ ಐಕ್ಯಸ್ಥಲಾದಿ ಭೇದದಿಂದ ಆರುಪ್ರಕಾರವಾಗುವುದು. ನಮ್ಮ ಮತದಲ್ಲಿ ಶುದ್ಧ ಜೀವನಿಗೆ ಅಂಗವೆಂದು ಸಂಜ್ಞೆಯುಂಟು. ಶ್ಲೋ || ಆತ್ಮಾಯಂ ಕೇವಲಶ್ಶುದ್ಧೋಶಿವಸ್ಯಾಂಶಸ್ಸದಾಮಲಃ || ಎಂಬುವ ಆಗಮವಾಕ್ಯದಿಂದ ಶುದ್ಧ ಜೀವಾತ್ಮನು ಶಿವನ ಅಂಶರೂಪನಾಗಿರುವನು. ಈ ಶುದ್ಧವಾದ ಶಿವಾಂಶವು ಮಲತ್ರಯವೆಂಬ ಶೃಂಖಲೆಯಿಂದ ಬಂಧಿತವಾಗಲು ತನ್ನ ಸ್ವಾಭಾವಿಕವಾದ ಶಕ್ತಿಯನ್ನು ಮರೆತು, ಸಾಂಸಾರಿಕ ತಾಪತ್ರಯದಿಂದ ಯುಕ್ತವಾಗುವುದು. ಶಿವಯೋಗ ಶಾಸ್ತ್ರದಲ್ಲಿ ಹೇಳಲ್ಪಟ್ಟಪ್ರಕಾರ ಶಿವದೀಕ್ಷೆಯನ್ನು ಹೊಂದಿ ಶುದ್ಧನಾಗಲು ಅಂಗನೆನಿಸುವನು. ಜೀವಾತ್ಮನಿಗೆ ಅಂಗವೆಂದು ಹೆಸರು ಬರಲಿಕ್ಕೆ ಕಾರಣವೇನೆಂದರೆ ಶಿವನು ಇವನನ್ನು ಅಂಗೀಕರಿಸಿ ತನ್ನೊಳಗೆ ಸಮರಸಮಾಡಿಕೊಳ್ಳುವುದರಿಂದ ಶುದ್ಧ ಜೀವಾತ್ಮನಿಗೆ ಅಂಗವೆಂದು ಸಂಜ್ಞೆಯು. ಆದ್ದರಿಂದ ಅಂಗವೆಂದರೆ ಶಿವನ ಶರೀರವೆಂದು ಭ್ರಮಿಸಕೂಡದು. ಅಶುದ್ಧ ಜೀವನು ಶುದ್ಧನಾಗುವುದಕ್ಕಾಗಿಯೂ, ತನ್ನ ನ್ಯೂನೀಭೂತವಾದ ಶಕ್ತಿಯನ್ನು ವಿಕಾಸಗೊಳಿಸಿ ಮುಕ್ತನಾಗುವುದಕ್ಕಾಗಿಯೂ, ಸಿದ್ಧಾಂತಶಾಸ್ತ್ರದಲ್ಲಿ ನೂರೊಂದು ಸ್ಥಲಗಳು ನಿರೂಪಿಸಲ್ಪಟ್ಟಿರುವವು.

ಇರಲಿ ಈ ವಿಚಾರವನ್ನು ಮುಂದಣ ಮೋಕ್ಷಕಾಂಡದಲ್ಲಿ ವಿಸ್ತರಿಸುವೆನು. ಈ ಮೇಲೆ ಹೇಳಿದ ವಿಚಾರದಿಂದ ಜೀವಾತ್ಮನು ಶುದ್ಧನಾಗಿ ತನ್ನ ಅಲ್ಪವಾದ ಶಕ್ತಿಯನ್ನು ವಿಕಾಸಗೊಳಿಸಲು (ಅಧಿಕವಾದ ಶಕ್ತಿಯಿಂದ ಕೂಡಿದ ಲಿಂಗತತ್ವದಲ್ಲಿ ಸಮರಸವಾಡಿ ಬಿಡಲು) ವಿಮರ್ಶಶಕ್ತಿ ವಿಶಿಷ್ಟ ಸಚ್ಚಿದಾನಂದರೂಪ ಪರಶಿವನೇ ಆಗಿಬಿಡುವನು. ಆದ್ದರಿಂದ ನನ್ನ ಮತದಲ್ಲಿ ಜೀವಾತ್ಮನಿಗೆ ಸ್ವರೂಪನಾ

ಶವಿಲ್ಲ. ಅಶುದ್ಧ ಜೀವಾತ್ಮನು ಮಾಯಾಕಾರ್ಯ ಕೋಟಿಯಲ್ಲಿ ಪ್ರವಿಷ್ಟನಾದಕಾರಣ ಮಲತ್ರಯವುಳ್ಳವನು, ಇವನಿಗೂ ಕೂಡ ಅಂಗವೆಂದು ಅಲ್ಲಲ್ಲಿಯೇ ವ್ಯವಹರಿಸುವದುಂಟು. ಎಲೈ ಶಿವಾದ್ವೈತಿಯೇ ? ನಿತ್ಯನೂ, ನಿತ್ಯಶುದ್ಧನೂ, ಕೇವಲ ಬೋಧಸ್ವರೂಪನೂ, ತ್ರಿಕಾಲಗಳಲ್ಲಿ ಅಬಾಧಿತವಾದ ಸತ್ಯಸ್ವರೂಪನೂ, ನಿತ್ಯಾನಂದಘನನೂ ಆದ ಆತ್ಮನಿಗೆ ಅಶುದ್ಧಿಯನ್ನು ಹೇಳಬಹುದೆ? ಅದರಲ್ಲಿಯೂ ಸ್ವಾಭಾವಿಕವಾದ (ಪಾರಮಾರ್ಥಿಕವಾದ) ಅಶುದ್ಧಿಯನ್ನು ಹೇಳುವದು ಯುಕ್ತವಾಗಬಹುದೆ? ಪುಷ್ಕರ ಪಲಾಶದಂತಿರುವ ಆತ್ಮನು ಅಸಂಗನಲ್ಲವೆ? ಇವನಿಗೆ ಅಶುದ್ಧಿಯನ್ನು ಕಲ್ಪಿಸಿ, ಆ ಅಶುದ್ಧಿ ನಿವೃತ್ತಿಗಾಗಿ ದೀಕ್ಷಾ ಸಂಸ್ಕಾರವನ್ನು ಕಲ್ಪಿಸಿದರೆ ಆತ್ಮನು ಸಂಸ್ಕಾರ್ಯನಾಗಲಾರನೆ? ಯಾವದು ಸಂಸ್ಕಾರ್ಯವೋ ಅದು ಅನಿತ್ಯವಲ್ಲವೆ? ಆತ್ಮನು ಅನಿತ್ಯನಾದಲ್ಲಿ ಕೃತಹಾನಾಕೃತಾಭ್ಯಾಗಮದೋಷವು ಸಂಭವಿಸುತ್ತದಲ್ಲವೆ! ಪ್ರತಿಬಿಂಬವಾದಿಯೇ ? ಶಿವಾದ್ವೈತಸಿದ್ಧಾಂತಪರಿಜ್ಞಾನವಿಲ್ಲದ ನೀನು ಈ ರೀತಿಯಾಗಿ ಆಕ್ಷೇಪಿಸುವದು ಯೋಗ್ಯವೇ ನಸಿ. ಆತ್ಮನು ಶುದ್ಧ ನಿದ್ದಾಗ್ಯೂ ತನ್ನ ಲೀಲಾ ಮಾತ್ರದಿಂದ ನಿರ್ಮಿಸಲ್ಪಟ್ಟ ಅಶುದ್ಧಿಯಿಂದ ತನ್ನ ಸರ್ವಜ್ಞತ್ವಾದಿಗಳನ್ನು ಮರೆತು ಕಿಂಚಿಜ್ಞತ್ವಾದಿ ಗುಣಗಳುಳ್ಳವನಾಗಿರುವನು. ಈ ಕಿಂಚಿಜ್ಞತ್ವಾದಿ ಗುಣಗಳಿಗೆ ಕಾರಣವಾದ ಮಲತ್ರಯವೇ ಅಶುದ್ಧಿಯು ಆತ್ಮನು ತನಗನ್ಯಗಳಾದ ಪದಾರ್ಥಗಳಿಂದ ಅಸಂಗನಾಗಿದ್ದರೂ ತನಗನನ್ಯಗಳಾದ ಕಲ್ಯಾಣಗುಣಗಳ ಸಂಗವುಳ್ಳವನಾಗಿರುವನು. ಪುಷ್ಕರ ಪಲಾಶವು ತನಗನ್ಯವಾದ ಜಲದ ಸಂಗವಿಲ್ಲದ್ದಾದರೂ ತನಗನನ್ಯಗಳಾದ ರೂಪ ಮತ್ತು ಅವಯವಗಳ ಸಂಬಂಧವುಳ್ಳದ್ದಾಗಿರುವುದು. ಮಲತ್ರಯವು ಸ್ವಾಭಾವಿಕವೆಂಬುವಲ್ಲಿಯೂ, ಅದರ ನಿವೃತ್ತಿಯು (ಲಯವು) ಸಂಭವಿಸುತ್ತದೆಂಬುವಲ್ಲಿಯೂ ಹಿಂದೆ ಹೇಳಿಯೇ ಇರುವೆನು. ಮಲತ್ರಯಕ್ಕೆ ಅಶುದ್ಧಿಯೆಂದು ನಿಜಾಶುದ್ಧ್ಯಾ ಸಮರ್ಥಸ್ಯ | ಎಂಬುವದರಿಂದ ಕಲ್ಲಟಾಚಾರ್ಯರು ಹೇಳಿರುವರು. ಆತ್ಮನ ಅಶುದ್ಧಿಯು ಭಂಗಾರದ ಶಾಮಿಕೆಯಂತೆ ಇರುವದರಿಂದ "ಹೇಮ್ನಃ ಸಂಲಕ್ಷ್ಯತೇ ಹ್ಯಗ್ನೌ ವಿಶುದ್ಧಿಃ ಶಾಮಿಕಾಪಿವಾ" ಎಂಬುವ ಕಾಳಿದಾಸನ ಉಕ್ತಿಯಂತೆ ಶಿವದೀಕ್ಷೆಯಿಂದ ಬೇರೆಯಾಗಿ ತನ್ನ ಕಾರಣದಲ್ಲಿ ಲೀನವಾಗುವದು. ಯಾವನಾದರೊಬ್ಬ ಭವಿಯು ಸಂಸಾರಾನಲದಂದಹ್ಯಮಾನನಾಗಿ ತನ್ನ ಪತ್ನಿಯನ್ನು ತಿರಸ್ಕರಿಸಿ ಅವಳಿಗೆ ಮನಸ್ಸಿಗೆ ಹತ್ತುವಂತೆ ಕಠಿಣಮಾತುಗಳನ್ನಾಡಿ ನಿನ್ನ ಸಂಬಂಧವು ನನಗಿಲ್ಲ. ನನ್ನ ಸಂಬಂಧವು ನಿನಗಿಲ್ಲ ಎಂದು ಹೇಳಿ ಹೊರಟು

ಶ್ರೀಗುರುವಿನಡಿಗೆ ಶರಣಾಗತನಾಗಿಬಿಡಲು ಶ್ರೀಗುರುವು ಅವನ ಶಕ್ತಿಪಾತ ಚಿಹ್ನ ಗಳನ್ನು ಪರೀಕ್ಷಿಸಿ ಶಿವದೀಕ್ಷೆಯನ್ನು ಕೊಟ್ಟು ವೀರಶೈವರಲ್ಲಿ ಶೇರಿಸಿದ ಬಳಿಕ ಅವನು ತನ್ನ ಪೂರ್ವದ ಪತ್ನಿಯನ್ನು ಹಿಂತಿರುಗಿಯೂ ನೋಡದೆ ಅವಳು ಕೂಡ ಮಾನವತಿಯಾದ್ದರಿಂದ ಅವನಾಡಿದ ತಿರಸ್ಕಾರದ ಮಾತುಗಳನ್ನು ಸ್ಮರಿಸಿ ಕುಪಿತಳಾಗಿ ಅವನ ಮುಖದರ್ಶನವನ್ನು ಕೂಡ ಮಾಡದೇ ಇರುವುದರಿಂದ ಅವನಿಗೆ ಭೋಗ ಕೊಡುವುದಂತೂ ದೂರೇ ಉಳಿಯಿತು. ಇದರಂತೆ ಅಶುದ್ಧಿ ಸ್ತ್ರೀಯು ಆತ್ಮನಿಂದ ಪೃಥಕ್ಕರಿಸಲ್ಪಟ್ಟಮೇಲೆ ಪುನಃ ಆತ್ಮನಿಗೆ ಭೋಗವನ್ನುಂಟುಮಾಡುವದಿಲ್ಲ. ಆದರೆ ತಾನೇ ತನ್ನ ತವರುಮನೆಯಲ್ಲಿ (ಶಕ್ತಿಯಲ್ಲಿ) ಅಡಗುವಳು. ಆಮೇಲೆ ಆತ್ಮನು ಶುದ್ಧನಾಗಿ ಶಿವಸಮುದ್ರದಲ್ಲಿ ಸಮರಸನಾಗುವನು. ಕೇವಲ ತೆಂಗಿನ ಕಾಯನ್ನು ಜಲದ ಮಡುವಿನಲ್ಲಿ ಚಲ್ಲಿದರೆ ಅದು ಜಲದಲ್ಲಿ ಸಮರಸವಾಗಲಾರದು. ಆ ಕಾಯಿಯೊಳಗಿರುವ ಜಲದಮೇಲೆ ಹೊದ್ದಿಕೆಯಾಗಿರುವ ಕೊಬ್ಬರಿ, ಅದರ ಮೇಲಿರುವ ಕಠಿಣವಾದ ಚಿಪ್ಪು ಇದರ ಮೇಲಿರುವ ನಾರಿನಹಾಗಿರುವ ದಪ್ಪ ವಾದ ಸಿಪ್ಪೆ. ಈ ಮೂರನ್ನು ತೆಗೆದು ಅಂದರೆ ಗಿಡದೊಳಗಿನ ಕಾಯಿಯನ್ನು ತಂ ದು ಕಾರ್ಮಿಕಮಲದಂತಿರುವ ಆ ದಪ್ಪವಾದ ಸಿಪ್ಪೆಯನ್ನು ಆಯುಧವಿಶೇಷದಿಂದ ಬೇರೆಮಾಡಿ ಆಮೇಲೆ ಚಿಪ್ಪನ್ನು ಬೇರೆಮಾಡಿ ಕೊಬ್ಬರಿಯನ್ನು ಬೇರೆಮಾಡಿ ವಳ ಗಿರುವ ನೀರನ್ನು ಮಡುವಿನಲ್ಲಿ ಹಾಕಲು ಸಮರಸವಾಗುವದು. ಹಾಗೆ ಕಾರ್ಮ ಮಾಯಿಯ ಆಣವಮಲಗಳು ಮೂರು ದೀಕ್ಷೆಗಳೆಂಬ ಆಯುಧ ವಿಶೇಷದಿಂದ ಪೃಥಕ್ಕರಿಸಲ್ಪಟ್ಟು ಆತ್ಮನು ಶುದ್ಧನಾಗಲು ಅಂಗನೆನಿಸಿ ಪರಶಿವಲಿಂಗದಲ್ಲಿ ಸಮ ರಸನಾಗುವನು. ಅಶುದ್ಧನಾದ ಜೀವನಿಗೆ ಸಾಮರಸ್ಯವು ಸಂಭವಿಸುವದಿಲ್ಲ. ಇವನೇ ತನ್ನ ಅಶುದ್ಧಿಯನ್ನು ದೂರಮಾಡಿಕೊಂಡು ಊರ್ಧ್ವಕೋಟಿ ಪ್ರವಿಷ್ಟ ನಾಗಿ ಸಮರಸನಾಗುವನು. ಶುದ್ಧನಾದ ಜ್ಞಾನಿಗೆ ಅಶುದ್ಧಾತ್ಮರು ಪರ್ವತಮೇ ಲಿರುವವನಿಗೆ ಭೂಮಿಯಲ್ಲಿರುವವರು ಹೇಗೆ ಕಾಣುತ್ತಾರೊ ಹಾಗೆ ಕಾಣುವರು. ರಾಜಪುತ್ರನು ರಾಜನ ಪ್ರಸಾದದಿಂದ ರಾಜನಾಗಿ ಪ್ರಜಾಪತಿಯಾಗುವಂತೆ ಸಮಸ್ತ ಲೋಕಗಳಿಗೆ ಸ್ವಾಮಿಯಾದ ಅಪಾರ ಕರುಣಾಸಮುದ್ರನಾದ ಪಶು ಪತಿಯ ಪ್ರಸಾದದಿಂದ ಪಶುವಾದ ಜೀವನು ಪಶುಪತಿಯಾಗಿ ಅಪಾರವಾದ ಸ್ವಾರಾಜ್ಯಾನಂದವನ್ನು ಭೋಗಿಸುವನು. ರಾಜನಿಗೆ ಪ್ರಜೆಗಳ ಭಯವಿಲ್ಲದಿರು ವಂತೆ ಪ್ರಬುದ್ಧನಾದ ಅಂಗನಿಗೆ ಯಾವದರಿಂದಲೂ, ಭಯವಿಲ್ಲ. ಜೀವನ ಕಾ ರ್ಶ್ಯಸಹಿತ ಅಜ್ಞಾನಗ್ರಂಥಿಯು ನಷ್ಟವಾಗಲು ಶುದ್ಧಾಧ್ವದಲ್ಲಿ ಪ್ರವಿಷ್ಟನಾಗು

ವನು. ಅಶುದ್ಧಾತ್ಮನು ಸಂಸ್ಕಾರ್ಯನು, ಶುದ್ಧಾತ್ಮನಿಗೆ ಸಂಸ್ಕಾರ್ಯತ್ವವಿಲ್ಲ. ಸುವರ್ಣ ದರ್ಪಣ ಮೊದಲಾದ ಸ್ವಚ್ಛದ್ರವ್ಯಗಳಿಗೆ ಸಂಸ್ಕಾರವು ಬೇಕಾಗುವದಿಲ್ಲ. ಅವುಗಳಿಗೆ ಮಾಲಿನ್ಯವು ಹತ್ತಿದರೆ ಮಾತ್ರ ಅವುಗಳ ಶುದ್ಧಿಗಾಗಿ ಸಂಸ್ಕಾರವು ಬೇಕು. ಇಷ್ಟರಿಂದ ಸುವರ್ಣ ದರ್ಪಣಗಳ ಸ್ವರೂಪವೇ ನಷ್ಟವಾಗುವದಿಲ್ಲ. ಆದರೆ ಅವುಗಳ ಅಶುದ್ಧಿಯು ಮಾತ್ರ ನಿವೃತ್ತವಾಗುತ್ತದೆ. ಸಂಸ್ಕಾರವು ದೇಹಕ್ಕಲ್ಲದೆ ಆತ್ಮನಿಗಲ್ಲವೆಂದು ಭ್ರಮಿಸಬಾರದು. ಶುದ್ಧಾಧ್ವರೂಪವಾದ ಶಿವದೇಹವನ್ನು ಹೊಂದಿಸುವದಕ್ಕಾಗಿ ದೇಹಕ್ಕೂ, ಅಶುದ್ಧ ದೇಹ ಸಂಬಂಧದಿಂದ ಅಶುದ್ಧನಾದ ಆತ್ಮನು ಶುದ್ಧ ಶಿವನಾಗುವದಕ್ಕಾಗಿ ಅಶುದ್ಧ ಜೀವನಿಗೂ ಸಂಸ್ಕಾರವು ಬೇಕು. ಆದ್ದರಿಂದ ಪ್ರತಿಬಿಂಬವಾದಿಯೇ ? ನಿನ್ನ ಮತದಲ್ಲಿ ಜೀವನು ಮಿಥ್ಯಾಭೂತನಾದುದರಿಂದ ಜ್ಞಾನೋಪದೇಶ ವಿಧಿಯು ಯುಕ್ತವಾಗಲಾರದು. ಆದ್ದರಿಂದ ಆ ವಾದವನ್ನು ಬಿಡು.

ಎಲೈ ಬ್ರಹ್ಮಾದ್ವೈತಿಯೆ ! ಸ್ವಾಭಾವಿಕವಾದ ಮಲತ್ರಯವು ಲಯವನ್ನು ಹೊಂದುತ್ತದಲ್ಲದೆ ಸ್ವರೂಪತಃ ನಾಶವಾಗುವದಿಲ್ಲವೆಂಬ ವಿಷಯದಲ್ಲಿ ಇನ್ನೂ ಅನೇಕ ದೃಷ್ಟಾಂತಗಳನ್ನು ಶ್ರುತಿಯೇ ಹೇಳುತ್ತಿರುವದು. ಕೇಳು ‟ಯಥಾಸೈಂಧವಖಿಲ್ಯಉದಕೇ ಪ್ರಾಸ್ತಉದಕಮೇವಾನುವಿಲೀಯೇತ ನಹಾಸ್ಯೋದ್ಗ್ರಹಣಾಯ್ಯೆವ ಸ್ಯಾದ್ಯತೋಯ ತಸ್ತ್ವಾದದೀತ ಲವಣಮ್ಯೆವ್ಯೆವಂವಾರೇ" ಇತ್ಯಾದಿ ವಾಕ್ಯವು ಲವಣದೃಷ್ಟಾಂತದಿಂದ ಜೀವನು ಪರಶಿವ ಲಿಂಗದಲ್ಲಿ ಸಮರಸನಾಗುವನೆಂದು ಹೇಳುವದು. ಸಮುದ್ರಕ್ಷಾರೋದಕವು. ಪಿಂಡೀಭೂತವಾಗಿ ಲವಣವೆನಿಸಿ ಪುನಃ ಸಮುದ್ರದಲ್ಲಿ ಆ ಲವಣವನ್ನು ಚಲ್ಲಲು ಸಮರಸವಾಗಿ ಕ್ಷಾರೋದಕವೇ ಆಗಿಬಿಡುವಂತೆ, ಶಿವಚೈತನ್ಯವು ತನ್ನ ಶಕ್ತಿಯಿಂದ ಕಲ್ಪಿತವಾದ ಜಡವಾದ ಮಲಗಳಿಂದ ಆವೃತವಾಗಿ ಜೀವನೆನಿಸಿ ಪುನಃ ಶಿವದೀಕ್ಷೆಯಿಂದ ಶುದ್ಧಾತ್ಮನಾಗಿ ಲಿಂಗದಲ್ಲಿ ಸಮರಸನಾಗುವನೆಂದು ಆ ಶ್ರುತಿಯ ತಾತ್ಪರ್ಯವು. ಮೈತ್ರೇಯಿಗೆ ಯಾಜ್ಞವಲ್ಕ್ಯರು ಹೇಳಿದ ಈ ವಾಕ್ಯವು ನಿನ್ನ ಪ್ರತಿಬಿಂಬವಾದದಲ್ಲಿ ಸಂಗತವಾಗಲಾರದು. ಇದಲ್ಲದೆ ಜನಕ ಸಭೆಯಲ್ಲಿ ಗಾರ್ಗಿ ಎಂಬ ಬ್ರಹ್ಮಚಾರಿಣಿಯು ‟ಕಸ್ಮಿನ್ನು ಆಕಾಶ ಓತಃ ಪ್ರೋತಶ್ಚ" ಎಂದು ಪ್ರಶ್ನೆಮಾಡಲು, ‟ಸಹೋವಾಚೈತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಂ" ಇತ್ಯಾದಿಯಾಗಿ ಯಾಜ್ಞ್ಯವಲ್ಕ್ಯರು ಹೇಳಿದ ವಾಕ್ಯವು ನಿನ್ನ ಪ್ರತಿಬಿಂಬವಾದದಲ್ಲಿ ಯುಕ್ತವಾಗುವದಿಲ್ಲ. ಯಾಕಂದರೆ ಪಟವು ತನಗೆ ಕಾರಣಗಳಾದ ತಂತುಗಳಲ್ಲಿ

ಓತಪ್ರೋತಭಾವದಿಂದ (ದೀರ್ಘತಂತುಗಳಲ್ಲಿ ಓತಭಾವದಿಂದಲೂ, ಅಡ್ಡತಂತು ಗಳಲ್ಲಿ ಪ್ರೋತಭಾವದಿಂದಲೂ) ಇರುವಂತೆ, ಈ ಚರಾಚರಾತ್ಮಕ ಪ್ರಪಂಚವು ಸಚ್ಚಿದಾನಂದರೂಪವಾದ ಪರಶಿವ ಬ್ರಹ್ಮದಲ್ಲಿ ಓತಪ್ರೋತಭಾವದಿಂದ ಇರುವು ದೆಂದು ಆ ವಾಕ್ಯದ ತಾತ್ಪರ್ಯವು ನಿನ್ನ ಮತದಲ್ಲಿ ಪ್ರಪಂಚವು ಮಿಥ್ಯಾಭೂತ ವಾಗಿರುವದರಿಂದ ಸದ್ರೂಪವಾದ ಬ್ರಹ್ಮದಲ್ಲಿ ಹೇಗೆ ಇದ್ದೀತು? ಆದ್ದರಿಂದ ನಿನ್ನ ವಾದವು ಜಗತ್ತಿಗೆ ಶಿವನಲ್ಲಿ ಓತಪ್ರೋತಭಾವವನ್ನು ಹೇಳುವ ಶ್ರುತಿವಾ ಕ್ಯಕ್ಕೆ ವಿರುದ್ಧವು. ಶಿವಾದ್ವೈತಿಯೆ! ಪಟವು ತಂತುಗಳಿಗೆ ಭಿನ್ನವಾಗಿರುವದಿಲ್ಲ ವಾದ್ದರಿಂಡದು ಅಸತ್ತು ಆಗುವಂತೆ, ಪ್ರಪಂಚವು ಅಸತ್ತಾದರೂ ತಂತುಗಳಲ್ಲಿ ಪಟ ವಿರುವಂತೆ ಬ್ರಹ್ಮದಲ್ಲಿರುವದು. ಅಂದರೆ ಬ್ರಹ್ಮಾದ್ವೈತಿಯೆ! ಕಾರಣವ್ಯತಿರೇಕ ದಿಂದ ಕಾರ್ಯವಿಲ್ಲವೆನ್ನುವದೇ ತಪ್ಪು. ಈ ವಿಷಯವಾಗಿ ಹಿಂದೆ ಪರಿಣಾಮ ವಾದದಲ್ಲಿ ಹೇಳಿರುವೆನು. ಇರಲಿ ಪಟವು ತಂತುಗಳಿಗೆ ಅತಿರಿಕ್ತವಾಗಿ ಇಲ್ಲವೇ ಇಲ್ಲವೆಂದರೆ ‹‹ಪಟಮಾನಯ›› ಎಂಬುವ ವಾಕ್ಯದಿಂದ ಪ್ರಯೋಜ್ಯನಿಗೆ ಪ್ರವೃ ತ್ತಿಯು ಎಲ್ಲಿ ಆಗಬೇಕು? ತಂತುಗಳಲ್ಲಿ ಅಂದರೆ ಪ್ರಯೋಜಕವೃದ್ಧನ ತಾತ್ಪ ರ್ಯವು ಪಟದಲ್ಲಿದ್ದು ತಂತುಗಳನ್ನು ತಂದುಕೊಟ್ಟರೆ ಅವನ ಕೋಪಕ್ಕೆ ಪಾತ್ರ ನಾಗಬೇಕಾಗುವದಲ್ಲದೆ ತಿಳಿಗೇಡಿಯಾದ ಹುಚ್ಚನೆನಿಸಿಕೊಳ್ಳಬೇಕಾಗುವದಾದ್ದ ರಿಂದ ಕಾರ್ಯಕಾರಣಗಳಿಗೆ ಭೇದವೇ ಇಲ್ಲವೆಂದು ಹೇಳಬಾರದು. ತಂತುಗಳೇ ಪಟಾಕಾರವಾಗಿ ಪರಿಣತವಾಗಲು ಭೇದವೂ, ಕುಶಲನು ಪುನಃ ಪಟವನ್ನು ತಂತು ಗಳನ್ನಾಗಿ ಮಾಡಲು ಅಭೇದವೂ ಕಂಡುಬರುವಂತೆ ಗುರುಮುಖದಿಂದ ತನ್ನ ಪ್ರ ಪಂಚವನ್ನು (ಸ್ಥೂಲಸೂಕ್ಷ್ಮಕಾರಣ ಪ್ರಪಂಚವನ್ನು) ಪರಮಕಾರಣನಾದ ಶಿವನ ಶಕ್ತಿಯನ್ನಾಗಿ ತಿಳಿದು ಅದನ್ನು ಆ ಶಕ್ತಿಯಲ್ಲಿ ಲಯಗೊಳಿಸಿ ಶುದ್ಧನಾದ ತಾನು ಶಿವಲಿಂಗದಲ್ಲಿ ಬೆರೆಯಲು ಅಭೇದವೂ, ಮೊದಲು ಅಶುದ್ಧನಿದ್ದಾಗ ಭೇದ ವೂ, ಇರುತ್ತದೆಂದು ಹೇಳಬೇಕು.

ಈ ಅಶುದ್ಧಾತ್ಮನನ್ನು ಶುದ್ಧಿಗೊಳಿಸುವುದಕ್ಕಾಗಿ ಶಿವದೀಕ್ಷಾಸಂಸ್ಕಾರವು ಬೇಕು. ಹಾಲಿನಲ್ಲಿ ಶುದ್ಧಾಂಶವೆಂದರೆ ಘೃತವು. ಇದನ್ನು ಹಾಲಿನಿಂದ ತೆಗೆಯ ಬೇಕಾದರೆ ಮೂರು ಸಂಸ್ಕಾರಗಳು ಬೇಕು. ಒಂದನೇದು ತಕ್ರಸಂಸ್ಕಾರವು. ಎರಡನೇದು ಮಥನದಂಡಸಂಸ್ಕಾರವು. ಮೂರನೇದು ಅಗ್ನಿಸಂಸ್ಕಾರವು. ಈ ಮೂರು ಸಂಸ್ಕಾರಗಳಿಲ್ಲದೆ ಘೃತವು ಪ್ರಾಪ್ತವಾಗುವದಿಲ್ಲವು. ಅಂದರೆ ಮೊದ ಲು ಹಾಲಿಗೆ ಹೆಪ್ಪುಹಾಕಬೇಕು. ಆಮೇಲೆ ಆ ಹೆಪ್ಪುಗೊಂಡ ಮೊಸರನು

ಕಡೆಯಬೇಕು. ಕಡೆಯೋಣದರಿಂದುಂಟಾದ ಬೆಣ್ಣೆಯನ್ನು ಕಾಸಬೇಕು. ಆ ಕಾಸಿದ ಪಾತ್ರೆಯೊಳಗಿನ ತುಪ್ಪವನ್ನು ದೊಡ್ಡ ಭಾಂಡದಲ್ಲಿರುವ ತುಪ್ಪದೊಳಗೆ ಹಾಕಲು ಸಮರಸವಾಗಿ ಬಿಡುವುದು. ಮೊದಲಿನ ಹಾಲನ್ನು ಆ ತುಪ್ಪದಲ್ಲಿ ಹಾಕಲು ಅದು ಅದರಲ್ಲಿ ಕೂಡುವದಿಲ್ಲ. ಇದರಂತೆ ಅಶುದ್ಧಾತ್ಮನು ಶುದ್ಧನಾಗಬೇಕಾದರೆ ಮೂರು ಸಂಸ್ಕಾರಗಳು ಬೇಕು. ಒಂದನೇದು ಕ್ರಿಯಾದೀಕ್ಷೆಯು. ಎರಡನೇದು ಮಂತ್ರದೀಕ್ಷೆಯು. ಮೂರನೇದು ವೇಧಾದೀಕ್ಷೆಯು. ಕ್ರಿಯಾದೀಕ್ಷೆಯಲ್ಲಿ ಬಾಹ್ಯಾಭ್ಯಂತರಗಳಾದ ಪತಿಕರ್ಮಗಳು ಕ್ರಿಯಾಶಕ್ತಿವಿಶಿಷ್ಟ ಇಷ್ಟಲಿಂಗಧಾರಣೆಯು ಮಾಡಲ್ಪಡುವುದರಿಂದ ಆ ದೀಕ್ಷೆಗೆ ಕ್ರಿಯಾದೀಕ್ಷೆಯೆಂದು ಹೆಸರು. ಅಂದರೆ ಸ್ಥೂಲಶರೀರಕ್ಕೆ ಕಾರ್ಮಿಕಮಲವೆಂದು ಮೊದಲೇ ಹೇಳಿದ್ದೇವೆ. ಇದರೊಳಗೆ ಇಪ್ಪತ್ತುನಾಲ್ಕು ತತ್ವಗಳಿರುವುವು. ಇವುಗಳಿಂದ ಜೀವನು ಕೂಡಿಕೊಂಡಿದ್ದರಿಂದ ಇವನಿಗೆ ವಿಶ್ವನೆಂದು ಹೆಸರು. ಇವನ ಅಶುದ್ಧಿ ಅಂದರೆ ಪೃಥಿವ್ಯಾದಿ ಪ್ರಕೃತ್ಯಂತಗಳಾದ ಇಪ್ಪತ್ತು ನಾಲ್ಕು ತತ್ವಗಳಿಗೆ ಶಿವಯೋಗಶಾಸ್ತ್ರದಲ್ಲಿ ಅಶುದ್ಧಾಧ್ವವೆಂದು ಸಂಕೇತವು ಮಾಡಲ್ಪಟ್ಟಿರುವುದು. ಗುರುಮೂರ್ತಿಯು ಈ ಅಶುದ್ಧಾಧ್ವವನ್ನು ಶುದ್ಧಿಗೊಳಿಸಿ ಅಂದರೆ ಪೃಥಿವ್ಯಾದಿ ತತ್ವಗಳನ್ನು ಕಾರಣ ತತ್ವಗಳಲ್ಲಿ ಲಯಗೊಳಿಸುತ್ತಾ ಪ್ರಕೃತಿ ತತ್ವವನ್ನು ಕೂಡ ಕ್ರಿಯಾಶಕ್ತಿಯಲ್ಲಿ ಲಯಗೊಳಿಸಿ ಆ ಕ್ರಿಯಾಶಕ್ತಿಯನ್ನು ವಿರಾಡ್ರೂಪವಾದ ಇಷ್ಟಲಿಂಗದಲ್ಲಿ ಸಮರಸಗೊಳಿಸಿ ಆಮೇಲೆ ಕಲಾ ಮೊದಲುಗೊಂಡು ಐದು ತತ್ವಗಳೆಂಬ ಸೂಕ್ಷ್ಮಶರೀರವನ್ನು ಶುದ್ಧಿಗೊಳಿಸಿ ಆಣವಮಲವೆಂಬ ಕಾರಣ ಶರೀರವನ್ನು ಕೂಡ ಶುದ್ಧಿಗೊಳಿಸಿ ಈ ಶುದ್ಧಗಳಾದ ಮೂರು ಶರೀರಗಳಲ್ಲಿ ಇಷ್ಟ ಪ್ರಾಣಭಾವಲಿಂಗಗಳನ್ನು ಯೋಜಿಸಿ. ಅಂದರೆ ಶುದ್ಧವಾದ ಸ್ಥೂಲಶರೀರವೇ ತ್ಯಾಗಾಂಗವೆನಿಸುವದು. ಇಲ್ಲಿ ಇಷ್ಟಲಿಂಗವನ್ನೂ ಶುದ್ಧವಾದ ಸೂಕ್ಷ್ಮ ಶರೀಕವೇ ಭೋಗಾಂಗವೆನಿಸುವುದು. ಇಲ್ಲಿ ಪ್ರಾಣಲಿಂಗವನ್ನೂ, ಶುದ್ಧವಾದಕಾರಣ ಶರೀರವೇ ಯೋಗಾಂಗವೆನಿಸುವುದು. ಇಲ್ಲಿ ಭಾವಲಿಂಗವನ್ನೂ ಸ್ಥಾಪಿಸಿ, ಎಲೈ ಶಿಷ್ಯನೇ ನೀನು ನಾನು ನನ್ನದು ಎಂದು ತಿಳಿದುಕೊಂಡ ಸ್ಥೂಲಶರೀರವು ನಿನ್ನದಲ್ಲ. ಇಗೋ, ಈ ಇಷ್ಟಲಿಂಗದ ಕ್ರಿಯಾಶಕ್ತಿಯ ಪದಾರ್ಥಗಳು. ಆದ್ದರಿಂದ ನಾನು ಆ ಕ್ರಿಯಾಶಕ್ತಿಗೇನೇ ಸ್ಥೂಲಶರೀರದಲ್ಲಿ ಎಲ್ಲಾ ತತ್ವಗಳನ್ನು ಕೊಟ್ಟುಬಿಟ್ಟೆನು. ಆ ಕ್ರಿಯಾಶಕ್ತಿಯು ಇಷ್ಟಲಿಂಗಕ್ಕೆ ಶೇರಿದುದರಿಂದ ಅದನ್ನು ಅಲ್ಲಿಯೇ ಅರ್ಪಿಸಿಬಿಟ್ಟೆನು. ನೀನು ಅಸ್ಥಿರ ಪದಾರ್ಥಗಳಿಗೆ ನಾನು ನನ್ನವೆಂದು ವ್ಯರ್ಥವಾಗಿ ತಿಳಿದುಕೊಂಡು

ಸುಮ್ಮನೇ ಪೇಚಾಡುತ್ತಿರುವಿಯೆ. ಮತ್ತು ಸೂಕ್ಷ್ಮಶರೀರವೂ ಕೂಡ ನಿನ್ನದಲ್ಲ. ಅದು ಪ್ರಾಣಲಿಂಗದ ಶಕ್ತಿಯ ಪದಾರ್ಥವು. ಆ ಜ್ಞಾನಶಕ್ತಿಯು ಆ ಪ್ರಾಣಲಿಂಗರೂಪವಾದ ಜ್ಯೋತಿರ್ಲಿಂಗದ ಪದಾರ್ಥವು. ಆದ್ದರಿಂದ ಈ ಸೂಕ್ಷ್ಮಶರೀರವನ್ನು ಪ್ರಾಣಲಿಂಗಕ್ಕೇನೇ ಅರ್ಪಿಸಿಬಿಟ್ಟೆನು, ಆಣವಮಲವೆಂಬ ಕಾರಣಶರೀರವೂ ಕೂಡ ಚಿಚ್ಛಕ್ತಿಯಿಂದ ಕೂಡಿದ ಭಾವಲಿಂಗದ ಪದಾರ್ಥವು. ಅದಕ್ಕೆ ನೀನು ನಾನು ನನ್ನದು ಎಂದು ತಿಳಿದುಕೊಂಡಿರುವಿಯೆ ವಾಸ್ತವಿಕವಾಗಿ ಅದು ನಿನ್ನದಲ್ಲವೆಂದು ತತ್ವಮಸ್ಯರ್ಥವನ್ನೇ ಪ್ರತಿಪಾದಿಸುವ ಪಂಚಾಕ್ಷರೀ ಮಂತ್ರವನ್ನು ಬೋಧಿಸಿದಮೇಲೆ ಉತ್ತಮಾಧಿಕಾರಿಯು ಆಗಲೇ ಮುಕ್ತನಾಗಿ ಬಿಡುವನು. ಮಧ್ಯಮಾಧಮಾಧಿಕಾರಿಗಳಿಗೆ ಶಿವಯೋಗಾಭ್ಯಾಸವು ಬೇಕು. ಈ ವಿಷಯವಾಗಿ ಮುಂದೆ ಒಂದು ಸ್ವತಂತ್ರವಾದ ಮೋಕ್ಷಕಾಂಡವನ್ನೇ ಬರೆಯುವವರಾಗಿದ್ದೇವಾದ್ದರಿಂದ ಇಲ್ಲಿ ಎಲ್ಲಾ ರಹಸ್ಯವನ್ನೂ ಹೇಳಲಾಗುವುದಿಲ್ಲ. ಅರ್ಥಾತ್ ನಮ್ಮ ಸಿದ್ಧಾಂತದ ಮೇಲೆ ನೀನು ಮಾಡುವ ಆಕ್ಷೇಪಣೆಗಳಿಗೆ ಸಮಾಧಾನವನ್ನು ಹೇಳುವುದೇ ಈ ವಾದಕಾಂಡದ ಉದ್ದೇಶವಾಗಿರುವುದು. ಈ ಮೂರು ಮಲಗಳಿಂದ ಬಿಡಲ್ಪಟ್ಟ ಶುದ್ಧಾತ್ಮನು ಮುಕ್ತನಾದಾಗ್ಯೂ ಲಿಂಗಾಂಗ ಸಾಮರಸ್ಯವನ್ನು ದೇಹಪಂಜರವಿರುವವರಿವಿಗೂ ಅಭ್ಯಾಸ ಮಾಡಲೇಬೇಕು. ಅಥವಾ ಸಂಕ್ಷೇಪವಾಗಿ ಸ್ಥೂಲವನ್ನು ಸೂಕ್ಷ್ಮದಲ್ಲಿಯೂ, ಸೂಕ್ಷ್ಮವನ್ನು ಕಾರಣದಲ್ಲಿಯೂ ಲಯಗೊಳಿಸಿ, ಆ ಶುದ್ಧವಾದ ಶಕ್ತಿಯನ್ನು ಪರವಸ್ತುವಿನಲ್ಲಿ ಲಯಗೊಳಿಸಬೇಕು. ಈ ದೇಹಶುದ್ಧಿಯ ರೀತಿಯು ಅನೇಕಪ್ರಕಾರವಾಗಿ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುದು. ಆದರೂ ಇಲ್ಲಿ ಸಂಕ್ಷೇಪದಿಂದ ತೋರಿಸಿದ್ದಾಯಿತು. ಇನ್ನು ಜೀವಶುದ್ಧಿಯು, ವಿಶ್ವ ತೈಜಸ ಪ್ರಾಜ್ಞರೆಂಬ ಜೀವರುಗಳ ಸ್ವರೂಪವನ್ನು ಬಿಟ್ಟು, ಇಷ್ಟ ಪ್ರಾಣ ಭಾವಲಿಂಗಗಳ ಸ್ವರೂಪವಾಗುವಿಕೆಯೇ ಜೀವಶುದ್ಧಿಯೆನ್ನುವರು. ಅಂತು ಹಾಲಿನೊಳಗಿನ ತುಪ್ಪವನ್ನು ತೆಗೆಯಲಿಕ್ಕೆ ಮೂರು ಸಂಸ್ಕಾರಗಳು ಹೇಗೆ ಅವಶ್ಯಕವೋ ಹಾಗೆ ತನ್ನ ಕಿರಣಗಳಿಂದ ಶರೀರವೆಲ್ಲವನ್ನೂ ವ್ಯಾಪಿಸಿರುವ ಶುದ್ಧ ಚಿದಂಶರೂಪನಾದ ಜೀವನನ್ನು ಜೀರ್ಣೋದ್ಧರಿಸಬೇಕಾದರೆ ಮೂರು ದೀಕ್ಷಾಸಂಸ್ಕಾರಗಳು ಬೇಕು. ಇನ್ನುಳಿದ ಆಜ್ಞಾದಿ ದೀಕ್ಷೆಗಳು ಈ ಮೂರರಲ್ಲೇ ಅಂತರ್ಗತಗಳಾಗಿರುವುವು. ಅಶುದ್ಧ ಜೀವನು ತ್ಯಾಗಾಂಗವೆನಿಸಬೇಕಾದರೆ ಭಕ್ತಮಹೇಶ ಸ್ಥಲಗಳಲ್ಲಿ ಅಂತರ್ಗತಗಳಾದ ಪಿಂಡತಾ ಪಿಂಡಜ್ಞಾನಾದಿ ಸ್ಥಲಗಳ ಬಾಹ್ಯಾಭ್ಯಂತರಾಚರಣೆಗಳು ಬೇಕು. ಇವು ಸಿದ್ಧಾಂತಶಿಖಾ

ಮಣಿಯಲ್ಲಿ ಉಕ್ತಗಳಾಗಿರುವುವು. ಅಂತು ತನ್ನ ಮೂರು ಶರೀರಗಳನ್ನು ಶುದ್ಧಿ ಮಾಡಿಕೊಂಡು, ಇಷ್ಟ ಪ್ರಾಣ ಭಾವಲಿಂಗಗಳ ಉಪಾಸನೆಯು ದೃಢವಾಗಿ ಸಾಕ್ಷಾತ್ಕಾರರೂಪವಾಗಲು, ತನ್ನ ಚಿತ್ತಶಕ್ತಿಯು ವಿಕಾಸವಾಗಿ ಚಿಚ್ಛಕ್ತಿಯಿಂದ ಕೂಡಿದ ಪರಶಿವನೇ ಆಗಿಬಿಡುವನು. ಕ್ರಿಯಾದೀಕ್ಷೆಯಿಂದ ಮಾಂಸಪಿಂಡವಳಿದು ಮಂತ್ರಪಿಂಡವುಳ್ಳವನಾಗುವನು. ಆದ್ದರಿಂದ ತ್ಯಾಗಾಂಗಾಭಿಮಾನಿ ಪ್ರಕಾಶಕ್ಕೆ ಮಂತ್ರವೆಂದು ಹೆಸರು. ಮಂತ್ರಕ್ಕೂ ಮಂತ್ರಾರ್ಥಕ್ಕೂ ಪರಸ್ಪರಾಭೇದವು. ಆ ಮಂತ್ರಾರ್ಥವೇ ನಾನು ಎಂದು ಅಭೇದಜ್ಞಾನದಿಂದ ಮಂತ್ರೇಶ್ವರನಾಗುವನು. ಈ ಮಂತ್ರೇಶ್ವರನಾಗುವುದಕ್ಕೆ ಮಂತ್ರಸಂಬಂಧವಾದ ದೀಕ್ಷೆಯು ಬೇಕು. ಈ ಮಂತ್ರೇಶ್ವರನಿಗೆ ಭೋಗಾಂಗವೆಂದು ಹೆಸರು. ಇನ್ನು ವೇಧಾದೀಕ್ಷೆಯಿಂದ ಶಿವಲಿಂಗ ಸಾಮರಸ್ಯವೆಂಬ ಯೋಗವಾಗುವುದರಿಂದ ಯೋಗಾಂಗವೆಂದೂ ಮಂತ್ರಮಹೇಶ್ವರನೆಂದೂ ಪರ್ಯಾಯನಾಮಗಳು.

ವೀರಶೈವಶಾಸ್ತ್ರದಲ್ಲಿ ಶುದ್ಧಾತ್ಮನಾದ ಭಕ್ತನಿಗೆ (ಶಿವದೀಕ್ಷಾಸಂಪನ್ನನಿಗೆ) ಶಿವಾರ್ಚನ, ಶಿವಮಂತ್ರಜಪ, ಶಿವಮಂತ್ರಾರ್ಥರೂಪವಾದ ಲಿಂಗಾಂಗ ಸಾಮರಸ್ಯಬೋಧಕ ವೇದವೇದಾಂತಾಗಮಾದಿ ಅಧ್ಯಯನವು, ಮತ್ತು ಅವುಗಳ ಅರ್ಥವನ್ನು ಪ್ರತಿಪಾದಿಸುವ ಬ್ರಹ್ಮಸೂತ್ರಾದಿಗಳ ಮೂಲಕ ಬ್ರಹ್ಮಜಿಜ್ಞಾಸಾ ಮೊದಲಾದವುಗಳ ಅಧಿಕಾರವಲ್ಲದೆ ದೀಕ್ಷೆಯಿಲ್ಲದವನಿಗೆ ಅಧಿಕಾರವಿಲ್ಲವು. ಆದ್ದರಿಂದಲೇ "ಶಿವೋಭೂತ್ವಾ ಶಿವಂಯಜೇತ್" ಶಿವೋಭೂತ್ವಾಯಜೇತೇತಿ ಭಕ್ತೋ ಭೂತ್ವೇತಿಕಥ್ಯತೆ | "ನಾರುದ್ರೋ ಕೀರ್ತಯೇದ್ರುದ್ರಂ | ನಾರುದ್ರೋ ರುದ್ರಮರ್ಚಯೇತ್" ನಾರುದ್ರಃ ಕ್ರಮಪಾಠಕಃ | ಇತ್ಯಾದಿ ವಾಕ್ಯಗಳು ಯುಕ್ತಗಳಾಗುತ್ತವೆ. ಎಲೈ ಶಿವಾದ್ವೈತಿಯೇ "ತನುತ್ರಯಗತಾನಾದಿ ಮಲತ್ರಯ ಮಸೌ ಗುರುಃ। ದೀಕ್ಷಾತ್ರಯೇಣನಿರ್ದಗ್ಧ್ವಾ ಲಿಂಗತ್ರಯಮುಪಾದಿಶತ್" ಇಂತೆಂಬುವ ಹಿಂದೆ ಹೇಳಿದ ಶಿವಾಗಮ ವಾಕ್ಯದಂತೆ ಮೂರು ದೀಕ್ಷೆಗಳಿಂದಲೇ ಬಂಧರೂಪವಾದ ಮಲತ್ರಯವು ನಷ್ಟವಾದಮೇಲೆ ದೀಕ್ಷಿತನು ಮುಕ್ತನೇ ಆದನಲ್ಲವೇ. ಪುನಃ ಇವನಿಗೆ ಶಾಸ್ತ್ರಜಿಜ್ಞಾಸೆಯಿಂದ ಪ್ರಯೋಜನವೇನು? ಬ್ರಹ್ಮಾದ್ವೈತಿಯೆ ಈ ಆಕ್ಷೇಪಣೆಗೆ ಹಿಂದೊಮ್ಮೆ ಉತ್ತರವನ್ನು ಹೇಳಿರುವೆನು. ಆದರೂ ರೀತ್ಯಂತರದಿಂದ ಹೇಳುವೆನು ಕೇಳು: ವಾಮದೇವನು ಜ್ಞಾನಿಯಾಗಿದ್ದು ಮುಕ್ತನಾಗಿದ್ದನೆಂದೂ, ಮತ್ತು ಅವನು ಗೃಹಸ್ಥಾಶ್ರಮಿಯಾಗಿದ್ದನೆಂದೂ ಜನಕಾದಿಗಳು ಗೃಹಸ್ಥಾಶ್ರಮಿಗಳಾಗಿದ್ದು ಜೀವನ್ಮುಕ್ತರಾಗಿದ್ದರೆಂಬುವುದೂ

ಎಲ್ಲರಿಗೂ ಗೊತ್ತಿದ್ದ ಸಂಗತಿಯೇ ಅಲ್ಲವೇ? ಮತ್ತು ಅವರು ಶಾಸ್ತ್ರಜಿಜ್ಞಾಸೆಯನ್ನು ಕೂಡ ಮಾಡುತ್ತಿದ್ದರಲ್ಲವೇ ಅಂದಮೇಲೆ ಅವರು ಶಿಷ್ಯರೊಡನೆ ಶಾಸ್ತ್ರಜಿಜ್ಞಾಸೆಯನ್ನು ಮಾಡುವುದು ಹೇಗೆ ಸಂಗತವಾಗುವದೆಂದು ನಿನ್ನನ್ನು ಕೇಳಿದರೆ ನಿನ್ನ ಉತ್ತರವೇನು? ಜ್ಞಾನದಿಂದ ಕಾರ್ಯಸಹಿತ ಅಜ್ಞಾನ ನಷ್ಟವಾಗಿದ್ದರೂ ಪ್ರಾರಬ್ಧ ಕರ್ಮದಿಂದ ಅವರಿಗೆ ಜಿಜ್ಞಾಸಾದಿ ವ್ಯವಹಾರವು ಸಂಗತವಾಗುತ್ತದೆಂದರೆ, ದೀಕ್ಷೆಯಿಂದ ಮಲವು ನಷ್ಟವಾಗಿದ್ದರೂ ಕಾರ್ಮಿಕಮಲವಾಸನೆಯಿಂದ ದೀಕ್ಷಿತರಿಗೆ ಜಿಜ್ಞಾಸಾದಿ ವ್ಯವಹಾರವು ಸಂಗತವಾಗುತ್ತದೆಂದು ನಾನು ಹೇಳುವೆನು. ಸಂಪೂರ್ಣವಾಗಿ ತ್ಯಾಗಾಂಗದಲ್ಲಿ ಪ್ರವಿಷ್ಟನಾದ ದೀಕ್ಷಿತನಿಗೆ ಕಾರ್ಮಿಕಮಲವಾಸನೆಯುಂಟೆಂದು ನಾನು ಅಂಗೀಕರಿಸುತ್ತೇನೆ. ಇದರಂತೆ ನಮ್ಮ ಪ್ರಾಚೀನರು ಅಂಗೀಕರಿಸಿದ್ದಾರೆ. ಇನ್ನು ಭೋಗಾಂಗ ಪ್ರವಿಷ್ಟನಾದ ದೀಕ್ಷಿತನಿಗೆ ಕಾರ್ಮಿಕಮಲವೆಂದರೆ ವಾಸನೆಯು ಕ್ಷಯೋನ್ಮುಖವಾಗಿರುವುದು. ಯೋಗಾಂಗ ಪ್ರವಿಷ್ಟನಾದ ದೀಕ್ಷಿತನಿಗೆ ಆ ಕಾರ್ಮಿಕಮಲದ ವಾಸನೆಯು ಕ್ಷೀಣವಾಗಿಯೇ ಬಿಡುವುದು. (ನಾಶವನ್ನು ಹೊಂದುವುದು) ಅಂದರೆ ಕಾರ್ಮಿಕಮಲವಾಸನೆಯು ಇರುವವರಿಗೂ ದೇಹವು ಇದ್ದೇಯಿರುವುದು. ಆದ್ದರಿಂದಲೇ ,,ಆದೇಹಾಂತಮಿಯಂ ದೀಕ್ಷಾಪಶುಪಾಶವಿನಾಶಿನೀ | ಎಂಬುವ ಶಿವಾಗಮ ವಾಕ್ಯದಂತೆ ಶಿವದೀಕ್ಷಾಕಾಲಕ್ಕೆ ಉಪದಿಷ್ಟಗಳಾದ ಬಾಹ್ಯಾಭ್ಯಂತರಗಳಾದ ಪತಿಕರ್ಮಗಳ ಆಚರಣೆಯೂ ಜ್ಞಾನಾಭ್ಯಾಸವೂ ಮತ್ತು ಪತಿಕರ್ಮ ಪತಿಜ್ಞಾನಗಳನ್ನುಂಟುಮಾಡುವ ಬ್ರಹ್ಮಸೂತ್ರಾದಿಗಳ ವಿಚಾರವೂ ದೀಕ್ಷಿತನ ಕರ್ತವ್ಯವೆಂದು ತಿಳಿಯತಕ್ಕದ್ದು.

ಶಿವಾದ್ವೈತಿಯೆ, ಕೇವಲ ಬ್ರಹ್ಮಸ್ವರೂಪವನ್ನು ನಿರೂಪಿಸುವ ವೇದಾಂತಗಳ ಅರ್ಥವನ್ನು ಸಂಕ್ಷೇಪರೀತಿಯಿಂದ ಸೂಚಿಸುವ ಬ್ರಹ್ಮಸೂತ್ರಗಳು ಕರ್ಮ ಪ್ರತಿಪಾದಕಗಳಾಗಿಲ್ಲವು. ಹೀಗಿದ್ದು ನೀನು ಪತಿಕರ್ಮಜ್ಞಾನವನ್ನುಂಟುಮಾಡುವ ಬ್ರಹ್ಮಸೂತ್ರಗಳ ವಿಚಾರವು ದೀಕ್ಷಿತನ ಕರ್ತವ್ಯವೆನ್ನುವುದು ತಪ್ಪಾಗುವುದಿಲ್ಲವೇ. ಕರ್ಮ ಮೀಮಾಂಸಾ ಶಾಸ್ತ್ರವು ಪೃಥಕ್ಕಾಗಿರುವುದಲ್ಲವೇ? ಅದನ್ನು ಜೈಮುನಿ ಮುನೀಶ್ವರರು ಮಾಡಿರುವುದು ಲೋಕವಿಸ್ತೃತವಾಗಿರುವುದಲ್ಲವೇ. ಅದರಿಂದಲೇ ಕರ್ಮಜ್ಞಾನವಾಗುತ್ತಿರಲು, ಉತ್ತರ ಮೀಮಾಂಸೆಯಲ್ಲಿ ಅದನ್ನು ಹೇಳುವುದು ವ್ಯರ್ಥವಲ್ಲವೇ. ಬ್ರಹ್ಮಾದ್ವೈತಿಯೆ ಪೂರ್ವಮೀಮಾಂಸೆಯಲ್ಲಿ ಸ್ವರ್ಗಸ್ವಾರಾಜ್ಯಾದಿ ಅನಿತ್ಯ ಫಲಗಳನ್ನು ಕೊಡುವ ಪಶುಕರ್ಮಗಳು ವಿಚಾರಿ

ಸಲ್ಪಟ್ಟಿವೇ ಹೊರತು ಪತಿಕರ್ಮಗಳು ವಿಚಾರಿಸಲ್ಪಟ್ಟಿಲ್ಲವೆಂದು ಪುನಃ ವ್ಯಾಸರು ಪ್ರಾಧಾನ್ಯತಃ ವೇದಾಂತೋಕ್ತಗಳಾದ ಪತಿಕರ್ಮಗಳಿಗೆ ವಿಧಾಯಕವಾದ ಉತ್ತರ ಮೀಮಾಂಸಾ ಶಾಸ್ತ್ರವನ್ನು ರಚಿಸಿರುವುದರಿಂದಲೇ ಕಂಡುಬರುತ್ತದೆ. ಉತ್ತರ ಮೀಮಾಂಸಾ ಶಾಸ್ತ್ರಕ್ಕೆ ಕೇವಲ ಜೀವಬ್ರಹ್ಮರುಗಳ ಸ್ವರೂಪೈಕ್ಯವೇ ವಿಷಯವೆಂದರೆ ಪ್ರತಿಯೊಂದಧಿಕರಣದಲ್ಲಿಯೂ ಸ್ವರೂಪೈಕ್ಯವೇ ವಿಚಾರಿಸಲ್ಪಡಬೇಕು. ಹಾಗೆ ವಿಚಾರಿಸಲ್ಪಡದೇ ಬರುವುದರಿಂದ ಸ್ವರೂಪೈಕ್ಯವು ಶಾಸ್ತ್ರಕ್ಕೆ ವಿಷಯವಲ್ಲವು. ಪೂರ್ವಮೀಮಾಂಸೆಯಲ್ಲಿ ಆಯಾಯ ದೇವತೆಗಳುಳ್ಳ ಪಶುಕರ್ಮಗಳು ವಿಚಾರಿಸಲ್ಪಡುವಂತೆ, ಉತ್ತರಮೀಮಾಂಸಾ ಶಾಸ್ತ್ರದಲ್ಲಿ ಬ್ರಹ್ಮವಿದ್ಯಾಂಗಭೂತಗಳಾದ ಪರಶಿವ ಬ್ರಹ್ಮವೇ ವಿಷಯವಾಗುಳ್ಳ ಪತಿಕರ್ಮಗಳು ವಿಚಾರಿಸಲ್ಪಡುವುವು. ಆದ್ದರಿಂದಲೇ ಜೈಮಿನಿಶಾಸ್ತ್ರಕ್ಕೆ ಪೂರ್ವಮೀಮಾಂಸೆಯೆಂತಲೂ, ಬಾದರಾಯಣಶಾಸ್ತ್ರಕ್ಕೆ ಉತ್ತರಮೀಮಾಂಸೆಯೆಂತಲೂ ಲೋಕಪ್ರಸಿದ್ಧಿಯುಂಟು. ಉತ್ತರಮೀಮಾಂಸಾ ಶಾಸ್ತ್ರವು ಉಪಾಸ್ಯವಾದ ಬ್ರಹ್ಮಸ್ವರೂಪವನ್ನೂ, ಆ ಪರಶಿವ ಬ್ರಹ್ಮೋಪಾಸನಾದಿ ಪತಿಧರ್ಮಗಳನ್ನೂ ನಿರೂಪಿಸುವುದಾದ್ದರಿಂದ ಕೇವಲ ಮುಮುಕ್ಷುಗಳಾದ ವೀರಶೈವರು ಅವಶ್ಯವಾಗಿ ಮೀಮಾಂಸಾ ಶಾಸ್ತ್ರವನ್ನು ವಿಚಾರಿಸಬೇಕು. ಆದ್ದರಿಂದಲೇ ಕಾರಿಕಾಕಾರರು ವ್ಯಾಸಸೂತ್ರಮಿದಂ ಪಾತ್ರಂ ಬ್ರಹ್ಮಾನಂದ ಸುಧಾಸೃತೇಃ | ತತ್ರನಿಷ್ಣಾತಮನಸಾಂ ತತ್ವಸಾರಮುಹಂಬ್ರುವೇ || ಆಚಾರ್ಯಾಣಾಮನೇಕೇಷಾಮಂಗಾಂಗಿತ್ವ ವ್ಯವಸ್ಥಯಾ | ದ್ವಾರಂ ಪ್ರವಿಶತಶ್ಶೀರ್ಷಾಮಿವ ಬ್ರಹ್ಮವ್ಯವಸ್ಥಿತಂ || ಎಂದು ಹೇಳಿರುವರು. ಅಂದರೆ ವ್ಯಾಸಸೂತ್ರವೆಂಬ ಪಾತ್ರೆಯು ಬ್ರಹ್ಮಾನಂದವೆಂಬ ಅಮೃತದ ಧಾರೆಗೆ ಆಶ್ರಯವೆಂತಲೂ, ಅಲ್ಲಿ ಆಸಕ್ತವಾದ ಮನಸ್ಸುಳ್ಳವರಿಗೆ ನಾನು ತತ್ವಸಾರವನ್ನು ಹೇಳುವೆನೆಂತಲೂ, ಅದೇಕೆ ಹಿಂದೆ ಆಗಿಹೋದ ವಿವರ್ತವಾದಿಗಳೇ ಮೊದಲಾದ ಪರಮತದ ಆಚಾರ್ಯರು ವ್ಯಾಸಸೂತ್ರಗಳಾದ ಯಥಾರ್ಥಸಾರವನ್ನು ಹೇಳಿಲ್ಲವೇ. ನೀನು ಪುನಃ ಹೇಳುವಲ್ಲಿ ತಾತ್ಪರ್ಯವೇನು ಎಂದು ತಾನೆ ಶಂಕಿಸಿಕೊಂಡು, "ಆಚಾರ್ಯಾಣಾಮನೇಕೇಷಾಂ" ಎಂಬುವ ಶ್ಲೋಕವನ್ನು ಹೇಳಿರುವನು. ಈ ಶ್ಲೋಕದ ತಾತ್ಪರ್ಯವೇನಂದರೆ–ಮನುಷ್ಯನು ಮನೆಯ ಬಾಗಿಲೊಳಗೆ ಪ್ರವೇಶಮಾಡಬೇಕಾದರೆ, ಮೊದಲು ಅವನ ಪಾದವೇ ಮೊದಲಾದ ಅವಯವಗಳು ಪ್ರವಿಷ್ಟಗಳಾಗಿ, ಆಮೇಲೆ ಅವನ ಮಸ್ತಕವು ಪ್ರವಿಷ್ಟವಾಗಿ, ಆಮೇಲೆ ಅವನ ಸಂಪೂರ್ಣ ಶರೀರವು (ಅಂಗಿಯು) ಪ್ರವಿಷ್ಟವಾಗುವು

ದು. ಇಲ್ಲಿ ಪಾದಾದಿ ಅವಯವಗಳು ಮಾತ್ರ ಪ್ರವಿಷ್ಟಗಳಾಗಿ ಅವನ ಮಸ್ತಕವು ಬಾಗಿಲ ಹೊರಗೆ ಉಳಿದುಕೊಂಡರೆ ಹ್ಯಾಗೋ ಹಾಗೆ, ಬ್ರಹ್ಮವು ಇನ್ನುಳಿದ ಆಚಾರ್ಯರಿಗೆ ಇರುವುದು. ಅಂದರೆ ಸಂಪೂರ್ಣ ಬ್ರಹ್ಮವು ಅವರ ಮನೋಮಂದಿರದ ದ್ವಾರದಲ್ಲಿ ಪ್ರವೇಶಿಸಲಿಲ್ಲವು. ಕಿಂತು ಕಿಂಚಿದಂಶವು (ಅಂಗವು) ಪ್ರವೇಶಿಸಿರುವುದು. ಶ್ಲೋ || ಶಿವಾಂಶಾ ಬ್ರಹ್ಮವಿಷ್ಣ್ವಾದ್ಯಾ ಅಂಶೀ ದೇವಶ್ಶಿವಸ್ಮೃತಃ || ಎಂಬುಕ್ತಿಯಂತೆ ಪರಶಿವ ಬ್ರಹ್ಮದ ಶಕ್ತ್ಯಂಶವು ಮಾತ್ರ ಅವರುಗಳ ಮನಸ್ಸಿನಲ್ಲಿ ಪ್ರವಿಷ್ಟವಾಯಿತೇ ಹೊರತು ಬ್ರಹ್ಮವು ಬೇರೆ ಉಳಿದಂತಾಯಿತು. ಆದ್ದರಿಂದ ನಾನು ಈ ಸೂತ್ರಗಳ ಯಥಾರ್ಥ ಸಾರವನ್ನು ಹೇಳುವೆನೆಂದು ಇವರ ತಾತ್ಪರ್ಯವು ಕಂಡುಬರುತ್ತದೆ. ಶಿವಾದ್ವೈತಿಯೆ ನಮ್ಮ ಆಚಾರ್ಯರು ಸಚ್ಚಿದಾನಂದರೂಪವಾದ ಪರಬ್ರಹ್ಮವನ್ನೇ ತಮ್ಮ ಭಾಷ್ಯದಲ್ಲಿ ಪ್ರತಿಪಾದಿಸಿರುವರು. ಅವರ ಮನಸ್ಸಿನಲ್ಲಿ ಆ ಬ್ರಹ್ಮವು ಪ್ರವೇಶಿಸದಿದ್ದರೆ ಅದನ್ನು ಅವರು ಪ್ರತಿಪಾದಿಸುವ ಬಗೆ ಹೇಗೆ ? ಆದ್ದರಿಂದ ಸಂಪೂರ್ಣ ಬ್ರಹ್ಮವೇ ಅವರ ಮನಸ್ಸಿನಲ್ಲಿ ಪ್ರವಿಷ್ಟವಾಗಿರಲೇ ಬೇಕು ಅಂದಮೇಲೆ ನಿಮ್ಮ ಕಾರಿಕಾಕಾರರು ಆ ರೀತಿಯಾಗಿ ಅಭಿಪ್ರಾಯ ಪಡುವುದಾದರೆ ಅದು ತಪ್ಪಾಗುವುದಿಲ್ಲವೇ. ಬ್ರಹ್ಮಾದ್ವೈತಿಯೆ, ಈ ವಿಚಾರವು ಮುಂದಣ ಪಾದದಲ್ಲಿ ಸ್ಪಷ್ಟವಾಗುವದಾಗುತ್ತದೆ. ಅದರಿಂದಲೇ ನಿನಗೆ ನಿಮ್ಮ ಆಚಾರ್ಯರು ಮನಸ್ಸಿನಿಂದ ಸಂಪೂರ್ಣ ಬ್ರಹ್ಮವನ್ನು ಪ್ರವೇಶಿಸಿರುವರೋ ಇಲ್ಲವೋ ಎಂಬುವದು ಗೊತ್ತಾಗುವದು. ಆದ್ದರಿಂದ ಈಗ ಪ್ರಕೃತವನ್ನನುಸರಿಸುವೆನು. ಅಂತು ಪೂರ್ವಮೀಮಾಂಸೆಯಲ್ಲಿ ಸಮಸ್ತ ವೇದಾರ್ಥವು ವಿಚಾರಿಸಲ್ಪಡದೇ ಇರುವುದರಿಂದಲೂ, ಬ್ರಹ್ಮವೂಕೂಡ ವೇದಾರ್ಥವಾಗಿರುವುದರಿಂದಲೂ, ವಿದ್ಯಾವಿಧಿಗೆ ವಿಷಯವಾಗಿರುವುದರಿಂದಲೂ, ಮತ್ತು ಅದು ಅತಿ ಸೂಕ್ಷ್ಮವಿರುವುದರಿಂದಲೂ ವಿಚಾರಯೋಗ್ಯವಾಗಿದೆಯೆಂದು ತಿಳಿದು ಆ ಬ್ರಹ್ಮವಿಚಾರವನ್ನು ಭಗವದ್ಬಾದರಾಯಣಾಚಾರ್ಯರು ‹‹ ಅಥಾತೋ ಬ್ರಹ್ಮಜಿಜ್ಞಾಸಾ ›› ಎಂಬುವದು ಮೊದಲಾಗಿ ಅನಾವೃತ್ತಿಶ್ಶಬ್ದಾತ್ ಇತ್ಯಂತವಾದ ಶಾಸ್ತ್ರವನ್ನು ರಚಿಸಿರುವರು. ಮುಮುಕ್ಷುಗಳಾದ ವೀರಶೈವರಿಗೆ ಬ್ರಹ್ಮಾನಂದವೆಂಬ ಅಮೃತವು ಬೇಕಾಗಿರುವುದರಿಂದಲೂ, ಆ ಅಮೃತಕ್ಕೆ ಈ ಶಾಸ್ತ್ರವು ಪಾತ್ರರೂಪವಾಗಿರುವುದರಿಂದಲೂ ವೀರಶೈವರು ಪೂರ್ವಕಾಂಡ ವಿಚಾರವನ್ನು ಪ್ರಾಧಾನ್ಯವಾಗಿಟ್ಟುಕೊಳ್ಳದೆ ಉತ್ತರಕಾಂಡ ವಿಚಾರಶಾಸ್ತ್ರವನ್ನು ಪ್ರಾಧಾನ್ಯವಾಗಿಟ್ಟುಕೊಂಡಿರುವರು. ಆದ್ದರಿಂದಲೇ ಕಾರಿಕಾಕಾರರು ಶ್ಲೋ || ತಸ್ಮಾದುಕ್ತೇನ

ರೂಪೇಣ ವಿಚಾರ್ಯಂ ಗುರುಸೇವಯಾ | ಬ್ರಹ್ಮಕೈವಲ್ಯಫಲದಾಮಾಗಮೈರ್ಲಿಂಗಶಬ್ದಿತಂ || ಅವಿನಾಭೂತಚಿಚ್ಛಕ್ತಿ ಪ್ರಸಾದಾನ್ಮೋಕ್ಷಮಾಪ್ನುಯಾತ್ | ಎಂದು ಹೇಳಿರುವರು. ಇದಲ್ಲದೆ ಸ್ವಪ್ರಭಾನಂದ ಶಿವಾಚಾರ್ಯರೂ ಕೂಡ ಶಿವಸೂತ್ರ ಬ್ರಹ್ಮಸೂತ್ರಗಳಿಗೆ ಏಕಾರ್ಥವನ್ನು ತೋರಿಸಿ, "ಏವಮುಕ್ತಕ್ರಮೇಣ ಶಿವಸೂತ್ರಸಂಪ್ರತಿಪನ್ನದೃಕ್ಕ್ರಿಯಾತ್ಮಕ ಚೈತನ್ಯ ಪ್ರತಿಪಾದಕ ಬ್ರಹ್ಮಸೂತ್ರ ಷಟ್‌ಸ್ಥಲಬ್ರಹ್ಮ ಷಟ್‌ತ್ರಿಂಶತ್ತತ್ವ ಮಹಾಮಂತ್ರಪರಿಜ್ಞಾನವಾನ್ ಇಹಜನ್ಮನಿ ಅಸ್ಮಿನ್ನೇವ ದೇಹೆ ಅಮೃತೋಭವತಿ" ಎಂದು ಹೇಳಿರುವರು.

ಅಂದರೆ "ಚೈತನ್ಯಮಾತ್ಮಾ" ಇತ್ಯಾದಿ ಶಿವಸೂತ್ರಗಳಿಂದ ಪ್ರತಿಪಾದಿಸಲ್ಪಡುವ ಜ್ಞಾನ ಕ್ರಿಯಾಶಕ್ತ್ಯಾತ್ಮಕವಾದ ಚೈತನ್ಯರೂಪವಾದ ಯಾವ ಪರಶಿವಲಿಂಗವಿದೆಯೋ ಅಂತಹ ಲಿಂಗರೂಪ ಬ್ರಹ್ಮವನ್ನೇ ಪ್ರತಿಪಾದಿಸುವ ಬ್ರಹ್ಮಸೂತ್ರಾರ್ಥ ಜ್ಞಾನವುಳ್ಳವನು, ಷಟ್‌ಸ್ಥಲ ಬ್ರಹ್ಮಜ್ಞಾನವುಳ್ಳವನು, ಷಟ್‌ತ್ರಿಂಶತ್ತತ್ವಗಳ ಮತ್ತು ಮಹಾ ಮಂತ್ರಾರ್ಥ ಜ್ಞಾನವುಳ್ಳವನು, ಯಾವನುಂಟೋ ಅವನು "ತಮೇವ ವಿದ್ವಾನ್ ಅಮೃತ ಇಹಭವತಿ" ಎಂಬುವ ಶ್ರುತಿಯಂತೆ ಇದೇ ಶರೀರದಲ್ಲಿಯೇ ಮುಕ್ತನಾಗುವನೆಂದು ಇವರ ತಾತ್ಪರ್ಯವು. ಅಂದರೆ ವೀರಶೈವರು ಪ್ರಾಧಾನ್ಯವಾಗಿ ಅನುಸರಿಸುವ ಷಟ್‌ಸ್ಥಲ ಬ್ರಹ್ಮ ಪ್ರತಿಪಾದಕವಾದ ಶಿವಯೋಗಶಾಸ್ತ್ರವೂ, ಶಿವೋಪನಿಷತ್ತುಗಳ ಸಾರವನ್ನೇ ಬೋಧಿಸುವ ಶಿವಸೂತ್ರಗಳೂ, ಬ್ರಹ್ಮೋಪನಿಷತ್ಸಾರವನ್ನು ಬೋಧಿಸುವ ಬ್ರಹ್ಮಸೂತ್ರಗಳೂ ಪರಶಿವ ಬ್ರಹ್ಮವಂದನ್ನೇ ಬೋಧಿಸುವುದರಿಂದಲೂ, ಶಿವೋಪನಿಷದ್ಬ್ರಹ್ಮೋಪನಿಷತ್ತುಗಳು ಶಿವನೊಬ್ಬನಿಂದಲೇ ಆವಿರ್ಭವಿಸಿರುವುದರಿಂದಲೂ, ತನ್ಮೂಲಕಗಳಾದ ಈ ಶಾಸ್ತ್ರಗಳು ಒಂದೇ ಅಭಿಪ್ರಾಯವನ್ನು ಬೋಧಿಸುತ್ತವೆಂದು ಹೇಳುವುದು ಯುಕ್ತವಾಗುವುದರಿಂದಲೂ, ವೀರಶೈವರಿಂದ ಆ ಶಾಸ್ತ್ರಗಳು ವಿಚಾರಣೀಯಗಳೇ ಆಗಿರುವವೆಂದು ಆ ಶಾಸ್ತ್ರಜನ್ಯ ಲಿಂಗಾಂಗ ಸಾಮರಸ್ಯ ಜ್ಞಾನವುಳ್ಳವನು ಆಹಾರ ವ್ಯವಹಾರಾದಿಗಳಿಂದ ಲೌಕಿಕರಂತೆ ಇದ್ದಾಗ್ಯೂ ಮುಂದೆ ಅವನಿಗೆ ಜನ್ಮಾಂತರಗಳಿಲ್ಲದಿರುವುದರಿಂದ ಜೀವನ್ಮುಕ್ತನಾಗಿ ಪಿಂಡಪಾತಾನಂತರದಲ್ಲಿ ಸರ್ವಜ್ಞತ್ವಾದಿ ಶಕ್ತಿಗಳು ವಿಕಾಸವಾಗುವದರಿಂದ ಸಾಕ್ಷಾನ್ಮುಕ್ತನೇ (ಶಿವನೇ) ಆಗಿಬಿಡುವನೆಂದು ಇವರ ತಾತ್ಪರ್ಯವು. ಅರ್ಥಾತ್ ಶಿವದೀಕ್ಷಾಸಂಪನ್ನನಿಗೆ ಲಿಂಗಾಂಗ ಸಾಮರಸ್ಯಾಂಕುರವು ಗುರುವಿನಿಂದಲೇ ಮಾಡಲ್ಪಟ್ಟಿದ್ದಾಗ್ಯೂ ಅದರ ರಕ್ಷಣೆಗಾಗಿ ಶಾಸ್ತ್ರಾರ್ಥ ಶ್ರವಣಾದಿಗಳನ್ನು ಮಾಡು

ತ್ತಲೇ ಇರಬೇಕು. ಶಿವಾದ್ವೈತಿಯೇ ? ‚‚ತಮೇವ ವಿದ್ವಾನಮೃತ ಇಹ ಭವತಿ'' ಎಂಬುವ ಮಂತ್ರವು. ಪುರುಷಸೂಕ್ತಾಂತರ್ಗತವಾಗಿರುವದು. ಈ ಮಂತ್ರಕ್ಕಿಂತಲೂ ಪೂರ್ವದಲ್ಲಿ ಯಾವದು ಹೇಳಲ್ಪಟ್ಟಿದೆಯೋ ಅದನ್ನು ತಿಳಿದವನು ಮಾತ್ರ ಈ ಶರೀರವಿರುವಾಗಲೇ ಮುಕ್ತನಾಗುವನೆಂದು ತಾತ್ಪರ್ಯವು. ಅಂದಮೇಲೆ ನಿನ್ನ ಷಟ್‌ಸ್ಥಲ ಬ್ರಹ್ಮವೇ ಆಗಲಿ, ದೃಕ್ರಿಯಾತ್ಮಕ ಚೈತನ್ಯವೇ ಆಗಲಿ ಷಟ್‌ತ್ರಿಂಶತ್ತತ್ವಗಳೇ ಆಗಲಿ, ಈ ಮಂತ್ರದ ಹಿಂದೆ ಹೇಳಲ್ಪಟ್ಟಿಲ್ಲವು. ಆದ್ದರಿಂದ ಷಟ್‌ಸ್ಥಲ ಬ್ರಹ್ಮಜ್ಞಾನವುಳ್ಳವನು ಜೀವನ್ಮುಕ್ತನಾಗುವನೆಂದು ‚‚ತಮೇವ ವಿದ್ವಾನಮೃತ ಇಹಭವತಿ'' ಎಂಬುವುದಕ್ಕೆ ಅರ್ಥಮಾಡುವುದು ತಪ್ಪಾಗುವದಿಲ್ಲವೇ ? ಅಂದರೆ ಬ್ರಹ್ಮಾದ್ವೈತಿಯೇ ? ಮಿಶ್ರಶೈವನಾದ ನೀನು ಹೀಗೆ ಆಕ್ಷೇಪಿಸುವುದು ಯುಕ್ತವೇಸರಿ. ಈ ನಿನ್ನ ಆಕ್ಷೇಪಕ್ಕೆ ಸ್ವಪ್ರಭಾನಂದ ಶಿವಾಚಾರ್ಯರೇ ಉತ್ತರವನ್ನು ಹೇಳಿರುವರು ಕೇಳು ? ‚‚ಸಹಸ್ರಾಕ್ಷ ಇತಿ'' ಸಭೂಮಿಂ ವಿಶ್ವತೋ ವೃತ್ವಾ | ಅತ್ಯತಿಷ್ಠದ್ದಶಾಂಗುಲಂ | ಉತಾಮೃತತ್ವಸ್ಯೇಶಾನಃ ಏತಾವಾನಸ್ಯ ಮಹಿಮಾ| ಅತೋ ಜಾಯಾಗ್‌ಶ್ಚ ಪೂರುಷಃ || ಇತಿ ಶ್ರುತತ್ವಾತ್ ಸಹಸ್ರಾಕ್ಷತ್ವ ಪ್ರಕಟನೇನ ಜ್ಞಾತೃತಾ ಶಕ್ತೇಃ ಈಶಾನ ಇತ್ಯಂಶೇನ ವಿಶ್ವತದುತ್ತೀರ್ಣತಯಾ ಭವನ ಮೋಕ್ಷಕರ್ತೃತಾಲಕ್ಷಣ ಕ್ರಿಯಾಶಕ್ತೇಃ ಏತಾವಾನಸ್ಯ ಮಹಿಮಾ ಇತ್ಯನೇನ ಜಡಜೀವ ವಿಲಕ್ಷಣ ಜ್ಞಾನಕ್ರಿಯಾ ಸ್ವತಂತ್ರ ಚೈತನ್ಯಸ್ಯಚ ಉಪಾತ್ತತ್ವಾತ್ ಅತೊ ಜಾಯಾ ನಿತ್ಯುಕ್ತತ್ವಾತ್ | ಅಂದರೆ ಆ ಮಂತ್ರದ ಹಿಂದೆ ಪುರುಷಪದ ವಾಚ್ಯನಾದ ಪರಶಿವನಿಗೆ ಸಾವಿರ ಕಣ್ಣುಳ್ಳವನು ಎಂದು ವಿಶೇಷಣ ಕೊಟ್ಟಿರುವುದರಿಂದ ಜ್ಞಾನಶಕ್ತಿಯು ಹೇಳಲ್ಪಟ್ಟಿರುವದೆಂತಲೂ, ಈಶಾನ ಇತ್ಯಂತ ಗ್ರಂಥದಿಂದ ತಾನೇ ವಿಶ್ವಸ್ವರೂಪನೂ, ವಿಶ್ವಾತಿರಿಕ್ತನೂ ಆಗಿದ್ದು ವಿಶ್ವಾಕಾರ ಪರಿಣಾಮವೆಂಬ ಜಗದುತ್ಪತ್ತಿಗೂ ವಿಶ್ವಾಂತರ್ಗತ ಶುದ್ಧ ಜೀವರುಗಳ ಮುಕ್ತಿಗೂ ಕರ್ತೃವಾಗಿರುವನೆಂದು ಕಂಡುಬರುವುದರಿಂದ ಆ ಶಿವನಿಗೆ ಕ್ರಿಯಾಶಕ್ತಿಯೂ ‚‚ಏತಾವಾನಸ್ಯಮಹಿಮಾ'' ಎಂಬುವುದರಿಂದ ಜ್ಞಾನಕ್ರಿಯಾ ಸ್ವತಂತ್ರ ಚೈತನ್ಯವೂ, ‚‚ಅತೋಜಾಯಾನ್'' ಎಂಬುವದರಿಂದ ಜಡಜೀವ ಪ್ರಪಂಚವೈಲಕ್ಷಣ್ಯವೂ ಹೇಳಲ್ಪಡುವುದರಿಂದ ದೃಕ್ಕ್ರಿಯಾತ್ಮಕವಾದ ಚೈತನ್ಯರೂಪ ಪರಶಿವ ಬ್ರಹ್ಮವು ಹಿಂದಿನ ಸಂದರ್ಭದಲ್ಲಿ ಹೇಳಲ್ಪಟ್ಟಿರುವದೆಂತಲೂ, ‚‚ಪಾದೋಸ್ಯ ವಿಶ್ವಾಭೂತಾನಿ'' ಎಂಬುವುದರಿಂದ ಆ ಶಿವನಲ್ಲಿ ಷಟ್‌ತ್ರಿಂಶತ್ತತ್ವಗಳು ಅಂತರ್ಗತಗಳಾದವೆಂದೂ, ‚‚ತ್ರಿಪಾದಸ್ಯಾ

ವೃತಂದಿವಿ | ತ್ರಿಪಾದೂರ್ಧ್ವ ಮುದೈತ್ಪುರುಷಃ" ಎಂಬುವುದರಿಂದ ಮಹಾ ಮಂತ್ರಾರ್ಥರೂಪವಾದ ಷಟ್‌ಸ್ಥಲ ಬ್ರಹ್ಮವು ಪ್ರಾಪ್ತವಾಗಿರುವುದು. ಆದ್ದರಿಂದ ಲಿಂಗಾಂಗ ಸಾಮರಸ್ಯ ಜ್ಞಾನವುಳ್ಳವನು. ಮುಕ್ತನಾಗುವನೆಂದು ಅರ್ಥ ಮಾಡಿರುವದು ಪೂರ್ವಾಪರ ಸಂದರ್ಭ ವಿರುದ್ಧವಾಗುವದಿಲ್ಲವು. ಆದ್ದರಿಂದ ಶಿಷ್ಯನ ಮೂರು ಶರೀರಗಳನ್ನು ಶುದ್ಧಿಗೊಳಿಸಿ ಅಲ್ಲಿ ಮೂರು ಲಿಂಗಗಳನ್ನು ಸ್ಥಾಪಿಸಿ ಆ ಲಿಂಗಸ್ವರೂಪನೇ ನೀನಿರುವಿಯೆ ಎಂಬರ್ಥವುಳ್ಳ ತತ್ವಮಸ್ಯಾದಿ ವಾಕ್ಯಾರ್ಥವನ್ನು ಪಂಚಾಕ್ಷರೀ ಮಹಾ ಮಂತ್ರದಿಂದ ಉಪದೇಶಮಾಡುವ ದೀಕ್ಷಾಗುರುವಿನಿಂದ ಪಂಚಾಕ್ಷರ ಮಹಾ ಮಂತ್ರವಂ ಪಡೆದುಕೊಂಡು ಲಿಂಗವು ಸರ್ವಜ್ಞತ್ವಾದಿ ಷಡಂಗಗಳುಳ್ಳದ್ದು, ನಾನು ಕಿಂಚಿಜ್ಞತ್ವಾದಿ ಗುಣಗಳುಳ್ಳವನು, ಆದ್ದರಿಂದ ನಾನು ಆ ಲಿಂಗಸ್ವರೂಪನೆಂಬುವ ಬಗೆ ಹೇಗೆ? ಎಂಬುವ ಶಿಷ್ಯನ ಸಂಶಯಾದಿಗಳನ್ನು ಪರಿಹರಿಸುವವನಾಗಲು ದೀಕ್ಷಾಗುರುವೇ ಶಿಕ್ಷಾಗುರುವೆನಿಸಿ ಆಮೇಲೆ ಶಿಷ್ಯನಿಗೆ ಸಮ್ಯಜ್ಞಾನವನ್ನುಂಟುಮಾಡುವವನಾದ್ದರಿಂದ ಶಿಕ್ಷಾಗುರುವೇ ಜ್ಞಾನಗುರುವೆನಿಸುವನು. ಇಂತಹ ಸಾಕ್ಷಾತ್ಕಾರರೂಪವಾದ ಸಮ್ಯಜ್ಞಾನವನ್ನು ಪಡೆದ ಶಿಷ್ಯನು ಈ ಶರೀರವಿರುವಾಗಲೇ ಜೀವನ್ಮುಕ್ತನಾಗಿಬಿಡುವನು. ಈ ಜ್ಞಾನಿಯು ಶರೀರವುಳ್ಳವನಾಗಿದ್ದರೂ ಅದು ನನ್ನದಲ್ಲ ಎಂದು ದೃಢವಾಗಿ ತಿಳಿದವನಾದ್ದರಿಂದ ಅದನ್ನು ಪರಂಪರೆಯಾಗಿ ಶಿವನಿಗೆ ಅರ್ಪಿಸಿ ಅದರ ಅಭಿಮಾನವನ್ನು ಬಿಟ್ಟು ಯಾವ ಭಯವನ್ನು ಹೊಂದದೆ ನಿತ್ಯ ಸುಖಿಯಾಗಿರುವನು. ಇಂತಹ ಜೀವನ್ಮುಕ್ತನಾದ ವೀರಶೈವನು ಶಿವಾರ್ಪಣ ಬುದ್ಧಿಯಿಂದಲೇ ಕರ್ಮಗಳನ್ನು ಆಚರಿಸುವನಾದ್ದರಿಂದ ಇವನಿಗೆ ಯಾವ ಕರ್ಮದ ಫಲವೂ ಅಂಟುವದಿಲ್ಲ. ತನ್ನ ಸ್ವರ್ಗಾದಿ ಫಲಕ್ಕಾಗಿ ಆಚರಿಸಲ್ಪಡುವ ಪಶುಕರ್ಮಗಳಿಗೆ ನಾನು ಕರ್ತೃವು ಎಂಬುವ ಅಭಿಮಾನವಿರುವುದರಿಂದ ಆ ಫಲದ ಪ್ರಾಪ್ತಿಯು ಆ ಯಜಮಾನನಿಗಾಗುವುದು. ಋತ್ವಿಜರಿಗಾಗುವುದಿಲ್ಲ, ಅದರಂತೆ ವೀರಶೈವನು ತನಗನ್ಯವಾದ ಫಲವನ್ನು ಅಪೇಕ್ಷಿಸದೆ ಇರುವುದರಿಂದಲೂ, ಶಿವಜ್ಞಾನದಾರ್ಢ್ಯಕ್ಕಾಗಿ ನಿಷ್ಕಾಮಿಯಾದ ಶಿವಯೋಗಿಯಿಂದ ಆಚರಿಸಲ್ಪಡುವ ಶಿವಾರ್ಚನಾದಿ ಪತಿಕರ್ಮಗಳಿಂದ ಬಂಧಿತನಾಗುವುದಿಲ್ಲವು. ಆದರೆ ಶಿವಾರ್ಚನೆಯೇ ಮುಖ್ಯವಾಗಿರುವ ಶಿವಯೋಗಾಭ್ಯಾಸದಿಂದ ತನ್ನ ಜಡವಾದ ಚಿತ್ತಶಕ್ತಿಯನ್ನು ವಿಕಾಸಗೊಳಿಸಲು ಚಿಚ್ಛಕ್ತಿ ವಿಶಿಷ್ಟ ಪರಶಿವ ಬ್ರಹ್ಮನೇ ಆಗಿಬಿಡುವನು. ಆದ್ದರಿಂದ ಚಿಚ್ಛಕ್ತಿಯು ಸಂಕೋಚರೂಪವಾದ ಚಿತ್ತಶಕ್ತಿವಿಶಿಷ್ಟನೇ

ಜೀವನೆಂತಲೂ, ಚಿಚ್ಛಕ್ತಿವಿಶಿಷ್ಟನೇ ಈಶ್ವರನೆಂತಲೂ ಹೇಳುವದೇ ವೀರಶೈವಾ ಚಾರ್ಯರ ಸಿದ್ಧಾಂತವು. ತನ್ನ ಚಿತ್ತವನ್ನು ಚಿಚ್ಛಕ್ತಿಯನ್ನಾಗಿ ಮಾಡಿಕೊಳ್ಳುವುದ ಕ್ಕಾಗಿಯೇ ಭಕ್ತಾದಿ ಷಡಂಗ ಯೋಗಾಭ್ಯಾಸಗಳಿರುವವು. ಶಿವನ ಈ ಷಡಂಗ ಗಳನ್ನು ನಿಮ್ಮ ಆಚಾರ್ಯರ ಭಾಷ್ಯಕ್ಕೆ ಭಾಮತಿಯೆಂಬ ಟೀಕೆಯನ್ನು ಬರೆಯುವ ಆರಂಭದಲ್ಲಿ ‹‹ಷಡಂಗಾಯ ವೇದಾಯಚ ಭವಾಯಚ›› ಎಂದು ನಮಸ್ಕಾರಾ ತ್ಮಕ ಮಂಗಲವನ್ನು ಮಾಡಿರುವದರಿಂದಲೂ, ಮತ್ತು ಈ ಭಾಮತಿಯೆಂಬ ವ್ಯಾ ಖ್ಯಾನದಮೇಲೆ ಬರೆದಿರುವ ಕಲ್ಪತರುವೆಂಬ ಟೀಕೆಯಲ್ಲಿಯೂ, ‹‹ಷಡಂಗಾಯ›› ಎಂಬ ಪದಕ್ಕೆ ಶ್ಲೋ || ಸರ್ವಜ್ಞತಾತೃಪ್ತಿರನಾದಿಬೋಧಸ್ಸ್ವತಂತ್ರತಾ ನಿತ್ಯಮ ಲುಪ್ತಶಕ್ತಿಃ | ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾ ಷಡಾಹುರಂಗಾನಿ ಮಹೇಶ್ವ ರಸ್ಯ || ಎಂಬುವ ಪಾರಮೇಶ್ವರಾದ್ಯಾಗಮೋಕ್ತವಾದ ಶ್ಲೋಕವನ್ನು ಉದಹ ರಿಸಿರುವುದರಿಂದಲೂ, ಷಡಂಗಯೋಗವಿಧಿನಾಸಾಧ್ಯೋ ವಿಶ್ವವಿದವ್ಯಯಃ || ಎಂದು ಪುರಾಣದಲ್ಲಿಯೂ, ‹‹ಜೀವಮುಖ್ಯ ಪ್ರಾಣಲಿಂಗಾನ್ನೇತಿಚೇನ್ನ ಉಪಾ ಸಾತ್ರೈವಿದ್ಯಾತ್ ಆಶ್ರಿತತ್ವಾದಿಹತದ್ಯೋಗಾತ್›› ಎಂಬುವ ಸೂತ್ರದಿಂದ ಸಂಕ್ಷೇಪವಾಗಿ ತ್ಯಾಗಾಂಗಾದಿಸಹಿತ ಇಷ್ಟಾದಿ ಮೂರು ಲಿಂಗಗಳ ಯೋ ಗವು ಹೇಳಲ್ಪಟ್ಟಿರುವುದರಿಂದಲೂ, ಈ ಷಟ್‌ಸ್ಥಲಯೋಗಾಭ್ಯಾಸವು ಭಾಮತೀ ಕಾರರಿಗೂ, ಕಲ್ಪತರುಕಾರರಿಗೂ, ಪುರಾಣಕಾರರೂ ಸೂತ್ರಕಾರರೂ ಆದ ವ್ಯಾ ಸಮಹರ್ಷಿಗಳಿಗೂ, ಸಮ್ಮತವಾಗಿರುವದೆಂದು ಕಂಡುಬರುವದು. ಆದ್ದರಿಂದ ನೀನೂಕೂಡ ಅವರಂತೆ ಸನ್ಮಾರ್ಗವನ್ನವಲಂಬಿಸುವದು ಯೋಗ್ಯವಲ್ಲವೆ? ಆ ಮಾರ್ಗವನ್ನು ನೀನು ಅವಲಂಬಿಸಬೇಕಾದರೆ ನೀನು ಪ್ರತಿಬಿಂಬವಾದಪಕ್ಷವನ್ನು ಬಿಡಬೇಕು ಶುದ್ಧಶರೀರವುಳ್ಳವನಾಗಬೇಕು. ಯಾಕಂದರೆ ಪ್ರತಿಬಿಂಬವಾದದಲ್ಲಿ ಈ ಮೇಲೆ ಹೇಳಿದ ಷಡಂಗ ಯೋಗವು (ಸಾಮರಸ್ಯವು) ಸಂಭವಿಸುವದಿಲ್ಲವಷ್ಟೆ. ಅಶುದ್ಧ ಜೀವನಿಗೆ (ಅಂದರೆ ಭಕ್ತನಾಗದಿರುವವನಿಗೆ) ಈ ಷಡಂಗ ಯೋಗಾ ಧಿಕಾರವಿಲ್ಲವಷ್ಟೆ. ಭಕ್ತನಾಗಬೇಕಾದರೆ ಭಕ್ತಸ್ಥಲದ ಬಾಹ್ಯಾಭ್ಯಂತರಾಚರಣೆ ಗಳು. (ಭಸ್ಮರುದ್ರಾಕ್ಷ ಲಿಂಗಧಾರಣಾದಿಗಳು) ಬೇಕು. ಇದು ಹಾಗಿರಲಿ, ಶಿವಾದ್ವೈತಿಯೆ ಲಿಂಗಸ್ಥಲವೆಂದು ಅಂಗಸ್ಥಲವೆಂದು ಹೇಳುವಿಯಲ್ಲ; ಮೊದಲು ಸ್ಥಲವೆಂದರೇನು ಹೇಳು? ಜಗದುತ್ಪತ್ತಿ ಲಯಾದಿಗಳಿಗೆ ಕಾರಣವಾದ ಪರಬ್ರ ಹ್ಮವೇ ಸ್ಥಲವೆಂದು ಹೇಳುವೆನು. ಶ್ಲೋ || ಸ್ಥಾನೌಸರ್ವಾಶ್ರಯೇನಂತೆ ಸಚ್ಚಿ ದಾನಂದರೂಪಿಣಿ| ಯಸ್ಮಿನ್‌ಬ್ರಹ್ಮಣಿ ಲೀಯೇತ ಪ್ರಪಂಚಸ್ತತ್‌ಸ್ಥಲಂ ಮಹತ್||

ಹೀಗೆಂದು ಸ್ಥಲಶಬ್ದ ನಿರ್ವಚನವಿರುವುದು. ಹಾಗಾದರೆ ಪ್ರಪಂಚಲಯಕ್ಕೆ ಅಧಿಷ್ಠಾನವೆಂದು ಪ್ರಸಿದ್ಧವಾದ ಲಿಂಗತತ್ವವೇ ಸ್ಥಲವೆಂದು ಹೇಳುವುದು ಯುಕ್ತವಾಗುವದಿಲ್ಲವೇ. ಅಂಗತತ್ವಕ್ಕೂ ಕೂಡ ಲಿಂಗತತ್ವದಲ್ಲಿ ಲಯವನ್ನು ಹೇಳುವುದರಿಂದ ಅದು ಪ್ರಪಂಚ ಲಯಕ್ಕೆ ಆಧಾರವಾಗಲಾರದು. ಆದ್ದರಿಂದ ಅಂಗತತ್ವಕ್ಕೆ ಸ್ಥಲವೆಂದು ಹೇಳುವುದು ಅಸಂಗತವು. ಮತ್ತು ‹‹ಯತೋವಾ ಇಮಾನಿಭೂತಾನಿ ಜಾಯಂತೆ ಯೇನಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ›› ಎಂಬುವ ಶ್ರುತಿಯಿಂದ ಲಯಾಧಾರವಾದ ಬ್ರಹ್ಮ ವಂದೇ ಸ್ಥಲವೆಂದು ಹೇಳುವುದು ಯುಕ್ತವಾಗುವದಲ್ಲದೆ, ಅವಾಂತರಭೇದವಿಶಿಷ್ಟಗಳಾದ ಅನೇಕ ಲಿಂಗತತ್ವಗಳಿಗೂ ಅನೇಕ ಅಂಗತತ್ವಗಳಿಗೂ ಸ್ಥಲವೆಂದು ಹೇಳುವುದು ಯುಕ್ತವಾಗುವುದಿಲ್ಲ. ಬ್ರಹ್ಮಾದ್ವೈತಿಯೆ ಕೇಳು ಶ್ಲೋ || ಆಧಾರಾದಿ ಸಮಸ್ತಚಕ್ರನಿಚಯೆ ಯೋಹಂಸರೂಪಶ್ಶಿವೋ | ನಿತ್ಯಾನಂದಗುರುಪ್ರಸಾದ ವಿಭವಾದ್ಭಾವಾದಿ ಸಂಜ್ಞೋಭವತ್ || ಆಚಾರಾದಿ ವಿಭೇದತಃ ಪುನರಸೌ ಷಡ್ಲಿಂಗರೂಪೋ ಭವತ್ | ತಸ್ಮೈ ಶ್ರೀಗುರುಮೂರ್ತಯೆ ಗಿರಿಸುತಾಭರ್ತ್ರೆ ನಮಸ್ಕುರ್ಮಹೆ || ಎಂಬುಕ್ತಿಯಂತೆ ಒಂದೇ ಲಿಂಗತತ್ವವು ಅನೇಕರೂಪವಾಗಿ ಪೂಜ್ಯವಾಗಿರುವದೆಂದೂ, ಅದೇ ಲಿಂಗತತ್ವವು ಪೂಜಕಲೀಲೆಯಿಂದಾವಿರ್ಭವಿಸಲ್ಪಟ್ಟ ಷಡಂಗ ತತ್ವಗಳಲ್ಲಿ ಪ್ರವಿಷ್ಟವಾಗಿ ಪೂಜಕವಾಗಿರುವದೆಂದೂ, ಏಕೋತ್ತರ ಶತ ಸ್ಥಲಗಳು ಷಟ್‌ಸ್ಥಲಗಳಲ್ಲಿ ಅಂತರ್ಗತಗಳಾಗಿರುವುವೆಂದೂ ಹೇಳುವುದರಿಂದ ಒಂದೇ ಪ್ರಪಂಚ ಲಯಾಧಿಷ್ಠಾನವಾದ ಸ್ಥಲವು ಉಪಾಧಿ ಭೇದದಿಂದ ಅನೇಕ ರೂಪವಾಗಿರುತ್ತದೆಂದು ತಿಳಿದುಬರುತ್ತದೆ. ಉಪಾಧಿಗಳಾದರೂ ‹‹ಸ್ವೇಚ್ಛಯಾ ಸ್ವಭಿತ್ತೌ ವಿಶ್ವಮುನ್ಮೀಲಯತಿ›› ಎಂಬುವ ಶಿವಸೂತ್ರದಂತೆ ಸ್ವೇಚ್ಛಾಕೃತಗಳಾಗಿರುವದರಿಂದ ನಿನ್ನ ಮತದಂತೆ ಮಿಥ್ಯಾಭೂತಗಳಲ್ಲ, ಕ್ಷೀರವು ವರ್ತುಲ ಚತುರಶ್ರತ್ರಿಕೋಣ ದೀರ್ಘ ಹ್ರಸ್ವಪಾತ್ರೆಗಳಲ್ಲಿ ಇರುವಾಗ ಆಯಾಯ ದೀರ್ಘಾಕಾರ ವರ್ತುಲಾಕಾರಾದಿಗಳಿಂದ ವಿಶಿಷ್ಟವಾಗಿ ಭಿನ್ನಭಿನ್ನವಾಗಿ ಅನೇಕ ರೂಪವಾಗಿ ಕಾಣುವುದು. ಆದರೂ ಆಯಾಯ ಆಕಾರದಿಂದ ವಿಶಿಷ್ಟವಾದ ಕ್ಷೀರಕ್ಕೆ ಕ್ಷೀರವೆಂಬ ನಾಮವು ತಪ್ಪುವದಿಲ್ಲ. ಅದರಂತೆ ಪ್ರಪಂಚಲಯಾಧಿಷ್ಠಾನವಾದ ಸ್ಥಲವು ಒಂದೇ ಆಗಿದ್ದರೂ ತನ್ನ ಶಕ್ತಿಯಿಂದ ಮಾಡಲ್ಪಟ್ಟ ಅನೇಕೋಪಾಧಿಗಳಲ್ಲಿ ಪ್ರವಿಷ್ಟವಾಗಿ, ಅನೇಕ ರೂಪವಾಗಿ ಪರಿಚ್ಛಿನ್ನವಾಗಿದ್ದರೂ ಸ್ಥಲವೆಂದು ಹೇಳಲಿಕ್ಕೆ ಸಂಶಯವಿಲ್ಲ. ಪರಿಚ್ಛಿನ್ನವಾದದ್ದು ನಿನ್ನ ಮತದಂತೆ ಅಸತ್ಯವಲ್ಲ. ಆದ್ದ

ರಿಂದ ನಮ್ಮ ಆಚಾರ್ಯರು ಸಂಕ್ಷೇಪವಾಗಿ ಷಟ್‌ಸ್ಥಲಗಳೆಂದೂ, ವಿಸ್ತಾರವಾಗಿ ಏಕೋತ್ತರಸ್ಥಲಗಳೆಂದೂ ಹೆಸರಿಟ್ಟಿರುವರು. ಇದು ಅಯುಕ್ತವಾಗುವದಿಲ್ಲ. ಯದ್ಯಪಿ "ಯತೋವಾ ಇಮಾನಿ ಭೂತಾನಿಜಾಯಂತೆ" ಎಂಬುವ ಶ್ರುತಿಯಂತೆ ಒಂದಕ್ಕೇನೇ ಸ್ಥಲವೆಂದು ಹೇಳುವುದು ಮುಖ್ಯಾರ್ಥವಾಗಿದ್ದರೂ ಏಕೋತ್ತರ ಶತಸ್ಥಲಗಳಿಗೆ ಗೌಣವೃತ್ತಿಯಿಂದ ಸ್ಥಲಗಳೆಂದು ಹೇಳುವಲ್ಲಿ ಪ್ರತಿಬಂಧಕವಿಲ್ಲ. ಆದ್ದರಿಂದ ಈ ನನ್ನ ಸಿದ್ಧಾಂತದಲ್ಲಿ ಯಾವ ದೋಷವೂ ಬರುವಂತಿಲ್ಲವು. ನಿನ್ನ ಪ್ರತಿಬಿಂಬವಾದದಲ್ಲಿ ಅನೇಕ ದೋಷಗಳು ಬರುವದರಿಂದ ಅದು ಅಯುಕ್ತವೆಂದು ತಿಳಿದು ಜಡವಾದ ಚಿತ್ತಶಕ್ತಿವಿಶಿಷ್ಟನೇ ಜೀವನೆಂದೂ, ಅಜಡವಾದ ಚಿಚ್ಛಕ್ತಿ ವಿಶಿಷ್ಟನೇ ಈಶ್ವರನೆಂದೂ, ಶಿವಯೋಗಾಭ್ಯಾಸದಿಂದ ಮಲತ್ರಯವೆಂಬ ಸ್ವಾಭಾವಿಕವಾದ ಬಂಧರೂಪವಾದ ಚಿತ್ತದ ಜಾಡ್ಯವು ಕಳೆದುಳಿದ ಚಿಚ್ಛಕ್ತಿ ವಿಶಿಷ್ಟನೇ ಆಗಿ ಮುಕ್ತನಾಗುವನೆಂದೂ ತಿಳಿದುಕೊಂಡು ಧನ್ಯಜೀವಿಯಾಗುವುದು ಯೋಗ್ಯವಲ್ಲವೆ? ಇಲ್ಲಿಗೆ ಈ ವಾದವನ್ನು ಸಮಾಪ್ತಿಗೊಳಿಸಿ ಮುಂದಣ ವಾದವನ್ನು ಆರಂಭಿಸುವೆನು.

---

## ೧೩ ನೇ ವಾದವು.

ಚಿಚ್ಛಕ್ತಿಯನ್ನು ಬ್ರಹ್ಮವೆಂದೆನ್ನುವವರು ಯಾವ ಪ್ರಮಾಣದಿಂದ ಅದಕ್ಕೆ ಬ್ರಹ್ಮವೆನ್ನುವರು? ಶ್ರುತಿ ಯುಕ್ತಿ ಅನುಭವಗಳಿಂದಲೇ ಚಿಚ್ಛಕ್ತಿಗೆ ಬ್ರಹ್ಮವೆನ್ನುವರು. ಹಾಗಾದರೆ ವಿವರ್ತವಾದಿಯೆ? ಯಾವ ಶ್ರುತಿವಾಕ್ಯವು ಚಿಚ್ಛಕ್ತಿಯೆ ಬ್ರಹ್ಮವೆಂಬುವ ವಿಷಯದಲ್ಲಿ ಪ್ರಮಾಣವಾಗಿರುವುದು ಹೇಳು "ಸತ್ಯಂ ಜ್ಞಾನಮಾನಂದಂ ಬ್ರಹ್ಮ" ಎಂಬುವ ವಾಕ್ಯವೇ ಪ್ರಮಾಣವು ನೋಡು? ಚಿಚ್ಛಕ್ತಿರೂಪವಾದ ಜ್ಞಾನವೇ ಬ್ರಹ್ಮವೆಂದು ಶ್ರುತಿಯು ಹೇಳುತ್ತದೆ. ಬ್ರಹ್ಮಾದ್ವೈತಿಯೆ ಈ ವಾಕ್ಯದಲ್ಲಿರುವ ಜ್ಞಾನಪದದಿಂದ ಬ್ರಹ್ಮವೆಂಬ ಅರ್ಥವನ್ನು ತಿಳಿದುಕೊಂಡು ಜ್ಞಾನಶಬ್ದಕ್ಕೆ ಚಿಚ್ಛಕ್ತಿರೂಪವಾದದ್ದು ಬ್ರಹ್ಮವೆಂದು ಹೇಳುವಿಯಲ್ಲವೆ? ಆದರೆ ಆ ಜ್ಞಾನಪದಕ್ಕೂ ಚಿಚ್ಛಕ್ತಿಯೆಂಬ ಬ್ರಹ್ಮಪದಾರ್ಥಕ್ಕೂ ಒಂದು ಸಂಬಂಧವು ಬೇಕು. "ಘಟಪದಜನ್ಯಬೋಧ ವಿಷಯತಾವಾನಯಮರ್ಥೋಭವತು" ಇತ್ಯಾಕಾರಕವಾದ ಈಶ್ವರೇಚ್ಛೆಯಿಂದ ಘಟಶಬ್ದದ ಉಚ್ಚಾರಾನಂತರದಲ್ಲಿ ಜಲಾದ್ಯಾನಯನಕ್ಕೆ ಅನುಕೂಲವಾದ ಘಟಪದಾರ್ಥದ ಗ್ರಹಣವಾಗುವದು. ಆ ಇಚ್ಛಾರೂಪವಾದದ್ದೇ ಶಕ್ತಿಯು. ಇದರಂತೆ "ಜ್ಞಾನಪದಾತ್ ಬ್ರಹ್ಮ ಬೋದ್ಧವ್ಯಂ" ಎಂಬುವ ಈಶ್ವರಸಂಕೇತವನ್ನು ಬ್ರಹ್ಮದಲ್ಲಿ ಹೇಳಬೇಕು. ಹೇಳ

ವಿದ್ದರೆ ಜ್ಞಾನಪದದಿಂದ ಬ್ರಹ್ಮಬೋಧೆಯೇ ಆಗದು, ಆದ್ದರಿಂದ ಘಟಪದ ಶಕ್ತಿಯನ್ನು ಘಟಪದಾರ್ಥದಲ್ಲಿ ಹೇಳುವಂತೆ, ಜ್ಞಾನಪದಶಕ್ತಿಯನ್ನು ಬ್ರಹ್ಮದಲ್ಲಿ ಹೇಳಬೇಕು. ಹೇಳಿದರೆ ಜ್ಞಾನರೂಪವಾದ ಬ್ರಹ್ಮದಲ್ಲಿ ಇಚ್ಛಾಶಕ್ತಿಯನ್ನು ಮಾನಿಸಬೇಕು. ಮಾನಿಸಿದರೆ ನಿನ್ನ ಸಿದ್ಧಾಂತದ ಹಾಸ್ಯಯಾಗುವದು ಅಂದಮೇಲೆ ಚಿಚ್ಛಕ್ತಿಸ್ವರೂಪಮಾತ್ರನೆಂದು ನಿಮ್ಮ ಆಚಾರ್ಯರು ಯಾವ ಪ್ರಮಾಣದಿಂದ ಹೇಳುವರು ? ಶಿವಾದ್ವೈತಿಯೇ ! ಆಚಾರ್ಯರು ಚಿಚ್ಛಕ್ತಿಸ್ವರೂಪಮಾತ್ರನೆಂದು ಎಲ್ಲಿ ಹೇಳಿರುವರು ? ನೋಡು ಕೇನೋಪನಿಷತ್ತಿನ ಅವರ ಭಾಷ್ಯಪಂಗ್ತಿಯನ್ನೇ ತೋರಿಸುವೆನು. ‹‹ಚಿಚ್ಛಕ್ತಿಸ್ವರೂಪಮಾತ್ರಃ ಪ್ರತ್ಯಯೈರೇವ ಪ್ರತ್ಯಯೇಷ್ವವಶಿಷ್ಟತಯಾಲಕ್ಷ್ಯತೆ ನಾಸ್ಯದ್ವಾರಮಾತ್ಮನೊ ವಿಜ್ಞಾನಾಯ›› ಎಂದು ಹೇಳಿರುವರು; ಇನ್ನೂ ಅನೇಕ ಕಡೆಯಲ್ಲಿ ಹೇಳಿರುವರು. ಈ ಶಕ್ತಿಯು ಬ್ರಹ್ಮವೆಂಬುವಲ್ಲಿ ಪ್ರಮಾಣವು ಬೇಕು. ಪ್ರಮಾಣ ಪ್ರಮೇಯಗಳಿಗೆ ಸಂಬಂಧವು ಬೇಕು. ಶಿವಾದ್ವೈತಿಯೇ ! ಬ್ರಹ್ಮವು ಅಸಂಗವಾಗಿರುವದು. ವೇದಾಂತವಾಕ್ಯದ ಯಾವ ಪದದಿಂದಲೂ ವಾಚ್ಯವಲ್ಲವು. ಅದು ವಾಚ್ಯವಾಗಿದ್ದರೆ ನೀನು ಮೇಲೆ ಹೇಳಿದಂತೆ ಅದಕ್ಕೊಂದು ಶಕ್ತಿಸಂಬಂಧವನ್ನು ಹೇಳಬಹುದು. ‹‹ಅಸಂಗೊನಹಿ ಸಜ್ಜತೇ›› ಎಂದು ಶ್ರುತಿಯುಂಟು. ಆದ್ದರಿಂದ ಲಕ್ಷಣಾವೃತ್ತಿಯಿಂದದನ್ನು ತಿಳಿಯಬೇಕು. ಅಸಂಗಪದದ ಶಕ್ಯಾರ್ಥವು ಸಂಗವಿಲ್ಲದ್ದು. ಇದರ ಸಂಬಂಧವೇ ಲಕ್ಷಣಾವೃತ್ತಿಯೆನಿಸುವದು ಅಂದಮೇಲೆ ಶಕ್ಯಾರ್ಥ ಅಸಂಗವು ಬ್ರಹ್ಮವಲ್ಲವೇನು ? ಮತ್ತು ಜ್ಞಾನಪದ ಶಕ್ಯಾರ್ಥವಾದ ಜ್ಞಾನವು ಬ್ರಹ್ಮವಲ್ಲವೇನು ? ಅಲ್ಲವೆಂದರೆ ಸಸಂಗವೂ ಅಜ್ಞಾನವೂ ಬ್ರಹ್ಮವೆಂದು ಒಪ್ಪಿಕೊಂಡಂತಾಯಿತು. ಅಸಂಗ ಜ್ಞಾನಪದ ವಾಚ್ಯಾರ್ಥವೇ ಬ್ರಹ್ಮವೆಂದರೆ ಅಸಂಗ ಬ್ರಹ್ಮದಲ್ಲಿ ಶಕ್ತಿಸಂಗವನ್ನು ಹೇಳಲೇಬೇಕು. ಹೇಳಿದರೆ ಬ್ರಹ್ಮವು ಯಾವ ಪದಾರ್ಥ ಸಂಬಂಧವಿಲ್ಲದ್ದು ಯಾವದೂ ಧರ್ಮವಿಲ್ಲದ್ದೆಂದು ಹೇಳುವದೇಕೆ ? ಲೋಕದಲ್ಲಿ ಪ್ರತಿಯೊಂದು ಪದಾರ್ಥದಲ್ಲಿಯೂ ಒಂದೊಂದು ತರದ ಶಕ್ತಿಯು ಇದ್ದೇ ಇರುವದು. ಪೃಥಿವಿಯಲ್ಲಿ ಧಾರಣಶಕ್ತಿಯೂ, ಜಲದಲ್ಲಿ ಆಪ್ಯಾಯನಶಕ್ತಿಯೂ, ತೇಜಸ್ಸಿನಲ್ಲಿ ಉಜ್ವಲನಶಕ್ತಿಯೂ, ವಾಯುವಿನಲ್ಲಿ ಸ್ಪಂದನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ, ಆತ್ಮನಲ್ಲಿ ಬುದ್ಧಿಶಕ್ತಿಯೂ ಉಂಟೆಂಬುವದು ಪ್ರಸಿದ್ಧವು. ಹೀಗಿದ್ದು ಪರಮಾತ್ಮನಲ್ಲಿ (ಬ್ರಹ್ಮದಲ್ಲಿ) ಯಾವದೂ ಒಂದು ಶಕ್ತಿಯಿಲ್ಲೆಂಬುವದು ಯುಕ್ತಿಗೂ ಅನುಭವಕ್ಕೂ ವಿರುದ್ಧವು.

ಲೋಕದಲ್ಲಿ ನಿಶ್ಶಕ್ತಿಕವಾದ ಯಾವ ಪದಾರ್ಥವೂ ಇಲ್ಲದಿರುವುದರಿಂದ ಬ್ರಹ್ಮವು ನಿಶ್ಶಕ್ತಿಕವೆಂಬುವಲ್ಲಿ ದೃಷ್ಟಾಂತವಿಲ್ಲದಿರುವುದರಿಂದ ಬ್ರಹ್ಮವು ಶಕ್ತಿಯಿಲ್ಲದ್ದೆಂದು ಕಲ್ಪಿಸಲಿಕ್ಕೆ ಆಗುವದಿಲ್ಲ. "ದೃಷ್ಟಾನುಸಾರೇಣಕಲ್ಪನಾ" ಎಂಬುವದು ಲೋಕವಿಶ್ರುತವಷ್ಟೆ? ಇದರಂತೆ ಶಬ್ದಪ್ರಪಂಚವೂ ಈಶ್ವರ ನಿರ್ಮಿತವಾಗಿರುವುದರಿಂದದರಲ್ಲಿಯೂ ಈಶ್ವರನ ಶಕ್ತಿಯು ಅನುಸ್ಯೂತವಾಗಿರುವುದು. ಇಲ್ಲದಿದ್ದರೆ ಆಯಾಯ ಘಟಪಟಾದಿ ಶಬ್ದಗಳಿಂದ ಆಯಾಯ ಪದಾರ್ಥಗಳ ಜ್ಞಾನವೇ ಆಗಲಾರದು. ಆದ್ದರಿಂದ ಎಲ್ಲಾ ಪ್ರಾಣಿಗಳಲ್ಲಿಯೂ ಪ್ರಮಾತೃ ಶಕ್ತಿಯನ್ನು ಒಪ್ಪಲೇಬೇಕು. ಜಾಗ್ರದವಸ್ಥೆಯಲ್ಲಿ ಪ್ರಮಾತೃ ಶಕ್ತಿಯು. ಪ್ರಮಾತೃವಿನಿಂದ ವಿಭಕ್ತವಾಗಿ ಚಕ್ಷುರಾದೀಂದ್ರಿಯಸ್ಥಾನದಲ್ಲಿ ಸಂಬಂಧಿಸಿ ಬೇರೆ ಬೇರೆ ಹೆಸರನ್ನು ತಾಳಿ (ಕರಣಶಕ್ತಿಯೆನಿಸಿ) ಆಯಾಯ ಬಾಹ್ಯಪದಾರ್ಥವನ್ನು ಗ್ರಹಿಸುವದರಿಂದ ಸ್ಥೂಲ ಅಚಿತ್ಪ್ರಪಂಚಾಕಾರ ಶಕ್ತಿಯೆನಿಸುವದು. ಇನ್ನು ಜಾಗ್ರದವಸ್ಥೆಯಲ್ಲಿ ಅನುಭೂತ ಪದಾರ್ಥಗಳು (ಸ್ಥೂಲಪದಾರ್ಥಗಳು) ಇಲ್ಲದಿದ್ದರೂ ಆಯಾಯವೃತ್ತಿರೂಪಗಳಾದ ಸೂಕ್ಷ್ಮಪದಾರ್ಥಗಳ ಆಕಾರವಾದ ಶಕ್ತಿಯೇ ಸ್ಥೂಲ ಚಿತ್ಪ್ರಪಂಚಾಕಾರ ಶಕ್ತಿಯೆನಿಸುವದು. ಅಂದರೆ ಬಾಹ್ಯಪದಾರ್ಥಗಳನ್ನು ಗ್ರಹಿಸಬೇಕಾದರೆ ಬಾಹ್ಯಕರಣಗಳು ಬೇಕು. ಆಭ್ಯಂತರ ಪದಾರ್ಥಗಳನ್ನು ಆತ್ಮನು ಗ್ರಹಿಸಬೇಕಾದರೆ ಅಂತಃಕರಣವು ಬೇಕು. ಆದ್ದರಿಂದ ಬಾಹ್ಯಕರಣಗಳಿಂದ ಬಾಹ್ಯಾರ್ಥವನ್ನು ಗ್ರಹಿಸುವ ಕಾಲವೆ ಜಾಗ್ರದವಸ್ಥೆಯೆನಿಸುವದು. ಅಂತಃಕರಣದಿಂದ ಅಂತರಾರ್ಥಗಳನ್ನು ಗ್ರಹಿಸುವ ಕಾಲವೇ ಸ್ವಪ್ನಾವಸ್ಥೆಯೆನಿಸುವದು. ಭಿನ್ನಭಿನ್ನಗಳಾದ ಬಾಹ್ಯಪದಾರ್ಥಗಳ ಜ್ಞಾನವೇ (ಪ್ರತ್ಯಕ್ಷವೇ) ಜಾಗ್ರತ್ತೆಂತಲೂ, ಭಿನ್ನಭಿನ್ನ ಅಂತರಾರ್ಥಗಳ ಜ್ಞಾನವೇ (ಸ್ಮರಣೆಯೆ) ಸ್ವಪ್ನವೆಂತಲೂ, ಹೇಳಬಹುದು. ಇನ್ನು ಅನ್ಯೋನ್ಯಾಭಾವರೂಪ ಭೇದಬುದ್ಧಿಗೆ ಕಾರಣವಾದ ಅಖ್ಯಾತಿಯೆಂಬ ಮಾಯಾತತ್ವಾಕಾರವಾದ ಪ್ರಮಾತೃ ಶಕ್ತಿಯಕಾಲವೇ ಸುಷುಪ್ತ್ಯವಸ್ಥೆಯೆನಿಸುವದು. ಈ ಅವಸ್ಥೆಯು ಮೋಹಮಯವಾದುದರಿಂದ ಪರಸ್ಪರ ಭಿನ್ನ ಪದಾರ್ಥಗಳ ಪ್ರತ್ಯಕ್ಷ ಸ್ಮರಣಗಳು ಇರುವದಿಲ್ಲ. ಇನ್ನು ತುರ್ಯಾವಸ್ಥೆಯಲ್ಲಿ ಯಾದರೂ ತನ್ನ ಚಿತ್ಶಕ್ತಿಯೇ ವಿಕಸಿತವಾಗಿ ಪರಾಹಂತಾಕಾರವಾಗಿರುವುದು. (ಚಿಚ್ಛಕ್ತಿರೂಪವಾಗಿರುವುದು). ಇದಕ್ಕೇನೇ ಶಿವಾವಸ್ಥೆಯನ್ನುವರು. ಈ ಅವಸ್ಥೆಯಲ್ಲಿ ಶಿವಾದಿ ಶುದ್ಧ ವಿದ್ಯಾಂತ ತತ್ವಗಳು ಪ್ರವಿಷ್ಟಗಳಾಗುವುವು. ಮಾಯಾತತ್ವವೊಂದೇ ಸುಷುಪ್ತತತ್ವವು. ಕಾಲಾದಿ ಪಂಚಕವು ಸ್ವಪ್ನದಶಾಪ್ರ

ವಿಷ್ಟವಾಗುವುದು ಅಂತಃಕರಣ ಶಕ್ತಿವಿಶಿಷ್ಟ ಪುರುಷನ ಜಾಗ್ರದ್ದಶಾಪ್ರವಿಷ್ಟತತ್ವಗಳು. ಭೂಮ್ಯಾದಿ ೨೦ ತತ್ವಗಳು ಅಂತು ಯಾವ ಅವಸ್ಥೆಯಲ್ಲಿಯಾದರೂ ಆತ್ಮನು ಶಕ್ತಿರಹಿತನಾಗಿಲ್ಲವು. ಅಂದಮೇಲೆ ಬ್ರಹ್ಮದಲ್ಲಿ ಯಥಾರ್ಥವಾಗಿ ಶಕ್ತಿಯೂ ಇಲ್ಲವೆಂಬುವುದು ಅನುಭವವಿರುದ್ಧವು. ತುರ್ಯದಶಾಪ್ರವಿಷ್ಟನಾಗಲು ಮುಕ್ತನಾಗುವನು. ಆತ್ಮನು ಕೆಳಗಣ ಅವಸ್ಥೆಗಳಲ್ಲಿ ಪ್ರವಿಷ್ಟನಾಗಿ ಬದ್ಧನೆನಿಸುವನು. ಈ ಬಂಧನಿವೃತ್ತಿಗಾಗಿ ಗುರುಮೂರ್ತಿಯು ಇಷ್ಟ ಪ್ರಾಣ ಲಿಂಗಗಳನ್ನು ಕೊಡುವನು. ''ಕೋಹಮಿತ್ಯಬ್ರವೀದ್ದೇಹೀ ಗುರುಂ ಪರಮಕಾರಣಂ'' ಎಂದು ಶಿಷ್ಯನು ಪ್ರಶ್ನೆಮಾಡಲು ಗುರುಮೂರ್ತಿಯು ಶಿಷ್ಯನ ಮೂರು ಮಲಗಳನ್ನು ಕಳೆದು ಮೂರು ಲಿಂಗಗಳನ್ನು ಧರಿಸಿ ಆ ಲಿಂಗಗಳಲ್ಲಿ ವಿಶ್ವ ತೈಜಸ ಪ್ರಾಜ್ಞಗಳೆಂಬ ಜೀವತ್ರಯವನ್ನು ಸಮರಸಮಾಡಿ ಶುದ್ಧನಾದ ಆತ್ಮನಿಗೆ ಗುರುಸ್ತತ್ವಮಸೀತ್ಯಾಹ ಸತ್ಯಾರ್ಥಂ ಕರುಣಾನಿಧಿಃ || ಎಂಬುವಂತೆ ಎಲೈ ಶಿಷ್ಯನೇ ಈ ಲಿಂಗವೇ ನೀನಾಗಿರುವಿ ಎಂದು ಪಂಚಾಕ್ಷರ ಮಂತ್ರಾರ್ಥವನ್ನು ಬೋಧಿಸುವನು. ಆಮೇಲೆ ಶಿಷ್ಯನು ಗುರುಕೃತ ಸಾಮರಸ್ಯದ ವಿಚ್ಛೇದವಾಗುವಂತೆ ಅದರ ಅನುಸಂಧಾನಮಾಡುತ್ತಾ ಪ್ರತಿನಿತ್ಯದಲ್ಲಿಯೂ ಪ್ರಾಕೃತ ಜಲಾನ್ನಾದಿಗಳ ಸಂಬಂಧವಾಗಿ ಶುದ್ಧಶರೀರಕ್ಕೆ ಪುನಃ ಅಶುದ್ಧಿಯುಂಟಾದೀತೆಂಬುವ ಭಯದಿಂದ ಆ ಜಲಾನ್ನಾದಿಗಳನ್ನು ಬಿಟ್ಟು ಪಾದೋದಕ ಪ್ರಸಾದಾದಿಗಳಿಂದಲೇ ತನ್ನ ಪ್ರಾಣಧಾರಣ ವ್ಯಾಪಾರವನ್ನು ಸಾಗಿಸುತ್ತ ಜೀವನ್ಮುಕ್ತ ಸ್ಥಿತಿಯಲ್ಲಿಯೇ ಕೆಲವುಕಾಲವಿದ್ದು ಕರ್ಮಶೇಷವು ತೀರಲು ಯೋಗಾಂಗ ಪ್ರವಿಷ್ಟನಾಗಿ ವಿದೇಹಮುಕ್ತಿಯನ್ನು ಹೊಂದಿ ನಿತ್ಯಾನಂದ ಭೋಗಿಯೂ ಸರ್ವಜ್ಞತ್ವಾದಿ ಷಡಂಗವುಳ್ಳವನೂ ಆಗಿಬಿಡುವನು. ಅಂತು ಪರಶಿವಬ್ರಹ್ಮವು ತನ್ನ ಶಕ್ತಿಯಿಂದ ನಿತ್ಯಾನಂದವನ್ನು ಭೋಗಿಸುವಂತೆ ಬ್ರಹ್ಮಭೂತನಾದ ಮುಕ್ತನು ಕೂಡ ಸ್ವಾನಂದ ಭೋಗಿಯಾಗುವನು. ಈ ಭೋಗಕ್ಕೆ ಕಾರಣವಾದ ಚಿಚ್ಛಕ್ತಿಯನ್ನು ಬ್ರಹ್ಮದಲ್ಲಿ ಹೇಳದಿದ್ದರೆ ಪಾಷಾಣ ಪ್ರಾಯವಾದ ಮುಕ್ತಿಯಲ್ಲಿ ಯಾರಿಗೂ ಪ್ರವೃತ್ತಿಯೇ ಹುಟ್ಟದೇ ಹೋಗುವದು ಚಿಚ್ಛಕ್ತಿಯೇ ಬ್ರಹ್ಮವೆಂದರೆ ಪುರುಷನಿಲ್ಲದ ಸುಂದರಿಯು ಭೋಗರಹಿತಳಾಗಿ ಸಂತತಿಯನ್ನುಂಟುಮಾಡದಿರುವಂತೆ ಚೇತನಾಚೇತನ ಪ್ರಂಚವೇ ಹುಟ್ಟದೇ ಹೋಗಬೇಕು. ಶಿವಾದ್ವೈತಿಯೇ ? ಆ ಚಿಚ್ಛಕ್ತಿಗೇನೇ ಪುರುಷನೆಂದೂ, ಬ್ರಹ್ಮವೆಂದೂ, ಆತ್ಮನೆಂದೂ ಅನ್ನುತ್ತೇವೆ. ಈ ಪುರುಷನು ಮೂಲಾವಿದ್ಯಾರೂಪವಾದ ಸ್ತ್ರೀಸಂಬಂಧದಿಂದ ಪ್ರಪಂಚವನ್ನು

ಹುಟ್ಟಿಸುವನು. ಬ್ರಹ್ಮಾದ್ವೈತಿಯೇ? ನಿನ್ನ ಮತದಲ್ಲಿ ಮೂಲಾವಿದ್ಯೆಯು ತುಚ್ಛವು. ಆ ನಿನ್ನ ಚಿಚ್ಛಕ್ತಿಯೆಂಬ ಪುರುಷನಿಗೆ ವಿಜಾತೀಯವಾದದ್ದು. ಇಂತಹ ಸ್ತ್ರೀಯಳನ್ನು ತನಗೆ ಸಂಬಂಧಮಾಡಿಕೊಳ್ಳಲಾರನು. ಲೋಕದಲ್ಲಿ ಸಜಾತೀಯ ಸ್ತ್ರೀ ಪುರುಷರ ದಾಂಪತ್ಯವು ಕಂಡುಬರುತ್ತದಲ್ಲದೇ ಪರಸ್ಪರ ವಿಜಾತೀಯ ಸ್ತ್ರೀ ಪುರುಷರಿಗೆ ಕಂಡುಬರುವದಿಲ್ಲವಾದುದರಿಂದ ಇಂತಹ ಸ್ತ್ರೀಯಳ ಸಂಬಂಧವೇ ಲೋಕವಿರುದ್ಧವು. ಚಂದ್ರನಿಗೆ ಚಂದ್ರಿಕೆಯು ಸಂಬಂಧವೂ, ಸೂರ್ಯನಿಗೆ ಪ್ರಭೆಯ ಸಂಬಂಧವೂ, ಬ್ರಾಹ್ಮಣನಿಗೆ ಬ್ರಾಹ್ಮಣಿಯ ಸಂಬಂಧವೂ, ಕ್ಷತ್ರಿಯನಿಗೆ ಕ್ಷತ್ರಿಯ ಸ್ತ್ರೀಯಳ ಸಂಬಂಧವು ಇರುವಂತೆ ಚಿದ್ರೂಪನಾದ ಪುರುಷನಿಗೆ ಸಜಾತೀಯವಾದ ಚಿಚ್ಛಕ್ತಿಯೆಂಬ ಸ್ತ್ರೀಯಳ ಸಂಬಂಧವನ್ನು ಹೇಳಬೇಕು. ಇಲ್ಲದಿದ್ದರೆ, ಇಬ್ಬರ ಮನಸ್ಸು ಕೂಡಿ ಸಂತತಿಯಾಗುವದಿಲ್ಲ. ಆದುದರಿಂದ ಕೇವಲ ಚಿಚ್ಛಕ್ತಿಗೆ ಬ್ರಹ್ಮವೆನ್ನುವದು ತಪ್ಪು. ಅಥವಾ ಅದುವೇ ಬ್ರಹ್ಮವಾದರೂ ಅದರಲ್ಲಿ ಸ್ವಾಭಾವಿಕವಾದ ವಿಮರ್ಶಶಕ್ತಿಯು ಇಲ್ಲವೆನ್ನುವದೂ ತಪ್ಪಾಗುವದು. ಆದ್ದರಿಂದಲೇ ಶ್ರುತಿಯುಕ್ತ್ಯನುಭವಾನುಸಾರವಾಗಿ ನಮ್ಮಾಚಾರ್ಯರು ಚಿಚ್ಛಕ್ತಿ ವಿಶಿಷ್ಟ ಪರಶಿವ ಲಿಂಗವೇ ಬ್ರಹ್ಮವೆಂದು ಬೋಧಿಸಿರುವರು. ನೋಡು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶ್ಲೋ॥ ಯಥಾಚಂದ್ರೇಸ್ಥಿರಾಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ । ತಥಾಶಕ್ತಿರ್ವಿಮರ್ಶಾತ್ಮಾ ಪ್ರಕಾಶೇ ಬ್ರಹ್ಮಣಿಸ್ಥಿತಾ ॥ ಎಂದು ಅನಾದ್ಯನಂತವಾದ ಚಿಚ್ಛಕ್ತಿ ವಿಶಿಷ್ಟವಾದದ್ದೇ ಬ್ರಹ್ಮವೆಂದೂ, ಅದು ಚಂದ್ರನಲ್ಲಿ ಚಂದ್ರಿಕೆಯಂತೆ ಸ್ವಾಭಾವಿಕವೆಂದೂ, ಚಂದ್ರಿಕೆಯು ಸ್ಥೂಲವಸ್ತು ಪ್ರಕಾಶಕವಾಗಿರುವಂತೆ ಎಲ್ಲಾ ಸ್ಥೂಲ ಸೂಕ್ಷ್ಮ ಚೇತನಾಚೇತನ ಪ್ರಕಾಶಕವಾಗಿರುವದೆಂದು ಸ್ಪಷ್ಟವಾಗಿ ಹೇಳಿರುವರು. ಇನ್ನು ಕಾರಿಕಾಕಾರರು ಶ್ಲೋ॥ ಉಚ್ಯತೆ ಶಕ್ತಿವೈಶಿಷ್ಟ್ಯಂ ॥ ಇತ್ಯಾದಿಯಾಗಿ ಹೇಳಿದ ಅಭಿಪ್ರಾಯವನ್ನು ಸಂಕ್ಷೇಪವಾಗಿ ಹೇಳುವೆನು. ‚‚ಉಮಾಸಹಾಯಂ ಪರಮೇಶ್ವರಂ ಪ್ರಭುಂ'' ‚‚ಆಕಾಶೋವೈ ನಾಮರೂಪಯೋರ್ನಿರ್ವಹಿತಾ'' ಇತ್ಯಾದಿ ಶ್ರುತಿವಾಕ್ಯಗಳಿಂದ ಆಕಾಶ ಉಮಾಶಬ್ದಗಳಿಂದ ಚಿಚ್ಛಕ್ತಿಯು ಬೋಧಿಸಲ್ಪಡುವುದು. ಈ ಶಕ್ತಿಯು ಪರಮೇಶ್ವರನಲ್ಲಿರುವದೆಂದೂ, ಈ ಶಕ್ತಿಯಿಂದಲೇ ಸಕಲ ಜಗನ್ನಿಯಾಮಕನೂ, ಸಕಲ ಜಗತ್ಸ್ವರೂಪನೂ ಆಗುವನು ಈ ಚಿಚ್ಛಕ್ತಿಯು ಒಂದೇ ಇದ್ದರೂ ಈ ಶಕ್ತಿಯ ಭೇದಗಳು ಅನೇಕಗಳಿರುವವು. ಲಲಿತಾ ಶಕ್ತಿಯೇ ಮೊದಲಾದ ಅನೇಕ ಪ್ರಕಾರ ಶಕ್ತಿಗಳು ಶಕ್ತಿಪುರಾಣಾದಿಗಳಲ್ಲಿ ಹೇಳ

ಲ್ಪಟ್ಟಿರುವುವು. ಮತ್ತು ಶ್ಲೋ || ಶಕ್ತಿರೂಪದ್ವಯಂ ಪುಂಸ್ತ್ವಂ ಸ್ತ್ರೀತ್ವಂ ಚೇತಿ ಪ್ರಮಾಣತಃ | ಪುಂರೂಪಂ ವಿಷ್ಣುರೂಪಂ ಸ್ಯಾಚ್ಛಕ್ತಿರೂಪಮನೇಕಧಾ || ಅಂದರೆ ಶಕ್ತಿಯ ಒಂದು ಸ್ವರೂಪವು ವಿಷ್ಣುವು. ಮತ್ತೊಂದು ಸ್ತ್ರೀ ಸ್ವರೂಪವು. ಈ ಸ್ತ್ರೀರೂಪವು ಅನೇಕ ಪ್ರಕಾರವಾಗಿರುವುದು. ವಿಷ್ಣುರೂಪವೊಂದೇಯಾಗಿರುವದು. ಪರಶಿವಬ್ರಹ್ಮದ ಒಂದೇ ಶಕ್ತಿಯು ಕಾರ್ಯಕಾಲದಲ್ಲಿ ಭವಾನೀ ವಿಷ್ಣು ಕಾಲೀ ದುರ್ಗಾ ಇಂತೆಂಬ ನಾಮಗಳಿಂದ ನಾಲ್ಕುಪ್ರಕಾರವಾಗಿರುವುದು. ಈ ವಿಷಯದಲ್ಲಿ ಕಾರಿಕಾಕಾರರಿಂದ ಅನೇಕ ಪ್ರಮಾಣಗಳು ಉದಾಹರಿಸಲ್ಪಟ್ಟಿರುವುವು. ಶಕ್ತ್ಯಂಶ ಭಾವವೇ ವಿಷ್ಣುವಿಗೆ ಹೇಳಲ್ಪಟ್ಟಿರುವದು. ಮತ್ತು ಶ್ಲೋ || ಶಕ್ತ್ಯಂಶ ವಿಷ್ಣೋರಂಶಾಸ್ತೇರಾಮಕೃಷ್ಣಾದಯೊಮತಾಃ | ಎಂಬುವದರಿಂದ ಶಿವಶಕ್ತ್ಯಂಶನಾದ ವಿಷ್ಣುವಿನ ಅಂಶಗಳೇ ರಾಮ ಕೃಷ್ಣಾದಿಗಳೆಂದು ಹೇಳಿರುವರು. ಇದಲ್ಲದೇ ಯಜುರಾದಿ ಕಾಂಡದಲ್ಲಿ ‹‹ಏಕ ಏವರುದ್ರೋನ ದ್ವಿತೀಯಾಯತಸ್ಥೆ›› ಸಂಸಾರವೆಂಬ ಕಾಡುಗಿಚ್ಚಿನ ಪರಿತಾಪದಿಂದ ಬಳಲಿದ ಪಶುಗಳ (ಜೀವರುಗಳ) ಪಾಶರೂಪವಾದ ರೋಗವನ್ನು ನಾಶಮಾಡುವದರಿಂದ ಶಿವನಿಗೆ ರುದ್ರನೆಂದು ಪರ್ಯಾಯನಾಮವು. ಈ ಶ್ರುತಿಯೊಳಗಿನಏವಕಾರದಿಂದ ಶಿವೇತರವಾದ ಯಾವ ದೇವತೆಯಲ್ಲಿಯೂ ಜೀವರುಗಳ ಪಾಶಚ್ಛೇದನಸಾಮರ್ಥ್ಯವಿಲ್ಲವೆಂದು ಸ್ಪಷ್ಟವಾಗುವುದು. ಹೇಗಂದರೆ ‹‹ಶಂಖಃ ಪಾಂಡರಏವ›› (ಶಂಖವು ಕೇವಲ ಬಿಳಿದು) ಬಿಳಿಬಣ್ಣದ ಹೊರತು ಮತ್ತಾವ ಕೆಂಪು ಮೊದಲಾದ ಬಣ್ಣವಿಲ್ಲವೆನ್ನುವಂತೆ ಶಿವನೊಬ್ಬನೇ ಪಾಶಚ್ಛೇದ ದಕ್ಷನಲ್ಲದೆ ಬೇರೆ ಯಾರೂ ದಕ್ಷರಲ್ಲವೆಂದು ಬೋಧಿಸಲ್ಪಟ್ಟಿತು. ಶಂಖದಲ್ಲಿ ಪೀತವು ಕಾಣಬೇಕಾದರೆ ತನ್ನ ನೇತ್ರದಲ್ಲಿ ದೋಷವಿರಬೇಕು. ಆಗ ವಾಸ್ತವವಾಗಿ ಶುಭ್ರವಿರುವ ಶಂಖದಲ್ಲಿ ಪೀತವು ಕಂಡುಬರುವದು. ‹‹ಏಕಏವರುದ್ರೊ›› ಎಂಬ ಪಾಶಚ್ಛೇದನಸಾಮರ್ಥ್ಯವು ಮತ್ತೊಬ್ಬನಲ್ಲಿಲ್ಲವೆಂದು ಶ್ರುತಿಯು ಸ್ಪಷ್ಟವಾಗಿ ಹೇಳಿದ್ದರೂ ಶಿವೇತರ ದೇವತೆಗಳಲ್ಲಿ ಪಾಶಚ್ಛೇದನ ಸಾಮರ್ಥ್ಯವಿದೆಯೆಂದು ತಿಳಿದು ಶಿವೇತರ ದೇವತೆಯನ್ನು ಆಶ್ರಯಿಸುವವರು ಪೂರ್ವಜನ್ಮಾರ್ಜಿತ ದುಷ್ಕೃತದೋಷದೂಷಿತಚಿತ್ತರೆಂಬುವದು ಏವ ಎಂಬ ಪದದಿಂದ ಸೂಚಿಸಲ್ಪಟ್ಟಿತು. ಈ ಅರ್ಥವು ಏವ ಎಂಬುವದರಿಂದಲೆ ಸಿದ್ಧವಾಗಿರುವಾಗ ಪುನಃ ಶ್ರುತಿಯಲ್ಲಿ ಏಕಃ ಎಂದು ಏಕತ್ವಗ್ರಹಣಮಾಡಿರುವದರಿಂದ ಶಿವಲಿಂಗೇತರ ದೇವತೆಗಳಲ್ಲಿ ಬ್ರಹ್ಮತ್ವವು ನಿಸ್ಸಂದೇಹವಾಗಿಲ್ಲವೆಂದು ಸಿದ್ಧವಾಯಿತು. ಈ ಅರ್ಥವು ಮುಂದಣ

ಶಬ್ದಗಳಿಂದ ಸ್ಪಷ್ಟವಾಗುವದು. ‹‹ನದ್ವಿತೀಯಾಯ ತಸ್ಥೆ›› ಶಿವಲಿಂಗೇತರ ವಾದ ಯಾವ ದೇವತೆಯೂ ಕೂಡ ಜೀವರ ಪಾಶನಾಶದಲ್ಲಿ ಸಮರ್ಥವಾಗಿರುವದಿಲ್ಲ. ಇಲ್ಲಿ ‹‹ದ್ವಿತಿಯ›› ಎಂದು ಹೇಳಬೇಕಾಗಿದ್ದರೂ ದ್ವಿತೀಯಾಯ ಎಂದು ಹೇಳಿರುವುದು ಛಾಂದಸಪ್ರಯುಕ್ತವಾದದ್ದು. ತಿಷ್ಠತಿ ಎಂದು ಹೇಳುವಲ್ಲಿ ತಸ್ಥೆ ಎಂದು ಹೇಳಿರುವುದು ಭೂತಭವಿಷ್ಯಕಾಲಗಳಲ್ಲಿ (ಆದ್ಯಂತಗಳಲ್ಲಿ) ಶಿವೇತರವಾದ ಯಾವದೂ ಇರುವದಿಲ್ಲವೆಂಬುವ ಅರ್ಥವನ್ನು ಸೂಚಿಸುವದು. ‹‹ಆಖುಸ್ತೇರುದ್ರ ಪಶುಸ್ತಂಜುಷಸ್ವೈಷತೇರುದ್ರಭಾಗಃ | ಸಹಸ್ವಸ್ರಾಂಬಿಕಯಾತಂಜುಷಸ್ವ›› ಎಲೈ ಅಧ್ಯಾಸವಾದಿಯೇ? ಈ ಶ್ರುತಿವಾಕ್ಯದಲ್ಲಿರುವ ‹‹ಸ್ವಸ್ರಾಂಬಿಕಯಾ›› ಎಂಬುವ ಪದಗಳಿಂದ ಪರಶಿವ ಬ್ರಹ್ಮವು ಸಹಜಶಕ್ತಿವಿಶಿಷ್ಟವೆಂದು ಸ್ಪಷ್ಟಾರ್ಥವಾಗಿರುವುದಷ್ಟೆ? ಶಿವಾದ್ವೈತಿಯೇ ? ಸಹಜವಾದ ಶಕ್ತಿವೈಶಿಷ್ಟ್ಯವು ಈ ಮಂತ್ರಘಟಕವಾದ ಪದಗಳಿಂದ ಕಂಡುಬರುವದಿಲ್ಲ, ನಾನು ಕೂಡ ಬ್ರಹ್ಮದಲ್ಲಿ ಅಧ್ಯಾಸ ಶಕ್ತಿಯನ್ನು (ಮಾಯಾಶಕ್ತಿಯನ್ನು) ಒಪ್ಪುವೆನು. ನನ್ನ ಮತದಲ್ಲಿ ಶಕ್ತಿಯು ಅನಾದಿಯಾಗಿದ್ದು ಸಾಂತವಾಗಿರುವುದು. ನೀನು ಮಾತ್ರ ಸಾಂತವೆನ್ನುವದಿಲ್ಲವಾದ್ದರಿಂದ ನನಗೂ, ನಿನಗೂ ಶಕ್ತಿಯ ಸಾಂತತ್ವಾಂಶದಲ್ಲಿ ಮಾತ್ರ ವಿವಾದವು, ಸಮ್ಯಗ್ಜ್ಞಾನೋತ್ತರದಲ್ಲಿ ಅದು ನಷ್ಟವಾಗುವದು ಆಮೇಲೆ ಆ ಬ್ರಹ್ಮಾಕಾರ ವೃತ್ತಿರೂಪಜ್ಞಾನವೂ ಕೂಡ ನಾಶವಾಗುವದೆಂದು ನಾನು ಹೇಳುವೆನು. ಅಧ್ಯಾಸಿಯೆ? ನೀನು ಯಾವದಕ್ಕೆ ಸಮ್ಯಗ್ಜ್ಞಾನವೆಂದು ಅನ್ನುವಿಯೊ ಅದುವೇ ನನ್ನ ಮತದಲ್ಲಿ ಶಕ್ತಿಯು. ನೀನು ಯಾವ ವೃತ್ತಿರೂಪ ಜ್ಞಾನವನ್ನು ಪ್ರತ್ಯಗಾತ್ಮ ರೂಪದಿಂದ ಆ ವೃತ್ತಿಗೆ ವಿಷಯವಾಗದೇ ಸ್ವಯಂಪ್ರಕಾಶರೂಪವಾದ ಅಪರೋಕ್ಷಸ್ವರೂಪವಾದ ಚಿಚ್ಛಕ್ತಿಯೆಂಬ ಬ್ರಹ್ಮವೆನ್ನುವಿಯೋ? ಅದುವೇ ಬ್ರಹ್ಮಕ್ಕೆ ಆನಂದಭೋಗವನ್ನುಂಟುಮಾಡುವ ಚಿಚ್ಛಕ್ತಿಯು. ಅಂದರೆ ಬ್ರಹ್ಮಾಕಾರವಾದ ವೃತ್ತಿಯು ಅಂತಃಕರಣಶಕ್ತಿಯಜಾಡ್ಯವು ಲಯವಾಗದಹೊರತು ಆಗುವದಿಲ್ಲವಾದ್ದರಿಂದ ಜಾಡ್ಯವು ಕಳೆದುಳಿದ ಚಿಚ್ಛಕ್ತಿಯು ಅಹಮಸ್ಮಿ ಚಿನ್ಮಾತ್ರೋಽಹಂ ಆನಂದರೂಪೋಽಹಂ ಎಂಬುವ ತನ್ನ ಸಚ್ಚಿದಾನಂದ ಸ್ವರೂಪಾನುಭವರೂಪವಾದ ಭೋಗಕ್ಕೆ ಕಾರಣವಾಗಿರುವುದು. ಆದ್ದರಿಂದ ಶಕ್ತಿವೈಶಿಷ್ಟ್ಯವನ್ನು ಬ್ರಹ್ಮದಲ್ಲಿ ಹೇಳಲೇಬೇಕು. ಮೇಲಿನ ಮಂತ್ರದಿಂದ ಬ್ರಹ್ಮದಲ್ಲಿ ಕಲ್ಪಿತವಾದ ಶಕ್ತಿಯು ಹೇಳಲ್ಪಡದೇ ಸಹಜಶಕ್ತಿಯು ಹೇಳಲ್ಪಡುವದೆಂದು ಹೇಳಿದಿಯಷ್ಟೆ? ಅದು ಹೇಗೆ? ಕೇಳು, ಮಂತ್ರಾರ್ಥವನ್ನು ಕಾರಿಕಾ

ಕಾರರು ವಿಸ್ತಾರವಾಗಿ ನಿರೂಪಿಸಿರುವರು. ಅವರ ಅಭಿಪ್ರಾಯವನ್ನೇ ನಾನು ಸಂಕ್ಷೇಪದಿಂದ ಹೇಳುವೆನು. ಆಖುಃ ಆಸಮಂತಾತ್ ಖನತಿ ವಿದಾರಯತೀ ತ್ಯಾಖುಃ | ಆದಿವರಾಹರೂಪೋವಿಷ್ಣುಃ | ಇತ್ಯಾದಿಯಾಗಿ ಅವರು ಹೇಳಿರುವ ದೇನಂದರೆ ಸಮಂತಾತ್ ಭೂಮಿಯನ್ನು ಭೇದಿಸುವನಾದುದರಿಂದ ವಿಷ್ಣುವಿಗೆ ಆಖು ಯಂದನ್ನುವರು. ಇವನು, ತೆ-ನಿನ್ನ (ಸಕಲ ಪಾಶವಿಮೋಚಕನಾದ ನಿನ್ನ) ಪಶುಃ ಪಶುವು (ಜನನ ಮರಣಗಳಿಂದಲೂ, ಜಾಯಾಪಹರಣಾದಿಗಳಿಂದಲೂ ಉಂಟಾದ ದುಃಖಗಳ ಸಮೂಹರೂಪವಾದ ಪಾಶವಿಶಿಷ್ಟನಾದುದರಿಂದ ವಿಷ್ಣು ವಿಗೆ ಪಶುವೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿತು). ಇದರಿಂದ ವಿಷ್ಣುವು ನಮ್ಮಂತೆ ಜೀವಕೋಟಿ ಪ್ರವಿಷ್ಟನೆಂತಲೂ, ಶಿವಭಜನೆ ಲಿಂಗ ಪ್ರತಿಷ್ಠಾಪನೆ ಲಿಂಗಧಾ ರಣ ವಿಭೂತಿ ರುದ್ರಾಕ್ಷಧಾರಣ ಪಂಚಾಕ್ಷರ ಮಂತ್ರ ಜಪ ಮೊದಲಾದವು ಗಳಿಂದ ಪ್ರಾಪ್ತವಾದ ಶಿವಭಕ್ತಿಯಿಂದ ಮುಕ್ತನಾಗುವನೆಂತಲೂ ಸೂಚಿಸಲ್ಪ ಟ್ಟಿತು. ಆದ್ದರಿಂದ ಶಿವಶಕ್ತಿಗಳಗಿಂತಲು ವಿಷ್ಣುವು ಭಿನ್ನನೆಂದೂ ಜೀವರಾಶಿಗಳೊ ಳಗೆ ಒಬ್ಬನಾಗಿರುವನೆಂದೂ ಸ್ಪಷ್ಟವಾಗಿರುವದು. ತಂ-ಇಂಥ ಆದಿವರಾಹರೂ ಪವಾದ ಪಶುವನ್ನು, ಜುಷಸ್ವ-ಅಂಥ ಪಾಶಚ್ಛೇದನ ಮೊದಲಾದ ಧರ್ಮಗಳಿಂದ ಕೂಡಿದ ಪಶುಪತಿಯೆ? ಪಶುವು ಸೋಡಾಶರೀತ್ಯಾ ಗ್ರಹಿಸುವವನಾಗು (ಸೇವಿ ಸು) ಜುಷೀ ಪ್ರೀತಿಸೇವನಯೋರಿತಿ ಧಾತುಃ. ಏಷತೆ ರುದ್ರಭಾಗಃ | ಹೇರುದ್ರ ಸಕಲ ಸಾಂಸಾರಿಕದುಃಖಚ್ಛೇದನ ಸಮರ್ಥನಾದ ಶಿವನೇ ? ಏಷತೆ-ನಿನಗಿದು ಭಾಗಃ ಹವಿರ್ಭಾಗವು. ತಂಜುಷಸ್ವ| ಎಂಬುವದರಿಂದಲೇ ಹವಿರ್ಭಾಗ ಸ್ವೀಕಾ ರವು ಹೇಳಲ್ಪಟ್ಟಿದ್ದರೂ ಪುನಃ ಏಷತೆ ರುದ್ರಭಾಗಃ | ಎಂದು ಹೇಳಿರುವುದು. ಶಿವಾತಿರಿಕ್ತವಾದ ಯಾರಲ್ಲಿಯೂ ಕೃತ್ಯಧೀಶ್ವರತ್ವದ ಗಂಧವೂ ಕೂಡ ಇಲ್ಲೆಂದು ಸ್ಪಷ್ಟವಾಯಿತು. ಅಷ್ಟಮೂರ್ತಿಗಳ ಪೈಕಿ ಒಂದಾದ ಯಜಮಾನ ಮೂರ್ತಿ ರೂಪದಿಂದ ಯಜ್ಞಾದಿಗಳ ಅನುಷ್ಠಾನವು ಹೇಳಲ್ಪಟ್ಟಿತು. ಇಂಥ ಜ್ಯೋತಿ ಷ್ಟೋಮಾದಿ ಯಾಗವು ಉತ್ತಮಾಧಿಕಾರಿಯಾದ ವೀರಶೈವನಿಗೆ ಉಚಿತವಲ್ಲ ವೆಂದೂ ಆ ಯಜ್ಞಾದಿಕವು (ಅಂತರ್ಯಾಗರೂಪವಾದ ಶಿವಪೂಜಾದಿಕವು) ವೀರಶೈವನಿಗೆ ಯೋಗ್ಯವೆಂದೂ ಅಂಥ ನಶ್ವರವಾದ ಸ್ವರ್ಗಾಪೇಕ್ಷಿಯಾದ ಅಧಿ ಕಾರಿಯು ಆ ಪಶುಕರ್ಮವನ್ನನುಷ್ಠಿಸಿ ಅವಶ್ಯವಾಗಿ ಶಿವಪ್ರೀತಿಯನ್ನು ಸಂಪಾ ದಿಸಿ ಅದರಿಂದ ಚಿತ್ತಶುದ್ಧಿದ್ವಾರಾ ಶಿವಜ್ಞಾನದಿಂದ ಮುಕ್ತಿಯನ್ನು ಪಡೆಯ ಬಹುದೆಂದೂ ಸ್ಪಷ್ಟಮಾಡಿರುವರು. ಎಲೈ ಸಹಜ ಶಕ್ತಿವಾದಿಯೇ ? ಶಿವನೊಬ್ಬ

ನಿಗೆ ಮಾತ್ರ ಕೃತ್ಯಧೀಶ್ವರತ್ವವು ಹೇಳಲ್ಪಟ್ಟಿತು. ಶಕ್ತಿವಿಶಿಷ್ಟನಾದ ಶಿವನಿಗೆ ಹೇಳಲ್ಪಡಲಿಲ್ಲವಲ್ಲ ? ಮಿಥ್ಯಾಶಕ್ತಿವಾದಿಯೇ ಕೇಳು? ದುಡಕಬೇಡ. ಈ ಆಕ್ಷೇಪಣೆಯ ನಿವಾರಣಕ್ಕಾಗಿಯೇ ? ಸಹ ಸ್ವಸ್ರಾಂಬಿಕಯಾ | ಎಂದು ಶ್ರುತಿದೇವಿಯೇ ಹೇಳುವಳು. ಅಂಬಿಕಯಾ-ಸಕಲ ಜಗದಂಡ ಪಿಂಡ ಪ್ರಸವಿತ್ರ್ಯಾ | ಅಂಬಾಮಾತಾಥ ಬಾಲಾಸ್ಯಾದಿತಿಕೋಶಾತ್ | ಹೀಗೆ ಅಂಬಿಕಾ ಎಂಬುವ ಪದಕ್ಕೆ ಕಾರಿಕಾಕಾರರು ವ್ಯಾಖ್ಯಾನಮಾಡಿರುವರು. ಇಲ್ಲಿ ಸ್ವಲ್ಪ ವಿಚಾರವಿರುವದು? ಅಂಬಾ ಶಬ್ದವು ನಾಟ್ಯವರ್ಗದಲ್ಲಿಯೂ ಅಂಬಿಕಾಶಬ್ದವು ಸ್ವರ್ಗವರ್ಗದಲ್ಲಿ ಪಾರ್ವತೀ ಶಬ್ದದ ಪರ್ಯಾಯನಾಮವಾಗಿಯೂ ಪಠಿಸಲ್ಪಟ್ಟಿರುವದು. ಶ್ಲೋ|| ಅಪರ್ಣಾ ಪಾರ್ವತೀ ದುರ್ಗಾಮೃಡಾಣೀ ಚಂಡಿಕಾಂಬಿಕಾ || ಮೇಲಿನ ಮಂತ್ರದಲ್ಲಿ ಯಥಾಶ್ರುತವಾಗಿರುವ ಅಂಬಿಕಯಾ ಎಂಬುವ ತೃತೀಯಾಂತವಾದ ಅಂಬಿಕಾಶಬ್ದದಿಂದ, ಗಿರಿರಾಜಗೆ ಮೇನಕೆಯಲ್ಲಿ ಜನಿಸಿದ ಪಾರ್ವತೀದೇವಿಯೊಡನೆ ಹವಿರ್ಭಾಗವನ್ನು ಸ್ವೀಕರಿಸು ಎಂದು ಮಂತ್ರಾರ್ಥವು ಸ್ಪಷ್ಟವಾಗುತ್ತಿದ್ದರೂ ಮೃಡಾಣೀ ಚಂಡಿಕಾಂಬಿಕಾ | ಎಂಬುವ ಕೋಶವು ಪ್ರಥಮೋಪಾತ್ತವಾಗಿದ್ದರೂ ಪಾರ್ವತಿಯ ಸ್ವರೂಪವಾದರೂ ಚಿಚ್ಛಕ್ತಿಯ ಸ್ಥೂಲಪರಿಣಾಮವಾಗಿದ್ದರೂ ಅಂಬಿಕಾಶಬ್ದಕ್ಕೆ ಈ ಅರ್ಥವನ್ನು ಬಿಟ್ಟು ಆ ರೀತಿಯಾಗಿ ವ್ಯಾಖ್ಯಾನ ಮಾಡಿರುವದು, ಕಾರಿಕಾಕಾರರ ನ್ಯೂನತೆಯಲ್ಲವೆ? ಅಧ್ಯಾಸವಾದಿಯೇ ? ಕೇಳು? ಅಂಬಿಕಾಶಬ್ದವು ಅಪರ್ಣಾ ಪಾರ್ವತೀ ದುರ್ಗಾ ಮೃಡಾಣೀ ಚಂಡಿಕಾಂಬಿಕಾ | ಎಂದು ಪಾರ್ವತೀದೇವಿಯ ಪರ್ಯಾಯನಾಮವಾಗಿ ಪಠಿಸಲ್ಪಟ್ಟಿರುವದರಿಂದಲೇ ಕಾರಿಕಾಕಾರರು ಚಿಚ್ಛಕ್ತಿಯ ಪರಂಪರಾ ಪರಿಣಾಮರೂಪಳಾದ ಪಾರ್ವತೀದೇವಿಗೆ ಬೋಧಕವಾಗಬಾರದು. ಎಂಬುವ ಕಾರಣದಿಂದಲೇ ಅಪರ್ಣಾಪಾರ್ವತೀ ಇತ್ಯಾದ್ಯಮರವನ್ನು ಉದಾಹರಿಸದೇ „ಅಂಬಾ ಮಾತಾಥ" ಎಂಬುವ ಕೋಶವನ್ನು ಹೇಳಿ ಅಂಬಿಕಾಶಬ್ದಕ್ಕೆ ಸಕಲ ಚರಾಚರ ಪ್ರಪಂಚಕಾರಣೀಭೂತವಾದ ಚಿಚ್ಛಕ್ತಿಯೆಂದು ಅರ್ಥಮಾಡಿರುವರು. ಅಂಬಿಕಾಶಬ್ದಕ್ಕೆ ಪಾರ್ವತೀದೇವಿಯಂದು ಅರ್ಥಮಾಡಿದರೆ ಪಾರ್ವತೀದೇವಿಯಿಂದ ವಿಶಿಷ್ಟವಾದ ಅಧೋಮಾಯಾಪಾಶಬದ್ಧವಾದ ಪ್ರತಿಮಾಕಾರ ಮೂರ್ತಿಯನ್ನು ಪೂಜಿಸಬೇಕಾದೀತು ಎಂಬುವ ಭಯದಿಂದ ಅಂಬಿಕಾಶಬ್ದಕ್ಕೆ ಪಾರ್ವತೀದೇವಿಯೆಂದು ಅರ್ಥಮಾಡಿರುವದಿಲ್ಲ. ಅದೇಕೆ ಶಿವಾದ್ವೈತಿಯೇ ? ನಿಮ್ಮವರು ಯಾವಾಗಲೂ ಪಾರ್ವತೀಪತೆ ಹರಹರ ಮಹಾದೇವ ಎಂದು ಪದೇ ಪದೇ

ಉದ್ಘೋಷಿಸುತ್ತಿರುವರಲ್ಲಾ? ವೀರಶೈವನಿಗೆ ಪ್ರತಿಮಾಕಾರವಾದ ಪಾರ್ವತೀ ಪತಿಯೆಂಬ ಮೂರ್ತಿಯು ಉಪಾಸ್ಯವಾಗದಪಕ್ಷದಲ್ಲಿ ಆ ಸಾಂಪ್ರದಾಯವು ಬರಲಾರಗು. ಆದ್ದರಿಂದ ಕಾರಿಕಾಕಾರರು ಅಂಬಿಕಯಾ ಎಂಬುವ ಪದಕ್ಕೆ ಆರೀತಿಯಾಗಿ ಅರ್ಥಮಾಡಿರುವದು ಹೇಗೆ ಸಂಗತವು? ಬ್ರಹ್ಮಾದ್ವೈತಿಯೇ ಕೇಳು, ವೀರಶೈವನಿಗೆ ಮುಖ್ಯವಾಗಿ ಉಪಾಸ್ಯಮೂರ್ತಿ ಯಾವದೆಂಬುವದನ್ನು ಕೇನೋಪನಿಷತ್ತಿನ ಶಾಂಕರಿಯಲ್ಲಿ ಸ್ಪಷ್ಟೀಕರಿಸಿರುವೆನು. «ನೇದಂಯದಿದಮುಪಾಸತೆ» ಎಂಬುವದರ ಶಾಂಕರಿಯನ್ನು ನೋಡು. ಇದಲ್ಲದೆ ವೀರಶೈವನಿಗೆ ಗುರು ಲಿಂಗ ಜಂಗಮ ರೂಪಗಳಾದ ಭಾವಾದಿ ಮೂರು ಲಿಂಗಗಳೇ ಉಪಾಸ್ಯಗಳು. ಈ ಉಪಾಸ್ಯಸ್ಥಲಗಳು ಮಹಾ ಲಿಂಗಾದಿ ಭೇದದಿಂದ ಆರುಪ್ರಕಾರವಾಗಿರುವುವು. ಉಪಾಸಕಸ್ಥಲಗಳಾದರೂ ಮೂರೇ ಇದ್ದು ಪುನಃ ಆರುಪ್ರಕಾರವಾಗಿರುವವು. ಈ ಉಪಾಸ್ಯೋಪಾಸಕಸ್ಥಲಗಳು ವಿಸ್ತಾರವಾಗಿ ಏಕೋತ್ತರ ಶತಸ್ಥಲಗಳಾಗಿ ನಿರೂಪಿಸಲ್ಪಟ್ಟಿರುವವು. ಇವುಗಳಲ್ಲಿಯೇ ವೀರಶೈವನ ಎಲ್ಲಾ ಧರ್ಮಗಳು ಹೇಳಲ್ಪಟ್ಟಿರುವುವು. ಈ ಭಕ್ತಾದಿ ಜ್ಞಾನಶೂನ್ಯಾಂತಸ್ಥಲಗಳಲ್ಲಿ ಎಲ್ಲಿಯೂ ಪಾರ್ವತೀಪತಿಯಾದ ಪ್ರತಿಮಾಕಾರ ಮೂರ್ತಿಯ ಉಪಾಸನೆಯು ಹೇಳಲ್ಪಟ್ಟಿಲ್ಲವು. ವೀರಶೈವಮತಸ್ಥಾಪಕರಾದ ಭಗವತ್ಪಾದರಾದ ರೇಣುಕಾಚಾರ್ಯರೇ ಅಗಸ್ತ್ಯಮಹರ್ಷಿಗಳಿಗೆ ವೀರಶೈವ ಸಿದ್ಧಾಂತವನ್ನು ಹೇಳುವ ನಿಮಿತ್ತವಾಗಿ ಸಕಲ ವೀರಶೈವರಿಗೂ ವೀರಶೈವ ಸಿದ್ಧಾಂತವನ್ನು ಬೋಧಿಸಿರುವರು. ಮತಸ್ಥಾಪಕರು ಬೋಧಿಸಿರುವ ತತ್ವವನ್ನೇ ಈ ಕಾರಿಕಾಕಾರರು ಏಕೋತ್ತರ ಶತಸ್ಥಲಗಳಿಗೆ ಅವಿರುದ್ಧವಾಗಿ ಬ್ರಹ್ಮಸೂತ್ರ ನೀಲಕಂಠ ಭಾಷ್ಯವನ್ನೇ ಕಾರಿಕಾರೂಪವಾಗಿ ಬರೆದಿರುವರು. ಅಂದಮೇಲೆ ಕಾರಿಕಾಕಾರರು ವೀರಶೈವ ಸಾಂಪ್ರದಾಯಕ್ಕೆ ವಿರುದ್ಧವಾಗಿ ಎಲ್ಲಿಯೂ ಹೇಳುವದಿಲ್ಲ. ಕೆಲವು ಕಡೆಯಲ್ಲಿ ಶೈವರೆಲ್ಲರ ಉಪಕಾರಕ್ಕಾಗಿ ಶೈವರ ಧರ್ಮಗಳನ್ನು ಹೇಳಿ ಇದು ವೀರಶೈವನಿಗೆ ವಿಹಿತವಲ್ಲವೆಂದು ಕಂಠತಃ ಹೇಳುತ್ತಿರುವುರು. ಹೀಗಿದ್ದು ಅಂಬಿಕಾ ಪದಕ್ಕೆ ಚಿಚ್ಛಕ್ತಿಯೆಂದು ಅರ್ಥಮಾಡಿರುವದು. ಪಾರ್ವತೀಪತೆ ಹರಹರ ಮಹಾದೇವ | ಎಂಬುವ ವೀರಶೈವ ಸಾಂಪ್ರದಾಯಕ್ಕೆ ವಿರುದ್ಧವೆಂದು ನೀನು ಆಕ್ಷೇಪಿಸತಕ್ಕದಲ್ಲ. ಹಾಗಾದರೆ ಈ ಸಾಂಪ್ರದಾಯವೇ ತಪ್ಪೆನ್ನುವಿಯೇನು? ಅದೂ ತಪ್ಪಲ್ಲ. ಯಾಕಂದರೆ ಎಲ್ಲಾ ಕಡೆಯಲ್ಲಿಯೂ ವೀರಶೈವ ಆಬಾಲವೃದ್ಧರಲ್ಲಿಯೂ ಕಂಡುಬರುವ ಈ ಸಾಂಪ್ರದಾಯವು ಹೇಗೆ ತಪ್ಪಾದೀತು? ಹಾಗಾದರೆ ಹಾಗೆನ್ನುವದರ ಅಭಿಪ್ರಾಯವೇನು? ವೀರ

ಶೈವರ ಎಲ್ಲಾ ಧರ್ಮಗಳೂ ಅಭೇದ ದೃಷ್ಟಿಯನ್ನು ಮುಂದೆ ಮಾಡಿಕೊಂಡು ನಿರೂಪಿಸಲ್ಪಟ್ಟಿರುವವು. ಆದ್ದರಿಂದ ಪಾರ್ವತೀದೇವಿಯೆಂಬ ಸ್ಥೂಲ ಪರಿಣಾಮವಾದ ಕಾರ್ಯಕ್ಕೂ, ಚಿಚ್ಛಕ್ತಿಯೆಂಬ ಕಾರಣಕ್ಕೂ ಅಭೇದವಿರುವ ಮೂಲಕ ಪಾರ್ವತೀಪತಿ ಎಂದು ಪರಶಿವ ಲಿಂಗಮೂರ್ತಿಗೂ, ಪಾರ್ವತೀಪತಿಯಾದ ಲೀಲಾವಿಗ್ರಹಕ್ಕೂ ಅಭೇದದೃಷ್ಟಿಯಿಂದ ಉಚ್ಚರಿಸುವರು. ಭಕ್ತರಾಗದ ಮಂದಾಧಿಕಾರಿಗಳಾದ ಇಂದ್ರಾದಿ ದೇವತೆಗಳು ಭಕ್ತರಾದಮೇಲೆ "ಸಾಬ್ರಹ್ಮೇತಿಹೊವಾಚ" ಎಂದು ಹಿಮವತ್ಪುತ್ರಿಯು ಉಪದೇಶ ಮಾಡಿರುವಳು. ನಮಸ್ತೇ ಲಿಂಗಧಾರಿಣ್ಯೈ । ಎಂಬುವ ಪ್ರಮಾಣದಿಂದ ಚಿಚ್ಛಕ್ತಿಯ ಸ್ಥಲಪರಿಣಾಮವಾದ ಪಾರ್ವತೀದೇವಿಗೆ ಲಿಂಗಧಾರಣವು ಹೇಳಲ್ಪಟ್ಟಿರುವದು. ಲಿಂಗಧಾರಿಗಳಾದ ಎಲ್ಲಾ ಭಕ್ತರಲ್ಲಿಯೂ ಶಿವಭಾವನೆ ಇರಬೇಕೆನ್ನುವಾಗ ಪಾರ್ವತೀದೇವಿಯ ನಾಮಸ್ಮರಣೆ ಮಾಡುವದೊಂದು ಪ್ರತ್ಯವಾಯಜನಕವೇ ? ಹಾಗಾದರೆ ಪಂಚವಿಂಶತಿ ಲೀಲಾ ವಿಗ್ರಹಗಳನ್ನು ಏಕೆ ಪೂಜಿಸುವದಿಲ್ಲ ? ಅವುಗಳ ಪೂಜೆಯು ಈ ಕರ್ಮಭೂಮಿಯಲ್ಲಿ ವೀರಶೈವನಿಗೆ ವಿಹಿತವಾಗಿಲ್ಲ. ಹಾಗಾದರೆ ಆ ಮೂರ್ತಿಗಳ ಕಥಾಶ್ರವಣವು ವಿಹಿತವಾಗಿದೆಯೊ ? ವಿಹಿತವಾಗಿರುವುದು. ಪರಶಿವಮೂರ್ತಿಯು ಗಣಾಚಾರ ಮೊದಲಾದ ಪಂಚಾಚಾರಗಳನ್ನು ಬೋಧಿಸುವದಕ್ಕಾಗಿಯೂ ದುಷ್ಟಶಿಕ್ಷಣೆಗಾಗಿಯೂ ಪಂಚವಿಂಶತಿ ಲೀಲಾವಿಗ್ರಹಗಳನ್ನು ಧರಿಸಿ, ವೀರಭದ್ರಾದಿ ಮೂರ್ತಿಗಳಿಂದ ಗಣಾಚಾರಾದಿಗಳನ್ನು ಆಚರಿಸುವನು. ಆದ್ದರಿಂದ ಆ ಕಥೆಗಳನ್ನು ಕೇಳುವದರಿಂದ ವೀರಶೈವರ ಪಂಚಾಚಾರಗಳು ಮತ್ತಷ್ಟು ಅನುಭವಕ್ಕೆ ಬರುವವು. ಲೀಲಾ ವಿಗ್ರಹಗಳೆಲ್ಲವೂ ಪರಶಿವ ಮಹತ್ವದ್ಯೋತಕಗಳಾಗಿರುವವು. ಆದ್ದರಿಂದ ವೀರಶೈವನು ಆ ಕಥೆಗಳನ್ನು ಕೇಳುವದರಿಂದ ವೀರಶೈವಾಚಾರವನ್ನು ತಿಳಿದುಕೊಂಡು ತನಗೆ ಸಾಧ್ಯವಿದ್ದಷ್ಟಾದರೂ ಆಚಾರವನ್ನು ಇಟ್ಟುಕೊಳ್ಳುವನು. ಇದಲ್ಲದೆ ಪರಶಿವನಲ್ಲಿ ವಿಶೇಷತಃ ಭಕ್ತಿಯುಂಟಾಗುವದು. ಹಾಗಾದರೆ ಪಾರ್ವತೀಪತಿ ಎಂದು ಲೀಲಾ ವಿಗ್ರಹ ನಾಮಸ್ಮರಣೆಯು ವೀರಶೈವನಿಗೆ ವಿಹಿತವಾಗಿದ್ದ ಪಕ್ಷದಲ್ಲಿ ಟೀಕಾಕಾರರು ಅಂಬಿಕಾಪದಕ್ಕೆ ಪಾರ್ವತೀದೇವಿ ಎಂಬುವ ಅರ್ಥವನ್ನು ಏಕೆ ಮಾಡಲಿಲ್ಲ. ಅವರು ಪರಶಿವನಲ್ಲಿ ಚಿಚ್ಛಕ್ತಿ ವೈಶಿಷ್ಟ್ಯವನ್ನು ಸಿದ್ಧ ಮಾಡಿ ಆ ವಿಶಿಷ್ಟವಾದ-ಲಿಂಗಮೂರ್ತಿಯ ಪೂಜಾ ವಿಧಾನವನ್ನು ಮಾಡತಕ್ಕವರಾಗಿರುವರು. ಲೀಲಾ ವಿಗ್ರಹದ ಪೂಜೆಯಂತೂ ವೀರಶೈವನಿಗೆ ವಿಹಿತವಲ್ಲವು. ಆದ್ದರಿಂದ ಪಾರ್ವತೀದೇವಿಯೆಂದು ಅರ್ಥಮಾಡಿರುವದಿಲ್ಲ. ಶಿವಶಕ್ತ್ಯಾತ್ಮಕ

ವಿಶಿಷ್ಟ ಬ್ರಹ್ಮೋಪಾಸನೇವಮುಕ್ತಿಃ ಸಂಸಾರರೋಗಪ್ರತೀಕಾರಾತ್ || ಎಂದು ಇದೇ ೨೨ ನೇ ಉಪದೇಶದಲ್ಲಿಯೇ ಹೇಳಿರುವರು. ವಿಶಿಷ್ಟೋಪಾಸನೆಯೆಂದರೆ ಲಿಂಗಮೂರ್ತಿಯ ಉಪಾಸನೆಯಂತಲೇ ಅರ್ಥವು. ಇದಲ್ಲದೆ ಕಾರಿಕಾಕಾರರು ಶಿವಶಕ್ತ್ಯಾತ್ಮಕ ಲಿಂಗೋಪಾಸನೆಯನ್ನು ಬಿಟ್ಟು ಕೇವಲ ಶಿವೋಪಾಸನೆಯನ್ನು ಮಾಡುವವರೂ ಮತ್ತು ಈ ಲಿಂಗಮೂರ್ತಿಯಲ್ಲದೇ ಪ್ರತಿಮಾಕಾರಗಳಾದ ಮೂರ್ತಿಗಳನ್ನು ಉಪಾಸನೆ ಮಾಡುವವರೂ, ತಮ್ಮ ಸಂಸಾರ ರೋಗವನ್ನು ಕಳೆದುಕೊಳ್ಳದೇ ಆ ರೋಗವನ್ನು ಮತ್ತಷ್ಟು ಹೆಚ್ಚಿಸಿಕೊಂಡು ರೋಗಾಂತರ ರೂಪವಾದ ಶಿವದ್ರೋಹವನ್ನು ಸಂಪಾದಿಸಿ ಕುಂಭೀಪಾಕಾದಿ ನರಕ ಯಾತನೆಯನ್ನು ಅನುಭವಿಸುತ್ತ, ಸ್ವಾತ್ಮ ಹಿತವನ್ನು ತಿಳಿಯದೇ ಪುನಃ ಪುನಃ ಅಧೋಗತಿಯನ್ನು ಹೊಂದುವರು. ಈ ವಿಷಯದಲ್ಲಿ ಅವರ ದುರದೃಷ್ಟವೇ ಕಾರಣವು. ಅಥವಾ ಗೌತಮಾದಿ ಮುನಿಗಳ ಶಾಪಗಳೇ ಕಾರಣವು. ಲೋಕದಲ್ಲಿ ರೋಗನಿದಾನಜ್ಞನಿಂದ ತನ್ನ ರೋಗಕ್ಕೆ ಸರಿಯಾದ ಔಷಧಿಯನ್ನು ಸೇವಿಸಿದರೆ ಆ ರೋಗವು ಶಾಂತವಾಗಿ ಸುಖಿಯಾಗುವನು. ಸರಿಯಾಗಿ ರೋಗದ ಚಿಕಿತ್ಸೆಯನ್ನು ಅರಿಯದವನಿಂದ ಔಷಧವನ್ನು ತೆಗೆದುಕೊಂಡರೆ ಪ್ರತಿಯಾಗಿ ಬೇರೆ ರೋಗಗಳು ಸಂಭವಿಸುವದುಂಟು. ಅದರಂತೆ ವೈದ್ಯನಾಥನು ಶಕ್ತಿವಿಶಿಷ್ಟ ಶಿವನೆಂದು ಶ್ರುತಿ ಸ್ಮೃತ್ಯಾದಿಗಳಲ್ಲಿ ಕಂಡುಬರುತ್ತಿರಲು, ದೇವಾಂತರಗಳನ್ನು ತನ್ನ ಸಂಸಾರ ರೋಗನಿವಾರಣೆಗಾಗಿ ಆಶ್ರಯಿಸಿದರೆ ಆ ದೇವತಾಂತರಗಳು ತನ್ನ ರೋಗಗಳನ್ನು ಕಳೆಯಬಲ್ಲವೆ? ಎಂಬುವ ಅಭಿಪ್ರಾಯವನ್ನು ತೋರಿಸಿರುವರು. ಆದ್ದರಿಂದ ಶಿವಶಕ್ತ್ಯಾತ್ಮಕ ಲಿಂಗೋಪಾಸನೆಯೇ ವೀರಶೈವನಿಗೆ ಉಕ್ತವಾಗಿರುವದರಿಂದ ಅಂಬಿಕಾಪದಕ್ಕೆ ಪಾರ್ವತೀದೇವಿಯೆಂದು ಅರ್ಥಮಾಡಲಿಲ್ಲ. ಈ ಪಾರ್ವತೀ ದೇವಿಯು ಚಿಚ್ಛಕ್ತಿಯ ಸ್ಥೂಲ ಪರಿಣಾಮವೆಂಬುವ ವಿಷಯದಲ್ಲಿ ‟ಉಮಾಂಹೈಮವತೀಂತಾಂ" ಎಂಬುವದರ ಶಾಂಕರಿಯನ್ನು ನೋಡು. ಅಭೇದದೃಷ್ಟಿಯಿಂದ ಲೀಲಾ ವಿಗ್ರಹಕ್ಕೆ ನಮಸ್ಕಾರಾತ್ಮಕ ಮಂಗಲವನ್ನೂ ಕೂಡ ಮಾಡುವ ಸಾಂಪ್ರದಾಯವುಂಟು. ‟ತಸ್ಮೈ ಶ್ರೀಗುರುಮೂರ್ತಯೆ ಗಿರಿಸುತಾಭರ್ತ್ರೆ ನಮಸ್ಕುರ್ಮಹೇ" ಎಂದು ಲಿಂಗಧಾರಣ ಚಂದ್ರಿಕಾಕಾರರು ಮಾಡಿರುವರು. ಆದ್ದರಿಂದ ಜಯನಮಃ ಪಾರ್ವತೀಪತೆ ಹರಹರ ಮಹಾದೇವ ಎಂಬುವ ಸಾಂಪ್ರದಾಯವು ಅಶಾಸ್ತ್ರೀಯವಲ್ಲ. ಇದು ಅಶಾಸ್ತ್ರೀಯವಾದಪಕ್ಷದಲ್ಲಿ ‟ನಮಸ್ತೆರುದ್ರಮನ್ಯವ ಉತೋತ ಇಷವೇನಮಃ" ಇತ್ಯಾದಿ ಶತರುದ್ರರುಗಳನ್ನು ಹೇಳುತ್ತಿರುವ ಶತರು

ದ್ರೀಯ ಅಧ್ಯಯನವೂ ರುದ್ರಾಭಿಷೇಕದಲ್ಲಿ ಆ ಮಂತ್ರಗಳಿಗೆ ವಿನಿಯೋಗವೂ ಸಿದ್ಧಿಸಲಿಕ್ಕಿಲ್ಲವು. ''ಸಹಸ್ವ ಸ್ವಾಂಬಿಕಯಾತಂಜುಷಸ್ವ'' ಅಂಬಿಕಯಾ ಜಗನ್ಮಾತೃವಾದ ಚಿಚ್ಛಕ್ತಿಯಿಂದೆಂಬುವ ಅರ್ಥವು ಸಿದ್ಧಾಂತ ಸಾಂಪ್ರದಾಯಕ್ಕೂ ಮತ್ತು ಜಯ ನಮಃ ಪಾರ್ವತೀಪತೆ ಹರಹರ ಮಹಾದೇವ ಎಂಬುವ ಪ್ರಾಚೀನವಾದ ವೀರ ಶೈವರ ಸಾಂಪ್ರದಾಯಕ್ಕೂ ವಿರುದ್ಧವಲ್ಲವೆಂಬುವದು ತಿಳಿಯಿತಲ್ಲವೆ? ಇನ್ನು ಸೃಷ್ಟ್ಯಾದಿಯಲ್ಲಿ ''ಬಹುಸ್ಯಾಂ'' ಎಂದು ಪರಶಿವನಿಗೆ ಸಂಕಲ್ಪವು ಆವಿರ್ಭವಿಸಲು ಆ ಸಂಕಲ್ಪರೂಪವಾದ ಚಿಚ್ಛಕ್ತಿಯಿಂದ ಪರಂಪರೆಯಾಗಿ ಮಾಯಾಶಕ್ತಿಯು (ಚಿಚ್ಛಕ್ತಿಗೆ ವಿಜಾತೀಯವಾದ ಮಾಯಾಶಕ್ತಿಯು) ಆವಿರ್ಭವಿಸಿ ತನ್ನಂತಗಳಿಂದ ಶಿವಚೈತನ್ಯವು ಸಂಕುಚಿತವಾಗಿ ಅನೇಕ ಜೀವರೂಪವಾದ ಪ್ರಪಂಚವು ಅನೇಕಾಚೇತನ ಪ್ರಪಂಚವು ಹುಟ್ಟಿತು. ಆದ್ದರಿಂದ ಈ ಜಡಾಜಡ ಪ್ರಪಂಚಕ್ಕೆ ಶಿವಶಕ್ತಿಯು ಮಾತ್ರ ಸ್ವರೂಪವಾಗಿರುವದು- ಹೇಗಂದರೆ ಉತ್ತಮವಾದ ಸುಗಂಧ ಪುಷ್ಪವು ಮೊದಲು ವಿಕಸನವಾಗದೇ ಮೊಗ್ಗು ಇದ್ದಾಗ ಸುಗಂಧವು ತೋರುವದಿಲ್ಲ. ಅದರಲ್ಲಿರುವ ವಿಕಸನ ಶಕ್ತಿಯು ಆವಿರ್ಭೂತವಾಗಲು ಸುಗಂಧವು ತೋರುವದು, ಆಮೇಲೆ ವಾಯು ಸಂಪರ್ಕದಿಂದ ಸುಗಂಧ ವಿಶಿಷ್ಟಗಳಾದ ಅನೇಕಗಳಾದ ಆ ಪುಷ್ಪಾವಯಗಳು ಅನೇಕ ಕಡೆಯಲ್ಲಿ ಹರಡಿಕೊಳ್ಳುವವು. ಆದರೆ ಗಂಧಸಹಿತ ಪುಷ್ಪಾವಯಗಳು (ಪುಷ್ಪಾಣುಗಳು) ಆ ಪುಷ್ಪದಿಂದ ವಿಚ್ಛಿನ್ನಗಳಾದಾಗ್ಯೂ ಆ ಪುಷ್ಪವು ಸಚ್ಛಿದ್ರವಾಗಲಿ ಅಥವಾ ಅದರಲ್ಲಿ ಗಂಧವಿಲ್ಲದಂತಾಗಲಿ ಆಗುವದಿಲ್ಲ. ಮೊದಲು ಇದ್ದಂತೇ ತೋರುತ್ತದೆ. ಇದರಂತೆ ಅಘಟಿತ ಘಟನಾಶಕ್ತಿಯುಳ್ಳ ಶಿವನಲ್ಲಿದ್ದ ಶಕ್ತಿಯು ಸೃಷ್ಟ್ಯಾದಿಯಲ್ಲಿ ಶಾಂತವಿದ್ದಾಗ ಯಾವ ಪ್ರಪಂಚವೂ ತೋರದೇ ಆ ಶಕ್ತಿಯು ಆವಿರ್ಭೂತವಾಗಲು ಶಿವಾಂಶರೂಪರಾದ ಆತ್ಮರು ಆವಿರ್ಭೂತರಾಗಿ ಮುಂದೆ ಆ ಶಕ್ತಿಯ ವಿಜಾತೀಯ (ಜಡವಾದ) ಪರಿಣಾಮರೂಪವಾದ ಮಾಯಾಶಕ್ತಿಯಿಂದ ಪರಸ್ಪರ ಭಿನ್ನರಾಗಿ ರಾಗದ್ವೇಷ ಕಾಮಕ್ರೋಧಾದಿಗಳಿಂದ ಬದ್ಧರಾಗಿ ಜೀವರೆನಿಸುವರು. ಪರಶಿವನೂಕೂಡ ತನ್ನ ಶಕ್ತಿಯ ಮಹಿಮೆಯಿಂದಾದ ಎಲ್ಲಾ ಚೇತನಾಚೇತನ ಪ್ರಪಂಚದಲ್ಲಿ ಅನುಸ್ಯೂತನಾಗಿ 'ಸರ್ವಾತ್ಮಕೋಹಂ' ಎಂದೂ 'ಸರ್ವಕರ್ತಾಹಂ' ಎಂದೂ ಪರಾಹಂತಾಕಾರವೃತ್ತಿಯುಳ್ಳವನಾಗಿ ಇಷ್ಟಾದಿ ಲಿಂಗ ರೂಪನಾಗುವನು. ತಾನೇ ಎಲ್ಲಾ ಪ್ರಪಂಚಸ್ವರೂಪನಾಗಿದ್ದರೂ 'ಸರ್ವಾತ್ಮಕೋಹಂ' ಎಂದು ತದಧಿಪತಿಯೂ ಆಗುವನು. ಜೀವಾತ್ಮನು ಶುದ್ಧನಾಗಿ ಆ

ಇಷ್ಟಾದಿ ಲಿಂಗಗಳ ಚಿಂತನೆ ಮಾಡುತ್ತ ಹೋಗಲಾಗಿ ಕ್ರಿಮಿಯು ಕೀಟದ ಚಿಂತನೆಯಿಂದ ಕೀಟದ ಶಕ್ತಿಯು ಕ್ರಿಮಿಯಲ್ಲಿ ಆವಿರ್ಭೂತವಾಗಿ ಕೀಟವೇ ಆಗಿಬಿಡುವಂತೆ, ಆ ಲಿಂಗಶಕ್ತಿಯು ಆತ್ಮನಲ್ಲಿ ಆವಿರ್ಭವಿಸಿ ಲಿಂಗರೂಪನೇ ಆಗಿಬಿಡುವನು. ಸಹಜಶಕ್ತಿವಾದಿಯೇ ಈ ಶಕ್ತಿಯ ಆವಿರ್ಭಾವವು (ಶಕ್ತಿಪಾತವು) ದೀಕ್ಷಾಕಾಲದಲ್ಲಿ ಗುರುವಿನಿಂದಲೇ ಮಾಡಲ್ಪಡುವದಲ್ಲವೆ? ಅಂದಮೇಲೆ ದೀಕ್ಷಿತನಾದ ಶುದ್ಧ ಜೀವನಿಗೆ ಪುನಃ ಚಿಂತನೆ ಏಕೆ ಬೇಕು? ಆದರೂ ಅದರ ರಕ್ಷಣೆಗಾಗಿ ತನ್ನ ಕರ್ಮಶೇಷವು ಮುಗಿಯುವವರೆವಿಗೂ ಮಾಡುತ್ತ ಹೋಗಬೇಕೆಂಬುವದನ್ನು ಮೊದಲೇ ಹೇಳಿರುವೆನು. ಈ ಪ್ರಕಾರ ಆವಿರ್ಭೂತವಾದ ಶಕ್ತಿಯು ಕ್ರಮೇಣ ಎಲ್ಲಾ ಪಾಶಗಳನ್ನೂ ಛೇದಿಸಿ, ಎಲ್ಲಾ ಭಯಗಳನ್ನೂ ಕಳೆದು, ಸ್ವಾತ್ಮಾನಂದ ಸಾಮ್ರಾಜ್ಯವನ್ನು ಕೊಟ್ಟುಬಿಡುವಳು. ಲೋಕದಲ್ಲಿ ತಾಯಿಯು ತನ್ನ ಉದರದಿಂದ ಹುಟ್ಟಿದ ಮಕ್ಕಳನ್ನು ವಾತ್ಸಲ್ಯದಿಂದ ಕಾಪಾಡುತ್ತಿರುವುದು ಕಂಡುಬರುತ್ತದಲ್ಲವೆ? ಅಂದರೆ ಪಾಶವಿಚ್ಛೇದಿಕಾಂ ಸಾಕ್ಷಾನ್ನಿಗೂಢಾಂ ಸ್ವಗುಣೈರ್ಭೃಶಂ|| ಎಂದು ಕೂರ್ಮಪುರಾಣೋಪಬೃಂಹಿತವಾದ ‹‹ತೇಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ›› ಎಂಬುವ ಶ್ವೇತಾಶ್ವತರ ಶ್ರುತಿವಾಕ್ಯದಂತೆ ಶಿವಶಕ್ತಿಯೇ ಪಾಶವಿಚ್ಛೇದನ ದಕ್ಷಳೆಂದು ಕಂಡುಬರುವದಾದ್ದರಿಂದ ಪರಶಿವ ಬ್ರಹ್ಮದಲ್ಲಿ ಇಂತಹ ಸಹಜ ಶಕ್ತಿಯನ್ನು ಒಪ್ಪದಿರುವ ಕೇವಲ ಬ್ರಹ್ಮವಾದಿಗಳು, ಹಡದ ತಾಯಿಯ ರಕ್ಷಣೆಯಿಲ್ಲದೆ ಬಾಲಕರು ಕೃಶರಾಗುವಂತೆ ಕ್ಷೀಣರಾಗುವರೆಂಬುವ ಅಭಿಪ್ರಾಯವನ್ನು ‹‹ಬಾಲಾನಾಂಮಾತ್ರ ರಕ್ಷಣಾಶಕ್ತ್ಯಾಶ್ರ್ಯವತ್ಕೇವಲ ಬ್ರಹ್ಮವಾದಿನೋಕ್ಷರಂತೀತಿವ್ಯಜ್ಯತೆ›› ಎಂಬುವದರಿಂದ ತೋರಿಸಿರುವರು. ಸಹಜಶಕ್ತಿವಾದಿಯೆ! ‹‹ಏಕಏವರುದ್ರೋನದ್ವಿತೀಯಾಯತಸ್ಥೇ›› ಎಂಬುವಲ್ಲಿ ಕಾರಿಕಾಕಾರರು ರುದ್ರನೊಬ್ಬನೇ ಪಾಶಚ್ಛೇದಕನೆಂದು ವ್ಯಾಖ್ಯಾನ ಮಾಡಿರುವರಲ್ಲವೆ? ಹೌದು ಮಾಡಿರುವರು. ಈಗ ಅಂಬಿಕಾಪದವಾಚ್ಯವಾದ ಜಗಜ್ಜನನಿಯಾದ ಚಿಚ್ಛಕ್ತಿಗೆ ಪಾಶನಾಶಕತ್ವವನ್ನು ಹೇಳುವದು ಪೂರ್ವಾಪರ ಸಂದರ್ಭ ವಿರುದ್ಧವಲ್ಲವೆ? ಶಕ್ತಿಯೂ ಶಿವನೂ ಜಗನ್ಮಾತೃ ಪಿತೃ ಸ್ವರೂಪರೆಂದು ಹೇಳುವದು ಆ ಮೇಲಿನ ಶ್ರುತಿಗೂ ‹‹ಏಕಮೇವಾದ್ವಿತೀಯಂಬ್ರಹ್ಮ›› ಇತ್ಯಾದ್ಯನೇಕ ಶ್ರುತಿಗಳಿಗೂ ವಿರುದ್ಧವಲ್ಲವೆ? ವಿರುದ್ಧವಾಗುವದಿಲ್ಲ. ಶಕ್ತಿಯಲ್ಲಿದ್ದ ಧರ್ಮವು ಶಕ್ತನಲ್ಲಿ ಬಂದೇಬರುವುದು. ಪರಶುಮಣಿಯ ಶಕ್ತಿಯು ಲೋಹಾದಿಗಳ ಭಾವವನ್ನು ಕಳೆದು ಸುವರ್ಣಸ್ವರೂಪವನ್ನು ಹೊಂದಿಸಿದರೂ ಮಣಿಯು

ಹೊಂದಿಸಿತೆಂಬುವದು ಪ್ರಸಿದ್ಧವು. ಸೂಜಿಗಲ್ಲಿನಲ್ಲಿರುವ ಶಕ್ತಿಯು ಸೂಜಿಯನ್ನು ಆಕರ್ಷಣಮಾಡಿದರೂ ಸೂಜಿಗಲ್ಲು ಸೂಜಿಯನ್ನು ಆಕರ್ಷಿಸುತ್ತದೆಂಬುವುದು ಪ್ರಸಿದ್ಧವು. ಶಿವಯೋಗಿಯ ಶುದ್ಧವಾದ ಬುದ್ಧಿಶಕ್ತಿಯು ಭಕ್ತಾಭೀಷ್ಟ ಫಲಗಳನ್ನು ಕೊಡುತ್ತಿದ್ದರೂ ಶಿವಯೋಗಿಯು ಕೊಟ್ಟನೆಂಬುವದು ಪ್ರಸಿದ್ಧವು. ಆ ಪರಶುಮಣಿಯ ಶಕ್ತಿಯು ಮಣಿಯ ಸ್ವಭಾವವೂ ಸಹಜಧರ್ಮವೂ ಆಗಿರುವುದಷ್ಟೆ. ಆ ಶಕ್ತಿ ಶಕ್ತಪದಾರ್ಥಗಳಿಗೆ ಇಮೌದ್ವೌ | ಎಂದು ದ್ವಿತ್ವವಿಷಯಕ ಪ್ರತ್ಯಕ್ಷವಾಗುವದೇನು ? ಇಲ್ಲವೆಂದಮೇಲೆ ಅದ್ವೈತವ್ಯಾಘಾತವೆಲ್ಲಿ. ಆದ್ದರಿಂದಲೇ ‹‹ಏಕ ಏವ ರುದ್ರೊ ನದ್ವಿತೀಯಾಯ›› ಎಂದು ಏವಕಾರವು ದ್ವಿತ್ವಸಂಖೆಯ ಅಪಕ್ರಮದಲ್ಲಿ (ವಾರಣದಲ್ಲಿ) ಪ್ರಯೋಗಿಸಲ್ಪಟ್ಟಿರುವದು. ಮತ್ತು ಶಿವಾದ್ವೈತಕ್ಕೆ ಹಾನಿಯಾದೀತೆಂಬುವ ಕಾರಣದಿಂದಲೇ ‹‹ಸ್ವಸಾ›› ಎಂಬುವ ವಿಶೇಷಣವು ಜಗನ್ಮಾತೆಗೆ ಕೊಡಲ್ಪಟ್ಟಿರುವುದು. ಸ್ವಸೃತ್ವಂಚ ಸಹಜಸಿದ್ಧತ್ವಂ | ಕೃತ್ರಿಮವಲ್ಲದ ನಿತ್ಯಸಿದ್ಧವಾದ ಅಂಬಿಕಯಾ ಸಹ ಜಗನ್ಮಾತೆಯಾದ ಶಕ್ತಿಯೊಡನೆ ಆ ಹವಿರ್ಭಾಗವನ್ನು ಸ್ವೀಕರಿಸು. ಮಿಥ್ಯಾಶಕ್ತಿವಾದಿಯೇ ? ಈಗಲಾದರೂ ಪರಶಿವಬ್ರಹ್ಮದಲ್ಲಿ ಸಹಜ ಶಕ್ತಿಯಿರುವುದೆಂಬುವದು ಅನುಭವಕ್ಕೆ ಬಂದಿತೆ ? ಸಹಜಶಕ್ತಿವಾದಿಯೇ ? ಸ್ವಸೃ ಶಬ್ದಕ್ಕೆ ಸಹಜಸಿದ್ಧವೆಂಬರ್ಥವನ್ನು ಯಾರು ಮಾನಿಸಿರುವರು. ನೋಡು? ವೇದವೇದಾಂತ ಭಾಷ್ಯಕಾರರಾದ ಹರದತ್ತಾಚಾರ್ಯರು. ‹‹ಯಾವಾಮನಂತಿತವ ಶಂಕರ ಧರ್ಮದಾರಾ ಅಧ್ವರ್ಯವಃ ಸಹಜ ಸಿದ್ಧತಯಾ ಸ್ವಸಾರಂ›› ಎಂದು ಹೇಳಿರುವರು. ಅಲ್ಲದೆ ಸುದರ್ಶನಾಚಾರ್ಯರೂ ಕೂಡ ಈ ಅರ್ಥಕ್ಕೆ ಒಪ್ಪಿರುವರು. ಕಾರಿಕಾಕಾರರು ಚಿಚ್ಛಕ್ತಿಯ ಸ್ಥೂಲಪರಿಣಾಮರೂಪಳಾದ ಪಾರ್ವತೀದೇವಿಯಿಂದ ವಿಶಿಷ್ಟವಾದ ಲೀಲಾ ನಿರ್ಮಿತ ಪ್ರತಿಮಾಕಾರ ವಿಗ್ರಹವನ್ನು ಪೂಜಿಸುವದು. ವೀರಶೈವರಿಗೆ ವಿಹಿತವಾಗಿಲ್ಲವೆಂಬ ಅಭಿಪ್ರಾಯದಿಂದ ಅಂಬಿಕಾಪದಕ್ಕೆ ಚಿಚ್ಛಕ್ತಿಯೆಂದು ಅರ್ಥಮಾಡಿ ತದ್ವಿಶಿಷ್ಟ ಅಖಂಡ ಗೋಲಕಾಕಾರ ಲಿಂಗಮೂರ್ತಿಯ ಉಪಾಸನೆಯನ್ನು ಹೇಳಿದರು. ಇಂಥ ಸಚ್ಚಿದಾನಂದಾತ್ಮಕವಾಗಿಯೂ ನಿರಾಕಾರ ನಿಷ್ಕಲಂಕ ನಿರಂಜನ ಚಿಚ್ಛಕ್ತಿ ವಿಶಿಷ್ಟವಾದ ಪರಶಿವಲಿಂಗಮೂರ್ತಿಯ ಧ್ಯಾನದಲ್ಲಿ ಅಸಮರ್ಥರಾದವರು ಆ ಲಿಂಗಮೂರ್ತಿಯಲ್ಲಿಯೇ ನೀಲಕಂಠತ್ವ ತ್ರಿಲೋಚನತ್ವ ಚಂದ್ರಕಲಾಧಾರಿತ್ವ ಪಾರ್ವತೀಪತಿತ್ವಾದಿ ಲೀಲಾ ವಿಭೂತಿಗಳನ್ನಾದರೂ ಭಾವಿಸಬೇಕೆಂದು ಶ್ರೀ ಜಗದ್ಗುರುರೇಣುಕ ಭಗವತ್ಪಾದರು-ನಿರ್ಧಾರ್ಯಿತುಮಸಮರ್ಥೋಽಪಿ ತದ್ವಿಭೂತಿ ಮಪಿ

ಭಾವಯೇತ್ || ಎಂದು ಅಗಸ್ತ್ಯಮಹರ್ಷಿಗಳಿಗೆ ಅಪ್ಪಣೆ ಕೊಡಿಸಿದ ಪ್ರಕಾರ ಈ ಮಂತ್ರದೊಳಗಿನ ಅಂಬಿಕಯಾ ಎಂಬುವ ತೃತೀಯಾಂತ ಅಂಬಿಕಾಪದಕ್ಕೆ ಪಾರ್ವತೀದೇವಿಯೆಂದು ಅರ್ಥವನ್ನು ಮಾಡಬಹುದು. ಇದರಿಂದ ನಮ್ಮ ಸಿದ್ಧಾಂತಕ್ಕಾವಹಾನಿಯೂ ಯಿಲ್ಲವು. ಆದ್ದರಿಂದಲೇ ಶ್ರೀಕರ ಭಾಷ್ಯಕಾರರೂ ಕೂಡ ,,ಅಖುಸ್ತೇ ರುದ್ರಪ ಶುಸ್ತಂಜುಷಸ್ವೈಷತೇ ರುದ್ರಭಾಗಃ ಸಹಸ್ವಸ್ರಾಂಬಿಕಯಾ,, ಇತ್ಯಸ್ಯಾರ್ಥಃ ಆಸವಂತಾತ್ಪನತೀತ್ಯಾಖುಃ ಮಹಾವರಾಹರೂಪ ವಿಷ್ಣುಃ | ಹೇ ರುದ್ರ ತೇ ತುಭ್ಯಂ ಪಶುಃ ಯಾಗೀಯರೂಪ ಪಶುರಭೂತ್ ತಂ ಪಶುಂಸ್ವಸ್ರಾ ಪ್ರಾಗಭಾವಾಭಾವ ಸಹಜ ಸಿದ್ಧಾನುಸ್ಯೂತಯಾ ಅಂಬಿಕಯಾ ಪಾರ್ವತ್ಯಾ ಸಹ ಜುಷಸ್ವ ಭುಂಜಸ್ವ ತೇತುಭ್ಯಂ ಭಾಗಃ ಯಾಗಭಾಗ ಇತ್ಯರ್ಥಃ ತಥಾ ವೃದ್ಧ ಶಾತಾತಪೆ. ಶ್ಲೋ|| ಆಖುರೂಪಂ ಮಹಾತ್ಮಾನಂ ಹಿರಣ್ಯಾಕ್ಷಪ್ರಭಂಜನಂ | ಯಾಗೀಯ ಪಶುರೂಪಂ ತಂ ಮಹಾ ಯಜ್ಞವರಾಹಕಂ | ಪಾರ್ವತ್ಯಾಸಹದೇವೇಶ ವಿಶ್ವನಾಥ ಸದಾಶಿವ | ಜುಷಸ್ವಕೃಪಯಾ ವಿಷ್ಣುಂ ಶಂಖ ಚಕ್ರಗದಾಧರಂ || ಎಂದು ಸ್ಮೃತ್ಯನುಸಾರವಾಗಿ ಅಂಬಿಕಾಪದಕ್ಕೆ ಪಾರ್ವತೀದೇವಿಯೆಂಬರ್ಥವನ್ನು ತೋರಿಸಿರುವರು. ಸಹಜಶಕ್ತಿವಾದಿಯೆ? ಈ ಶ್ರೀಕರ ಭಾಷ್ಯಕಾರರಂತೆ ನಿಮ್ಮ ಕಾರಿಕಾಕಾರರು ಕೂಡ ಪಾರ್ವತೀದೇವಿಯೆಂದು ಅರ್ಥಮಾಡಿದ್ದರೆ ಅವರಿಗೆ ಹಾನಿಯೇನು? ಬ್ರಹ್ಮಾದ್ವೈತಿಯೇ ? ಕೇಳು. ಅವರು ವೀರಶೈವರಿಗೆ ವಿಹಿತವಾಗಿರುವನಾದ ಬಿಂದ್ವಾತ್ಮಕವಾಗಿರುವ ಲಿಂಗಮೂರ್ತಿಯ ಉಪಾಸನೆಯನ್ನು ಈ ಇಪ್ಪತ್ತೆರಡನೇ ಉಪದೇಶದಲ್ಲಿ ಹೇಳಬೇಕಾಗಿರುವದಲ್ಲದೆ ಉತ್ತಮಾಧಿಕಾರಿಯಾದ ವೀರಶೈವನಿಗೆ ವಿಹಿತವಾಗದಿದ್ದ ಪಾರ್ವತೀದೇವಿಯಿಂದ ಕೂಡಿದ ಪ್ರತಿಮಾಕಾರ ಮೂರ್ತಿಯ ಉಪಾಸನೆಯನ್ನು ಹೇಳಬೇಕಾಗಿರುವದಿಲ್ಲ, ಆದ್ದರಿಂದಲೇ ಅವರು ಪಾರ್ವತೀದೇವಿಯೆಂದು ಅರ್ಥಮಾಡಲಿಲ್ಲ, ಹಾಗೆ ಅರ್ಥಮಾಡಿದರೆ ವೀರಶೈವರು ಪ್ರತಿಮಾಕಾರ ಮೂರ್ತಿಯನ್ನು ಉಪಾಸನ ಮಾಡಬೇಕೆಂಬುವುದನ್ನು ನಂಬುವರೆಂಬ ಕಾರಣದಿಂದ ಪಾರ್ವತೀದೇವಿಯೆಂದು ಅರ್ಥಮಾಡಲಿಲ್ಲವು. ಮುಕ್ತಿಗಾಗಿ ಶಿವಲಿಂಗೋಪಾಸನೆಯೇ ಮುಖ್ಯವಾಗಿ ವಿಧಿಸಲ್ಪಟ್ಟಿರುವದು. ಶ್ಲೋ|| ಬಿಂದುರ್ವೇದಿಶ್ಶಿವೋನಾದಃ ಶಿವಲಿಂಗಂತುಕಥ್ಯತೇ | ತಸ್ಮಾತ್ ಜನ್ಮ ನಿವೃತ್ಯರ್ಥಂ ಶಿವಲಿಂಗಂಪ್ರಪೂಜಯೇತ್ | ಮಾತಾ ದೇವೀ ಬಿಂದುರೂಪಾ ನಾದ ರೂಪಶ್ಶಿವಃ ಪಿತಾ ಪಿತೃಭ್ಯಾಂದತ್ತ ಮೈಶ್ವರ್ಯಂ ಯಥಾ ಭೋಗಾಯಕಲ್ಪ್ಯತೇ || ತಯೋರೈಶ್ವ

ರ್ಯ ಲಾಭಾರ್ಥಂ ಶಿವಲಿಂಗಂ ಪ್ರಪೂಜಯೇತ್ ‖ ಜಗತ್ಪಿತ್ರೋಸ್ತ್ವೈಶ್ವ ರ್ಯ್ಯಂ ಪರಮಾನಂದಮೇವಹಿ । ಪರಮಾನಂದಲಾಭಾರ್ಥಂ । ಶಿವಲಿಂಗಂ ಪ್ರಪೂಜಯೇತ್ । ಸಾದೇವೀ ಜಗತಾಂ ಮಾತಾ ಸಶಿವೋಜಗತಃ ಪಿತಾ । ಪಿತ್ರೋಃ ಶ್ಶುಶ್ರೂಷಯಾ ನಿತ್ಯಂ । ಕೃಪಾಧಿಕ್ಯಂ ಹಿ ವರ್ಧತೇ । ಕೃಪಯಾಂತರ್ಗ ತೈಶ್ವರ್ಯಂ ಪೂಜಿತಸ್ಯದದಾತಿಹಿ । ತಸ್ಮಾದಂತರ್ಗತಾನಂದ ಲಾಭಾರ್ಥಂ ಮುನಿಪುಂಗವಾಃ । ಪಿತೃಮಾತೃಸ್ವರೂಪಂಹಿ ಶಿವಲಿಂಗಂ ಪ್ರಪೂಜಯೇತ್ ‖ ಇತ್ಯಾದಿ ವಿಧಿವಾಕ್ಯಗಳಿರುವವು. ಆದ್ದರಿಂದ ಮುಮುಕ್ಷುವಾದ ವೀರಶೈವನು ಇಷ್ಟಾದಿ ಲಿಂಗಗಳನ್ನೇ ಪೂಜಿಸಬೇಕೆಂಬುವುದು ಸಿದ್ಧಾಂತವು. ಒಂದೊಂದು ಕಡೆಯಲ್ಲಿ ಪ್ರತಿಮಾಕಾರ ಲೀಲಾ ವಿಗ್ರಹಗಳ ಉಪಾಸನೆಯು ಹೇಳಲ್ಪಟ್ಟಿದ್ದರೂ ಅಧಿಕಾರಿ ತಾರತಮ್ಯದಿಂದ ಲಿಂಗಮೂರ್ತಿಯಲ್ಲಿಯೇ ಆ ಆಕಾರವನ್ನು ಕಲ್ಪಿಸಿ ಕೊಂಡು ಭಾವಿಸಬೇಕೆಂಬುವುದನ್ನು ವೀರಶೈವರು ಮರಿಯಬಾರದು. ಬ್ರಹ್ಮಾ ದ್ವೈತಿಯೇ ? ಈ ಮೇಲೆ ಹೇಳಿದ ಮಂತ್ರದಿಂದ ಪರಶಿವಬ್ರಹ್ಮದಲ್ಲಿರುವ ಶಕ್ತಿ ಯು ಅನಾದ್ಯನಂತವಾಗಿರುವದೆಂಬುವದು ಗೊತ್ತಾಯಿತಲ್ಲವೆ.

ಶಿವಾದ್ವೈತಿಯೇ ! ಬ್ರಹ್ಮದಲ್ಲಿ ಸಹಜ ಶಕ್ತಿಯನ್ನು ಮಾನಿಸಿದರೆ ಅದರಿಂ ದುಂಟಾದ ಜಡವಾದ ತ್ರಿಗುಣಾತ್ಮಕವಾದ ಮಾಯಾಶಕ್ತಿಗೂ ಸತ್ಯತ್ವವನ್ನು ಮಾನಿಸಬೇಕಾಗುವುದು. ಇದಕ್ಕೆ ಸತ್ಯತ್ವವನ್ನು ಮಾನಿಸಿದರೆ ಇದರಿಂದುಂ ಟಾದ ಸಮಸ್ತ ಪ್ರಪಂಚಕ್ಕೂ ಸತ್ಯತ್ವವನ್ನು ಮಾನಿಸಬೇಕಾಗುವದು ಹೀಗೆ ಪ್ರಪಂಚಕ್ಕೆ ಸತ್ಯತ್ವವನ್ನು ಮಾನಿಸಿದರೆ ಅನೇಕ ಶ್ರುತಿ ಸ್ಮೃತ್ಯಾದಿಗಳಿಗೆ ಅಪ್ರಾ ಮಾಣ್ಯವನ್ನು ಹೇಳಬೇಕಾಗುವುದು. ನೋಡು, ,,ನತುತದ್ವಿತೀಯಮಸ್ತಿನೇ ಹನಾನಾಸ್ತಿ ಕಿಂಚನನಾನ್ಯತ್ಕಾಚನಮಿಷತೇ ,, ಅಥಾತ ಆದೇಶೋನೇತಿ ನೇತಿ ‖ ಇತ್ಯಾದಿ ಜಗನ್ಮಿಥ್ಯಾತ್ವವನ್ನು ಹೇಳುವ ಶ್ರುತಿಗಳಿಗೂ, ಶ್ಲೋ‖ ಶಶ ಶೃಂಗೇಣ ನಾಗೇಂದ್ರಾ । ಮೃತಶ್ಚೇದಸ್ತ್ವಿದಂ ಜಗತ್ । ಜ್ವಾಲಾಗ್ನಿಮಂ ಡಲೇ ಪದ್ಮವೃದ್ಧಿಶ್ಚೇದಸ್ತ್ವಿದಂ ಜಗತ್ ‖ ಮಾಯಾಕಾರ್ಯಾದಿಕಂನಾಸ್ತಿ ಮಾ ಯಾನಾಸ್ತಿ ಭಯಂನಹಿ । ಗಗನೇ ನೀಲಮಾಸಚ್ಚೇಜ್ಜಗತ್ಸತ್ಯಂ ಭವಿಷ್ಯತಿ । ಎಂಬದಾಗಿ ಪ್ರಪಂಚಕ್ಕೆ ಮೊಲದ ಕೊಂಬುಗಳಂತೆ ಅಸತ್ಯತ್ವವನ್ನು ಹೇಳುವ ಸ್ಮೃ ತಿವಾಕ್ಯಗಳಿಗೂ, ಶ್ಲೋ‖ ಆದಾವಂತೇಚಯನ್ನಾಸ್ತಿವರ್ತಮಾನೇಪಿತತ್ತಥಾ ‖ ಶ್ಲೋ‖ ಬ್ರಹ್ಮಸತ್ಯಂ ಜಗನ್ಮಿಥ್ಯಾ । ಜೀವೋಬ್ರಹ್ಮೈವನಾಪರಃ । ಕಾರ್ಯೋ ಪಾಧಿರಯಂಜೀವಃ ಕಾರಣೋಪಾಧಿರೀಶ್ವರಃ । ಕಾರ್ಯಕಾರಣತಾಂತ್ಯಕ್ತ್ವಾ ।

ಪೂರ್ಣಬೋಧಾವಶಿಷ್ಯತೆ | ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚತೇ || ಎಂಬುವ ಪೂರ್ವಾಚಾರ್ಯರ ವಾಕ್ಯಗಳಿಗೂ ಅಪ್ರಾಮಾಣ್ಯವನ್ನು ಹೇಳಬೇಕಾಗುವದು. ಆದ್ದರಿಂದ ಬ್ರಹ್ಮದಲ್ಲಿ ಜಗತ್ಕಾರಣಭೂತವಾದ ಶಕ್ತಿಯು ಮಿಥ್ಯಾಭೂತವಾದದ್ದೆಂದು ಹೇಳಿ, ಅದರಿಂದುಂಟಾದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವದು ಯುಕ್ತವಲ್ಲವೇ ? ಜಗನ್ಮಿಥ್ಯಾತ್ವವಾದಿಯೇ ! ಈ ವಿಷಯದಲ್ಲಿ ಹಿಂದೆ ಜಗನ್ಮಿಥ್ಯಾತ್ವವು ಶ್ರುತಿಯುಕ್ತ್ಯನುಭವಗಳಿಗೆ ವಿರುದ್ಧವಾಗುವದೆಂದು ಹೇಳಿ ಜಗತ್ಸತ್ಯತ್ವವಾದವನ್ನು ಸ್ಥಾಪಿಸಿರುವೆನು. ಆದರೂ ನಿನಗಿರುವ ಪ್ರಬಲವಾದ ಮಿಥ್ಯಾತ್ವವಾಸನೆಯು ತೊಲಗಿದಂತೆ ಕಾಣಲಿಲ್ಲ. ಆದ್ದರಿಂದಲೇ ಪುನಃ ಈತೆರವಾಗಿ ಶಂಕಿಸಿರುವಿ ? ಕೇಳು. ನಿಮ್ಮ ಪೂರ್ವಾಚಾರ್ಯರು ಹೇಳುವ ಅಧ್ಯಾರೋಪಾಪವಾದಗಳಿಗೆ ಶ್ರುತಿ ಸ್ಮೃತ್ಯಾದಿಗಳಲ್ಲಿ ಯಾವಪ್ರಮಾಣವೂ ಸಿಕ್ಕುವುದಿಲ್ಲ. ‹‹ಯತೋವಾ ಇಮಾನಿ ಭೂತಾನಿ ಜಾಯಂತೆ›› ಇದೇ ಮೊದಲಾದ ಸೃಷ್ಟಿ ಸ್ಥಿತಿ ಪ್ರಲಯ ವಿಧಾಯಕಗಳಾದ ಸರ್ವ ವೇದಾಂತ ಸ್ಮೃತಿ ಪುರಾಣಾಗಮಾದಿಗಳಿಗೆ ಅನುಸಾರವಾಗಿ ಜಗತ್ಸತ್ಯವನ್ನೇ ಹೇಳಬೇಕು. ‹‹ಅಸದ್ವಾ ಇದಮಗ್ರಆಸಿತ್ ›› ಎಂಬುವ ವಾಕ್ಯವು ಸೃಷ್ಟ್ಯಾದಿಯಲ್ಲಿ ಜಗನ್ಮಿಥ್ಯಾತ್ವವನ್ನು ಹೇಳುವುದಿಲ್ಲ. ಕಿಂತು ಚಿದ್ಘನ ಪರಶಿವನಲ್ಲಿ ಭೂಮಿಯಲ್ಲಿ ವಿಲೀನಗಗಳಾದ ತೃಣಾದಿ ಬೀಜಗಳಂತೆ ಸೂಕ್ಷ್ಮರೂಪದಿಂದ ಜಗತ್ತಿತ್ತೆಂದು ತೋರಿಸುತ್ತದೆ. ಅದರಿಂದಲೇ ‹‹ತತೋವೈಸದಜಾಯತ›› ಎಂಬುವ ಉತ್ತರವಾಕ್ಯವು ಸಂಗತವಾಗುತ್ತದೆ. ಮತ್ತು ಶ್ಲೋ|| ಸತ್ಪ್ರಜ್ಞಾನಘನಾನಂದೆ ಶಿವೇ ಪರಮಕಾರಣೇ | ಚರಾಚರಜಗಜ್ಜಾಲಂ | ಗ್ರೀಷ್ಮೇಕ್ಷ್ಮಾಲೀನಬೀಜವತ್ | ಸೂಕ್ಷ್ಮರೂಪೇಣಸಂಸ್ಥಿತ್ಯಬೀಜವತ್ || ಪುನಸ್ತಸ್ಯಚಿಕೀರ್ಷಯಾ | ಸ್ಥೂಲತ್ವೇನಬಹಿರ್ಯಾತಂ ಮುಕ್ತಾತ್ಮಾನಪುನರ್ಭವಃ || ಇತ್ಯಾದಿ ಸ್ಮೃತಿವಾಕ್ಯಗಳು ಜಗತ್ಸತ್ಯವನ್ನು ಹೇಳುತ್ತವೆ. ಆದ್ದರಿಂದ ‹‹ನೇಹನಾನಾಸ್ತಿ›› ಮೊದಲಾದ ಶ್ರುತ್ಯಾದಿವಾಕ್ಯಗಳು ಪ್ರಲಯಾವಸ್ಥಾವಿಷಯಕಗಳೆಂದು ತಿಳಿಯತಕ್ಕದ್ದು. ‹‹ದ್ವಾಸುಪರ್ಣಾ›› ಇತ್ಯಾದಿ ಭೇದಬೋಧಕವಾಕ್ಯಗಳು ಸಂಸಾರ ದಶಾವಿಷಯಕಗಳೆಂದೂ, ‹‹ ಸರ್ವಮಾತ್ಮೈವಾಭೂತ್ಕೇನಕಿಂ ಪಶ್ಯೇತ್ ? ಕೇನಕಿಂವದೇತ್ ›› ಇತ್ಯಾದಿ ಶ್ರುತಿವಾಕ್ಯಗಳು ಪರಶಿವ ಪೂರ್ಣಾನಂದಾನುಭವವನ್ನುಂಟುಮಾಡುವ ಶಿವಯೋಗ ಸಮಾಧಿ ದಶಾವಿಷಯಕಗಳೆಂದೂ ತಿಳಿಯತಕ್ಕದ್ದು. ಪೃಥಿವಿಯಲ್ಲಿ ವಿಲೀನಗಳಾದ ಮಂಡೂಕಾದಿ ಶರೀರಗಳು ವರ್ಷಾಕಾಲದಲ್ಲಿ ಆವಿರ್ಭವಿಸುವಂ

ತೆಯೂ, ಆಲದ ಬೀಜದಲ್ಲಿ ಸೂಕ್ಷ್ಮವಾಗಿದ್ದ ಗಿಡವು ಸ್ಥೂಲಾವಸ್ಥೆಯನ್ನು ಹೊಂದುವಂತೆಯೂ, ಸುಷುಪ್ತಿಯಲ್ಲಿ ಸೂಕ್ಷ್ಮವಾಗಿದ್ದ ಜೀವನ ಬುದ್ಧಿಶಕ್ತಿಯು ಜಾಗ್ರತಾದಿಗಳಲ್ಲಿ ಸ್ಥೂಲಾಕಾರವನ್ನು ಹೊಂದುವಂತೆಯೂ, ಶಿವಯೋಗಿಯ ಇಚ್ಛಾಶಕ್ತಿಯಲ್ಲಿ ಸೂಕ್ಷ್ಮವಾಗಿದ್ದ ಧನಕನಕಾದಿ ವಸ್ತುಗಳು ಭಕ್ತಪ್ರಾರ್ಥನಾ ಸಮಯದಲ್ಲಿ ಸ್ಥೂಲಗಳಾಗಿ ಪರಿಣಮಿಸುವಂತೆಯೂ, ಮಯೂರಾಂಡ ರಸದಲ್ಲಿ ಸೂಕ್ಷ್ಮವಾಗಿದ್ದ ವಿಚಿತ್ರ ಬಣ್ಣಗಳುಳ್ಳ ನವಿಲು, ಸ್ಥೂಲಾವಸ್ಥೆಯನ್ನು ಹೊಂದುವಂತೆಯೂ, ಬ್ರಹ್ಮದಲ್ಲಿ ಸೂಕ್ಷ್ಮವಾದ ಸಹಜ ಶಕ್ತಿರೂಪದಿಂದಿದ್ದ ಚೇತನಾಚೇತನಾತ್ಮಕವಾದ ಪ್ರಪಂಚವು ಸ್ಥೂಲವಾದ ದೃಶ್ಯಾವಸ್ಥೆಯನ್ನು ಹೊಂದುತ್ತದೆಂದು ಹೇಳುವದು ಯುಕ್ತವಲ್ಲವೇ? ಇದಲ್ಲದೆ ಜಗಜ್ಜೀವೇಶ್ವರ ವಸ್ತುಗಳು ಮೂಲಾವಿದ್ಯಾಕಲ್ಪಿತಗಳೆಂದು ಹೇಳುವುದರಿಂದ "ಜ್ಞಾಜ್ಞಾವಜಾವೀಶನೀಶೌ" ಇತ್ಯಾದಿ ಶ್ರುತಿಗಳಿಂದ ಅಜತ್ವವು ಹೇಳಲ್ಪಡುವದರಿಂದ ಈ ಅಜತ್ವ ವಿಧಾಯಕ ಶ್ರುತಿಗಳಿಗೆ ವಿರೋಧವಾಗುವದಲ್ಲದೆ, ಬ್ರಹ್ಮಜಿಜ್ಞಾಸೆಗಿಂತಲೂ ಪೂರ್ವದಲ್ಲಿಯೇ ಶಾರೀರನು (ಜೀವನು) ವಸ್ತುತಃ ಬ್ರಹ್ಮನೆಂದು ಹೇಳುವುದರಿಂದ "ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೆ" "ಪರಾತ್ಪರಂ ಪುರುಷಮುಪೈತಿದಿವ್ಯಂ" ಇವೇ ಮೊದಲಾದ ಪ್ರಾಪ್ಯ ಪ್ರಾಪಕ ಭಾವವನ್ನು ಹೇಳುವ ಶ್ರುತಿವಾಕ್ಯಗಳಿಗೆ ವಿರೋಧವಾಗುವುದು. ವಸ್ತುತಃ ಮೊದಲೇ ಜೀವನು ಬ್ರಹ್ಮನಾಗಿದ್ದಪಕ್ಷದಲ್ಲಿ ಗುರುಶಿಷ್ಯರಿಗೆ ಮೌನವೂ ಮೂಕತ್ವವೂ ಪ್ರಾಪ್ತವಾದೀತು? ಮೊದಲೇ ಬ್ರಹ್ಮನಿದ್ದ ಜೀವನು ಶ್ರವಣ ಮನನಾದಿಗಳನ್ನು ಮಾಡುವುದೂ, ತದ್ದ್ವಾರಾ ಬ್ರಹ್ಮತ್ವ ಪ್ರಾಪ್ತಿಯನ್ನು ಮಾಡಿಕೊಳ್ಳುವುದೂ ಪಿಷ್ಟಪೇಷಣನ್ಯಾಯದಂತೆ ವ್ಯರ್ಥವಲ್ಲವೇ? ಇದಲ್ಲದೆ ಶ್ಲೋ|| ಯತ್ತತ್ಕಾರಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ | ತದ್ವಿಸೃಷ್ಟಸ್ಸಪುರುಷೋ ಲೋಕೆ ಬ್ರಹ್ಮೇತಿಕೀರ್ತ್ಯತೆ || ಎಂಬುವ ಮನುಸ್ಮೃತಿಯೂ, "ಪರಾಸ್ಯಶಕ್ತಿರ್ವಿವಿಧೈವಶ್ರೂಯತೆ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ" ಎಂಬುವ ಶ್ರುತ್ಯನುಸಾರವಾಗಿ ಕಾರ್ಯಕಾರಣಾವಸ್ಥೆಯನ್ನು ಬಿಟ್ಟು ನಿತ್ಯ ಸಿದ್ಧವಾದ ಶಕ್ತಿವಿಶಿಷ್ಟ ಪುರುಷನೇ ಲೋಕದಲ್ಲಿ ಬ್ರಹ್ಮವೆಂದು ಹೇಳಲ್ಪಡುವನು. ಆದ್ದರಿಂದ ಶ್ರುತ್ಯುಕ್ತವಾದ ಮಾಯಾಶಬ್ದಕ್ಕೆ ಮಿಥ್ಯಾಭೂತವಾದ ಮೂಲಾಧ್ಯಾಸವೆಂದು ಅರ್ಥಮಾಡಲಾಗದು. ಕಿಂತು ಶ್ಲೋ|| ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ | ಮಾಯೇತಿ ಪ್ರೋಚ್ಯತೆ ಲೋಕೆ ಬ್ರಹ್ಮನಿಷ್ಠಾ ಸನಾತನೀ || ಎಂಬುವ ಸಿದ್ಧಾಂ

ತಾಗಮಾನುಸಾರವಾಗಿಯೂ, ಶ್ಲೋ|| ಗುಣಕ್ರಿಯಾತ್ಮಿಕಾಶಕ್ತಿರ್ಬ್ರಹ್ಮನಿಷ್ಠಾ ಸನಾತನೀ ತದ್ವೈಲಕ್ಷಣ್ಯಾತ್ಸಮುತ್ಪನ್ನಾ ತಸ್ಮಿನ್ ವಸ್ತುತ್ರಯಾಭಿಧಾ" ಎಂಬುವ ಸಿದ್ಧಾಂತ ಶಿಖಾಮಣ್ಯುಕ್ತ್ಯನುಸಾರವಾಗಿಯೂ ಸಹಜ ಸಿದ್ಧವಾದ ಶಕ್ತಿಯನ್ನೇ ಬ್ರಹ್ಮದಲ್ಲಿ ಹೇಳಬೇಕು. ಬ್ರಹ್ಮಕ್ಕೆ ವಿಜಾತೀಯವಾದ ಶಕ್ತಿಯಿಂದ ಜೀವೇಶ್ವರರು ಕಲ್ಪಿತರಾಗಿರುವರೆಂದು ಹೇಳಿದರೆ ಮಣ್ಣು ಕಲ್ಲು ಸಗಣಿ ಮೊದಲಾದವುಗಳಿಂದ ಕಲ್ಪಿತಗಳಾದ ಆನೆ ಕುದುರೆ ಮೊದಲಾದವುಗಳಲ್ಲಿ ಸ್ವತಂತ್ರವಾಗಿ ಗಮನಾಗಮನಾದಿಗಳು ಕಾಣದಿರುವಂತೆ, ಜೀವೇಶ್ವರರುಗಳಲ್ಲಿ ಕಿಂಚಿಜ್ಞತ್ವ ಕಿಂಚಿತ್ಕರ್ತೃತ್ವಶಕ್ತಿಗಳೂ, ಸರ್ವಜ್ಞತ್ವ ಸರ್ವಕರ್ತೃತ್ವಶಕ್ತಿಗಳೂ ತೋರದೇ ಹೋಗಬೇಕು. ಆದ್ದರಿಂದ ನೀನು ಮೊದಲು ಹೇಳಿದ ಶಶಶೃಂಗದಂತೆ ಜಗನ್ಮಿಥ್ಯಾತ್ವವನ್ನು ಹೇಳುವ ಸ್ಮೃತಿವಾಕ್ಯಗಳು ನಾನು ಹೇಳಿದ ಅನೇಕ ಶ್ರುತಿ ಸ್ಮೃತಿ ಆಗಮಯುಕ್ತ್ಯನುಭವಗಳಿಗೆ ವಿರುದ್ಧಗಳಾಗುವುದರಿಂದ ಮುಮುಕ್ಷುಗ್ರಾಹ್ಯಗಳಲ್ಲವು. ಆದ್ದರಿಂದಲೇ ಶೈವಪುರಾಣದಲ್ಲಿ ದೂರ್ವಾಸ ಮಹರ್ಷಿಗಳನ್ನು ಕುರಿತು ವ್ಯಾಸಮಹರ್ಷಿಗಳು ಶ್ಲೋ|| ಅನಾದ್ಯವಿದ್ಯಯಾಬದ್ಧಂ ಬ್ರಹ್ಮತತ್ವಾಲಕಾರಣಂ | ಸ್ವಾವಿದ್ಯಯಾ ಸಂಸರಂತಿ ಮುಕ್ತಿಃ ಕಲ್ಪಿತವಾಕ್ಯತಃ | ಏವಂ ಪ್ರತಾರಣಂ ಶಾಸ್ತ್ರಂ ಸರ್ವಮಾಹಾತ್ಮ್ಯನಾಶಕಂ | ಉಪೇಕ್ಷ್ಯಂ ಶಿವಭಕ್ತೈಶ್ಚ ಶ್ರುತಿಸ್ಮೃತಿ ವಿರುದ್ಧತಃ || ಎಂದು ಹೇಳಿರುವರು. ಆದ್ದರಿಂದ ಜಗತ್ಕಾರಣೀಭೂತವಾದ ಶಕ್ತಿಯು ಬ್ರಹ್ಮದಲ್ಲಿ ಸಹಜಸಿದ್ಧವಾದುದೆಂದು ಹೇಳಬೇಕು. ಈ ಶಕ್ತಿಗೇನೇ ಚಿಚ್ಛಕ್ತಿಯನ್ನುವೆವು. ಈ ಚಿಚ್ಛಕ್ತಿಯು ಬ್ರಹ್ಮದಲ್ಲಿ ತಾದಾತ್ಮ್ಯ ಸಂಬಂಧದಿಂದಿರುವುದು. ತಾದಾತ್ಮ್ಯವೆಂದರೆ ಸಾಮರಸ್ಯಾತ್ಮಕವಾದದು. ಈ ಶಿವಶಕ್ತಿ ಸಮರಸಾತ್ಮಕವಾದ ಲಿಂಗಮೂರ್ತಿಯು ಬಾಲಕರಂತಿರುವ ಬದ್ಧಜೀವರುಗಳ ಪಾಶಗಳನ್ನು ಕತ್ತರಿಸಿ, ತನ್ನೈಶ್ವರ್ಯವನ್ನು ಕೊಡುವದಾದುದರಿಂದ ಈ ಮಾತೃ ಪಿತೃಸ್ವರೂಪವಾದ ಲಿಂಗಮೂರ್ತಿಯನ್ನೇ ಮುಮುಕ್ಷುಗಳು ಆಶ್ರಯಿಸಬೇಕು. ನಿಶ್ಶಕ್ತಿಕವಾದ ಬ್ರಹ್ಮವು ಯಾವ ಐಶ್ವರ್ಯವನ್ನೂ ಕೊಡಲಾರದು. ಆದ್ದರಿಂದಲೇ ಕಾಳಿದಾಸಾದಿ ಮಹಾ ಕವಿಗಳೂ ಕೂಡ ಜಗನ್ಮಾತೃ ಪಿತೃಸ್ವರೂಪವಾದ ಲಿಂಗಮೂರ್ತಿಯನ್ನೇ ಫಲಕಾಂಕ್ಷೆಯಿಂದ ನಮಸ್ಕರಿಸಿರುವರು. ಶ್ಲೋ|| ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೆ | ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ || ಎಂದು ಹೇಳಿರುವರು. ಇಲ್ಲಿ ಪಾರ್ವತೀ ಪರಮೇಶ್ವರರೆಂದರೆ ಶಕ್ತಿ ಶಿವರೆಂದೇ ಅರ್ಥವು. ಆ ಶಕ್ತಿಗೂ ಶಕ್ತಿಯ ಸ್ಥೂಲಪರಿಣಾಮ

ವಾದ ಪಾರ್ವತೀದೇವಿಗೂ, ಶಿವನಿಗೂ, ಶಿವನ ಸ್ಥೂಲಪರಿಣಾಮರಾದ ಪ್ರತಿಮಾಕಾರ ಲೀಲಾ ವಿಗ್ರಹಕ್ಕೂ ಅಭೇದ ದೃಷ್ಟಿಯಿಂದ ಪಾರ್ವತೀ ಪರಮೇಶ್ವರರುಗಳನ್ನು ನಮಸ್ಕರಿಸುತ್ತೇನೆಂದು ನಮಸ್ಕಾರಾತ್ಮಕ ಮಂಗಲವನ್ನು ಮಾಡಿರುವರೆಂಬುವುದೇ ಯುಕ್ತವು. ಇಲ್ಲದಿದ್ದರೆ ಅವರು ಹೇಳಿದ ವಿಶೇಷಣಗಳೇ ಅಯುಕ್ತಗಳಾಗುವವು. ಚಿಚ್ಛಕ್ತಿಯು ಬ್ರಹ್ಮದಲ್ಲಿ ಸಹಜಸಿದ್ಧವೆಂದೂ, ಆ ಶಕ್ತಿಯ ಸ್ಥೂಲಪರಿಣಾಮವೇ ಪಾರ್ವತೀದೇವಿಯೆಂದೂ ಬಾಣಭಟ್ಟಮಹಾಕವಿಯೂ ಕೂಡ ಅಭಿಪ್ರಾಯ ಕೊಟ್ಟಿರುವನು. ಶ್ಲೋ || "ಪುಣ್ಯೇನಕೇನಾಪಿಕಿಲಾವಕೀರ್ಣ ಪುರಾತನೀ ಶಕ್ತಿರಿಯಂಸುತಾತೇ | ಇಮಾಮಸಾಧಾರಣ ರೂಪಲಕ್ಷ್ಮೀಂನ ಲೋಕಸಾಮಾನ್ಯಸುತಾಂ ಪ್ರತೀಯಾಃ || ಎಂದು ಪಾರ್ವತೀ ಪರಿಣಯದಲ್ಲಿ ಗಿರಿರಾಜನನ್ನು ಕುರಿತು ನಾರದೋಕ್ತಿಯುಂಟು.

ಇದಲ್ಲದೆ ಈ ಚೇತನಾ ಚೇತನಾತ್ಮಕವಾದ ಪ್ರಪಂಚಕ್ಕೆ ಮೂಲಕಾರಣೀಭೂತವಾದ ಚಿಚ್ಛಕ್ತಿಯು ಪರಶಿವಲಿಂಗವು ಸೃಷ್ಟಿ ಗುನ್ಮುಖವಾಗಲು ಆವಿರ್ಭವಿಸಿತೆಂಬುವದು "ಪ್ರಜ್ಞಾಚ ತಸ್ಮಾತ್ಪ್ರಸೃತಾ ಪುರಾಣೀ" ಎಂಬುವ ಶ್ರುತಿಯಿಂದ ತಿಳಿದುಬರುತ್ತದೆ. ಶಿವಾದ್ವೈತಿಯೇ? ಸೃಷ್ಟ್ಯಾದಿಯಲ್ಲಿಯೂ ಕೂಡ ಪರಶಿವಬ್ರಹ್ಮದಲ್ಲಿ ಚಿಚ್ಛಕ್ತಿಯು ಅಂಡರಸನ್ಯಾಯದಿಂದಿರುವದೆಂದಮೇಲೆ ಚಿಚ್ಛಕ್ತಿಯೆಂಬುವ ಪರಾಹಂತಾತ್ಮಕ ಬುದ್ಧಿಶಕ್ತಿಯಿಂದ ಸ್ವಾತ್ಮಾನಂದಾದಿ ಭೋಗವನ್ನು ಹೇಳಬೇಕಾಗುವದು. ಹೇಳುವೆನು ಜೀವಾತ್ಮನು ತನ್ನಂತಃಕರಣ ಶಕ್ತಿಯಿಂದ ಕಿಂಚಿದಾನಂದಾದಿಗಳನ್ನು ಭೋಗಿಸುವಂತೆ ಪರಮಾತ್ಮನೂ ಕೂಡ ಚಿಚ್ಛಕ್ತಿಯಿಂದ ಅಖಂಡ ನಿತ್ಯಾನಂದಾದಿಗಳನ್ನು ಭೋಗಿಸುವನೆಂದು ಹಿಂದೆ ಹೇಳಿಯೇ ಇರುವೆನು. ಹಾಗಾದರೆ ನಿನ್ನ ಮತದಲ್ಲಿ ಬ್ರಹ್ಮವು ನಿರ್ಗುಣವೆಂದು ಸಿದ್ಧಿಸಲಿಲ್ಲ. ಎಲ್ಲಾ ಅವಸ್ಥೆಗಳಲ್ಲಿಯೂ ಸಗುಣಬ್ರಹ್ಮವೇ ಹೇಳಲ್ಪಟ್ಟಂತಾಯಿತಲ್ಲವೇ? ಬ್ರಹ್ಮಾದ್ವೈತಿಯೇ? ನಿರ್ಗುಣ ಬ್ರಹ್ಮವೆಂಬುವದೊಂದೂ ಇಲ್ಲವೇ ಇಲ್ಲವು. ಅದು ಉಂಟೆನ್ನುವಲ್ಲಿ ಪ್ರಮಾಣವೂ ಇಲ್ಲವು. ಶಿವಾದ್ವೈತಿಯೇ? "ಅಶಬ್ದಮಸ್ಪರ್ಶಮ ರೂಪಮವ್ಯಯಂ" "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಇತ್ಯಾದಿ ಶ್ರುತಿಗಳೂ "ಅರೂಪವದೇವಹಿ ತತ್ಪ್ರಧಾನತ್ವಾತ್" ಇತ್ಯಾದಿಬ್ರಹ್ಮಸೂತ್ರಗಳೂ, ಬ್ರಹ್ಮವು ನಿರ್ಗುಣವೆಂಬುವ ವಿಷಯದಲ್ಲಿ ಪ್ರಮಾಣಗಳಲ್ಲವೇನು? ಕೇವಲ ನಿರ್ಗುಣ ಬ್ರಹ್ಮವಾದಿಯೇ? ಕೇಳು. "ಯಸ್ಸರ್ವಜ್ಞಸ್ಸರ್ವವಿದ್ಯಸ್ಯ ಜ್ಞಾನಮಯಂ ತಪಃ" "ಆನಂದಂ ಬ್ರಹ್ಮಣೋವಿದ್ವಾನ್"

ಇತ್ಯಾದಿ ಶ್ರುತಿಗಳೂ, ‹‹ಪ್ರಕಾಶವಚ್ಚಾವೈಯ್ಯರ್ಥ್ಯಾತ್›› ‹‹ಸುಖವಿಶಿಷ್ಟಾಭಿಧಾನಾದೇವಹಿ›› ‹‹ಆನಂದಾದಯಃ ಪ್ರಧಾನಸ್ಯ›› ‹‹ವಿವಕ್ಷಿತ ಗುಣೋಪಪತ್ತೇಶ್ಚ›› ಇತ್ಯಾದಿ ಬ್ರಹ್ಮಸೂತ್ರಗಳೂ, ಬ್ರಹ್ಮವು ಗುಣವುಳ್ಳದೆಂದು ಹೇಳುತ್ತವೆಯಾದ್ದರಿಂದ ಬ್ರಹ್ಮವು ನಿರ್ಗುಣವೆಂದು ಸಿದ್ಧವಾಗುವದಿಲ್ಲ. ಶಿವಾದ್ವೈತಿಯೇ! ಮೇಲೆ ನಾನು ಹೇಳಿದ ಶ್ರುತಿ ಸೂತ್ರಗಳು ಬ್ರಹ್ಮವು ನಿರ್ಗುಣವೆಂದೂ, ನೀನು ಹೇಳಿದ ಶ್ರುತಿ ಸೂತ್ರಗಳು ಬ್ರಹ್ಮವು ಸಗುಣವೆಂದೂ, ಅಭಿಪ್ರಾಯಕೊಡುತ್ತವಂದಮೇಲೆ ಪರಸ್ಪರ ವಿರುದ್ಧಾರ್ಥವನ್ನು ಪ್ರತಿಪಾದಿಸುವ ಈ ಶ್ರುತಿ ಸೂತ್ರಗಳಿಗೆ ಉನ್ಮತ್ತವಾಕ್ಯದಂತೆ ಅಪ್ರಾಮಾಣ್ಯವನ್ನು ಹೇಳಬಹುದಲ್ಲವೇ ? ಬ್ರಹ್ಮಾದ್ವೈತಿಯೇ ? ಹೀಗೆ ದುಡಕಬೇಡ ಶ್ರುತಿಸೂತ್ರಗಳು ಅಪ್ರಮಾಣಗಳಾಗಲಾರವು. ಅವುಗಳ ತಾತ್ಪರ್ಯವನ್ನು ತಿಳಿಯಬೇಕು. ವಹ್ನಿಯಲ್ಲಿ ಗಂಧವು ನಿಷೇಧಿಸಲ್ಪಟ್ಟಿರುವದೆಂದು ರೂಪವೂ ನಿಷೇಧಿಸಲ್ಪಡುವದಿಲ್ಲ. ಬ್ರಹ್ಮದಲ್ಲಿ ನಿಷೇಧಿಸಲ್ಪಟ್ಟ ಗುಣಗಳು ಸಂಭವಿಸದೇ ಇದ್ದಾಗ್ಯೂ ಪ್ರತಿಪಾದಿಸಲ್ಪಟ್ಟ ಗುಣಗಳು ಸಂಭವಿಸುತ್ತವೆ. ಆದ್ದರಿಂದ ‹‹ಅಶಬ್ದಮಸ್ಪರ್ಶಂ›› ಇತ್ಯಾದಿ ವಾಕ್ಯಗಳಿಂದ ನಿಷೇಧವಿರುವದರಿಂದ ರೂಪಸ್ಪರ್ಶಾದಿ ಗುಣಗಳು ಬ್ರಹ್ಮದಲ್ಲಿ ಇಲ್ಲವೆಂದು ಹೇಳಬಹುದು. ಪರಂತು ‹‹ಯಸ್ಸರ್ವಜ್ಞಃ›› ಇತ್ಯಾದಿ ಶ್ರುತಿಗಳಿಂದ ಪ್ರತಿಪಾದಿಸಲ್ಪಡುವ ಜ್ಞಾನಾದಿ ಗುಣಗಳೂ ಕೂಡ ಇಲ್ಲವೆಂದು ಹೇಳುವುದು ಶ್ರುತಿ ಸೂತ್ರಗಳಿಗೆ ವಿರುದ್ಧವಲ್ಲವೇ ? ಆದ್ದರಿಂದ ಸರ್ವಜ್ಞತ್ವಾದಿ ಕಲ್ಯಾಣಗುಣಗಳನ್ನು ಬ್ರಹ್ಮದಲ್ಲಿ ಸ್ವೀಕರಿಸಬೇಕು. ಶಿವಾದ್ವೈತಿಯೇ ? ‹‹ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ›› ಎಂಬುವ ಶ್ರುತಿಯು ಗುಣಸಾಮಾನ್ಯವನ್ನೇ ನಿಷೇಧಿಸುವದು. (ಬ್ರಹ್ಮದಲ್ಲಿ ಯಾವ ಗುಣವೂ ಇಲ್ಲವೆಂದು ಹೇಳುವುದು). ಅಂದಮೇಲೆ ಬ್ರಹ್ಮದಲ್ಲಿ ಜ್ಞಾನಾದಿ ಗುಣಗಳನ್ನಾದರೂ ಹೇಗೆ ಸ್ವೀಕರಿಸುವಿಯೆ ? ಬ್ರಹ್ಮಾದ್ವೈತಿಯೇ ? ಕೇಳು. ‹‹ಕೇವಲೋ ನಿರ್ಗುಣಶ್ಚ›› ಎಂಬುವ ವಾಕ್ಯವು ಬ್ರಹ್ಮದಲ್ಲಿ ಯಾವ ಗುಣವೂ ಇಲ್ಲವೆಂದು ಹೇಳುವುದು. ಆದ್ದರಿಂದಿದು ಸಾಮಾನ್ಯ ಶಾಸ್ತ್ರವೆನಿಸುವದು. ‹‹ಯಸ್ಸರ್ವಜ್ಞಸ್ಸಾಕ್ಷೀ ಚೇತಾ ಜ್ಞಃ ಕಾಲಕಾಲೋ ಗುಣೀ ಸರ್ವವಿದ್ಯಃ›› ಎಂಬುವ ಶ್ರುತಿವಾಕ್ಯವು ಬ್ರಹ್ಮದಲ್ಲಿ ಗುಣವಿಶೇಷವನ್ನು ವಿಧಿಸುವದರಿಂದ ಇದು ವಿಶೇಷ ಶಾಸ್ತ್ರವೆನಿಸುವದು. ಆದ್ದರಿಂದ ಈ ವಿಶೇಷ ಶಾಸ್ತ್ರದಿಂದ ವಿಹಿತಗಳಾದ ಜ್ಞಾನಾದಿ ಗುಣಗಳಿಗೆ ಅತಿರಿಕ್ತಗಳಾದ ಶಬ್ದಸ್ಪರ್ಶ ರೂಪಾದಿ ಪ್ರಕೃತಗುಣಗಳನ್ನು ನಿಷೇಧಿಸುತ್ತದೆಂದು ಸಾಮಾನ್ಯ ಶಾಸ್ತ್ರದ ತಾತ್ಪರ್ಯವನ್ನು ಹೇಳ

ಬೇಕು. ಹೇಗೆಂದರೆ ‟ಮಾಹಿಂಸ್ಯಾತ್ ಸರ್ವಾಭೂತಾನಿ" ಎಂಬುವ ಸಾಮಾನ್ಯ ಶಾಸ್ತ್ರದಿಂದ ಯಾವ ಪ್ರಾಣಿಗಳನ್ನೂ ಹಿಂಸೆಮಾಡಬಾರದೆಂದು ತಿಳಿದುಬರುತ್ತದೆ. ‟ಅಗ್ನೀಷೋಮೀಯಂ ಪಶುಮಾಲಭೇತ" ಎಂಬುವ ವಿಶೇಷ ಶಾಸ್ತ್ರದಿಂದ ಯಾಗದಲ್ಲಿ ಪಶುಹಿಂಸೆಯು ವಿಧಿಸಲ್ಪಟ್ಟಿರುವದಾದ್ದರಿಂದ ಈ ವಿಶೇಷ ವಿಧಿಯಿಂದ ಆ ಸಾಮಾನ್ಯ ನಿಷೇಧಾಂಶವು ಬಾಧಿಸಲ್ಪಡುವದಲ್ಲವೆ? ಹಾಗಾದರೆ ಶಿವಾದ್ವೈತಿಯೇ ನೀನು ಬ್ರಹ್ಮದಲ್ಲಿ ಜ್ಞಾನಾದಿ ಗುಣಗಳನ್ನು ಸ್ವೀಕರಿಸಿದರೆ ‟ಸತ್ಯಂಜ್ಞಾನಮನಂತಂ ಬ್ರಹ್ಮ" ಎಂಬುವ ಶ್ರುತಿಗೆ ವಿರುದ್ಧವಾಗುವದು. ನೋಡು ಈ ಶ್ರುತಿಯು ಬ್ರಹ್ಮವನ್ನು ಜ್ಞಾನಸ್ವರೂಪವೆಂದು ಹೇಳುವುದು ಜ್ಞಾನಗುಣವುಳ್ಳದ್ದು ಬ್ರಹ್ಮವೆಂದು ಹೇಳುವುದಿಲ್ಲವಷ್ಟೆ? ಬ್ರಹ್ಮಾದ್ವೈತಿಯೇ ಕೇಳು, ‟ತದೈಕ್ಷತಬಹುಸ್ಯಾಂ" ‟ಸಈಕ್ಷಾಂಚಕ್ರೇ" ಇತ್ಯಾದಿ ಶ್ರುತಿಗಳಿಂದ ಬ್ರಹ್ಮದಲ್ಲಿ ಆಗಂತುಕವಾದ್ದರಿಂದ ಜ್ಞಾನಕ್ಕೆ ಆವಿರ್ಭಾವವು ಹೇಳಲ್ಪಟ್ಟಿರುವದರಿಂದ ಆ ಜ್ಞಾನವು ಬ್ರಹ್ಮಸ್ವರೂಪವಾಗಲಾರದು. ಆದ್ದರಿಂದ ಬ್ರಹ್ಮದ ಗುಣವೆಂದೇ ಹೇಳಬೇಕು. ಮತ್ತು ಅದು ಅವಿದ್ಯಾವೃತ್ತಿರೂಪವಾದ ಜ್ಞಾನವೆಂತಲೂ ಹೇಳಬೇಕಾಗುವದಿಲ್ಲ. ಅವಿದ್ಯೆಯು ನಿನ್ನ ಮತದಲ್ಲಿ ಶಶವಿಷಾಣದಂತೆ ಅಸದ್ವ್ಯಕ್ತಿಯಾಗಿರುವುದರಿಂದ ಅಲ್ಲಿ ಈಕ್ಷಣರೂಪವಾದ ಜ್ಞಾನವು ಯುಕ್ತವಾಗುವದಿಲ್ಲ. ಅದರಲ್ಲಿ ಅದು ಯುಕ್ತವಾಗುವ ಪಕ್ಷದಲ್ಲಿ ಸಾಂಖ್ಯಮತಸಿದ್ಧವಾದ ಪ್ರಧಾನದಲ್ಲಿಯೂ ಯುಕ್ತವಾಗಬಹುದು ಅಂದಮೇಲೆ ‟ಈಕ್ಷತೇರ್ನಾಶಬ್ದಂ" ಇತ್ಯಾದಿ ಸೂತ್ರಗಳು ಅಸಂಗತಗಳಾಗಬೇಕು. ಆದ್ದರಿಂದ ನಿನ್ನ ಮತದಲ್ಲಿ ಇದು ಅವಿದ್ಯಾವೃತ್ತಿರೂಪವಾದ ಜ್ಞಾನವು, ಇದು ಸ್ವರೂಪಜ್ಞಾನವು ಎಂದು ಜ್ಞಾನದಲ್ಲಿ ವಿಭಾಗಮಾಡುವುದಕ್ಕೆ ಯಾವ ಪ್ರಮಾಣವೂ ಇಲ್ಲವು. ಹಾಗಾದರೆ ‟ಸತ್ಯಂ ಜ್ಞಾನಮನಂತಂಬ್ರಹ್ಮ" ಎಂಬುವ ಶ್ರುತಿಯು ಬ್ರಹ್ಮವು ಜ್ಞಾನಸ್ವರೂಪವೆಂದು ಏಕೆ ಹೇಳುವುದು? ಈ ಶ್ರುತಿಯು ಬ್ರಹ್ಮವು ಜ್ಞಾನಸ್ವರೂಪವೆಂದು ಹೇಳುವದಿಲ್ಲ. ಕಿಂತು ‛ನೀಲಮುತ್ಪಲಂ' ಎಂಬುವಲ್ಲಿ ಹೇಗೋ ಹಾಗೆ ಗುಣಗುಣಿಗಳಿಗೆ ಭೇದಾಭೇದಗಳನ್ನು ಹೇಳುತ್ತದೆ. ಈ ಅಭಿಪ್ರಾಯವು ‟ತದ್ಗುಣಸಾರತ್ವಾತ್ ತದ್ವ್ಯಪದೇಶಃ ಪ್ರಾಜ್ಞವತ್" ಎಂಬುವ ಸೂತ್ರದಿಂದ ತೋರಿಸಲ್ಪಟ್ಟಿರುವದು. ಲೋಕದಲ್ಲಿ ಲವಣಗುಣವೇ ಸಾರವಾಗಿವುಳ್ಳ ಜಲಕ್ಕೆ ಲವಣವೆಂಬುವ ವ್ಯವಹಾರವು (ಈ ನೀರು ಉಪ್ಪಿರುವುದು ಉಪ್ಪುನೀರು) ಕಂಡುಬರುವಂತೆ ಜ್ಞಾನಗುಣವೇ ಸಾರವಾಗುಳ್ಳ ಬ್ರಹ್ಮಕ್ಕೆ ಜ್ಞಾನವೆಂದು ಹೇಳಲ್ಪಟ್ಟಿರುವುದು. ಆದ್ದರಿಂದ ಜ್ಞಾನಾದಿ ಗು

ಣಗಳುಳ್ಳದ್ದೇ ಬ್ರಹ್ಮವು ಎಂದು ಹೇಳಬೇಕು. ನಿರ್ಗುಣವೆಂದು ಹೇಳುವಲ್ಲಿ ಪ್ರಮಾಣವಿಲ್ಲ. ಆದ್ದರಿಂದ ನಿನ್ನ ಮತದಲ್ಲಿ ಈ ವಾಕ್ಯವು ನಿರ್ಗುಣ ಪ್ರತಿಪಾದಕವು ಇದು ಸಗುಣ ಪ್ರತಿಪಾದಕವು ಎಂದು ವಿಭಾಗಮಾಡುವುದು ಅಯುಕ್ತವೇಸರಿ. ನನ್ನ ಮತದಲ್ಲಿ ಅಸ್ತಿ, ಪ್ರಕಾಶೆ, ನಂದಾಮಿ ಎಂಬುವ ಸಚ್ಚಿದಾನಂದಾನುಭವ ರೂಪವಾದ ಭೋಗವು ಬ್ರಹ್ಮಕ್ಕೆ ಹೇಳಲ್ಪಡುವುದು. ಆದ್ದರಿಂದಲೇ ಈ ಭೋಗಕ್ಕೆ ಕಾರಣೀಭೂತವಾದ ಚಿಚ್ಛಕ್ತಿಯೂ ಕೂಡ ಬ್ರಹ್ಮದಲ್ಲಿ ಸ್ವೀಕರಿಸಲ್ಪಡುವುದು. ಈ ಚಿಚ್ಛಕ್ತಿಯು ಬ್ರಹ್ಮದಲ್ಲಿ ಸ್ವಭಾವವೇ ಆಗಿರುವದು. ಆದ್ದರಿಂದ ಸರ್ವಜ್ಞತ್ವಾದಿ ಗುಣಗಳೂ ಕೂಡ ಬ್ರಹ್ಮದಲ್ಲಿ ಸಹಜಸಿದ್ಧಗಳೇ ಆಗಿರುವವಲ್ಲದೆ ಆರೋಪಿತಗಳಲ್ಲವು.

ಆದ್ದರಿಂದಲೇ ಈ ಸರ್ವಜ್ಞತ್ವಾದಿ ಷಡಂಗ ಸ್ಥಲಗಳಿಗೆ ಆಚಾರಾದಿ ಲಿಂಗಗಳಲ್ಲಿ ಸಾಮರಸ್ಯವು ಹೇಳಲ್ಪಡುವುದು. ಬ್ರಹ್ಮಾದ್ವೈತಿಯೇ ಶ್ರುತಿಸೂತ್ರಗಳಿಗನುಸಾರವಾಗಿ ಮಾಡಲ್ಪಟ್ಟ ನನ್ನ ಈ ವಿಚಾರದಿಂದ ಬ್ರಹ್ಮವು ಚಿಚ್ಛಕ್ತಿವಿಶಿಷ್ಟವಾಗುವದಲ್ಲದೆ, ಚಿಚ್ಛಕ್ತಿಯೇ ಬ್ರಹ್ಮವಲ್ಲವೆಂಬು ಸಿದ್ಧವಾಯಿತಲ್ಲವೇ ? ಈ ಚಿಚ್ಛಕ್ತಿಗೆ ಚಿದಂಬರಶಕ್ತಿಯೆಂತಲೂ, ದಹರಾಕಾಶವೆಂತಲೂ ಪರ್ಯಾಯನಾಮಗಳುಂಟು. ಶಿವಾದ್ವೈತಿಯೆ ! ‹‹ಆಕಾಶೋಹವೈನಾಮರೂಪಯೋರ್ನಿರ್ವಹಿತಾ ಸರ್ವಾಣಿಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ›› ಎಂಬುವ ಶ್ರುತಿಯಿಂದಲೂ, ‹‹ದಹರಉತ್ತರೇಭ್ಯಃ›› ಎಂಬುವ ಸೂತ್ರದಿಂದಲೂ, ದಹರಾಕಾಶ ಶಬ್ದದಿಂದ ಪರಶಿವ ಬ್ರಹ್ಮವೇ ಹೇಳಲ್ಪಡುತ್ತದೆ. ಆದ್ದರಿಂದ ದಹರಾಕಾಶ ಶಬ್ದವು ಪರಶಿವ ಬ್ರಹ್ಮವಾಚಕವು ಚಿಚ್ಛಕ್ತಿಯ ಪರ್ಯಾಯನಾಮವಲ್ಲ. ಬ್ರಹ್ಮಾದ್ವೈತಿಯೆ ಕೇಳು, ‹‹ದಹರಂವಿಪಾಪ್ಮಂವರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ ತತ್ರಾಪಿದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ›› ಹೀಗೆಂಬುವ ತೈತ್ತರೀಯ ಶ್ರುತಿಯಿಂದಲೂ, ‹‹ಹೃತ್ಪುಂಡರೀಕಂ ವಿರಜಂ ವಿಶುದ್ಧಂ›› ಎಂದು ಕೈವಲ್ಯೋಪನಿಷತ್ತಿನಿಂದಲೂ ದಹರಪುಂಡರೀಕವನ್ನು ಹೇಳಿ ಆಮೇಲೆ ‹‹ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ›› ಇತ್ಯಾದಿ ಶ್ರುತಿಯಿಂದಲೂ, ದಹರಾಕಾಶ ಮಧ್ಯವರ್ತಿಯಾದ ಪರಶಿವಬ್ರಹ್ಮದ ಉಪಾಸನೆಯು ಹೇಳಲ್ಪಟ್ಟಿರುವುದಾದ್ದರಿಂದ ದಹರಾಕಾಶವು ಚಿಚ್ಛಕ್ತಿಯ ಪರ್ಯಾಯನಾಮವೆಂದು ಹೇಳಬೇಕು. ಇದಕ್ಕೇನೇ ಚಿದಂಬರ ಪ್ರಕೃತಿಯೆಂತಲೂ ಹೇಳುವದುಂಟು. ಈ

ಚಿಚ್ಛಕ್ತಿಯೇ ‹‹ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ›› ಎಂಬುವ ಶ್ರುತಿಯಲ್ಲಿರುವ ಮಾಯಾಪದದಿಂದ ಹೇಳಲ್ಪಡುವದು. ಮಾಯಾಶಬ್ದದಿಂದ ಅಧ್ಯಾಸಿಗಳು ಹೇಳುವ ಮಿಥ್ಯಾಭೂತವಾದ ಅವಿದ್ಯಾಶಕ್ತಿಯೆಂದು ಭ್ರಮಿಸಕೂಡದು. ಆದರೆ ಶಿವನಲ್ಲಿ ಅವಿನಾಭಾವದಿಂದಿರತಕ್ಕ ಚಿಚ್ಛಕ್ತಿಯೆಂದು ತಿಳಿಯಬೇಕು. ಇಂಥ ಚಿಚ್ಛಕ್ತಿ ವಿಶಿಷ್ಟ ಪರಶಿವಬ್ರಹ್ಮವು ‹‹ಮಾಯಿನಂತು ಮಹೇಶ್ವರಂ›› ಎಂಬುವದರಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿತು. ಶಿವಾದ್ವೈತಿಯೇ ! ನಾನು ಮೇಲೆ ಹೇಳಿದ ಶ್ರುತಿಸೂತ್ರಗಳಲ್ಲಿ ದಹರಾಕಾಶವೆಂದರೆ ಪರಶಿವ ಬ್ರಹ್ಮವೆಂದು ಸ್ಪಷ್ಟವಾಗಿ ಉಪದೇಶಿಸಲ್ಪಟ್ಟಿರುವದು. ನೀನು ಹೇಳಿದ ಶ್ರುತಿವಾಕ್ಯಗಳಿಂದ ದಹರಾಕಾಶ ವಿಶಿಷ್ಟವಾದದ್ದು ಪರಶಿವ ಬ್ರಹ್ಮವೆಂದು ತಿಳಿದುಬರುವದು. ಆದ್ದರಿಂದ ಪರಸ್ಪರ ಶ್ರುತಿ ವಿರೋಧವನ್ನು ಪರಿಹರಿಸುವ ಬಗೆ ಹೇಗೆ. ಬ್ರಹ್ಮಾದ್ವೈತಿಯೇ ಕೇಳು, ನನ್ನ ಮತದಲ್ಲಿ ಪ್ರಭಾಕರ ಪ್ರಭೆಗಳಂತೆಯೂ, ಚಂದ್ರಚಂದ್ರಿಕೆಗಳಂತೆಯೂ, ಸ್ವರ್ಣಕುಂಡಲಗಳಂತೆಯೂ, ಶಕ್ತಿಶಕ್ತಿಮತ್ಪದಾರ್ಥಗಳಿಗೆ ಅಭೇದವನ್ನೂ ಕೂಡ ಸ್ವೀಕರಿಸುವದರಿಂದ ಶ್ರುತಿವಾಕ್ಯಗಳಿಗೆ ಪರಸ್ಪರ ವಿರೋಧವು ದೂರತಃ ಪಲಾಯನ ಮಾಡುವದು. ಈ ದಹರಾಕಾಶವೆಂಬ ಚಿಚ್ಛಕ್ತಿಯು ಪರಶಿವನ ನಿತ್ಯಶರೀರವೆಂತಲೂ ಹೇಳಬಹುದು. ಈ ವಿಷಯದಲ್ಲಿ ‹‹ಆಕಾಶಶರೀರಂಬ್ರಹ್ಮ›› ಎಂಬುವ ಶ್ರುತಿಯು ಪ್ರಮಾಣವಾಗಿರುವದು. ದಹರಾಕಾಶ ಶಬ್ದವು ಚಿಚ್ಛಕ್ತಿಯ ಪರ್ಯಾಯನಾಮವಾಗಿರುವದೆಂಬುವ ವಿಷಯದಲ್ಲಿ ಕೂರ್ಮಪುರಾಣದಲ್ಲಿ ಉಪಬೃಹ್ಮಣವಾಕ್ಯಗಳು ದೊರೆಯುವವು. ಶ್ಲೋ|| ಕೈಷಾಭಗವತೀದೇವೀ ಶಂಕರಾರ್ಧಶರೀರಿಣೀ | ಶಿವಾಸತೀ ಹೈಮವತೀ ಯಥಾವದ್ಬ್ರೂಹಿ ಪೃಚ್ಛತಾಂ || ಎಂದು ವೃಷಭನು ಪ್ರಶ್ನೆಮಾಡಲು, ಕೂರ್ಮನು ಶ್ಲೋ|| ರಹಸ್ಯಮೇತದ್ವಿಜ್ಞಾನಂ ಜಂತೂನಾಮೇಕಮೋಚನಂ | ವ್ಯೋಮಸಂಜ್ಞಾಪರಾಕಾಷ್ಠಾ ಜ್ಞಾನರೂಪಾತಿಲಾಲಸಾ || ಸ್ವಾಭಾವಿಕೀಚ ತನ್ಮೂಲಾ ಪ್ರಭಾಭಾನೋರಿವಾಮಲಾ | ಏತಾಮಾಹೇಶ್ವರೀ ಶಕ್ತಿರನೇಕೋಪಾಧಿಯೋಗತಃ | ಪರಾಪರೇಣರೂಪೇಣ ಕ್ರೀಡತೆ ತಸ್ಯಸನ್ನಿಧೌ | ಸೇಯಂಕರೋತಿಸಕಲಂ ಪಶ್ಯಕಾರ್ಯಮಿದಂಜಗತ್ || ನಕಾರ್ಯಂನಾಪಿಕರಣಮೀಶ್ವರಸ್ಯೇತಿ ಸೂರಯಃ | ಅನಯಾಪರಯಾದೇವಸ್ಸ್ವಾತ್ಮಾನಂದಂ ಸಮುಶ್ನುತೆ || ತಯಾಸರ್ವಮಿದಂ ಪ್ರೋತಮೋತಂಚೈವಾಖಿಲಂ ಜಗತ್ | ಏತಾಶಕ್ತಿ ಶ್ಶಿವೋಹ್ಯೇತಶ್ಶಕ್ತಿಮಾನುಚ್ಯತೆ ಶಿವಃ || ಶಕ್ತಿಶಕ್ತಿಮತೋರ್ಭೇದಂ ವದಂತಿ ಪರಮಾರ್ಥತಃ | ಅಭೇದಂಚಾನುಪಶ್ಯಂತಿ

ಯೋಗಿನಸ್ತತ್ವಚಿಂತಕಾಃ || ಅಂದರೆ ಶಂಕರನ ಅರ್ಧಾಂಗಿನಿಯಾಗಿಯೂ, ಶಿವಾ ಸತೀಯೆಂಬುವ ಪರ್ಯಾಯನಾಮವುಳ್ಳವುಗಳಾಗಿಯೂ, ಷಡ್ಗುಣೈಶ್ವರ್ಯ ಸಂಪನ್ನ ಳಾಗಿಯೂ ಇರುವ ಈ ಹಿಮವತ್ಪುತ್ರಿಯು ಯಾರು ? (ಈ ದೇವಿಯ ನಿಜತತ್ವ ವೇನು?) ಎಂದು ಕೇಳುವ ನಮ್ಮಗಳಿಗೆ ಯಥಾರ್ಥ ತತ್ವವನ್ನು ಹೇಳು ಎಂಬುವ ಪ್ರಶ್ನಕ್ಕೆ ಈ ತತ್ವಜ್ಞಾನವು ರಹಸ್ಯವಾದದ್ದೆಂತಲೂ, ಪ್ರಾಣಿಗಳ ಪಾಶಮೋಚ ನನ್ನು ಮಾಡತಕ್ಕಂಥಾದ್ದೆಂತಲೂ ಹೇಳಿ, ಆ ದೇವಿಯ ಮೂಲಕಾರಣ ತತ್ವ ವನ್ನು ವ್ಯೋಮಸಂಜ್ಞಾತೊ || ಎಂಬುವ ಮೊದಲಾದ ಶ್ಲೋಕಗಳಿಂದ ಹೇಳು ತ್ತಾನೆ. ಅಂದರೆ ಆಕಾಶ ಎಂಬುವ ಸಂಜ್ಞೆವುಳ್ಳವಳು ಸರ್ವೋತ್ಕೃಷ್ಟಳೂ, ಶಿವ ನಲ್ಲಿ ಅತ್ಯಂತ ಪ್ರೀತಿಯಿಂದ ಬೆರತಿರುವವಳೂ, ಶಿವನ ಸ್ವಭಾವಭೂತಳೂ, ಚಿಚ್ಛ ಕ್ತಿಸ್ವರೂಪಳೂ ಆದ ಯಾವ ದೇವಿಯೋ ಆ ದೇವಿಯೇ ಮೂಲಕಾರಣವಾಗಿ ವುಳ್ಳವಳೇ ಪಾರ್ವತೀದೇವಿಯೆಂತಲೂ, ಈ ಚಿಚ್ಛಕ್ತಿಯೆಂಬ ದೇವಿಯು ಸೂರ್ಯ ನಲ್ಲಿ ಪ್ರಭೆಯಂತೆ ಶಿವನಲ್ಲಿ ನಿತ್ಯಸಿದ್ಧಳಾಗಿ ಒಬ್ಬಳೇ ಆಗಿದ್ದರೂ ಅನೇಕೋ ಪಾಧಿಗಳ ಸಂಬಂಧದಿಂದ ಪರಾಪರ ಶಕ್ತಿರೂಪದಿಂದ ಆ ಶಿವನ ಸನ್ನಿಧಿಯಲ್ಲಿ ಕ್ರೀಡಿಸುತ್ತ ಸಮಸ್ತ ಪ್ರಪಂಚವನ್ನು ಉಂಟುಮಾಡುವಳು. ಆ ಶಕ್ತಿಯಿಂ ದುಂಟಾದದ್ದೆ ಈ ಎಲ್ಲಾ ಜಗತ್ತು. ಆದ್ದರಿಂದಲೇ ಜ್ಞಾನಿಗಳು ಈಶ್ವರನು ಕಾ ರ್ಯನೂ ಕಾರಣನೂ ಅಲ್ಲವೆಂದು ಹೇಳುವರು. ಈ ಪರಾಶಕ್ತಿಯಿಂದಲೇ ಮಹಾದೇವನು ಸ್ವಾತ್ಮಾನಂದ ಭೋಗವನ್ನು ಮಾಡುವನು. ಆ ಶಕ್ತಿಯಿಂದ ಲೇ ಈ ಸಮಸ್ತ ಜಗತ್ತು ಓತಪ್ರೋತವಾಗಿರುವದು. ವಸ್ತುತಃ ಒಂದು ಶಕ್ತಿ ಪದಾರ್ಥವು ಮತ್ತೊಂದು ಶಿವಪದಾರ್ಥವು ಹೀಗಿದ್ದರೂ ಶಿವನು ಶಕ್ತಿವುಳ್ಳವ ನೆಂದು ಹೇಳಲ್ಪಡುವನು, ಈ ಶಕ್ತಿಶಕ್ತಿಮತ್ಪದಾರ್ಥಗಳಿಗೆ ತತ್ವವನ್ನು ಚಿಂತಿ ಸುವ ಯೋಗಿಗಳು ಪಾರಮಾರ್ಥಿಕ ಭೇದವನ್ನೂ, ಪಾರಮಾರ್ಥಿಕವಾದ ಅಭೇ ದವನ್ನೂ ತಿಳಿಯುವರೆಂದು ಉತ್ತರವಾಕ್ಯವು ಕೂರ್ಮರೂಪದಿಂದ ಹೇಳಲ್ಪಟ್ಟಿತು. ಮತ್ತು ಇದೇ ಕೂರ್ಮಪುರಾಣದಲ್ಲಿ ಶ್ಲೋ|| ಮಾಂವಿದ್ಧಿಪರಮಾಂಶಕ್ತಿಂ ಮಹೇ ಶ್ವರ ಸಮಾಶ್ರಯಾಂ | ಅನನ್ಯಾಮವ್ಯಯಾಮೇಕಾಂಯಾಂ ಪಶ್ಯಂತಿ ಮುಮು ಕ್ಷವಃ || ಅಹಂವೈ ಸರ್ವಭೂತಾನಾಮಾತ್ಮಾ ಸರ್ವಾಂತರಾಶಿವಾ | ಶಾಶ್ವತೈ ಶ್ವರ್ಯವಿಜ್ಞಾನಮೂರ್ತಿ ಸ್ಸರ್ವಪ್ರವೃತ್ತಿಕಾ || ಅನಂತಾನಂತಮಹಿಮಾ ಸಂ ಸಾರಾರ್ಣವತಾರಿಣೀ | ದಿವ್ಯಂದದಾಮಿತೇಚಕ್ಷುಃ ಪಶ್ಯಮೇರೂಪಮೈಶ್ವರಂ || ಇತ್ಯಾದಿ ದೇವಿಯ ವಾಕ್ಯಗಳಿಂದಲೂ ಭೇದಾಭೇದ ಮತವೆಂಬ ಪರ್ಯಾಯನಾ

ಮವುಳ್ಳ ಶಕ್ತಿವಿಶಿಷ್ಟ ಶಿವಾದ್ವೈತಮತವು ನಿರೂಪಿಸಲ್ಪಟ್ಟಿರುವುದು. ಬ್ರಹ್ಮಾದ್ವೈತಿಯೆ ನೋಡು, ಈ ಪುರಾಣವಾಕ್ಯಗಳಿಂದಲಾದರೂ ಚಿಚ್ಛಕ್ತಿ ವಿಶಿಷ್ಟವಾದದ್ದೇ ಪರಶಿವ ಬ್ರಹ್ಮವೆಂದೂ, ಆ ಬ್ರಹ್ಮದಲ್ಲಿ ಚಿಚ್ಛಕ್ತಿಯು ಸ್ವಾಭಾವಿಕವಾಗಿರುವದಲ್ಲದೆ ಆರೋಪಿತವೆಂದೂ, ಮತ್ತು ಆ ಶಕ್ತಿಯಿಂದುಂಟಾದ ಜಗತ್ತು ಆರೋಪಿತವಾಗಿಲ್ಲವೆಂದೂ (ಅಧ್ಯಸ್ತವಾಗಿಲ್ಲವೆಂದೂ) ಈ ಅಖಂಡ ಬ್ರಹ್ಮಾಕಾರವಾದ ಚಿಚ್ಛಕ್ತಿಯು ಬದ್ಧ ಜೀವರುಗಳ ಬಂಧವನ್ನು ಭೇದಿಸುವಂಥಾದ್ದಾಗಿರುವದೆಂದೂ, ಮತ್ತು ಈ ಚಿಚ್ಛಕ್ತಿಯೇ ಪರಶಿವ ಬ್ರಹ್ಮಕ್ಕೆ ಅಖಂಡವಾದ ನಿತ್ಯವಾದ ಆನಂದದ ಭೋಗಕ್ಕೆ ಕಾರಣೀಭೂತವಾಗಿರುವದೆಂದೂ ಸ್ಪಷ್ಟವಾಯಿತಲ್ಲವೇ. ಮತ್ತು ಪರಶಿವ ಬ್ರಹ್ಮದಲ್ಲಿ ಶಕ್ತಿಯು ಸ್ವಾಭಾವಿಕಧರ್ಮವಾಗಿರುವದೆಂಬುವಲ್ಲಿ "ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀಜ್ಞಾನಬಲಕ್ರಿಯಾಚ" ಎಂಬುವ ಶ್ರುತಿವಾಕ್ಯವು ಪ್ರಮಾಣವಾಗಿರುವದು. ಈ ಶ್ರುತಿವಾಕ್ಯದ ಉಪಬೃಹ್ಮಣವಾಕ್ಯಗಳೂ ಕೂಡ ವಾಯುಸಂಹಿತೆಯಲ್ಲಿ ದೊರೆಯುವವು. ಶ್ಲೋ॥ ಶಕ್ತ್ಯಾದಿಚ ಪೃಥಿವ್ಯಂತಂ ಶಿವತತ್ವ ಸಮುದ್ಭವಂ । ತೇನೈಕೇನತು ತದ್ವ್ಯಾಪ್ತಂ ಮೃದಾಕುಂಭಾದಿಕಂ ಯಥಾ ॥ ಪರಾಸ್ಯ ವಿವಿಧಾಶಕ್ತಿಃ ಪ್ರಬೋಧಾನಂದರೂಪಿಣೀ । ಏಕಾನೇಕಸ್ವರೂಪೇಣ ಭಾತಿಭಾನೋರಿವಪ್ರಭಾ ॥ ಮತ್ತು ಅಭಿಯುಕ್ತ ವಾಕ್ಯಗಳಾದರೂ ಶಕ್ತಿ ಶಕ್ತಿಮತ್ಪದಾರ್ಥಗಳಿಗೆ ಅಭೇದವನ್ನು ಹೇಳುವ ವಿಷಯದಲ್ಲಿ ಪ್ರಮಾಣಗಳಾಗಿರುವವು. ಶ್ಲೋ॥ ಶಕ್ತಯಶ್ಚ ಜಗತ್ ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ । ಶಕ್ತಿಸ್ತು ಶಕ್ತಿಮದ್ರೂಪಾದ್ವ್ಯತಿರೇಕಂ ನಗಚ್ಛತಿ ॥ ತಾದಾತ್ಮ್ಯ ಮನಯೋರ್ನಿತ್ಯಂ ವಹ್ನಿದಾಹಿಕಯೋರಿವ । ಶಕ್ತಿಶಕ್ತಿಮತೋರ್ಯಸ್ಮಾದಭೇದಸ್ಸರ್ವದಾಸ್ಥಿತಃ ॥ ಅತಸ್ತದ್ಧರ್ಮ ಧರ್ಮಿತ್ವಾತ್ ಪರಾಶಕ್ತಿಃ ಪರಾತ್ಮನಃ । ನವಹ್ನೇರ್ದಾಹಿಕಾಶಕ್ತಿರ್ವ್ಯತಿರಿಕ್ತಾ ವಿಭಾವ್ಯತೇ॥ ಇವೇ ಮೊದಲಾದ ಪ್ರಾಮಾಣಿಕ ವಾಕ್ಯಗಳಿಂದ ಪರಶಿವಬ್ರಹ್ಮವು ಚಿಚ್ಛಕ್ತಿ ವಿಶಿಷ್ಟವಾದದ್ದೆಂದೂ, ನಿರ್ವಿಶೇಷವಲ್ಲವೆಂದೂ, ಸಿದ್ಧವಾಯಿತಷ್ಟೆ, ಇಂಥ ಚಿಚ್ಛಕ್ತಿವಿಶಿಷ್ಟ ಪರಶಿವಬ್ರಹ್ಮಕ್ಕೂ ಚಿತ್ತಶಕ್ತಿವಿಶಿಷ್ಟ ಜೀವನಿಗೂ ಅದ್ವೈತವನ್ನು ಪ್ರತಿಪಾದಿಸುವ ಮತವೇ ವೀರಶೈವಮತವು. ಶಿವಾದ್ವೈತಿಯೇ? ಚಿತ್ತಶಕ್ತಿ ವಿಶಿಷ್ಟ ಜೀವನು ಕಿಂಚಿಜ್ಞನೂ, ಕಿಂಚಿತ್ಕರ್ತೃವೂ, ಅಸ್ವತಂತ್ರನೂ, ತಾಪತ್ರಯಾನಲದಂದಹ್ಯಮಾನನೂ, ಆಗಿರುವನು. ಚಿಚ್ಛಕ್ತಿವಿಶಿಷ್ಟ ಪರಶಿವ ಬ್ರಹ್ಮವಾದರೋ ಸರ್ವಜ್ಞತ್ವ ಸರ್ವಕರ್ತೃತ್ವಾದಿ ಧರ್ಮಗಳುಳ್ಳದ್ದಾಗಿರುವುದು. ಇಂದಮೇಲೆ

ಇವರಿಗೆ ಅದ್ವೈತವು ಸಂಭವಿಸುವ ಬಗೆ ಹೇಗೆ? ಶಿವಜೀವರುಗಳು ಭಿನ್ನಭಿನ್ನ ಸ್ವಭಾವವುಳ್ಳವರಾಗಿರುವರಷ್ಟೆ? ಬ್ರಹ್ಮಾದ್ವೈತಿಯೇ? ಕೇಳು. ಜೀವನ ಚಿತ್ತಶಕ್ತಿಯು ಶಿವಯೋಗೋಪಾಯದಿಂದ ಆವಿರ್ಭೂತವಾಗಲು ಜೀವನಿಗೆ ಶಿವಾದ್ವೈತವು ಸಂಭವಿಸುತ್ತದೆಂದು ಬ್ರಹ್ಮಸೂತ್ರ ಶಾಂಕರೀವೃತ್ತಿಯಲ್ಲಿ ಬಹು ವಿಸ್ತಾರವಾಗಿ ಹೇಳಿರುವೆವು. ಮುಖ್ಯವಾಗಿ „ಉತ್ತರಾಚ್ಚೇದಾವಿರ್ಭೂತ ಸ್ವರೂಪಸ್ತು" ಎಂಬುವ ಸೂತ್ರದ ಶಾಂಕರೀವೃತ್ತಿಯಲ್ಲಿ ಸ್ಪಷ್ಟವಾಗಿ ನಿರೂಪಿಸಿರುವೆವು. ಆದ್ದರಿಂದ ಇಲ್ಲಿ ಈ ವಿಷಯದ ಬಗ್ಗೆ ವಿಸ್ತೃತ ವಿಚಾರವನ್ನು ಮಾಡುವದು ಪ್ರಯೋಜಕವಾಗಿಲ್ಲವು. ಮುಖ್ಯವಾಗಿ ಚಿಚ್ಛಕ್ತಿ ವಿಶಿಷ್ಟವಾದದ್ದೇ ಬ್ರಹ್ಮವೆಂತಲೂ, ನಿಮ್ಮ ಆಚಾರ್ಯರು ಬ್ರಹ್ಮವೆಂದು ಹೇಳುವ ಚಿಚ್ಛಕ್ತಿಯು ಬ್ರಹ್ಮವಲ್ಲವೆಂತಲೂ, ಹೇಳಬೇಕಾಗಿರುವುದು, ಆದ್ದರಿಂದ ಇದೇ ಪ್ರಕೃತವಾಗಿರುವದು. ಈ ಪರಶಿವ ಲಿಂಗಮೂರ್ತಿಯಲ್ಲಿರುವ ಚಿಚ್ಛಕ್ತಿಯ ವಿಕಾಸದಿಂದ ಜಗತ್ತಿನ ಆವಿರ್ಭಾವವು ಸಂಕೋಚದಿಂದ ಲಯವೂ ಹೇಳಲ್ಪಡುವುದು. ಆದ್ದರಿಂದಲೇ ಶ್ಲೋ॥ ಶಕ್ತಯೋಽಸ್ಯ ಜಗತ್ಸರ್ವಂ ಶಕ್ತಿಮಾಂಸ್ತು ಮಹೇಶ್ವರಃ ॥ ಎಂದು ಆಗಮವು ಹೇಳುತ್ತದೆ. ಇನ್ನಲ್ಲದೆ „ಸ್ವಶಕ್ತಿ ಪ್ರಚಯೋಽಸ್ಯವಿಶ್ವಂ" ಎಂಬುವ ಶಿವಸೂತ್ರವೂ ಕೂಡ ಶಿವನ ಚಿಚ್ಛಕ್ತಿಯಿಂದುಂಟಾದ ಶಕ್ತಿಸಮೂಹವೇ ಜಗತ್ತೆಂದು ಹೇಳುತ್ತದೆ. ಬ್ರಹ್ಮಾದ್ವೈತಿಯೇ? ನೀನು ಬ್ರಹ್ಮವೆಂದು ಹೇಳುವ ಚಿಚ್ಛಕ್ತಿಗೆ ಸಂಕೋಚ ವಿಕಾಸಗಳನ್ನು ಮಾನಿಸುವುದಿಲ್ಲ. ನಾನು ಸಂಕೋಚ ವಿಕಾಸಗಳನ್ನು ಹೇಳುವೆನು. ಆದ್ದರಿಂದಲೇ ಈ ಜಗತ್ತೆಲ್ಲವೂ ಶಿವಮಯವಾಗಿರುವುದೆಂದು ಹೇಳುವೆನು. ನೀನು ಮಾತ್ರ ಚಿಚ್ಛಕ್ತಿಯೆಂಬ ಬ್ರಹ್ಮಕ್ಕೆ ಅತಿರಿಕ್ತವಾದ ಯಾವದೋ ಒಂದು ಅಧ್ಯಾಸ ಶಕ್ತಿಯನ್ನು (ಅನಿರ್ವಚನೀಯ ಅವಿದ್ಯೆಯನ್ನು) ಕಲ್ಪಿಸಿಕೊಂಡು ಅದರಿಂದ ಈ ಜಗತ್ತು ಕಲ್ಪಿತವಾಗಿರುವದೆಂದು ಹೇಳುವಿ? ಆದ್ದರಿಂದ ನಿನ್ನ ಮತದಲ್ಲಿ ಜಗತ್ತು ಮಿಥ್ಯೆಯೆನಿಸುವದು. ಹೀಗೆಹೇಳುವುದು ಅಯುಕ್ತವಾಗುವುದೆಂದು ಹಿಂದೆ ಹೇಳಿಯೇ ಇರುವೆನು. ಶಿವಾದ್ವೈತಿಯೇ? ಪರಶಿವಬ್ರಹ್ಮದಲ್ಲಿರುವ ಚಿಚ್ಛಕ್ತಿಯ ವಿಕಾಸ ಸಂಕೋಚಗಳನ್ನು ನಿಮ್ಮ ಆಚಾರ್ಯರಾದರೂ ಎಲ್ಲಿ ಹೇಳಿರುವರು. ನೀನೊಂದು ಪಾಶುಪತ ಮತದವರಂತೆ ಅವರ ಸಿದ್ಧಾಂತಕ್ಕನುಸಾರವಾಗಿ ನವೀನ ಮಾರ್ಗವನ್ನು ಹಿಡಿದಿರುವದು ವೀರಶೈವಾಚಾರ್ಯರಿಗೆ ಸಮ್ಮತವೆಂಬ ವಿಷಯದಲ್ಲಿ ಅವರ ಉಕ್ತಿಗಳೇನಾದರೂ ಇದ್ದರೆ ತೋರಿಸು. ಬ್ರಹ್ಮಾದ್ವೈತಿಯೇ? ಕೇಳು. ಶ್ರೀಮಜ್ಜಗದ್ಗುರು ವೀರಶೈವಮತ

ಸ್ಥಾಪಕರಾದ ಪಂಚಾಚಾರ್ಯರೊಳಗೆ ಒಬ್ಬರಾದ ಶ್ರೀ ರೇಣುಕ ಭಗವತ್ಪಾದರು ಶ್ಲೋ || ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾಸ್ಥಿತಃ | ಕುಟೀ ಭಾವಾದ್ಯಥಾ ಭಾತಿಪಟಸ್ವಸ್ಯಪ್ರಸಾರಣಾತ್ || ಎಂಬುವ ಶ್ಲೋಕದಿಂದ ಶಿವನು ತನ್ನಆತ್ಮರೂಪವಾದ (ನಿತ್ಯಶರೀರರೂಪವಾದ) ಚಿಚ್ಛಕ್ತಿಯ ವಿಕಾಸದಿಂದ ಜಗದ್ರೂಪನಾಗಿರುವನೆಂದೂ, ಸಂಕೋಚದಿಂದ ಆ ಜಗತ್ತನ್ನು ತನ್ನಲ್ಲಿ ಸಮರಸ ಮಾಡಿಕೊಂಡು ಶಾಂತನಾಗಿರಲು ಜಗತ್ತನ್ನು ತನ್ನಲ್ಲಿ ಸೂಕ್ಷ್ಮರೂಪದಿಂದ ಇರಿಸಿಕೊಳ್ಳುವನೆಂದೂ, ಅಂದರೆ ತನ್ನ ಚಿಚ್ಛಕ್ತಿಯ ವಿಕಾಸವೇ ಜಗದುತ್ಪತ್ತಿಯು. ಅದರ ಸಂಕೋಚವೇ ಜಗತ್ತಿನ ಪ್ರಳಯವು. ಹ್ಯಾಗೆಂದರೆ ಪಟವು ತನ್ನಲ್ಲಿರುವ ಶಕ್ತಿಯಿಂದ ಹರಡಿಕೊಂಡು ವಿಶಾಲವಾದ ಸ್ಥೂಲವಾದ ಮಂದಿರಾಕಾರವಾಗಿ ತೋರುವುದು. (ಡೇರೆಯಾಗಿ) ತೋರುವುದು. ಆ ಶಕ್ತಿಯು ಸಂಕೋಚವಾಗಲು ಅಂದರೆ (ಪಟವು ಮುದುಡಿಕೊಳ್ಳಲು) ಆ ಸ್ಥೂಲಾಕಾರವು ಕಾಣದಂತಾಗುವುದು. ಇದರಂತೆ ಜಗತ್ತಿನ ಉತ್ಪತ್ತಿಲಯಗಳೆಂದು ಹೇಳಿರುವರು. ‹‹ನಾಸತೋ ವಿದ್ಯತೇಭಾವೋ ನಾಭಾವೋ ವಿದ್ಯತೆಸತಃ›› ಎಂಬುವ ವಾಕ್ಯದಂತೆ ಜಗತ್ತು ಅಸತ್ಯವಲ್ಲವೆಂತಲೂ, (ಆರೋಪಿತವಲ್ಲವೆಂತಲೂ), ತತ್ವಜ್ಞಾನದಿಂದದರ ನಾಶವಾಗದೆ ಸೂಕ್ಷ್ಮರೂಪದಿಂದ ಶಿವನಲ್ಲಿ ಸಮರಸವಾಗುವುದೆಂತಲೂ, ಕಂಡುಬರುತ್ತದೆ. ಅಂತೂ ಈ ರೇಣುಕ ಭಗವತ್ಪಾದರಿಂದಲೂ ಕೂಡ ಚಿಚ್ಛಕ್ತಿವಿಶಿಷ್ಟವಾದದ್ದೇ ಪರಶಿವಬ್ರಹ್ಮವೆಂದು ಹೇಳಲ್ಪಟ್ಟಂತಾಯಿತು. ಇನ್ನು ಇವರಂತೆ ಶ್ರೀ ಕಲ್ಲಟಾಚಾರ್ಯರೂ ಕೂಡ ಹೇಳಿರುವರು. ಶ್ಲೋ || ಯಸ್ಯೋನ್ಮೇಷ ನಿಮೇಷಾಭ್ಯಾಂ ಜಗತಃ ಪ್ರಲಯೋದಯೌ | ತಂಶಕ್ತಿ ಚಕ್ರವಿಭವ ಪ್ರಭವಂ ಶಂಕರಂ ಸ್ತುಮಃ || ಎಂಬುವುದರಿಂದ ಚಿಚ್ಛಕ್ತಿವಿಶಿಷ್ಟವಾದದ್ದೇ ಶಂಕರಾಪರ ಪರ್ಯಾಯಬ್ರಹ್ಮವೆಂದು ಹೇಳಿರುವರು. ಮತ್ತು ಉತ್ಪಲಾಚಾರ್ಯರೂ ಕೂಡ ‹‹ಕಿಂತ್ವೀಶ ಶಕ್ತಿಪ್ರಸರವಿರಾಮೌ ಪ್ರಭವಾಪ್ಯಯೌ›› ಎಂದು ಸ್ಪಂದಪ್ರದೀಪಿಕೆಯಲ್ಲಿ ಹೇಳಿರುವರು. ಮತ್ತು ತತ್ವವಿಚಾರವೆಂಬ ಗ್ರಂಥದಲ್ಲಿಯೂ ಕೂಡ ಶ್ಲೋ|| ಶಕ್ತಿಪ್ರಸರಸಂಕೋಚನಿಬಿಡದ್ಧಾವುದಯವ್ಯಯೌ | ಯಸ್ಯಾತ್ಮಾಸಶಿವೋಜ್ಞೇಯಸ್ಸರ್ವಭಾವಪ್ರವರ್ತಕಃ || ಎಂಬದಾಗಿಯೂ, ಕಕ್ಷ್ಯಾಸ್ತೋತ್ರವೆಂಬ ಗ್ರಂಥದಲ್ಲಿಯೂ ಕೂಡ ಶ್ಲೋ || ತ್ವದಾಶಯೋನ್ಮೇಷನಿಮೇಷಮಾತ್ರಮಯೌ ಜಗತ್ಸರ್ಗಲಯಾವಿತೀದೃಕ್ | ಸ್ಫುಟೀಸ್ಫುಟಂತ್ವಸ್ಯ ಹಿಮಾವಭಾತಿ ವಿಚಿತ್ರನಿರ್ಮಾಣನಿದರ್ಶನೇನ ||

ಶ್ಲೋ || ಜ್ಞಾನಕ್ರಿಯಾದಿಗರ್ಭೇಚ್ಛಾ ಶಕ್ತಿರ್ಯಃ ಪ್ರಸರಾತ್ಮಕಃ | ಸಂಕಲ್ಪೋ ಕ್ತಸ್ಸಉನ್ಮೇಷಃ ಪ್ರೋಕ್ತಂಹ್ಯೇತತ್ಸ್ವತಂತ್ರಕೇ || ಯತ್ರಯತ್ರಭವೇದಿಚ್ಛಾಜ್ಞಾ ನಂ ತತ್ರಪ್ರವರ್ತತೇ | ಕ್ರಿಯಾಕರಣಸಂಯೋಗಾತ್ ಪದಾರ್ಥಸ್ಯೋ ದಯೋ ಭವೇತ್ || ಎಂಬದಾಗಿಯೂ ಪರಶಿವಬ್ರಹ್ಮವು ಸಹಜಶಕ್ತಿವಿಶಿಷ್ಟವಾದದ್ದೆಂದು ಹೇಳಲ್ಪಟ್ಟಿರುವುದು.

ಮತ್ತು ಶ್ಲೋ || ಅನಾದಿನಿಧನಾಚ್ಛಾಂತಾಚ್ಛಿವಾತ್ ಪರಮಕಾರಣಾ ತ್ | ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋಜ್ಞಾನಂ ತತಃಕ್ರಿಯಾ || ಎಂಬುವ ಶಿವಾಗಮ ವಾಕ್ಯದಿಂದಲೂ ಕೂಡ ಚಿಚ್ಛಕ್ತಿ ವಿಶಿಷ್ಟವಾದದ್ದೇ ಪರಶಿವಬ್ರಹ್ಮ ವೆಂದು ತಿಳಿದು ಬರುತ್ತದೆ. ಮತ್ತು ಮತಂಗ ಪಾರಮೇಶ್ವರದಲ್ಲಿಯೂ ಕೂಡ, ಶ್ಲೋ|| ಶಿವಾದ್ಯವನಿಪರ್ಯಂತೋ ಯೋಯಮಧ್ವಾತಿವಿಸ್ತರಃ | ಸಸಮಸ್ತಶ್ಚಿತಾ ಜ್ಞೇಯಸ್ತಯಾ ಸಂವೇದ್ಯತೆಯತಃ || ಎಂದು ಚಿಚ್ಛಕ್ತಿವಿಶಿಷ್ಟವಾದದ್ದೆ ಪರಶಿವ ಬ್ರಹ್ಮವೆಂದು ಹೇಳಲ್ಪಟ್ಟಿರುವುದು. ಹೇಗೆಂದರೆ ಶಿವತತ್ವ ಮೊದಲ್ಗೊಂಡು ಪೃಥಿ ವೀಪರ್ಯಂತಗಳಾದ ಮೂವತ್ತಾರು ತತ್ವಗಳನ್ನು ಪರಶಿವಬ್ರಹ್ಮವು ತನ್ನಲ್ಲಿರುವ ಸಹಜ ಸಿದ್ಧವಾದ ಚಿಚ್ಛಕ್ತಿಯಿಂದ ತಿಳಿಯುತ್ತಾನಾದ್ದರಿಂದ ಎಲ್ಲಾ ಪ್ರಪಂಚವೂ ಶಿವಮಯವಾಗಿರುವುದು ಎಂಬುವ ಅಭಿಪ್ರಾಯವುಳ್ಳ ಈ ಮತಂಗ ಪಾರಮೇ ಶ್ವರ ವಾಕ್ಯದಿಂದಲೂ ಕೂಡ ಚಿಚ್ಛಕ್ತಿವಿಶಿಷ್ಟವಾದದ್ದೇ ಪರಶಿವ ಬ್ರಹ್ಮವೆಂದು ಹೇಳಲ್ಪಟ್ಟಂತಾಯಿತು. ಶಿವಾದ್ವೈತಿಯೇ ನಮ್ಮ ಆಚಾರ್ಯರು ಸಚ್ಚಿದಾನಂದ ರೂಪವಾದದ್ದು ಬ್ರಹ್ಮವೆಂದು ಅಲ್ಲಲ್ಲಿ ಹೇಳಿರುವರು. ಚಿಚ್ಛಕ್ತಿಯೇ ಬ್ರಹ್ಮವೆಂ ದು ಎಲ್ಲಿಯೂ ಹೇಳಿದಂತೆ ಕಾಣಲಿಲ್ಲವು. ಆದ್ದರಿಂದ ನೀನು ಚಿಚ್ಛಕ್ತಿಯು ಬ್ರಹ್ಮವಲ್ಲವೆಂದು ಖಂಡಿಸುವುದು ವ್ಯರ್ಥವು. ಬ್ರಹ್ಮಾದ್ವೈತಿಯೇ ? ಅವರು ಯಾವ ಬ್ರಹ್ಮಕ್ಕೆ ಚಿತ್ ಎಂದು ಅನ್ನುವರೋ ಅದಕ್ಕೇನೇ ಅವರು ಚಿಚ್ಛಕ್ತಿ ಯನ್ನುವರೆಂದು ತಿಳಿಯುವೆನು. ಈ ವಿಷಯದಲ್ಲಿ ಹಿಂದೆ ಕೇನೋಪನಿಷತ್ತಿನ ಅವರ ಭಾಷ್ಯಪಂಗ್ತಿಯನ್ನೇ ತೋರಿಸಿರುವೆನು. ಮತ್ತು ಶಿವಾಧಿಕ್ಯ ರತ್ನಾವಳೀ ಕಾರರೂ ಕೂಡ ಶ್ಲೋ|| ಭಾಷ್ಯೇ ಶಂಕರನಿರ್ಮಿತೆ ನಿಗದಿತಾ ಬ್ರಹ್ಮೇತಿ ಚಿದ್ವ್ಯಾ ಪರಾ ಸಾಶಕ್ತಿರ್ಭವತಿ ಪ್ರಭೋರ್ಮುರರಿಪುರ್ಬ್ರಹ್ಮೇತಿ ಸಿರ್ಧಾರಿತಂ | ಶ್ರೀಭಾ ಷ್ಯೇಸಚಶಕ್ತಿರಾಗಜರಿಪೋಃ ಶ್ರೀಕಂಠಭಾಷ್ಯೇಪರ ಬ್ರಹ್ಮತ್ವಂ ಪರಶಕ್ತಿಮತ್ವಮು ದಿತಂಶ್ರೈಯ್ಯಂತ ಸೂತ್ರಾದಿಭಿಃ || ಅಂದರೆ ಶಂಕರಭಾಷ್ಯದಲ್ಲಿ ಬ್ರಹ್ಮವೆಂದು ಹೇಳಲ್ಪಟ್ಟಿರುವ ಚಿಚ್ಛಕ್ತಿಯೆಂಬುವದು ಪ್ರಭುಪದವಾಚ್ಯನಾದ ಪರಶಿವನಲ್ಲಿ ಅವಿ

ನಾಭಾವದಿಂದಿರುವ ಶಕ್ತಿಯೆನಿಸುವುದೆಂದೂ ಶ್ರೀ ಭಾಷ್ಯದಲ್ಲಿ ನಿರ್ಧರಿಸಲ್ಪಟ್ಟ ವಿಷ್ಣುರೂಪವಾದ ಬ್ರಹ್ಮವು ವಸ್ತುತಃ ಬ್ರಹ್ಮವಲ್ಲವು. ಆದರೆ ಕಾಮಧ್ವಂಸಿ ಯಾದ ಶಿವನ ಶಕ್ತ್ಯಂತರ್ಗತವಾಗುವುದೆಂದೂ, ಶ್ರೀಕಂಠಭಾಷ್ಯದಲ್ಲಿ ಶಕ್ತಿವಿಶಿ ಷ್ಟವಾದದ್ದು ಬ್ರಹ್ಮವೆಂದೂ ನಿರ್ಧರಿಸಲ್ಪಟ್ಟಿರುವುದು. ಈ ಶ್ಲೋಕದ ಕನ್ನಡ ಟೀಕಾಕಾರನು ಶ್ರೀಕಂಠಭಾಷ್ಯವೆಂಬುವದಕ್ಕೆ ನೀಲಕಂಠಭಾಷ್ಯವೆಂದು ಭ್ರಾಂ ತನಾಗಿ ಬರೆದಿರುವನು. ಏಕಂದರೆ ಬ್ರಹ್ಮಸೂತ್ರದ ನೀಲಕಂಠ ಭಾಷ್ಯ ದಲ್ಲಿ ಚಿಚ್ಛಕ್ತಿ ವಿಶಿಷ್ಟ ಶಿವಲಿಂಗವು ಬ್ರಹ್ಮವೆಂದು ನಿರ್ಧರಿಸಲ್ಪಟ್ಟಿರುವುದು. ಬ್ರಹ್ಮಾದ್ವೈತಿಯೇ ನಿಮ್ಮ ಭಾಷ್ಯಕಾರರೂ ನೀನೂ ಹೇಳುವ ಬ್ರಹ್ಮವು ಪರ ಶಿವನ ಪಟ್ಟಮಹಿಷೀರೂಪಳಾದ ಚಿಚ್ಛಕ್ತಿಯೇ ಆಗುವದೆಂದು ಈ ಶಿವಾಧಿಕ್ಯ ರತ್ನಾವಳೀಕಾರರೂ ಕೂಡ ಸ್ಪಷ್ಟವಾಗಿ ಹೇಳಿದಂತಾಯಿತಲ್ಲವೆ. ಮತ್ತು ಈ ಶಿವಾಧಿಕ್ಯ ರತ್ನಾವಳಿಕಾರರು ತಮ್ಮ ಗ್ರಂಥಾರಂಭದಲ್ಲಿ ಶ್ಲೋ॥ ಪ್ರಾಗ್ಭಿರ್ವಾ ಗ್ಭಿಸ್ಸಂಸ್ತುತಸ್ಸರ್ವಕರ್ತಾ ಶಕ್ತ್ಯಾ ಯಶ್ಶಶ್ವದ್ವಿಶ್ವ ನಿರ್ವಾಣಕರ್ಮಾ | ಪೂಜ್ಯಃ ಪ್ರಾಜ್ಯಸ್ಸ್ವರ್ಗಿಭಿರ್ಭರ್ಗನಾಮಾ ಜೈತ್ರಸ್ಯಾನ್ನಸ್ಸ ಶ್ರಿಯೈ ಶ್ರೀಗಿರೀಶಃ॥ ಶಕ್ತಿವಿಶಿಷ್ಟವಾದದ್ದೇ ಬ್ರಹ್ಮವೆಂದೂ, ಅದು ನಮಗೆ ಶ್ರೇಯಸ್ಸನ್ನುಂಟುಮಾಡ ಲೆಂದೂ ಮಂಗಲವನ್ನು ಮಾಡಿರುವರು. ಇದಲ್ಲದೆ ಗ್ರಂಥಾಂತರದಲ್ಲಿ ಶ್ಲೋ॥ ಸದಾಕಾರಾ ಪರಾನಂದಾ ದುಃಖವಿಚ್ಛೇದಕಾರಿಣೀ | ಸಾಶಿವಾಪರಮಾದೇವೀ ಶಿವಾಭಿನ್ನಾ ಶಿವಂಕರೀ ॥ ಎಂದು ಪರಶಿವ ಬ್ರಹ್ಮದಲ್ಲಿ ಸ್ವಾಭಾವಿಕವಾದ ಚಿಚ್ಛ ಕ್ತಿಯು ಹೇಳಲ್ಪಟ್ಟಿರುವುದರಿಂದಲೂ, ಚಿಚ್ಛಕ್ತಿವಿಶಿಷ್ಟವಾದದ್ದೇ ಪರಶಿವಬ್ರಹ್ಮ ವೆಂದೂ ಲಿಂಗವೆಂದೂ ವೀರಶೈವ ಸಿದ್ಧಾಂತವು. ಆದ್ದರಿಂದಲೇ ಶ್ಲೋ॥ ಪೀಠಿ ಕಾಪರಮಾಶಕ್ತಿರ್ಲಿಂಗಂ ಸಾಕ್ಷಾತ್ ಪರಶ್ಶಿವಃ | ಶಿವಶಕ್ತಿಸಮಾಯೋಗಂ ವಿಶ್ವಂ ಲಿಂಗಂತದುಚ್ಯತೆ ॥ ಬ್ರಹ್ಮಾದಯಸ್ಸುರಾಸ್ಸರ್ವೆ ಮುನಯಶ್ಶೌನಕಾದ ಯಃ | ಶಿವಲಿಂಗಾರ್ಚನಾದೇವ ಸ್ವಂಸ್ವಂಪದಮವಾಪ್ನುಯುಃ ॥ ವಿಶ್ವಾಧಿಪ ತ್ವಮೀಶಸ್ಯ ಲಿಂಗಮೂರ್ತೇಃ ಸ್ವಭಾವಜಂ | ಅನನ್ಯದೇವಸಾಧ್ಯಶ್ಯಂ ಶ್ರುತಿ ರಾಹಸನಾತನೀ ॥ ಅಂದರೆ ಪೀಠವೇ ಪರಮಶಕ್ತಿಯೆಂತಲೂ, ಗೋಲಕವೇ ಸಾಕ್ಷಾತ್ ಶಿವನೆಂತಲೂ, ಶಿವಶಕ್ತಿವೈಶಿಷ್ಟ್ಯವೇ ಲಿಂಗವೆಂತಲೂ, ಈ ಲಿಂಗವೇ ಜಗದ್ರೂಪವಾಗಿರುವದೆಂತಲೂ, ಈ ಶಿವಲಿಂಗಾರ್ಚನೆಯಿಂದಲೇ ಬ್ರಹ್ಮವಿ ಷ್ಣ್ವಾದಿ ಸಮಸ್ತ ದೇವತೆಗಳೂ ಶೌನಕಾದಿ ಮುನಿಗಳೂ ತಮ್ಮ ತಮ್ಮ ಪದ ವಿಯನ್ನು ಹೊಂದಿದರೆಂತಲೂ, ಈ ಲಿಂಗಮೂರ್ತಿಯಾದ ಪರಶಿವನಿಗೆ ವಿಶ್ವಾ

ಧಿಪತಿತ್ವವು ಸ್ವಾಭಾವಿಕವೆಂದೂ (ಆರೋಪಿತವಲ್ಲವೆಂದೂ) ಶ್ರುತಿಯಿಂದ ಈ ಲಿಂಗಮೂರ್ತಿಗೆ ಅನ್ಯದೇವಸಾದೃಶ್ಯವು ನಿಷೇಧಿಸಲ್ಪಡುವುದೆಂದೂ ಶ್ರೀ ರೇಣುಕ ಭಗವತ್ಪಾದರು ಅಗಸ್ತ್ಯಮಹರ್ಷಿಗಳಿಗೆ ಬೋಧಿಸಿರುವರು. ಬ್ರಹ್ಮಾದ್ವೈತಿಯೆ ನೋಡು. ಲಿಂಗಮೂರ್ತಿಗೆ ವಿಶ್ವಾತ್ಮಕತ್ವ ವಿಶ್ವಾಧಿಪತಿತ್ವಗಳು ಈ ಭಗವತ್ಪಾದರಿಂದ ಹೇಳಲ್ಪಟ್ಟವಷ್ಟೆ. ಇದರಿಂದ ಪರಬ್ರಹ್ಮರೂಪವಾದ ಈ ಲಿಂಗಮೂರ್ತಿಯು ಜಗದುಪಾದಾನಕಾರಣವೆಂದೂ, ನಿಮಿತ್ತಕಾರಣವೆಂದೂ ಸೂಚಿತವಾಯಿತಲ್ಲವೇ. ಮತ್ತು ನಿನ್ನ ಮತದಲ್ಲಿ ಜಗತ್ಕರ್ತೃತ್ವ ಸರ್ವಜ್ಞತ್ವಾದಿ ಧರ್ಮಗಳು ಬ್ರಹ್ಮದಲ್ಲಿ ಅಧ್ಯಾಸಕಲ್ಪಿತಗಳಾಗಿರುವುದರಿಂದ ಅಸತ್ಯಗಳೆಂದು ಹೇಳಲ್ಪಟ್ಟಿರುವುವು. ಇದರಂತೆ ವೀರಶೈವಮತಾಚಾರ್ಯರಾದ ಈ ಭಗವತ್ಪಾದರ ತಾತ್ಪರ್ಯವಿದ್ದರೆ ‹‹ವಿಶ್ವಾಧಿಪತ್ಯಮಾಶಸ್ಯ ಲಿಂಗಮೂರ್ತೇಸ್ಸ್ವಭಾವಜಂ›› ಎಂದು ಹೇಳುತ್ತಿದ್ದಿಲ್ಲ. ಆದ್ದರಿಂದ ಇವರು ಕೊಟ್ಟಿರುವ ಕೆಲವು (ಬಿಂಬತ್ವಂ ಪ್ರತಿಬಿಂಬತ್ವಂ ಯಥಾಪೂಷಣಿಕಲ್ಪಿತಂ) ಎಂಬ ಸೂರ್ಯಾದಿ ದೃಷ್ಟಾಂತಗಳಿಂದ ವಿವರ್ತವಾದವು ಇವರಿಗೆ ಸಮ್ಮತವಾಗಿರುವದೆಂದು ತಿಳಿಯಲಾಗುವುದಿಲ್ಲ. ಇವರು ಹೇಳಿರುವ ಮೇಲಣ ಶ್ಲೋಕಗಳಿಂದ ಚಿಚ್ಛಕ್ತಿ ವಿಶಿಷ್ಟವಾದದ್ದೇ ಪರಶಿವ ಬ್ರಹ್ಮವೆಂದು ತಿಳಿಯಬೇಕಲ್ಲದೆ ಚಿಚ್ಛಕ್ತಿಯೇ ಬ್ರಹ್ಮವೆಂದು ತಿಳಿಯಕೂಡದು. ಮತ್ತು ಈ ರೇಣುಕ ಭಗವತ್ಪಾದರು ಶ್ಲೋ॥ ಕೇವಲಂ ಸಚ್ಚಿದಾನಂದ ಪ್ರಕಾಶಾದ್ವಯ ಲಕ್ಷಣಂ। ಶೂನ್ಯಕಲ್ಪಂ ಪರಾಕಾಶಂ ಪರಬ್ರಹ್ಮ ಪ್ರಕಾಶತೆ॥ ಎಂಬದಾಗಿ ಕಡೆಯ ಜ್ಞಾನಶೂನ್ಯಸ್ಥಲದಲ್ಲಿ ಪರಾಕಾಶವುಳ್ಳ ಪರಬ್ರಹ್ಮವು ಪ್ರಕಾಶಿಸುತ್ತದೆಂದು ಹೇಳಿರುವುದರಿಂದ ಪರಾಕಾಶಪದವಾಚ್ಯ ಚಿಚ್ಛಕ್ತಿ ವಿಶಿಷ್ಟವಾದದ್ದೇ ಪರಬ್ರಹ್ಮವೆಂದು ನಿರ್ಧರಿಸಲ್ಪಡುವುದು. ಆದ್ದರಿಂದ ಶಕ್ತಿವಿಶಿಷ್ಟ ಶಿವಾದ್ವೈತಿಗಳಾದ ವೀರಶೈವರು ಆ ವಿಶಿಷ್ಟ ಲಿಂಗಮೂರ್ತಿಯ ಪೂಜಾದಿಗಳನ್ನೇ ಮಾಡುವರಲ್ಲದೆ ನಿರ್ಗುಣ ನಿರ್ವಿಶೇಷವಾದದ್ದನ್ನು ಪೂಜಿಸುವದಿಲ್ಲ. ವಸ್ತುತಃ ಅದು ವೇದಾಂತಾದಿಗಳಲ್ಲಿ ಹೇಳಲ್ಪಟ್ಟಿರುವದಿಲ್ಲ. ನಿರ್ಗುಣ ನಿಷ್ಕಲ ಮುಂತಾದ ಶಬ್ದಗಳಿಂದ ಸೃಷ್ಟ್ಯಾದಿಯಲ್ಲಿ ತನ್ನ ಶಕ್ತಿಯ ಆವಿರ್ಭಾವದಿಂದ ಇರುವ ಶಿವನೆಂದು ತಿಳಿಯಬೇಕು. ಈ ವಿಷಯದಲ್ಲಿ ಶ್ಲೋ॥ ಶಕ್ತಿಸಂಕೋಚಭಾವೇನ ಸೃಷ್ಟೇಃ ಪೂರ್ವಂ ಮಹೇಶ್ವರಃ। ನಿರಂಶೋ ನಿರ್ಗುಣಶ್ಚೇತಿ ವೇದಾಂತೇಷು ಪ್ರಗೀಯತೆ॥ ಶಕ್ತೇರ್ವಿಕಾಸಭಾವೇನ ಹ್ಯನಂತಗುಣವಾನಿತಿ। ಪ್ರೋಚ್ಯತೆ ಭಗವಾನ್ಸ್ಪ್ರದೃಃ ಪಶುಪಾಶಪ್ರಮೋಚಕಃ॥ ಮೂರ್ತಾಮೂರ್ತಸ್ವರೂಪೇಣ ಯಥಾವಾ

ಯುರ್ವಿರಾಜತೆ | ಸದಾಶಿವೋ ತಥಾಭಾತಿ ಸರ್ವಾನುಗ್ರಹಕಾರಕಃ || ಮೂರ್ತಾಮೂರ್ತ ಜಗದ್ರೂಪಾ ಯಥಾಮಾಯಾ ತಥಾಶಿವಃ | ಮೂರ್ತಾಮೂರ್ತ ಸ್ವರೂಪಃಸ್ಯಾದಿತಿ ವೇದಾಂತಡಿಂಡಿಮಃ || ಇತ್ಯಾದಿ ಶಿವಾಗಮ ವಾಕ್ಯಗಳುಂಟು. ಈ ವಾಕ್ಯಗಳಿಂದಲಾದರೂ ಪರಶಿವ ಬ್ರಹ್ಮವು ಚಿಚ್ಛಕ್ತಿ ವಿಶಿಷ್ಟವಾದದ್ದೆಂದು ನಿಶ್ಚಯಿಸಲ್ಪಡುವದು.

ಇನ್ನು ಬ್ರಹ್ಮವು ಅಹಂ (ನಾನು) ಎಂಬ ಶಬ್ದದ ಅರ್ಥವಾಗುವುದೋ ಇಲ್ಲವೋ ಎಂಬುವ ೧೪ ನೇ ವಿಚಾರವನ್ನು ಪ್ರಾರಂಭಿಸುವೆನು.

ಶಿವಾದ್ವೈತಿಯೆ? ಅಹಂಸ್ಥೂಲಃ ಕೃಶಃ ಗಚ್ಛಾಮಿ (ನಾನು ಸ್ಥೂಲನು, ನಾನು ಕೃಶನು, ನಾನು ಹೋಗುತ್ತೇನೆ.) ಎಂಬುವ ವ್ಯವಹಾರವಾಗುವದರಿಂದ ಯಾವದರಲ್ಲಿ ಸ್ಥೂಲಭಾವ, ಕ್ಷೀಣಭಾವ ಗಮನಾಗಮನಗಳು ಇರುವವೊ? ಅದುವೇ ಅಹಮರ್ಥವಲ್ಲವೆ? ಅಹಮರ್ಥವು ಬ್ರಹ್ಮವೆಂದರೆ ಅದರಲ್ಲಿ ಸ್ಥೂಲತ್ವಾದಿ ಧರ್ಮಗಳನ್ನು ಹೇಳಬೇಕಾಗುವದು ಹೇಳಿದರೆ, ಬ್ರಹ್ಮವು ಅನಿತ್ಯವೆನಿಸುವುದು. ಚಾರ್ವಾಕಾದಿ ಮತದವರಂತೆ ದೇಹಾತ್ಮವಾದಿಗಳೆನಿಸಬೇಕಾಗುವದು. ಶ್ಲೋ|| ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂಕುತಃ | ತಸ್ಮಾತ್ಸರ್ವಪ್ರಯತ್ನೇನ ಋಣಂಕೃತ್ವಾ ಘೃತಂ ಪಿಬೇತ್ || ಎಂಬವದನ್ನು ಮಾನಿಸಿ ಪಾರಲೌಕಿಕಪ್ರಯತ್ನವನ್ನು ಮಾಡದೇ ಇರಬೇಕು. ನಿತ್ಯಾನಂದದ ಅನುಭವ ರೂಪವಾದ ಮೋಕ್ಷವು ಇಲ್ಲದೆ ಕ್ಷಣಿಕಾನಂದಾನುಭವವೇ ಮೋಕ್ಷವೆಂದು ಹೇಳಬೇಕಾಗುವದಾದ್ದರಿಂದ ಅಹಮರ್ಥವು ಬ್ರಹ್ಮವಲ್ಲಾ. ಕಿಂತುದೇಹವೇ ಅಹಮರ್ಥವೆಂದು ಹೇಳಬೇಕು. ಬ್ರಹ್ಮಾದ್ವೈತಿಯೇ ? ಕೇಳು ಅಹಮರ್ಥವು ದೇಹವಲ್ಲ. ಕಿಂತು ದೇಹಾತಿರಿಕ್ತವಾದ ಆತ್ಮವಸ್ತುವೇ ಅಹಮರ್ಥವೆಂದು ಹೇಳಬೇಕು. ದೇಹವೇ ಅಹಮರ್ಥವಾದರೆ „ಯೋಹಂಬಾಲ್ಯೇಪಿತರಾವನ್ವಭೂವಂ ಸಏವಸ್ಥಾವಿರೆ ಪ್ರಣಪ್ತ್ರ್ಯಂನನುಭವಾಮಿ (ಯಾವ ನಾನು ಬಾಲ್ಯದಲ್ಲಿ ಮಾತಾಪಿತೃಗಳನ್ನು ನೋಡಿದ್ದೆನೊ ಆ ನಾನೇ ಮುಪ್ಪಿನ ಕಾಲದಲ್ಲಿ ಮರಿಮಕ್ಕಳನ್ನು ನೋಡುತ್ತಿರುವೆನು.) ಎಂಬುವ ಪ್ರತ್ಯಭಿಜ್ಞೆಯಾಗಲಾರದು. ಆದ್ದರಿಂದ ದೇಹವು ಅಹಮರ್ಥವಲ್ಲ. ಬಾಲ್ಯಾದಿ ಶರೀರಗಳು ಭಿನ್ನಭಿನ್ನಗಳಾಗಿರುವುವಷ್ಟೆ? ನಾನು ಎಂಬ ಪದಾರ್ಥ ಶರೀರವೇ ಆಗಿದ್ದರೆ ತನ್ನ ಬಾಲ್ಯದ ಶರೀರವೇ ವಾರ್ಧಕ್ಯದವರಿವಿಗೂ ಇರಬೇಕು. ಅದು ನಷ್ಟವಾಗಿಹೋಗಿದೆ ಅಂದಮೇಲೆ ವಾರ್ಧಕ್ಯದಲ್ಲಿ ನಾನು ಮರಿಮಕ್ಕಳನ್ನು ನೋಡುವೆನೆಂದು ವ್ಯವಹಾರವಾಗುವದರಿಂದ ಬಾಲ್ಯದಲ್ಲಿ ನಾನು

ಎಂಬುವ ಶಬ್ದಾರ್ಥವೇ ವಾರ್ಧಕ್ಯದಲ್ಲಿ ನಾನು ಎಂಬುವ ಶಬ್ದಾರ್ಥವು. ಆದ್ದರಿಂದ ಅಹಮರ್ಥವು ದೇಹವಲ್ಲ. ಬಾಲ್ಯ ಶರೀರ ಯೌವನ ಶರೀರಾದಿಗಳು ನಷ್ಟಗಳಾದರೂ ನಾನು ಎಂಬುವದು ನಷ್ಟವಾಗುವದಿಲ್ಲವು. ನಾನು ಎಂಬ ಪದಾರ್ಥವೇ ಅಹಮರ್ಥವು. ಪುಷ್ಪಮಾಲಿಕೆಯೊಳಗಿನ ಒಂದೊಂದು ಪುಷ್ಪಗಳು ನಷ್ಟಗಳಾದರೂ ಪುಷ್ಪಗಳಲ್ಲಿ ಅನುಸ್ಯೂತವಾದ ಸೂತ್ರವು ನಷ್ಟವಾಗುವದಿಲ್ಲ. ಇದರಂತೆ ಅನೇಕ ಶರೀರಗಳು ಕಳೆದುಹೋದರೂ ಆತ್ಮನು ಅವಶಿಷ್ಟನಾಗಿರುವನು. ಇವನೇ ಅಹಮರ್ಥವಾಗುವನು. ಸ್ವಪ್ನದಲ್ಲಿ ಆಯಾಯ ದೇವಾದಿ ಶರೀರಗಳನ್ನು ಧರಿಸಿ ಆ ಶರೀರಕ್ಕುಚಿತಗಳಾದ ಭೋಗಗಳನ್ನುಂಡು ಜಾಗ್ರದಲ್ಲಿ ನಾನು ದೇವನಲ್ಲ. ಮನುಷ್ಯನು ಎಂದೆನ್ನುವನು. ಸ್ವಪ್ನದಲ್ಲಿದ್ದ ಶರೀರವು ಜಾಗ್ರದಲ್ಲಿಲ್ಲ. ಸುಷುಪ್ತಿಯಲ್ಲಿದ್ದ ಶರೀರವು ಬೇರೆಕಾಲಗಳಲ್ಲಿಲ್ಲ. ಈ ಮೂರು ಅವಸ್ಥೆಗಳಲ್ಲಿಯೂ ನಾನು ಎಂಬುವದು ಇದ್ದೇ ಇರುವುದು. ಸುಷುಪ್ತಿಯಿಂದ ಜಾಗ್ರತನಾಗಿ ನಾನೊಂದೂ ತಿಳಿಯದೇ ಸುಖವಾಗಿ ಮಲಗಿದ್ದೆನು ಎಂದೆನ್ನುವದರಿಂದ ಸುಷುಪ್ತಿಯಲ್ಲಿ ನಾನು ಎಂಬುವದಿತ್ತು ಎಂದು ಗೊತ್ತಾಗುತ್ತದೆ.

ಮತ್ತು ಯೋಗಿಯು ಅನೇಕ ವ್ಯಾಘ್ರಾದಿ ಶರೀರಗಳಲ್ಲಿ ಪ್ರವೇಶಿಸಿರುವಾಗ ತನ್ನನ್ನು ಎಲ್ಲಾ ಶರೀರಗಳಲ್ಲಿಯೂ ಅಭಿನ್ನನನ್ನಾಗಿ ತಿಳಿಯುವನು. ಅಂದರೆ ಆ ಶರೀರದಲ್ಲಿ ನಾನೇ ಇದ್ದೆನು. ಈ ಶರೀರದಲ್ಲಿ ನಾನೇ ಇರುವೆನು. ಎಂದು ಅನ್ನುವನು. ಆದ್ದರಿಂದ ಅಹಂಕಾರಕ್ಕೆ ವಿಷಯವು ಶರೀರವಲ್ಲ. ಶಿವಾದ್ವೈತಿಯೆ? ದೇಹವು ಅಹಮರ್ಥವಲ್ಲವೆಂಬುವದು ತಿಳಿಯಿತು ಆದರೆ ನಾನು ನೋಡುವೆನು ನಾನು ಮುಟ್ಟುವೆನು ನಾನು ಕೇಳುವೆನು ಎಂದು ವ್ಯವಹಾರವಾಗುವದರಿಂದ ಚಕ್ಷುರಾದೀಂದ್ರಿಯಗಳೇ ಅಹಮರ್ಥವು (ಆತ್ಮನು, ಎಂದು ಹೇಳಬೇಕು ನೋಡತಕ್ಕದ್ದು ಚಕ್ಷುರಿಂದ್ರಿಯವು ಮುಟ್ಟತಕ್ಕದ್ದು ತ್ವಗಿಂದ್ರಿಯವು. ಆದ್ದರಿಂದ ಅಹಮರ್ಥವು (ನಾನು ಎಂಬುವ ಶಬ್ದಾರ್ಥವು) ಚಕ್ಷುರಾದೀಂದ್ರಿಯಗಳೆಂದು ಹೇಳಬೇಕಲ್ಲದೆ ಅವುಗಳಿಗೆ ಭಿನ್ನವಾದ ಆತ್ಮನು ಅಹಮರ್ಥವಲ್ಲ. ಬ್ರಹ್ಮಾದ್ವೈತಿಯೇ ? ಕೇಳು, ಯೋಹಮದ್ರಾಕ್ಷಂ ಸಏವಾಹಂಸ್ಪೃಶಾಮಿ, ( ಯಾವ ನಾನು ನೋಡಿದೆನೊ ಆ ನಾನೇ ಮುಟ್ಟುತೇನೆ.) ಎಂಬದಾಗಿ ಪ್ರತ್ಯಭಿಜ್ಞೆಯುಂಟಾಗುವದರಿಂದ ಇಂದ್ರಿಯಗಳು ಆತ್ಮಪದಾರ್ಥವಲ್ಲ ನಾನು ನೋಡುತ್ತೇನೆ. ಎಂಬುವ ಪ್ರತೀತಿಯಿಂದ ಚಕ್ಷುರಿಂದ್ರಿಯವೇ ಅಹಮರ್ಥವಾಗುವ ಪಕ್ಷದಲ್ಲಿ ಆ ಪ್ರತ್ಯಭಿಜ್ಞೆಗೆ ಅನುಪಪತ್ತಿ ಬರುವುದು. ಯಾವ ಚಕ್ಷುರಿಂದ್ರಿಯವು ನೋಡಿತೊ ಅದೇ ಇಂದ್ರಿಯವು ಮುಟ

ಲಾಂದದಷ್ಟೇ? ಆದ್ದರಿಂದ ಅಹಂಕಾರಕ್ಕೆ ವಿಷಯವು ಇಂದ್ರಿಯವಲ್ಲ. ಕಿಂತು ಇಂದ್ರಿಯಾತಿರಿಕ್ತವಾದ ಆತ್ಮವಸ್ತುವೇ ವಿಷಯವು. ಶಿವಾದ್ವೈತಿಯೆ? ಅಹಂಕಾರವೆಂದರೆ ನಾನು ಎಂಬುವ ಅನುಭವವು ಇದರಲ್ಲಿ ಆತ್ಮತತ್ವವು ಪ್ರಕಾಶಿಸುವದಿಲ್ಲ. ಆತ್ಮತತ್ವವೆಂದರೆ ನಿರುಪಾಧಿಕವೂ, ಅನಂತಾನಂದ, ಸಚ್ಚಿತ್ಸ್ವರೂಪವೂ, ಉದಾಸೀನವೂ, ಅದ್ವಿತೀಯವೂ, ಪರಿಪೂರ್ಣವೂ, ಆಗಿರುವುದೆಂದು ಶ್ರುತಿ ಸ್ಮೃತಿ ಪುರಾಣಾದಿಗಳಲ್ಲಿ ಹೇಳಲ್ಪಡುವುದು. ಅಹಂಕಾರವಾದರೊ ಪ್ರಾದೇಶಿಕವಾದ ನಾನಾಶೋಕಾದಿಗಳಿಂದ ಕೂಡಿದ ಸಂಸಾರಿಯಾದ ಆತ್ಮನನ್ನು ಪ್ರಕಾಶಗೊಳಿಸುತ್ತದೆ. ಆದ್ದರಿಂದ ಶ್ರುತ್ಯಾದಿ ಪ್ರತಿಪಾದಿತವಾದಆತ್ಮತತ್ವವನ್ನು ಪ್ರಕಾಶಗೊಳಿಸುವದಿಲಾದ್ದರಿಂದ ಅಹಂಕಾರಕ್ಕೆ ವಿಷಯವು ಆತ್ಮತತ್ವವಲ್ಲ ಕಿಂತು ಚಿದಾಭಾಸನೆಂದು ಹೇಳಬೇಕು. ಬ್ರಹ್ಮಾದ್ವೈತಿಯೇ ? ಕೇಳು ಚಿದಾಭಾಸನು (ಚಿದ್ ಬ್ರಹ್ಮದ ಪ್ರತಿಬಿಂಬವು) ಜೀವಾತ್ಮನಲ್ಲವೆಂದು ಹಿಂದೆ ಪ್ರತಿಬಿಂಬವಾದ ವಿಚಾರದಲ್ಲಿ ಹೇಳಿದ್ದೇನೆ. ಆದ್ದರಿಂದ ಅಹಂಕಾರಕ್ಕೆ ವಿಷಯವು ಆತ್ಮನೆಂದು ಹೇಳು, ಶಿವಾದ್ವೈತಿಯೆ ? ಆಗ್ರಹಪಡಬೇಡ ಅಹಂಕಾರಕ್ಕೆ ಆತ್ಮತತ್ವವು (ಬ್ರಹ್ಮವು) ವಿಷಯವಾಗುವಪಕ್ಷದಲ್ಲಿ ಅದಕ್ಕೆ ಪ್ರಾದೇಶಿಕತ್ವವು ಬರುವುದು. ಪ್ರಾದೇಶಿಕತ್ವವನ್ನು ಆತ್ಮತತ್ವಕ್ಕೆ ಸ್ವೀಕರಿಸುವ ಪಕ್ಷದಲ್ಲಿ ಶ್ರುತ್ಯಾದಿಗಳಿಗೆ ವಿರುದ್ಧವಾಗುವುದು ಆದುದರಿಂದ ಆತ್ಮತತ್ವವು ಅಹಂಕಾರಕ್ಕೆ ವಿಷಯವಲ್ಲ. ಬ್ರಹ್ಮಾದ್ವೈತಿಯೆ ಕೇಳು ನನ್ನ ಮತದಲ್ಲಿ ಅಹಂಕಾರವು ಎರಡು ಪ್ರಕಾರವಾಗಿರುವುದು. ಪರಾಹಂಕಾರವೆಂತಲೂ ಅಪರಾಹಂಕಾರವೆಂತಲೂ, ಪರಾಹಂಕಾರಕ್ಕೆ ಚಿಚ್ಛಕ್ತಿವಿಶಿಷ್ಟ ಪರಪ್ರಮಾತೃವಾದ ಪರಶಿವಬ್ರಹ್ಮ ವಿಷಯವು ಅಪರಾಹಂಕಾರಕ್ಕೆ ಚಿತ್ತಶಕ್ತಿವಿಶಿಷ್ಟ ಕೃತ್ರಿಮಪ್ರಮಾತೃವಾದ ಜೀವನು ವಿಷಯವು. ಈ ಆತ್ಮರು ಶ್ರುತ್ಯಾದಿಗಳಿಂದ ಹೇಳಲ್ಪಟ್ಟಿರುವರು. ಆದ್ದರಿಂದ ಒಂದೇ ಒಂದು ಆತ್ಮತತ್ವವು ಶ್ರುತ್ಯಾದಿಗಳಿಂದ ಹೇಳಲ್ಪಟ್ಟಿರುವದೆಂಬ ನಿನ್ನ ಮತವು ಸಮಂಜಸವಲ್ಲ. ಇದಲ್ಲದೆ ಮೋಕ್ಷದಶೆಯಲ್ಲಿ ಅಭೇದವೂ ಬದ್ಧದಶೆಯಲ್ಲಿ ಭೇದವೂ ಹೇಳಲ್ಪಟ್ಟಿರುವುದು. ಈ ವಿಷಯವು ಹಿಂದಿನ ವಾದದಲ್ಲಿ ನಿರ್ಣಯಿಸಲ್ಪಟ್ಟಿರುವುದು. ಆದರೆ ಯಾವ ಅಹಂಕಾರಕ್ಕೂ ಪರಶಿವಬ್ರಹ್ಮತತ್ವವು ವಿಷಯವಾಗುವದಿಲ್ಲವೆಂಬ ನಿನ್ನ ಪಕ್ಷವನ್ನು ವಿಚಾರಿಸಬೇಕಾಗಿದೆ. ನೋಡು ಅಜ್ಞಾನದಶೆಯಲ್ಲಿ ಆ ಪರಶಿವಬ್ರಹ್ಮವು ಅಹಂಕಾರಕ್ಕೆ ವಿಷಯವಾಗದಿದ್ದರೂ ಗುರುಮುಖದಿಂದ ಶ್ರವಣ ಮನನ ನಿಧಿಧ್ಯಾಸಗಳ ಆಚರಣೆಯ ಅನಂತರದಲ್ಲಿ "ಅಹಂಬ್ರಹ್ಮಾಸ್ಮಿ" ಎಂಬುವ ಅನುಭವ ವಾಕ್ಯಜನ್ಯವಾದ ಅಹಂಕಾರಕ್ಕೆ

ಆ ಪರಮಾತ್ಮ ತತ್ವವು ವಿಷಯವಾಗುತ್ತದೆಂದು ಹೇಳಲೇಬೇಕು. ಇಲ್ಲದಿದ್ದರೆ ‹‹ಚಿನ್ಮಾತ್ರೋಽಹಂ ಸದಾಶಿವಃ›› ‹‹ಅಹಂ ಬ್ರಹ್ಮಾಸ್ಮಿ›› ಇತ್ಯಾದಿ ವಾಕ್ಯಗಳು ವ್ಯರ್ಥಗಳಾಗಬೇಕು. ಇದಲ್ಲದೆ ಈ ವಾಕ್ಯಗಳು ಅಸತ್ಯಗಳಾಗಬೇಕು. ಇವು ಅಸತ್ಯಗಳಾದರೆ ಇವುಗಳಿಂದುಂಟಾಗುವ ತತ್ವಜ್ಞಾನವು ಅಸತ್ಯವಾಗಬೇಕು. ಸಾಕ್ಷಾತ್ಕಾರರೂಪವಾದ ತತ್ವಜ್ಞಾನವು ಅಸತ್ಯವೆಂದು ನೀನು ಹೇಳುವದಿಲ್ಲ. ಅದು ಸತ್ಯವೆಂದು ಹೇಳಿದರೆ ‹‹ನಾಸತೋಽವಿದ್ಯತೇಭಾವೋನಾಭಾವೋ ವಿದ್ಯತೇ ಸತಃ›› ಎಂಬುವ ವಾಕ್ಯಕ್ಕೆ ವಿರುದ್ಧವಾಗುವದು. ಶಿವಾದ್ವೈತಿಯೆ? ಕೇಳು ಭಾಮತಿಕಾರರು ಅತಾತ್ವಿಕ ಪ್ರಮಾಣದಿಂದ ತತ್ವಜ್ಞಾನವನ್ನು ಸ್ವೀಕರಿಸಿರುವ್ರರು. ನೋಡು ಅವರು ಕೊಟ್ಟಿರುವ ದೃಷ್ಟಾಂತವನ್ನು, ತಥಾಜ ವರ್ಣೆ ದೀರ್ಘತ್ವ ಹ್ರಸ್ವತ್ವಾದಯೋಽನ್ಯಧರ್ಮಾ ಅಪಿ ಸಮಾರೋಪಿತಾಸ್ತತ್ವ ಪ್ರತಿಪತ್ತಿಹೇತವಃ | ನಹಿ ಲೌಕಿಕಾಃ ನಾಗ ಇತಿವಾ ನಗತೌ ಇತಿವಾ ಪದಾತ್ಕುಂಜರಂವಾತರುಂವಾ ಪ್ರತಿಪದ್ಯಮಾನಾಃ ಭವಂತಿ ಭ್ರಾಂತಾಃ || ವರ್ಣದಲ್ಲಿ ಅನ್ಯಧರ್ಮಗಳಾದ ದೀರ್ಘತ್ವ ಹ್ರಸ್ವತ್ವಾದಿಗಳು ಆರೋಪಿಸಲ್ಪಟ್ಟವುಗಳಾಗಿದ್ದರೂ ತತ್ವಜ್ಞಾನಕ್ಕೆ ಕಾರಣಗಳಾಗುವವು. ಹೇಗಂದರೆ ಲೌಕಿಕರು ನಾಗ ಎಂಬುವ ಶಬ್ದದಿಂದಾಗಲಿ ನಗ ಎಂಬುವ ಶಬ್ದದಿಂದಾಗಲಿ ತರುವನ್ನು (ಗಿಡವನ್ನು) ಮತ್ತು ಗಜವನ್ನು ತಿಳಿದು ಭ್ರಾಂತರೆನಿಸುವದಿಲ್ಲವಷ್ಟೆ! ಒಟ್ಟಿನಮೇಲೆ ಇವರ ತಾತ್ಪರ್ಯವೇನಂದರೆ ದೀರ್ಘತ್ವ ಹ್ರಸ್ವತ್ವಗಳ ಆರೋಪವುಳ್ಳ ನಾಗ ನಗ ಶಬ್ದಗಳು ಅತಾತ್ವಿಕಗಳಂತೆ ಈ ಶಬ್ದಗಳಿಂದುಂಟಾದ ಜ್ಞಾನವು (ಗಿಡ ಆನೆಗಳ ಅರುವು) ತಾತ್ವಿಕವಂತೆ. ಅರ್ಥಾತ್ ಅಸತ್ಯ ಶಬ್ದಗಳಿಂದ ಸತ್ಯಜ್ಞಾನೋತ್ಪತ್ತಿಯನ್ನು ಮಾನಿಸುವ ವಿಷಯದಲ್ಲಿ.ಈ ಮೇಲಣ ದೃಷ್ಟಾಂತವು. ಒಳ್ಳೇದು ಬ್ರಹ್ಮಾದ್ವೈತಿಯೆ ಕೇಳು. ಹಿಂದೆ ಆರೋಪವು ಸೃಷ್ಟ್ಯಾದಿಯಲ್ಲಿ ಬ್ರಹ್ಮಕ್ಕೊ ಬ್ರಹ್ಮೇತರಕ್ಕೊ ಎಂದು ವಿಕಲ್ಪಮಾಡಿ ಖಂಡಿಸಿರುವೆನು. ಆದರೂ ಕೇಳು. ಅಸತ್ಯದಿಂದ ಸತ್ಯವು ಉಂಟಾಗಲಾರದು. ನಿನ್ನಂತೆ ಒಪ್ಪಿದರೆ ಲೋಕದಲ್ಲಿ ವಿಲಕ್ಷಣ ಪದಾರ್ಥದಿಂದ ವಿಲಕ್ಷಣ ಪದಾರ್ಥಗಳು ಹುಟ್ಟಬೇಕು. ಸತ್ಯವಾಗದ ಅಸತ್ಯದಿಂದ ಸತ್ಯ ಪದಾರ್ಥದ ಉತ್ಪತ್ತಿಯನ್ನು ಹೇಳಿದರೆ ಪಶುವಾಗದ ಮನುಷ್ಯನಿಂದ ಪಶುವಿನ ಉತ್ಪತ್ತಿಯನ್ನೂ, ಮನುಷ್ಯನಾಗದ ಪಶುವಿನಿಂದ ಮನುಷ್ಯನ ಉತ್ಪತ್ತಿಯನ್ನೂ ಹೇಳಬೇಕಾದೀತು. ಇದಲ್ಲದೆ ಅಸತ್ಯದಿಂದ ಸತ್ಯವಸ್ತು ಸಿದ್ಧಿಯಾಗಲಾರದೆಂದು ಸಾಂಖ್ಯಪ್ರವಚನ ಭಾಷ್ಯಕಾರರು ಹೇಳಿರುವರು. ಏವಂಸತಿ ಅಸತ್ಯ ಪ್ರಮಾಣಸ್ಯ ಸರ್ವತ್ರಸುಲಭ

ತ್ವೇನ ಕ್ವಾಪ್ಯರ್ಥೆ ಪ್ರಮಾಣಾನ್ವೇಷಣಸ್ಯಾಯೋಗಾತ್ || ಅಂದರೆ ಅಸತ್ಪ್ರಮಾಣದಿಂದ ಸದ್ವಸ್ತು ಸಿದ್ಧಿಯಾದರೆ ಅಂಥ ಅಸತ್ಪ್ರಮಾಣವು ಎಲ್ಲಾ ಕಡೆಯಲ್ಲಿಯೂ ಸುಲಭವಾಗಿರುವುದರಿಂದ ಯಾವ ಅರ್ಥದಲ್ಲಿಯೂ ಪ್ರಮಾಣಾನ್ವೇಷಣವೇ ಸಂಭವಿಸಲಾರದೆಂದು ಅಸತ್ಪ್ರಮಾಣವಾದಿಗಳ ಮತವನ್ನು ನಿರಾಕರಿಸಿರುವರು. ಶಿವಾದ್ವೈತಿಯೇ ! ಈ ಭಾಷ್ಯಕಾರರು ವಿಜ್ಞಾನವಾದಿಗಳ ಮತವನ್ನು ನಿರಾಕರಿಸಿರುವರಲ್ಲದೆ, ವೇದಾಂತಿಗಳಾದ ನಮ್ಮ ಮತವನ್ನು ನಿರಾಕರಿಸಿರುವದಿಲ್ಲವೆಂದರೆ ಬ್ರಹ್ಮಾದ್ವೈತಿಯೆ ! ನೋಡು ಅವರ ಭಾಷ್ಯದ ಮುಂದಿನ ಪಂಕ್ತಿಯನ್ನು ‹‹ಏತೇನಾಧುನಿಕಾನಾಂ ವೇದಾಂತಿಬ್ರುವಾಣಾಮಪಿಮತಂ ವಿಜ್ಞಾನವಾದತುಲ್ಯಯೋಗಕ್ಷೇಮತಯಾನಿರಸ್ತಂ›› ಎಂದು ಅಸತ್ಪ್ರಮಾಣವಾದಿಗಳಾದ ವೇದಾಂತಿಗಳೆಂದೆಂದುಕೊಳ್ಳುವ ಆಧುನಿಕರ ಮತವನ್ನು ನಿರಾಕರಿಸಿರುವರು. ಇದಲ್ಲದೆ ಹಿಂದೆ ನಾನು ಅಧ್ಯಾರೋಪವೇ ಸಂಭವಿಸುವದಿಲ್ಲವೆಂದು ಹೇಳಿರುವೆನು. ಆದ್ದರಿಂದ ವಾಚಸ್ಪತಿಯವರ ನಾಗ ನಗ ಶಬ್ದಗಳ ದೃಷ್ಟಾಂತವು ವ್ಯರ್ಥವು. ಚಿನ್ಮಾತ್ರ ವಸ್ತುವು ಅಹಂಕಾರಕ್ಕೆ ವಿಷಯವಾಗದಿದ್ದರೆ ಚಿನ್ಮಾತ್ರ ವಿಷಯಕತ್ವವು ಅಹಂಕಾರದಲ್ಲಿ ಬಾಧಿತವಾಯಿತಲ್ಲವೆ? ಅದು ಅಲ್ಲಿ ಬಾಧಿತವಾದರೆ ‹‹ಚಿನ್ಮಾತ್ರೋಽಹಂ ಸದಾಶಿವಃ›› ಎಂದು ಚಿನ್ಮಾತ್ರ ಸದಾಶಿವ ವಿಷಯಕತ್ವವನ್ನು ಶ್ರುತಿಯು ಏಕೆ ಹೇಳುವದು? ಬಾಧಿತಾರ್ಥವನ್ನೇ ವೇದವು ಹೇಳುತ್ತದೆಂದರೆ ‹‹ಬಾಧಿತಾರ್ಥಂ ವೇದೋಽಪಿ ನ ಬೋಧಯತಿ›› ಎಂಬುವ ಸರ್ವಾನುಮತ ನ್ಯಾಯಕ್ಕೆ ವಿರೋಧವಾಗುವದಿಲ್ಲವೆ? ಆದ್ದರಿಂದ ಬ್ರಹ್ಮವು ಅಹಂಕಾರಕ್ಕೆ ವಿಷಯವಾಗುವದೆಂದು ಹೇಳಬೇಕು. ಹೀಗೆ ಹೇಳಿದರೇನೇ ‹‹ಅಹಂಬ್ರಹ್ಮಾಸ್ಮಿ›› ಚಿನ್ಮಾತ್ರೋಽಹಂ ಸದಾಶಿವಃ›› ಎಂಬುವ ಶ್ರುತಿವಾಕ್ಯಗಳು ಯುಕ್ತಗಳಾಗುವುವು. ಶಿವಾದ್ವೈತಿಯೇ ! ಈ ವಾಕ್ಯಗಳು ಸೃಷ್ಟಿದಶೆಯಲ್ಲಿ ಬ್ರಹ್ಮವು ಅಹಂಕಾರಕ್ಕೆ ವಿಷಯವಾಗುತ್ತದೆಂದು ಹೇಳುತ್ತವೆಯಲ್ಲದೆ ಸೃಷ್ಟ್ಯಾದಿಯಲ್ಲಿಯೂ ಸೃಷ್ಟ್ಯಂತದಲ್ಲಿಯೂ (ಪ್ರಲಯದಲ್ಲಿಯೂ) ಹೇಳುವದಿಲ್ಲವು. ಬ್ರಹ್ಮಾದ್ವೈತಿಯೇ ! ಈ ಕೈವಲ್ಯ ಶ್ರುತಿಯು ಮುಂದಣ ವಾಕ್ಯವನ್ನು ನೋಡು. ‹‹ಮಯ್ಯೇವಸಕಲಂಜಾತಂ ಮಯಿಸರ್ವಂ ಪ್ರತಿಷ್ಠಿತಂ ಮಯಿಸರ್ವಂ ಲಯಂ ಯಾತಿ ತದ್ಬ್ರಹ್ಮಾದ್ವಯಮಸ್ಮ್ಯಹಂ›› ಎಂದು ಸೃಷ್ಟಿ ಸ್ಥಿತಿ ಪ್ರಲಯಗಳಲ್ಲಿಯೂ ಬ್ರಹ್ಮವು ಅಹಂಕಾರಕ್ಕೆ ವಿಷಯವಾಗುತ್ತದೆಂದು ಹೇಳುತ್ತದೆ. ಜೀವನ ಸ್ವಪ್ನ ಜಾಗ್ರತಾವಸ್ಥೆಗಳಲ್ಲಿ ಜೀವಾತ್ಮನು ಅಹಂಕಾರ ವಿಷಯವಾಗುವನೆಂಬುವಲ್ಲಿ

ವಿವಾದವಿಲ್ಲ. ಸುಷುಪ್ತಿಯಲ್ಲಿಯೂದರೂ ಅಹಂಕಾರಕ್ಕೆ ವಿಷಯವಾಗುತ್ತಾನೆಂದು ಒಪ್ಪಲೇಬೇಕು. ಇಲ್ಲದಿದ್ದರೆ ನಿದ್ದೆಯಿಂದ ಎಚ್ಚರಗೊಂಡಮೇಲೆ ‹ಸುಖಮಹಮಸ್ವಾಪ್ಸಂ | ಗಾಢಂ ಗೂಢೋಹಮಸ್ವಾಪ್ಸಂ› ಎಂದು ಅನುಭವವೇ ಆಗಲಿಕ್ಕಿಲ್ಲ. ಆದ್ದರಿಂದ ಜೀವನ ಬುದ್ಧಿಶಕ್ತಿಯು ಜಾಗ್ರತ್ಸ್ವಪ್ನಕಾಲಿಕ ಪದಾರ್ಥಗಳನ್ನು ತನ್ನಲ್ಲಿ ಸೂಕ್ಷ್ಮರೂಪಗಳನ್ನಾಗಿರಿಸಿಕೊಂಡು ತಾನು ಸೂಕ್ಷ್ಮರೂಪದಿಂದ ಜೀವಾತ್ಮನಲ್ಲಿದ್ದಾಗ ಸುಷುಪ್ತಿಯೆನಿಸಿಕೊಳ್ಳುವಂತೆ ಪರಶಿವ ಬ್ರಹ್ಮ ವಿಮರ್ಶಶಕ್ತಿಯು ಎಲ್ಲಾ ಪದಾರ್ಥಗಳನ್ನು ತನ್ನಲ್ಲಿರಿಸಿಕೊಂಡು ಬ್ರಹ್ಮದಲ್ಲಿ ತಾನು ಸೂಕ್ಷ್ಮರೂಪದಿಂದ ಲೀನವಾದಾಗ ಪ್ರಲಯವೆನಿಸಿಕೊಳ್ಳುವದು. ಈ ಪ್ರಲಯಕಾಲದಲ್ಲಿಯೂ ಸುಷುಪ್ತಿಯಲ್ಲಿ ಅಹಂಕಾರವಿದ್ದಂತೆ ಅಹಂಕಾರವನ್ನು ಒಪ್ಪಲೇಬೇಕು. ಆದ್ದರಿಂದಲೇ ಮೇಲಣ ಶ್ರುತಿಯು ಸೃಷ್ಟ್ಯಾದಿಯಲ್ಲಿಯೂ ಅಹಂಕಾರವಿತ್ತೆಂದು ಬೋಧಿಸುತ್ತದೆ. ಮತ್ತು ಅಥರ್ವ ಸಿರಸ್ಸಿನಲ್ಲಿ ‹‹ದೇವಾಹವೈ ಸ್ವರ್ಗಲೋಕಮಗಮನ್ ತೇದೇವಾರುದ್ರಮಪೃಚ್ಛನ್ ಕೋಭವಾನಿತಿ | ಸೋಬ್ರವೀದಹಮೇಕಃ ಪ್ರಥಮಮವಾಸಂ ವರ್ತಾಮಿಚ ಭವಿಷ್ಯಾಮಿಚ ನಾನ್ಯಃಕಶ್ಚನಮತ್ತೋ ವ್ಯತಿರಿಕ್ತಃ›› ಎಂಬುವದರಿಂದ ಎಲ್ಲಾ ಕಾಲಗಳಲ್ಲಿಯೂ ಅಹಂಕಾರವಿರುವುದೆಂದು ತಿಳಿಯಲ್ಪಡುವುದು. ಆದರೆ ಈ ಅಹಂಕಾರವು ಜೀವನ ಅಹಂಕಾರದಂತೆ ಕೃತ್ರಿಮವಲ್ಲ. ಪರಾಹಂಕಾರವೆಂದು ಶೈವಶಾಸ್ತ್ರಕಾರರು ಹೇಳುವರು. ಜೀವನು ಶಿವಯೋಗಾಭ್ಯಾಸವನ್ನು ಮಾಡಿ ಅದು ದೃಢವಾಗಲು ಆ ಬ್ರಹ್ಮದ ಪರಾಹಂಕಾರದಲ್ಲಿ ಪ್ರವಿಷ್ಟನಾಗುವನು. ಆಗ ನಾನೇ ವಿಶ್ವರೂಪನಾದ ಶಿವನು, ನಾನೇ ನಿತ್ಯಾನಂದವುಳ್ಳವನು, ನಾನೇ ಚಿನ್ಮಾತ್ರನು ಎಂದು ಭೋಗಪಡುವನು. ಆ ಪರಶಿವಬ್ರಹ್ಮವು ಪರಾಹಂಕಾರಕ್ಕೆ ವಿಷಯವಾಗುವದೆಂಬುವಲ್ಲಿ ಅಭಿಯುಕ್ತರು ಹೇಳುವದೇನಂದರೆ—

ಶ್ಲೋ|| ಇತಿಶಕ್ತಿಚಕ್ರಯಂತ್ರಂ ಕ್ರೀಡಾಯೋಗೇನವಾಹಯನ್‌ದೇವಃ |
ಅಹಮೇವ ಶುದ್ಧರೂಪಃ ಶಕ್ತಿಮಹಾಚಕ್ರನಾಯಕಪದಸ್ಥಃ ||
ಮಯ್ಯೇವಭಾತಿವಿಶ್ವಂ ದರ್ಪಣ ಇವನಿರ್ಮಲೆ ಘಟಾದೀನಿ |
ಮತ್ತಃಪ್ರಸರತಿಸರ್ವಂ ಸ್ವಪ್ನವಿಚಿತ್ರತ್ವಮಿವಸುಪ್ತಾತ್ ||
ಅಹಮೇವ ವಿಶ್ವರೂಪಃ ಕರಚರಣಾದಿಸ್ವಭಾವ ಇವದೇಹಃ |
ಸರ್ವಸ್ಮಿನ್ನಹಮೇವ ಸ್ಫುರಾಮಿ ಭಾವೇಷು ಭಾಸ್ವರೂಪಮಿವ ||

ದ್ರಷ್ಟಾ ಶ್ರೋತಾ ಘ್ರಾತಾ ದೇಹೇಂದ್ರಿಯವರ್ಜಿತೋಽಪ್ಯಕರ್ತಾಪಿ |
ಸಿದ್ಧಾಂತಾಗಮತರ್ಕಾಂ ಶ್ಚಿತ್ರಾನಹಮೇವ ರಚಯಾಮಿ ||

ಈ ಶ್ಲೋಕಗಳ ಸಂಕ್ಷೇಪ ತಾತ್ಪರ್ಯವೇನಂದರೆ, ಚಿದಾನಂದೇಚ್ಛಾಜ್ಞಾನಕ್ರಿಯಾಶಕ್ತಿಗಳ ಸಮೂಹರೂಪವಾದ ಯಂತ್ರವನ್ನು ಘಟೀಯಂತ್ರ ನ್ಯಾಯದಿಂದ ತಿರುಗಿಸುವವನು ನಾನೇ ? ಸರ್ವಪ್ರಾಣಿಗಳಲ್ಲಿಯೂ, ಅಹಂ (ನಾನು) ಎಂದು ಅನಾಹತನಾದಾತ್ಮಕ ಶಿವನು ನಾನೇ ? ಮತ್ತು ಶುದ್ಧರೂಪನೂ, ನಾನೆ? ಮತ್ತು ಕರಣಶಕ್ತಿಗಳಿಗೆ ವಿಷಯಗಳ ಗ್ರಹಣ ತ್ಯಾಗಾದಿಗಳಲ್ಲಿ ಸ್ವಾತಂತ್ರ್ಯವನ್ನು ಕೊಡುವ ಶಕ್ತಿನಾಯಕ ಸ್ಥಾನದಲ್ಲಿರುವವನೂ ನಾನೇ ? ಸರ್ವ ಪ್ರಮಾತೃಗಳ ಹೃದಯದಲ್ಲಿರುವುವನಾದ ನನಗೆ ನಿಯತವಾದ ಸ್ಥಾನವಿಲ್ಲ. ಈ ಸಮಸ್ತ ಪ್ರಪಂಚವು ನನ್ನಲ್ಲಿ ಕನ್ನಡಿಯಲ್ಲಿ ತೋರುವಹಾಗೆ ತೋರುವದು. ಮತ್ತು ಪರಿಪೂರ್ಣನಾದ ನನ್ನಿಂದಲೆ ಈ ಪ್ರಪಂಚವು ಆವಿರ್ಭವಿಸುವದು. ಸ್ವಪ್ನದಲ್ಲಿ ಅನೇಕ ಪದಾರ್ಥಗಳ ವೈಚಿತ್ರ್ಯವು ಪ್ರಸರಿಸುವಂತೆ ನನ್ನಿಂದಲೇ ಪ್ರಪಂಚವು ಪ್ರಸರಿಸುವದು. ಪಂಡಿತ ಪಾಮರ ಬಾಲಕ ಸ್ತ್ರೀ ಮೊದಲಾದವರಲ್ಲಿ ಒಳಗೆ ಅಭೇದದಿಂದ ಅಹಂ (ನಾನು) ಎಂದು ಸ್ಫುರಿಸುವದರಿಂದ ದೇಹವು ಕರಚರಣಾದಿ ಸ್ವರೂಪವಾಗಿರುವಂತೆ ಎಲ್ಲಾ ಪ್ರಮಾತೃಸ್ವರೂಪನೂ, ನಾನೇ ಇರುವೆನು. ಚೈತನ್ಯರೂಪನಾದ ನಾನೊಬ್ಬನೆ ಸರ್ವಪದಾರ್ಥಗಳಲ್ಲಿರುವುದರಿಂದ ವಿಶ್ವರೂಪನೂ, ನಾನೇ, ನಾನಾವಸ್ತುಗಳಲ್ಲಿ ತೇಜಃ ಪುಂಜವಾದ ಪದಾರ್ಥವು ಅತ್ಯಂತ ಪ್ರಕಾಶಿಸುತ್ತದೆಯೋ ಅದರಂತೆ ಈ ಜಡವಾದ ಪ್ರಪಂಚದಲ್ಲಿ ನಾನೇ ಪ್ರಕಾಶಿಸುವವನಾಗಿರುವೆನು, ಮತ್ತು ನಾನು ದೇಹೇಂದ್ರಿಯಾದಿಗಳಿಲ್ಲದವನಾದರೂ, ಚಿನ್ಮಾತ್ರನಾಗಿದ್ದರೂ, ನಾನೇ ನೋಡುವೆನು. ನಾನೇ ಕೇಳುವೆನು. ನಾನೇ ಆಘ್ರಾಣಿಸುವೆನು ನಾನೇ ಮಧುರಾದಿ ರಸಾಸ್ವಾದನವನ್ನು ಮಾಡುವೆನು. ನಾನೇ ಮುಟ್ಟುವೆನು. ಸ್ವಾಪಾದ್ಯವಸ್ಥೆಗಳಲ್ಲಿ ದೇಹೇಂದ್ರಿಯಾದಿಗಳಿಲ್ಲದಿರುವದರಿಂದ ನಾನೇ ವಿಷಯ ಗ್ರಹಣಮಾಡುವವನು. ಆದ್ದರಿಂದ ದೇಹೇಂದ್ರಿಯಾದಿಗಳಿಗೆ ಪ್ರೇರಕನೂ ಅವುಗಳಿಲ್ಲದವನೂ, ಚಿದಾನಂದೈಕ ಘನನೂ, ಸರ್ವಪ್ರಾಣಿಗಳ ಹೃದಯ ಮಧ್ಯದಲ್ಲಿದ್ದು ಸರ್ವ ವಿಷಯಗಳನ್ನು ಭೋಗಿಸುವವನೂ, ಅಸ್ಮಚ್ಛಬ್ದವಾಚ್ಯನೂ, ಪರಮಪುರುಷನೂ, ಆಗಿರುವೆನು. ಈ ವಿಷಯದಲ್ಲಿ “ಅಪಾಣಿ ಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ| ಸರ್ವೇತಿ ವೇದ್ಯಂ ನಚತಸ್ಯಾ

ಸ್ತ್ವಮೇತತ್ತ್ವ ತಮಾಹುರಗ್ರ್ಯಂ ಪುರುಷಂ ಮಹಾಂತಃ॥ ಎಂಬುವ ಶ್ವೇತಾಶ್ವತರ ಶ್ರುತಿಯು ಪ್ರಮಾಣವಾಗಿದೆ. ಮತ್ತು ನಾನು ಸ್ವಯಂ ಅಕರ್ತೃವಾಗಿದ್ದರೂ ದೇವಮುನಿ ಆಚಾರ್ಯಾದಿಗಳ ಹೃದಯಾವಿಷ್ಟನಾಗಿ ಸಂಕ್ಷೇಪ ವಿಸ್ತಾರರೀತಿಯಿಂದ ಸಿದ್ಧಾಂತಾಗಮಾದಿ ಶಾಸ್ತ್ರಗಳನ್ನು ರಚಿಸಿರುವೆನು. ನಾನು ಎಂಬುವ ಅನುಭವವೇದ್ಯನಾದ ಸರ್ವಪ್ರಾಣಿಗಳ ಸ್ವರೂಪನಾದ ಶಿವನೇ ನಾನಾಗಿರುವೆನು. ಬ್ರಹ್ಮಾದ್ವೈತಿಯೇ? ಮುಕ್ತರ ಪರಾಹಂಕಾರವೆಂಬುವದನ್ನು ನೋಡಿದಿಯಾ? ಇದುವೇ ಪರಶಿವಬ್ರಹ್ಮದ ಅಹಂಕಾರವು. ಇದು ಸಾಂಸಾರಿಕವಲ್ಲ. ಇದು ದೀಕ್ಷಾತ್ರಯವನ್ನು ಹೊಂದಿ ದೇಹತ್ರಯದ ಅಭಿಮಾನವನ್ನು ನಾಶಗೊಳಿಸಿ ತನ್ನಲ್ಲಿರುವ ಇಚ್ಛಾಜ್ಞಾನ ಕ್ರಿಯಾಶಕ್ತಿಗಳ ಸಂಕೋಚಸ್ಥಿತಿಯು ಲೋಪ ಹೊಂದಲು ಅವುಗಳ ವ್ಯಾಪಾರವುಳ್ಳ ಮುಕ್ತನಿಗೆ ಆವಿರ್ಭವಿಸುವದು. ಆಗ ಮುಕ್ತನು ನಿತ್ಯಾನಂದವನ್ನು ಭೋಗಿಸುವನು. ಈ ಪರಾಹಂಕಾರವು ವಿಶ್ವಾತ್ಮಕಗಳಾದ ಶಿವಶಕ್ತಿಗಳನ್ನು ವಿಷಯುಗಳನ್ನಾಗಿ ಮಾಡಿಕೊಂಡಿರುವದು. ಅಥವಾ ವಿಶ್ವಾತ್ಮಕ ಶಕ್ತಿವಿಶಿಷ್ಟ ಶಿವಾವಗಾಹಿಯಾಗಿರುವದು. ಆದ್ದರಿಂದಲೆ ॥ಅಹಮನ್ನಮಹಮನ್ನಮಹಮನ್ನಂ । ಅಹಮನ್ನಾದೋಽಹಮನ್ನಾದೋಽಹಮನ್ನಾದಃ॥ ಎಂಬುವ ತೈತ್ತಿರೀಯ ಶ್ರುತಿಯು. ಮುಕ್ತನ ಅಹಂಕಾರವು ಭೋಜ್ಯ ಭೋಕ್ತೃ ಮೊದಲಾದ ಸಮಸ್ತ ಪ್ರಪಂಚಾತ್ಮಕವಾದದ್ದೂ, ಪರಿಪೂರ್ಣವಾದದ್ದೂ, ಎಂದು ಹೇಳುತ್ತದೆ. ಮುಕ್ತಾವಸ್ಥೆಯಲ್ಲಿ ಈ ಅಖಂಡಾಕಾರವಾದ ಪರಾಹಂಕಾರಕ್ಕೆ ನಾಶವನ್ನು ಮಾನಿಸಿದರೆ, ಈ ಶ್ರುತಿಗೆ ಗತಿಯೇನು? ಈ ಸಕಲ ಪ್ರಪಂಚವನ್ನೇ ತನಗೆ ವಿಷಯಮಾಡಿಕೊಂಡಿರುವದರಿಂದ ಇದು ಪರಿಪೂರ್ಣವೂ ಪರಶಿವಬ್ರಹ್ಮ ಸ್ವಭಾವವೂ ಆಗಿರುವುದು. ಮುಕ್ತಾತ್ಮನು ಪರಶಿವನೇ ಆಗಿಹೋದುದರಿಂದ ಅವನ ಸ್ವಭಾವವೂ ಆಗಿರುವುದು. ಈ ಪರಾಹಂಕಾರವು ನಾನು ದೇವನು ನಾನು ಮನುಷ್ಯನು. ನಾನು ಸ್ಥೂಲನು. ಮೊದಲಾದ ಪರಿಚ್ಛಿನ್ನವಾದ ಕೃತ್ರಿಮವಾದ ಅಹಂಕಾರಕ್ಕಿಂತಲೂ ಭಿನ್ನವಾಗಿರುವುದು. ಆದ್ದರಿಂದ ಈ ಪರಾಹಂಕಾರಕ್ಕೆ ಪ್ರಾಕೃತಾಹಂಕಾರವೆಂತಲೂ, ಆ ಪ್ರಾಕೃತಾಹಂಕಾರ ಸಂಬಂಧವು ಇರುವದೆಂತಲೂ, ತಿಳಿಯಬಾರದು. ಆದ್ದರಿಂದ ಮಾಯಾವಾದಿಯೇ? ವೇದಾಂತ ವೇದ್ಯವಾದ ಬ್ರಹ್ಮವು ಯಾವ ಅಹಂಕಾರಕ್ಕೂ ವಿಷಯವಾಗುವದಿಲ್ಲವೆಂಬುವ ನಿನ್ನ ಮತವು ವೇದಾಂತ ಮತವೆನಿಸದು. ವೇದಾಂತಗಳಿಗೆ

ವಿರುದ್ಧವಾದದ್ದು. ವೇದಾಂತ ಮತವಾಗಲಾರದಷ್ಟೆ? ಮತ್ತು ಬ್ರಹ್ಮವು ಅಹ ಂರ್ಥವಲ್ಲವೆನ್ನುವದು ತಪ್ಪು. ಆಪ್ತ ವಚನವನ್ನು ನೋಡು. ಅಕಾರವೇ ಪರಶಿವಬ್ರಹ್ಮವು. ಅಕಾರವೇ ಪರಶಿವನ ಶಕ್ತಿಯು. ಈ ತತ್ವಗಳ ಸಾಮರಸ್ಯವು ಮುಂದಿನ ಮಕಾರದಿಂದ ಬೋಧಿತವಾಗುತ್ತದೆಂದು ಹೇಳುವದು. ಶ್ಲೋ|| ಹೃದ್ಯಕಾರೊ ದ್ವಾದಶಾಂತೆ ಹಕಾರ ಸ್ತದಿದಂ ವಿದುಃ | ಅಹಮಾತ್ಮಕ ಮದ್ವೈತಂ ಯತ್ಪ್ರಕಾಶಾತ್ಮ ವಿಶ್ರಮಃ || ಮತ್ತು ಶ್ರೀಕಂಠಾಚಾರ್ಯರೂ ಕೂಡ ಶ್ಲೋ|| ಓಂ ಸರ್ವೋಹಂ ಪದಾರ್ಥಾಯ ಲೋಕಾನಾಂ ಸಿದ್ಧಿಹೇತವೆ | ಸಚ್ಚಿದಾನಂದರೂಪಾಯ ಶಿವಾಯ ಪರಮಾತ್ಮನೆ || ಎಂದು ಸಚ್ಚಿದಾನಂದರೂಪವಾದ ಪರಶಿವಬ್ರಹ್ಮವು ಅಹಂ ಪದಾರ್ಥವಾಗುವದೆಂದು ಹೇಳಿರುವರು. ಆದ್ದರಿಂದ ಅನೇಕ ವೇದಾಂತವಾಕ್ಯಗಳಿಗೆ ವಿರುದ್ಧವೂ, ವೇದಾಂತಾನುಸಾರಿಯಾದ ವಾಕ್ಯಗಳಿಗೂ ವಿರುದ್ಧವಾಗಿಯೂ ಇರುವ ನಿನ್ನ ಮತವು ವೇದಾಂತ ಮತವೆನಿಸುವ ಬಗೆ ಹೇಗೆ? ಆದ್ದರಿಂದ ವಿಜ್ಞಾನ ಭಿಕ್ಷುಗಳು ನಿನ್ನ ಮಾಯಾವಾದ ಮತಕ್ಕೆ "ನತು ತದ್ವೇದಾಂತ ಮವೇದಾರ್ಥವನ್ಮಹಾಶಾಸ್ತ್ರಂ ಮಾಯಾವಾದ ಮವೈದಿಕಂ | ಇತಿ ತದ್ವಾಕ್ಯ ಶೇಷಾದಿತಿ" ಎಂದು ಹೇಳಿರುವರು.

ಅಂದರೆ ಈ ಮಾಯಾವಾದವು ಅವೈದಿಕವೆಂಬುವ ವಿಷಯದಲ್ಲಿ ಪದ್ಮಪುರಾಣಸ್ಥವಾದ ಅರ್ಧ ಶ್ಲೋಕವನ್ನು ತೋರಿಸಿರುವರು. ಇದಲ್ಲದೆ ನಿನ್ನ ಮಾಯಾವಾದಮತಕ್ಕೆ ಪ್ರಚ್ಛನ್ನ ಬೌದ್ಧಮತವೆಂತಲೂ ಹೇಳಿರುವರು. "ಅನಯೈವ ಚರೀತ್ಯಾ ನವೀನಾನಾಮಪಿ ಪ್ರಚ್ಛನ್ನಬೌದ್ಧಾನಾಂ ಮಾಯಾವಾದಿನಾಮವಿದ್ಯಾಮಾತ್ರಸ್ಯ ತುಚ್ಛಸ್ಯ ಬಂಧಹೇತುತ್ವಂ ನಿರಾಕೃತಂ ವೇದಿತವ್ಯಂ" ಈ ವಿಷಯದಲ್ಲಿ ಶ್ಲೋ|| ಮಾಯಾವಾದಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮೇವಚ || ಎಂಬುವದನ್ನು ಪ್ರಮಾಣವನ್ನಾಗಿ ಕೊಟ್ಟಿರುವರು. ಆದ್ದರಿಂದ ಬ್ರಹ್ಮವು ಅಹಂ ಪದಾರ್ಥವಾಗುವದಿಲ್ಲವೆಂಬುವ ನಿನ್ನ ಮತವು ಮುಮುಕ್ಷುಗಳಿಂದ ಗ್ರಹಿಸಲು ಯೋಗ್ಯವಾಗಲಾರದು. ಎಲೈ ಶಿವಾದ್ವೈತಿಯೆ! ನಿನ್ನ ಮತವು ಮಾಯಾವಾದ ಮತವೆನಿಸುವದಿಲ್ಲವೇನು? ಇಲ್ಲ. ನಿನ್ನ ಮತದಲ್ಲಿ ಸಮಸ್ತ ಪ್ರಪಂಚವು ಅಸತ್ತಾಗಿರುವದರಿಂದ ಮಾಯಾವಾದಕ್ಕೆ ಅಸಚ್ಛಾಸ್ತ್ರವೆಂದು ಹೇಳಲ್ಪಟ್ಟಿರುವದು. ನನ್ನ ಮತದಲ್ಲಿ ಎಲ್ಲಾ ಪ್ರಪಂಚವು ಸತ್ಯವಾಗಿರುವದರಿಂದ ಸನ್ಮತವೆನಿಸುವದು. ನಾನು ವ್ಯಾಘಾತತ್ವವನ್ನು ಸ್ವೀಕರಿಸಿದರೂ ಅದಕ್ಕೆ ಅಸತ್ಯಾತ್ವವನ್ನು ಅಂಗೀಕ

ರಿಸುವದಿಲ್ಲವಾದುದರಿಂದ ನಿನ್ನ ಮತವು ಮಾಯಾವಾದ ಮತವೆನಿಸದು. ನಿನ್ನ ಮಾಯಾವಾದದಲ್ಲಿ ಬ್ರಹ್ಮವು ಅಹಂ ಪದಾರ್ಥವಲ್ಲವೆಂದು ಹೇಳಲ್ಪಡುವದು. ಶಿವಾದ್ವೈತಮತದಲ್ಲಿ ಬ್ರಹ್ಮವು ಅಹಂ ಪದಾರ್ಥವೆಂದು ಹೇಳಲ್ಪಡುವುದು. ಮತ್ತು ಸ್ವಪ್ರಭಾನಂದ ಶಿವಾಚಾರ್ಯರೂ ಕೂಡ ಬ್ರಹ್ಮವು ಅಹಂ ಪದಾರ್ಥವೆಂದು ಒಪ್ಪಿರುವರು. ಶ್ಲೋ || ಅಕಾರಃ ಸರ್ವವರ್ಣಾಗ್ರ್ಯಃ ಪ್ರಕಾಶಃ ಪರಮಃ ಶಿವಃ | ಹಕಾರೋಂತ್ಯಃ ಕಲಾರೂಪಃ ವಿಮರ್ಶಾಖ್ಯಃ ಪ್ರಕೀರ್ತಿತಃ || ಅನಯೋಃ ಸಮರಸಾಕಾರಾದಹಮಿತ್ಯೇವ ನಿರ್ಮಲಃ | ಇತ್ಯಾಗಮೋಕ್ತೇಃ ‟ಅಹಮಸ್ಮಿ ಪ್ರಥಮಜೇತ್ಯಾದಿ ಶ್ರುತೇಶ್ಚ ಅಹಮಿತ್ಯತ್ರ ಮಕಾರಸ್ಯ ಪುರುಷತತ್ವವಾಚಕತ್ವಾತ್ ಪೃಥಿವ್ಯಾದೀನಿ ತತ್ವಾನಿ ಪುರುಷಾಂತಾನಿಪಂಚಸು | ಕ್ರಮಾತ್ಕಾದಿಷುವರ್ಗೇಷು ಮಕಾರಾಂತೇಷುಸುವ್ರತ | ಇತ್ಯುಕ್ತತ್ವಾತ್ ಮಾಯಾಂತತತ್ವಾನಿ ಪುರುಷೇಂತರ್ಗತಾನಿ | ಪುರುಷಃ ಪ್ರಕೃತಿಸ್ಥೋಹಿ ಭುಂಗ್ತೇ ಪ್ರಕೃತಿಜಾನ್ ಗುಣಾನ್ | ಇತಿ ಗೀತತ್ವಾತ್ ಅನ್ಯತ್ಸರ್ವಂ ಪೂರ್ವವತ್ ಕಾರಣೀಭೂತಾ ಶಕ್ತಿಸ್ತುಹಕಾರಾದೇನ ತಸ್ಯವಿಮರ್ಶವಾಚಕತ್ವಾತ್ ತಥಾಪ್ರದರ್ಶಿತತ್ವಾತ್ || ಅಂದರೆ ಅಕಾರವು ಪರಶಿವವಾಚಕವೆಂದೂ, ಹಕಾರವು ಕಲಾರೂಪವಾದ ವಿಮರ್ಶಶಕ್ತಿಯೆಂದೂ ಇವುಗಳ ಸಮರಸವಾದ ಅಕಾರವೇ ನಿರ್ಮಲವಾದ ಅಹಂ ಪದಾರ್ಥವೆಂದೂ (ಬ್ರಹ್ಮವೆಂದೂ) ಶಿವಾಗಮವಿರುವದರಿಂದಲೂ, ‟ಅಹಮಸ್ಮಿ" ಎಂದು ಶ್ರುತಿಯಿರುವದರಿಂದಲೂ, ಮತ್ತು ‟ಅಹಂ" ಎಂಬುವಲ್ಲಿ ಮಕಾರವು ಪುರುಷತತ್ವವಾಚಕವಾಗಿರುವದರಿಂದ ಅದರಲ್ಲಿ ಪೃಥಿವೀ ಮೊದಲ್ಗೊಂಡು ಮಾಯೆಯವರೆಗಿರುವ ಮೂವತ್ತು ತತ್ವಗಳು ಅಂತರ್ಗತಗಳಾಗುವವು. ಹೇಗಂದರೆ ಪೃಥಿವೀಯಿಂದ ಪ್ರಕೃತಿ ತತ್ವಗಳ ಪರ್ಯಂತ ಇಪ್ಪತ್ತನಾಲ್ಕು ತತ್ವಗಳು ಕ್ರಮವಾಗಿ ಕಕಾರ ಮೊದಲು ಭಕಾರಾಂತವಾದ ಅಕ್ಷರಗಳಿಗೆ ವಾಚ್ಯಗಳು. ಮಕಾರವಾಚ್ಯವು ಪುರುಷತತ್ವವು. ಈ ಪುರುಷತತ್ವಕ್ಕೆ ಇಪ್ಪತ್ತು ನಾಲ್ಕು ತತ್ವಗಳ ಸಮಷ್ಟಿಯು ಸ್ಥೂಲಕಂಚುಕಸ್ವರೂಪವಾಗಿರುವದರಿಂದ ಪುರುಷತತ್ವಾಂತರ್ಗತವು. ಮುಂದಣ ಮಾಯಾಂತ ತತ್ವಗಳು ಪುರುಷ ತತ್ವಕ್ಕೆ ಸೂಕ್ಷ್ಮಕಂಚುಕವಾಗಿರುವುದರಿಂದ ಮಾಯಾಂತ ತತ್ವಗಳೂ ಕೂಡ ಪುರುಷ ತತ್ವಾಂತರ್ಗತಗಳೇ ಆಗುವವು. ಇದರಿಂದ ಅಹಂ ಎಂಬುವಲ್ಲಿರುವ ಮಕಾರ ವಾಚ್ಯ ಪುರುಷನಲ್ಲಿ ಮೂವತ್ತು ತತ್ವಗಳು ಸೇರಿದವು. ಹಕಾರವಾಚ್ಯವಾದ

ವಿಮರ್ಶಶಕ್ತಿಯಲ್ಲಿ ಶಿವತತ್ವವನ್ನುಳಿದು ಸದಾಶಿವಾದಿ ಶುದ್ಧ ವಿದ್ಯಾಂತ ತತ್ವಗಳು ಅಂತರ್ಗತಗಳಾಗುವವು. ಹಕಾರವಾಚ್ಯವಾದ ಶಕ್ತಿಯೂ, ಅಕಾರವಾಚ್ಯವಾದ ಪರಶಿವತತ್ವವೂ ಸೇರಿ ಮೂವತ್ತಾರು ತತ್ವಗಳು ಅಹಂ ಪದದಲ್ಲಿ ಪ್ರಕಾಶಿಸುವವು. ಈ ಷಟ್‌ತ್ರಿಂಶತತ್ವಾತ್ಮಕನೇ ಸಚ್ಚಿದಾನಂದ ಬ್ರಹ್ಮರೂಪನಾದ ಶಿವನಾದುದರಿಂದ ಪರಶಿವ ಬ್ರಹ್ಮವು ಅಹಂ ಪದಾರ್ಥವೆನಿಸುವುದೆಂದು ಅವರ ತಾತ್ಪರ್ಯವು. ಶಿವಾದ್ವೈತಿಯೆ! ಶ್ರೀಕಂಠ ಸ್ವಪ್ರಭಾನಂದಾಚಾರ್ಯರು ಬ್ರಹ್ಮವು ಅಹಂ ಪದಾರ್ಥವೆಂದು ಒಪ್ಪಿರುವರೆಂಬುವದು ತಿಳಿಯಿತು. ಆದರೆ ನಿನ್ನ ವೀರಶೈವ ಶಿವಾದ್ವೈತಮತಸ್ಥಾಪಕರಾದ ಜಗದ್ಗುರುಗಳು ಒಪ್ಪಿರುವದನ್ನು ತೋರಿಸು. ಅವರು ಅಪರಾಹಂಕಾರವೆಂದೂ, ಪರಾಹಂಕಾರವೆಂದೂ, ಬ್ರಹ್ಮವು ಅಹಮರ್ಥವೆಂದೂ ಹೇಳಿದಂತೆ ಕಂಡುಬರುವದಿಲ್ಲವು. ಅಂದರೆ ಮಾಯಾವಾದಿಯೇ! ಶ್ರೀರೇಣುಕ ಭಗವತ್ಪಾದರು ಶ್ಲೋ|| ಗಳಿತೇ ಮಮತಾಹಂತೇ ಸಂಸಾರಭ್ರಮಕಾರಣೇ | ಪರಾಹಂತಾಂ ಪ್ರವಿಷ್ಟಸ್ಯ ಕುತೋದೇಹಃ ಕುತೋರತಿಃ || ಅಂದರೆ ಸಂಸಾರಭ್ರಮಕ್ಕೆ ಕಾರಣಗಳಾದ ಅಹಂಕಾರ ಮಮಕಾರಗಳು ನಷ್ಟಗಳಾಗಿ ಪರಾಹಂಕಾರವನ್ನು ಹೊಂದಿದ ಮುಕ್ತನಿಗೆ ದೇಹಾಭಿಮಾನವೆಲ್ಲಿ? ಮತ್ತು ತದಭಿಮಾನ ಮೂಲಕವಾದ ದೇಹಾದಿಗಳಲ್ಲಿ ಅಭಿರತಿಯೆಲ್ಲಿ? ಇದರಿಂದ ಸಾಂಸಾರಕಾರಣವಾದದ್ದೇ ಅಪರಾಹಂಕಾರವೆಂತಲೂ, ಸಂಸಾರನಿವೃತ್ತಿಗೆ (ಮೋಕ್ಷಕ್ಕೆ) ಕಾರಣವಾದದ್ದೇ ಪರಾಹಂಕಾರವೆಂತಲೂ ಸ್ಪಷ್ಟವಾಯಿತು. ಸಂಸಾರನಿವೃತ್ತಿಗೆ ಕಾರಣವಾದ ಅಹಂಕಾರಕ್ಕೆ ಪರಾಹಂಕಾರವೆಂದು ಕಂಠತಃ ಹೇಳಿದ್ದರಿಂದ ಸಂಸಾರಕ್ಕೆ ಕಾರಣವಾದ ಅಹಂಕಾರಕ್ಕೆ ಅಪರಾಹಂಕಾರವೆಂಬುವದು ಅರ್ಥಾತ್ಸಿದ್ಧವಾಯಿತಲ್ಲವೆ? ಸಂಸಾರವೆಂದರೆ ಶರೀರಾದ್ಯಭಿಮಾನವೇ ಆಗಿರುವದಲ್ಲದೆ ಬೇರೆಯಲ್ಲ. ಜೀವನ ಅಲ್ಪವಾದ ಅನಿತ್ಯವಾದ ತುಚ್ಛವಾದ ಶರೀರಾದಿಗಳಿಗೆ ಅಹಂಕರಿಸದೇ ಶಿವನ ಪರಿಪೂರ್ಣ ನಿತ್ಯ ಪರಮೋಪಾದೇಯವಾದ ಶಕ್ತಿಸ್ವರೂಪಕ್ಕೆ ಅಹಂಕರಿಸುವದೇ ಪರಾಹಂಕಾರವು. ಇನ್ನು ಪರಶಿವಬ್ರಹ್ಮವು ಅಹಮರ್ಥವಾಗುವದೆಂತಲೂ ಕಂಠತಃ ಹೇಳಿಯೇ ಇರುವರು. ಶ್ಲೋ|| ಅಕಾರಃ ಶಿವ ಆಖ್ಯಾತೋ ಹಕಾರಃ ಶಕ್ತಿರುಚ್ಯತೇ | ಶಿವಶಕ್ತಿಮಯಂ ಬ್ರಹ್ಮ ಸ್ಥಿತ ಮೇಕಮಹಂ ಪದೇ || ಅಹಂತಾಂ ಪರಮಾಂ ಪ್ರಾಪ್ಯ ಶಿವಶಕ್ತಿ ಮಯೀಂ ಸ್ಥಿರಾಂ | ಬ್ರಹ್ಮಭೂಯಂ ಗತೋ ಯೋಗೀ ವಿಶ್ವಾತ್ಮಾ ಪ್ರತಿಭಾಸತೇ || ಅಂದರೆ ಅಕಾ

ರವೇ ಶಿವನೆಂತಲೂ, ಹಕಾರವೇ ಶಕ್ತಿಯೆಂತಲೂ, ಪರಸ್ಪರಾಭಿನ್ನವಾದ ಈ ಶಿವಶಕ್ತಿಸ್ವರೂಪವೇ ಬ್ರಹ್ಮವೆಂತಲೂ, ಇದು ಅಹಂಪದದಲ್ಲಿರುವುದೆಂತಲೂ, ಈ ಶಿವಶಕ್ತಿರೂಪವಾದ ಪರಾಹಂಕಾರವನ್ನು ಹೊಂದಿ ಶಿವಯೋಗಿಯು ಬ್ರಹ್ಮಭಾವವನ್ನು ಪಡೆದು, ವಿಶ್ವಾತ್ಮಕನಾದ ಶಿವನೇ ತಾನಾಗಿ ಪ್ರಕಾಶಿಸುವನೆಂತಲೂ ಅಭಿಪ್ರಾಯವು. ಇದರಿಂದ ಬ್ರಹ್ಮವು ಅಹಂಪದಾರ್ಥವೆಂದು ಸ್ಪಷ್ಟವಾಯಿತೆಂಬಲ್ಲಿಗೆ—

ಶ್ರೀಮದುಜ್ಜಯಿನೀ ಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ಸಿದ್ಧಲಿಂಗ
ಶಿವಾಚಾರ್ಯಾಸ್ಥಾನಪಂಡಿತ ಉಮಚಿಗಿ ಮಳೆಮಠಾಧ್ಯಕ್ಷ ಧರ್ಮ
ರತ್ನ ಶಂಕರಶಾಸ್ತ್ರಿಗಳಿಂದ ರಚಿತವಾದ ವೀರಶೈವ ಸಿದ್ಧಾಂತ
ಸುಧಾಕರವೆಂಬ ಗ್ರಂಥವೊಳಗಣ ವಾದಕಾಂಡವು
ಸಮಾಪ್ತವಾದುದು.

ಶಿವಂ ಭೂಯಾತ್.

21—8—1923.



ಶ್ರೀಮತ್ಕನ್ಯಕಾಪರಮೇಶ್ವರೀ ಪ್ರೆಸ್, ಮೈಸೂರು.

# ಶುದ್ಧಾಶುದ್ಧಪತ್ರಿಕಾ.

| ಪುಟ. ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|
| ೬—೧೬ | ಕಮನ್ಯತ್ | ಕಿಮನ್ಯತ್ |
| ೭— ೬ | ಮಿಥ್ಯೋಪಲಬ್ಧಿಯೆ | ಮಿಥ್ಯೋಪಲಬ್ಧಿಯ |
| ೭—೨೪ | ಮಾಪೀಯೆ | ಮಾಪಿಯ |
| ೮— ೭ | ಪ್ರಾತಿಭಾಸಿಕಗಳಾದ ಪಿಪಾಸೆ ಮೊಡಲಾದ | ಪ್ರಾತಿಭಾಸಿಕಗಳಾದ ಪದಾರ್ಥಗಳಿಂದ ಪಿಪಾಸೆ ಮೊದಲಾದವುಗಳ |
| ೮—೧೫ | ಎಂದೂ | ಎಂದು |
| ೧೦—೧೦ | ಸತಿ | ಅಸತಿ |
| ೧೦—೧೩ | ಚೇದ್ಯದ್ವಿ | ಚೆದ್ಯದಿ |
| ೧೦—೨೩ | ಅಂದ | ಆನಂದ |
| ೧೧—೨೦ | ಕಾಣಾದಋಷಿಗಳು | ಕಣಾದಋಷಿಗಳು |
| ೧೫— ೧ | ಸೌಜ್ಞಕೆ | ಸಂಜ್ಞಕೆ |
| ೧೮— ೬ | ಅವಿದ್ಯೆಯನ್ನು | ಅವಿದ್ಯೆಯು ಸಂಬಂಧವನ್ನು |
| ೨೦— ೭ | ಸಾವರ್ಥ್ಯವು | ಸಾಮರ್ಥ್ಯವು |
| ೨೨—೨೪ | ಮುಕ್ತಿಯಿಂದ | ಮುಕ್ತಿಯು ಜ್ಞಾನದಿಂದಿಲ್ಲವು ಕೇವಲ ಜ್ಞಾನದಿಂದ |
| ೨೬—೨೫ | ನೋಡಿದ್ದರೂ ಮತನಾದ | ನೋಡಿದ್ದರೂ ಆ ನೋಟವು ಮೃತನಾದ |
| ೨೭—೨೨ | ಹೇಡಿಯು | ಹೇಡಿಯು |
| ೨೮— ೯ | ಮೈಕ್ಷತೆ | ಮೈಕ್ಷತ್ |
| ೨೯—೨೧ | ಪರಮಾತ್ಮನೆ | ಪರಮಾತ್ಮನಿ |
| ೩೧— ೨ | ರೋಗಗಳಿಂದ | ಯೋಗಗಳಿಂದ |
| ೩೧— ೪ | ಕಾಶೀಸಮುದ್ದಿಶ್ಯ | ಕಾಶೀಂಸಮುದ್ದಿಶ್ಯ |
| ೩೩—೨೦ | ಧಾರಣೆಗೆ | ಧಾರಣೆಯು |
| ೩೯—೧೯ | ನ್ಯಾಯಾಯಿಕರು | ನೈಯಾಯಿಕರು |
| ೪೦— ೪ | ಎರಿದು | ಎಂದು |
| ೪೦— ೬ | ನಿರ್ವಿಷಯನಾದ | ನಿರ್ವಿಷಯವಾದ |
| ೪೧— ೬ | ಬ್ರಹ್ಮಕ್ಯವನ್ನು | ಬ್ರಹ್ಮೈಕ್ಯವನ್ನು |
| ೪೪—೧೪ | ಅಕಾರಣವು | ಅಕಾರಣವು |
| ೫೦— ೪ | ಅವರ | ಅದರ |

| ಪುಟ. ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|
| ೫೧—೨೬ | ವಿಷಯಭಾವವನ್ನೇ | ವಿಷಯಿಭಾವವನ್ನೇ |
| ೫೨—೬ | ಕತ್ವಂ | ತತ್ವಂ |
| ೫೨—೧೭ | ಜಡತ್ವವಾದ | ಜಡವಾದ |
| ೫೫—೧೬ | ಆಕಾರಣವೂ | ಅಕಾರಣವೂ |
| ೬೧—೧ | ವಾತವಾದ | ವರಕವಾದ |
| ೬೧—೧೩ | ವಿಚಾರಪಿಚಾರ | ವಿಚಾರ |
| ೬೧—೧೨ | ಆಸಾಧನೆಗಳೆಲ್ಲವೂ<br>ಆ ಸಾಧನಗಳು | ಆ ಅಸಾಧನೆಗಳೆಲ್ಲವು<br>ಆ ಅಸಾಧನೆಗಳು |
| ೬೩—೨೪ | ಚತ್ರ | ಚಕ್ರ |
| ೬೪—೧೪ | ಯಾವಜೀವ | ಯಾವಜ್ಜೀವ |
| ೬೫—೨೭ | ಆವಿದ್ಯೆಯು | ಅವಿದ್ಯೆಯು |
| ೬೬—೧೧ | ಜಾಲಕ | ಚಾಲಕ |
| ೭೩—೫ | ತದ್ಬ್ರಹ್ಮಾ | ತದ್ಬ್ರಹ್ಮ |
| ೭೭—೧೭ | ಪ್ರಾಣಿಸ್ತ್ಪಲ್ಪ | ಪ್ರಾಣಿನಸ್ತ್ವಲ್ಪ |
| ೮೮—೬ | ಅಭೇದವನ್ನು | ಭೇದವನ್ನು |
| ೯೧—೧೮ | ಸ್ವಚಿತ್ತಾ | ಸಭಿತ್ತಾ |
| ೯೩—೧೯ | ತತ್ವಗೆಕ | ತತ್ವಗಳ |
| ೯೪—೧೨ | ಕೊಟ್ಟಿರುವುಡು | ಕೊಟ್ಟಿರುವುರು |
| ೯೮—೧ | ಭೇದವೇ | ಅಭೇದವೇ |
| ೧೦೭—೧೫ | ಹೃದಯುರಶ್ಮೈಲಿಯನ್ನು ಸ್ಪಂದ | ಹೃದ್ಯುರಶ್ಮೈಲಿಯನ್ನು ನೋಡುಸ್ಪಂದ |
| ೧೧೨—೨ | ಕುವರ | ಕುಹರ |
| ೧೧೨—೨೨ | ಮುರ್ಮಗಳನ್ನೂ | ಧರ್ಮಗಳನ್ನೂ |
| ೧೧೪—೧೧ | ನೆಪದಿಂದ | ನೆವದಿಂದ |
| ೧೧೫—೧೫ | ಅದ್ವೈತವು | ದ್ವೈತವು |
| ೧೧೮—೬ | ಷತ್ | ಕ್ಷತ್ |
| ೧೨೦—೩ | ಸ್ವವ | ಸ್ವಯ |
| ೧೨೦—೮ | ವಿವರ್ತವಾದಲಿ | ವಿವರ್ತವಾದದಲ್ಲಿ |
| ೧೨೦—೧೪ | ಶಿವಾದ್ವೈತವೇ | ಶಿವದ್ವೈತವೇ |
| ೧೦೪—೧ | ಶಿವಾದ್ವೈತವೇ | ಶಿವಾದ್ವೈತಿಯೇ |
| ೧೨೪—೧೩ | ನವಿದ್ಮಸ್ತ್ವಂ | ನವಿದ್ಮಸ್ತತ್ತ್ವಂ |

| ಪುಟ. ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|
| ೧೨೪–೧೯ | ಮತಿಸರ್ವಾಯು | ಮಿತಿಶರ್ವಾಯ |
| ೧೨೬– ೩ | ವಿರೋಧ | ಅವಿರೋಧ |
| ೧೩೪–೧೦ | ಮಾಡುವೆನು | ಮಾಡುವನು |
| ೧೩೫– ೫ | ಪರಿಮಿತೆ | ಪರಿಮಿತೀ |
| ೧೩೭–೧೪ | ಸ್ತಿಷ್ಟತಿ | ಸ್ತಿಷ್ಠತಿ |
| ೧೪೨–೨೦ | ಜೀವ | ಜೈವ |
| ೧೪೨–೨೫ | ಸಖಾಜಾ | ಸಖಾಯಾ |
| ೧೪೫–೧೬ | ದಹತ್ಯೇನಃ | ದಹತ್ಯೇನಂ |
| ೧೪೯–೨೦ | ಅಂಶಾಂಶ | ಅಂಶಾಂಶಿ |
| ೨೫೩–೨೫ | ನ್ಯೈಕತಂ | ನೇಕತ್ವಂ |
| ೧೫೭–೧೪ | ಅವಿರ್ಭಾವ | ಆವಿರ್ಭಾವ |
| ೧೫೭–೨೧ | ವಾದ | ಪಾದ |
| ೧೬೧–೧೦ | ಪಿಂಡಿಮತ | ಪಿಂಡಿತಮ |
| ೧೬೦–೨೭ | ಕೆದಲಾ | ಬದಲೂ |
| ೧೭೪– ೭ | ಯುಕ್ತಅನು | ಯುಕ್ತ್ಯನು |
| ೧೮೩–೧೧ | ವಾಕ್ಯಗಳು | ವಾಕ್ಯಗಳಿಗೆ |
| ೧೮೩–೧೩ | ವಾಕ್ಯವು | ವಾಕ್ಯಕ್ಕೆ |
| | ಕಾಶಿಕಾ | ಕಾರಿಕಾ |
| ೧೯೧–೨೪ | ವೀರಶೈವರೂ | ವೀರಶೈವರಿಗೂ |
| ೧೯೩–೧೭ | ವೈಷ್ಣವರೂ ಗಣನಾಥನನ್ನು ಪೂಜಿಸುವ ಶಾಕ್ತರೂ ವಿಷ್ಣುದೇವರನ್ನು ಪೂಜಿಸುವ ವೈಷ್ಣವರೂ | ವೈಷ್ಣವರೂ |
| ೧೯೫– ೩ | ಪ್ರಾಕೃತ | ಪ್ರಕೃತ |
| ೧೯೫–೧೧ | ನನ್ನ | ನಿನ್ನ |
| ೧೯೬– ೫ | ಗರ್ತೆ | ಗತಾ |
| ೧೯೮–೧೨ | ಭೂತತತ್ತ್ವವು | ಭೂತತ್ವವು |
| ೨೦೮–೨೨ | ಸೂತ್ರಗಳಾದ | ಸೂತ್ರಗಳ |
| ೨೧೩– ೫ | ಮನಸ್ಕಾರ | ನಮಸ್ಕಾರ |
| ೨೧೫– ೨ | ಏಕೋತ್ತರಸ್ಥಲಗಳೆಂದೂ | ಏಕೋತ್ತರಶತಸ್ಥಲಗಳೆಂದೂ |
| ೨೧೮–೧೩ | ವಿಚ್ಛೇದವಾಗುವಂತೆ | ವಿಚ್ಛೆದವಾಗದಂತೆ |
| ೨೧೯–೧೯ | ಸ್ಥಲ | ಸ್ಥೂಲ |

| ಪುಟ. ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|
| ೨೨೦— ೮ | ಶಕ್ತ್ಯಂತಭಾವ | ಶಕ್ತ್ಯಂತರ್ಭಾವ |
| ೨೨೬— ೧ | ಬ್ರಹ್ಮೋಪಾಸನೇವ | ಬ್ರಹ್ಮೋಪಾಸನೇನ |
| ೨೨೯—೧೭ | ದಾರಾ | ದಾರಾನ್ |
| ೨೩೨— ೧ | ಬೋಧಾವ | ಬೋಧೋಽವ |
| ೨೩೪— ೨ | ತದ್ವೈಕ್ಷವ್ಯಾ | ತದ್ವೈಷವ್ಯಾ |
| ೨೩೫— ೭ | ಕಿಲಾವಕೀರ್ಣ | ಕಿಲಾವಕೀರ್ಣಾ |
| ೨೩೫— ೯ | ಪ್ರತೇಯಾಃ | ಪ್ರತೀಯಾಃ |
| ೨೩೬—೨೭ | ಅರಿತಿ | ಅತಿ |
| ೨೩೬—೨೭ | ಪ್ರಕೃತ | ಪ್ರಾಕೃತ |
| ೨೩೭— ೮ | ಸ್ಥಲ | ಸ್ಥೂಲ |
| ೨೩೯—೨೩ | ಏತಾ | ಏಕಾ |
| ೨೩೯—೨೭ | ಏತಾ<br>ಹ್ಯೈತಃ | ಏಕಾ<br>ಹ್ಯೈಕಃ |
| ೨೪೦— ೭ | ಸಂಜ್ಞಾತೊ | ಸಂಜ್ಞಾ |
| ೨೪೧— ೪ | ಆರೋಪಿತವೆಂದೂ | ಆರೋಪಿತವಲ್ಲವೆಂದೂ |
| ೨೪೨—೨೨ | ಹೇಗೆ ಹೇಳುವದು | ಹೀಗೆ ಹೇಳುವದು |
| ೨೪೬—೨೪ | ಆವಿಭಾಗವದಿಂದ | ಅವಿಭಾಗದಿಂದ |
| ೨೪೭—೨೨ | ಪ್ರಣಪ್ತ್ಯಂನನು | ಪ್ರಣಪೂತ್ರನನು |
| ೨೪೯—೧೯ | ಬ್ರಹ್ಮ | ಬ್ರಹ್ಮವು |
| ೨೫೦—೧೧ | ನಗತಾ | ನಗ |
| ೨೫೩—೨೭ | ಸರ್ವೇತಿ | ಸವೇತ್ತಿ |
| ೨೫೯— ೧ | ಮಹಾಂತಃ | ಮಹಾಂತಂ |
| ೨೫೫— ೩ | ಅಕಾರವೆ | ಹಕಾರವೇ |
| ೨೫೫—೧೩ | ಮವೇದಾರ್ಥ | ಮತಮವೇದಾರ್ಥ |
| ೧೨೯—೧೭ | ದಾರಾ | ದಾರಾನ್ |
| ೨೩೨— ೧ | ಬೋಧಾವ | ಬೋಧೋವ |
| ೩೩೪— ೨ | ತದ್ವೈಕ್ಷವ್ಯಾ | ತದ್ವೈಷವ್ಯಾ |
| ೨೩೫— ೭ | ಕಿಲಾವಕೇರ್ಣ | ಕಿಲಾವಕೀರ್ಣಾ |
| ೨೩೫— ೯ | ಪ್ರತೇಯಾಃ | ಪ್ರತೀಯಾಃ |
| ೨೩೬—೨೭ | ಅರಿತಿ | ಅತಿ |
| ೨೩೬—೨೭ | ಪ್ರಕೃತ | ಪ್ರಾಕೃತ |

